ವೀರಶೈವರಲ್ಲಿ ಲಗ್ನಗಳಾಗುತ್ತಿದ್ದವೆಂಬ ಸಂಗತಿಯುನ್ನು ಸ್ಪಷ್ಟಪಡಿಸು ತ್ತವೆ. ವೈಜವ್ವೆಯು ತಂದೆತಾಯಿಗಳು ಮೊದಲು ಜೈನರಾಗಿದ್ದರು. ಆದರೆ ಅವರು ಹಿಂದುಗಡೆ ಬಹಿರಂಗವಾಗಿ ವೀರಶೈವಾಚರಣೆಯಂತೆ ನಡೆಯ ಹತ್ತಿದರು. ಒಂದು ದಿವಸ ವೈಜವ್ವೆಯ ತಂದೆಯು ತಂಗಿಯು ಅವನ ಮನೆಗೆ ಬಂದಿರಲು ವೈಜವ್ವೆಯನ್ನು ತನ್ನ ಮಗನಿಗೆ ಲಗ್ನ ಮಾಡಿಕೊಡಲು ತನ್ನ ಅಣ್ಣನಿಗೆ ಅವಳು ಕೇಳಿದಳು. ಅದಕ್ಕೆ ಅವನು ಅವಳಿಗೆ ನೀವು ಜೈನರಾದ್ದರಿಂದ ನಿಮಗೆ ನನ್ನ ಮಗಳನ್ನು ಕೊಡೆನು ಎಂದು ಹೇಳಿದನು. ಅದಕ್ಕೆ ಅವಳು ಛಲಹಿಡಿದು ಮನೆಯಲ್ಲಿ ಕುಳಿತಳು. ಆಗ ಅವರ ಬಂಧು ಬಳಗದವರು ನೆರೆದು ಇವರು ಜೈನರಾದರೇನಾಯಿತು? ತಂಗಿಯ ಮಗನಿಗೆ ಮಗಳನ್ನು ಕೊಡುವದೇ ಉಚಿತವೆಂದು ಅಣ್ಣನಿಗೆ ಹೇಳಿ ಉಭಯತರ ಲಗ್ನ ವನ್ನುಮಾಡಿಸಿದರು. ಈ ಸಂಗತಿಗಳಿಂದ ಈ ಕಾಲದಲ್ಲಿ ಜೈನ ವೀರಶೈವರಲ್ಲಿ ಆಗಿಂದಾಗ್ಗೆ ಧರ್ಮಾಂತರಗಳು ಆಗುತ್ತಿದ್ದವೆಂತಲೂ ಅವರಲ್ಲಿ ಲಗ್ನ ವ್ಯವಹಾರಗಳು ಸಹ ನಿರಾತಂಕವಾಗಿ ನಡೆಯುತ್ತಿದ್ದವೆಂತಲೂ ಗೊತ್ತಾಗು ತ್ತದೆ. ಈ ಕಾರಣಗಳಿಂದ ಉಭಯ ಸಮಾಜದವರು ಈ ಕಾಲದಲ್ಲಿ ಕೇವಲ ವಿರೋಧಿಗಳಾಗಿ ವರ್ತಿಸುತ್ತಿದ್ದರೆಂದು ಹೇಳುವದು ತಪ್ಪಾ ಗುತ್ತದೆ.

## ಬ್ರಾಹ್ಮಣ ಮತ್ತು ವೀರಶೈವ ಸಮಾಜಗಳಲ್ಲಿ ಪರಸ್ಪರ ಲಗ್ನ ವ್ಯವಹಾರಗಳು.

ಈ ಸಂಗತಿಯು ಆಗಿನ ಬ್ರಾಹ್ಮಣ ಮತ್ತು ವೀರಶೈವ ಸಮಾಜ ಗಳಲ್ಲಿಯೂ ಇದ್ದುದು ಕಂಡುಬರುತ್ತದೆ. ಅಮ್ಮವ್ವೆಯ ತಾಯಿತಂದೆಗಳು ಬ್ರಾಹ್ಮಣರು. ಅವರು ಮುಂದೆ ವೀರಶೈವ ಧರ್ಮವನ್ನು ಪಾಲಿಸುವವ ರಾದರು. ಆದರೂ ಅವಳ ಸೋದರತ್ತೆಯು ಅವಳನ್ನು ತನ್ನ ಮಗನಿಗೆ ತೆಗೆದುಕೊಂಡು ಲಗ್ನ ಮಾಡಿದಳು. ಕೋವೂರಲ್ಲಿದ್ದ ಭಾಸ್ಕರನು ವೈಷ್ಣವನು. ಆದರೂ ಅವನು ವೀರಶೈವನಾದ ಭೀಮಯ್ಯನ ಮಗ ಳಾದ ಚಂದ್ರಾಣಿದೇವಿಯನ್ನು ಲಗ್ನವಾಗಲು ಇಚ್ಛಿಸಿದನೆಂದು ವೀರಸಂ ಗಯ್ಯನ ಚರಿತ್ರೆಯಿಂದ ತಿಳಿದು ಬರುತ್ತದೆ.

ಈ ಪ್ರಕಾರ ವೀರಶೈವ ಧರ್ಮವು ಜೈನ ಮತ್ತು ಬ್ರಾಹ್ಮಣ ಸಮಾಜ ಗಳ ಮೇಲೆ ಪರಿಣಾಮ ಮಾಡಿದ್ದು ಸ್ಪಷ್ಟವಾಗುತ್ತದೆ. ಆದ್ದರಿಂದಲೇ

ಈ ತೆರದ ಅನ್ನೋದಕ ವ್ಯವಹಾರಗಳು ಮತ್ತು ಲಗ್ನ ವ್ಯವಹಾರಗಳು ಆ ಕಾಲದಲ್ಲಿ ಪರಸ್ಪರವಾಗಿ ಜರಗುತ್ತಿದ್ದವೆಂದು ತೋರುತ್ತದೆ. ಈ ಸಂಗತಿಗಳು ಹಿಂದಿನ ಕಾಲದಲ್ಲಿ ವೀರಶೈವ, ಜೈನ, ಮತ್ತು ಬ್ರಾಹ್ಮಣ ಈ ಸಮಾಜಗಳಲ್ಲಿ ಪರಸ್ಪರ ವೈರಭಾವವಿದ್ದುದನ್ನು ತೋರಿಸುವದಿಲ್ಲ. ಒಂದುವೇಳೆ ಇಂಥ ಪರಿಸ್ಥಿತಿಯು ಆ ಕಾಲದಲ್ಲಿ ಆಯಾ ಸಮಾಜಗಳಲ್ಲಿ ಇದ್ದಿದ್ದರೆ ವೀರಶೈವ ಧರ್ಮವು ಎಂದೂ ಬೆಳೆಯುತ್ತಿದ್ದಿಲ್ಲ.

## ಕುಟುಂಬ ಸುಧಾರಣೆ.

ಶಿವಶರಣರು ಆತ್ಮಸುಧಾರಣೆಗೆ ಅತ್ಯಂತ ಮಹತ್ವವನ್ನು ಕೊಟ್ಟಿರುತ್ತಾರೆಂಬುದು ಹಿಂದಿನ ವಿವರಣೆಗಳಿಂದ ವಾಚಕರಿಗೆ ತಿಳಿದುಬರದೆ ಇರಲಾರದು. ಆದರೆ ಈ ಕಾರ್ಯದಲ್ಲಿ ಮನುಷ್ಯನ ಸುತ್ತಲಿನ ಪರಿಸ್ಥಿತಿಯು ಅಥವಾ ಆವರಣವು ಅವನ ಮನಸ್ಸಿನ ಮೇಲೆ ತೀವ್ರ ಪರಿಣಾಮ ಮಾಡುತ್ತದೆ. ಈ ಸಂಗತಿಯನ್ನು ಶಿವಶರಣರು ತಿಳಿದವರಾಗಿ ತಮ್ಮ ಸುತ್ತಲಿನ ಪರಿಸ್ಥಿತಿಯು ಶುದ್ಧವೂ ಸಾತ್ವಿಕವೂ ಇರುವಹಾಗೆ ಬಹಳ ಜಾಗ್ರತೆ ಪಡುತ್ತಾರೆ. ಆದ್ದರಿಂದ ಶಿವಾನುಭವಿಗಳು ಜನರಲ್ಲಿ ಹೇಗೆ ವರ್ತಿಸಬೇಕು. ಎಂಥ ಜನರ ಸಹವಾಸವನ್ನು ಮಾಡಬೇಕು, ಇವೇ ಮೊದಲಾದ ವಿಷಯಗಳನ್ನು ಅವರು ತಮ್ಮ ವಚನಗಳಲ್ಲಿ ಬಹು ಆಳವಾಗಿ ಚರ್ಚಿಸುತ್ತಾರೆ. ಸಾಮಾನ್ಯವಾಗಿ ಮನುಷ್ಯನ ನಿಕಟಸಂಬಂಧವು ಯಾವಾಗಲೂ ತನ್ನ ಕುಟುಂಬದವರೊಡನೆ ವಿಶೇಷವಾಗಿ ಇರುತ್ತದೆ. ಆದ್ದರಿಂದ ಕುಟುಂಬದಲ್ಲಿ ಉಚ್ಚ ಧಾರ್ಮಿಕ ವಾತಾವರಣವಿರುವಂತೆ ಮಾಡುವದು ಆತ್ಮಾನುಭವಿಗಳ ಆದ್ಯಕರ್ತವ್ಯವಾಗಿದೆ. ಇದನ್ನು ಶಿವಾನುಭವಿಗಳು ತಿಳಿದವರಾಗಿ ಆ ರೀತಿ ಅವರು ಆಚರಿಸಿದ್ದೂ ಕಂಡುಬರುತ್ತದೆ.

ಕುಟುಂಬದ ಮುಖ್ಯ ಅಂಗಗಳೆಂದರೆ ಸ್ತ್ರೀಯರು ಮತ್ತು ಬಾಲಬಾಲಿಕೆಯರು. ಇವರ ಶುದ್ಧಾಚರಣೆಯು ಶಿವಾನುಭವಿಗಳ ಶಿವಾನುಭವಕ್ಕೆ ಯಾವಾಗಲೂ ಸಹಾಯಕಾರಿಯಾದುದು. ಇವರು ಹಾಗಿಲ್ಲದಿದ್ದರೆ ಅವರ ಆಚರಣೆಗೆ ಹಾನಿಯುಂಟಾಗುತ್ತದೆ. ಇದನ್ನು ಶಿವಶರಣರು ಕಂಡವರಾಗಿ ತಮ್ಮ ಸ್ತ್ರೀಯರ ಮತ್ತು ಬಾಲಬಾಲಿಕೆಯರ ಧಾರ್ಮಿಕ ವರ್ತನೆಯ ಸಲುವಾಗಿ ಬಹಳ ಜಾಗ್ರತೆಯನ್ನು ವಹಿಸಿರುತ್ತಾರೆ. ಇದು ಶಿವಶರಣರ ಚರಿತ್ರೆಗಳಲ್ಲಿ ಕಂಡುಬರುತ್ತದೆ.

ಇದರಿಂದ ವೀರಶೈವ ಸ್ತ್ರೀಯರಲ್ಲಿ ಮತ್ತು ಬಾಲಬಾಲಿಕೆಯರಲ್ಲಿ ಅನೇಕರು ಶಿವಶರಣರಾಗಿರುವದು ಕಂಡುಬರುತ್ತದೆ. ಅವರ ಸಂಕ್ಷಿಪ್ತ ವಿವರಣೆಗಳನ್ನು ನಾವು ಕೆಳಗೆ ಕೊಟ್ಟಿದ್ದೇವೆ.

## ಸ್ತ್ರೀಯರು.

"ಶಿವಶರಣರ ಚರಿತ್ರೆಗಳು ಭಾಗ ೧ ಮತ್ತು ಭಾಗ ೨" ಈ ಗ್ರಂಥಗಳಲ್ಲಿ ಒಟ್ಟು ೧೧೪ ಜನ ಶಿವಶರಣರ ಚರಿತ್ರೆಗಳು ಬಂದಿದ್ದು ಅವರಲ್ಲಿ ೩೨ ಜನ ಶಿವಶರಣೆಯರಿದ್ದಾರೆ. ಇವರಲ್ಲಿ ೧೩ ಜನರು ವಚನಕಾರರು ಇದ್ದಾರೆ. ಇದು ನಿಜವಾಗಿ ದೊಡ್ಡ ಸಂಖ್ಯೆಯು. ಇವರೆಲ್ಲರು ವೀರಶೈವ ಸಮಾಜದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದವರು. ಇಂದಿಗೆ ಎಂಟುನೂರು ವರುಷಗಳಾದರೂ ಕೂಡ ಅವರ ಹೆಸರುಗಳು ಜನರ ಸ್ಮರಣೆಯಲ್ಲಿ ಉಳಿದಿವೆ. ಅನೇಕ ವೀರಶೈವ ಗ್ರಂಥಕಾರರು ಅವರನ್ನು ಆಗಿಂದಾಗ್ಗೆ ತಮ್ಮ ಗ್ರಂಥಗಳಲ್ಲಿ ಸ್ಮರಿಸುತ್ತಾರೆ. ಇದರಿಂದ ಈ ಪುಣ್ಯ ಸ್ತ್ರೀಯರ ಧಾರ್ಮಿಕ ವರ್ತನೆಯು ಎಂಥ ಉಚ್ಚಸ್ಥಿತಿಯನ್ನು ಹೊಂದಿತ್ತೆಂಬುದನ್ನು ನಾವು ಊಹಿಸಬಹುದು.

ಈ ಸ್ತ್ರೀಯರ ಅನೇಕಚರಿತ್ರೆಗಳಲ್ಲಿ ಸತಿಪತಿಗಳಿಬ್ಬರೂ ವಚನಕಾರರಿದ್ದುದು ಕಂಡುಬರುತ್ತದೆ. ಇದರಿಂದ ಪುರುಷರು ತಾವು ಮಾತ್ರವಲ್ಲದೆ ತಮ್ಮಹಾಗೆ ತಮ್ಮ ಸ್ತ್ರೀಯರೂ ಕೂಡ ಜ್ಞಾನಿಗಳಾಗುವಂತೆ ಮಾಡಲು ಯತ್ನಿಸುತ್ತಿದ್ದರೆಂಬದು ಗೊತ್ತಾಗುತ್ತದೆ. ಕೆಲವು ಸ್ತ್ರೀಯರು ಬರೆದ ವಚನಗಳಿಂದ ಅವರು ಸಂಸ್ಕೃತದ ಅಭ್ಯಾಸವನ್ನು ಸಹ ಮಾಡಿದ್ದರೆಂಬ ಅನುಮಾನವು ಉಂಟಾಗುತ್ತದೆ. ವಚನಕಾರರಿರುವ ಸತಿಪತಿಗಳ ಹೆಸರುಗಳನ್ನು ನಾವು ಕೆಳಗೆ ಕೊಟ್ಟಿದ್ದೇವೆ.

**ವಚನಕಾರರಾದ ಸತಿಪತಿಗಳು:**--ಮಹಾದೇವರಾಜನು ಅಥವಾ ಮೋಳಿಗೆಯಮಾರಯ್ಯನು ಉಚ್ಚತರಗತಿಯ ವಚನಕಾರನು. ಅವನ ಹೆಂಡತಿಯಾದ ಮಹಾದೇವಿಯಮ್ಮನೂ ವಚನಕಾರಳಾದಳು. ಉರಿಲಿಂಗ ಪೆದ್ದಿಯು ಪ್ರಸಿದ್ಧ ವಚನಕಾರನು. ಅವನ ಹೆಂಡತಿ ಕಾಳವ್ವೆಯೂ ಕೂಡ ವಚನಕಾರಳಿದ್ದಾಳೆ. ಆಯುದಕ್ಕಿ ಮಾರಯ್ಯ ಅವನ ಹೆಂಡತಿ ಲಕ್ಕಮ್ಮನೂ, ಎಡೆಮಠದ ನಾಗಿದೇವ ಅವನ ಹೆಂಡತಿ ಮಸಣಮ್ಮನೂ,

ಈ ಶಿವಶರಣರು ವಾಸವಾಗಿದ್ದ ಸ್ಥಾನಗಳಲ್ಲಿ ಅನೇಕ ಮಹತ್ವದ ದೇವಾಲಯಗಳಿವೆ. ಈ ದೇವಾಲಯಗಳು ಇಡೀ ದಕ್ಷಿಣ ಹಿಂದು ಸ್ತಾನದಲ್ಲೆಲ್ಲ ಪಸರಿಸಿರುತ್ತವೆ. ಅವುಗಳ ಚಿತ್ರಗಳನ್ನು ಶಿವಾನುಭವ ದಲ್ಲಿ ಕೊಟ್ಟು ಈ ಪತ್ರಿಕೆಯ ಸೌಂದರ್ಯವನ್ನು ಹೆಚ್ಚಿಸಬಹುದಾಗಿದೆ.

ಆದರೆ ನಾವು ವೀರಶೈವ ಸಮಾಜದ ಸದ್ಯದ ಸ್ಥಿತಿಯನ್ನು ವಾಚಕರ ಲಕ್ಷಕ್ಕೆ ತರದ ಹೊರತು ಗತ್ಯಂತರವಿಲ್ಲ. ಒಂದು ವೇಳೆ ವೀರಶೈವ ವಾಙ್ಮಯ ಮತ್ತು ಅದರಲ್ಲಿ ಆಗಿ ಹೋದ ಮಹಾಪುರುಷರು ಬೇರೊಂದು ಸುಶಿಕ್ಷಿತ ಸಮಾಜದಲ್ಲಿ ಇದ್ದಿದ್ದಾದರೆ ಅವುಗಳ ಪ್ರಕಾಶನ ಕಾರ್ಯಕ್ಕೆ ಇಷ್ಟರಲ್ಲಿ ಎಷ್ಟೋ ಲಕ್ಷ ರೂಪಾಯಿಗಳು ಕೂಡುತ್ತಿದ್ದವು. ಹೇಗೆ ಆರ್ಯ ಸಮಾಜ, ರಾಮಕೃಷ್ಣ ಮಿಶನ್, ಥಿಯಾಸಫಿಕಲ್ ಸೋಸಾಯಿಟಿ ಈ ಸಂಸ್ಥೆಗಳ ಕಾರ್ಯಗಳು ನಡಿದಿವೆಯೋ ಹಾಗೆಯೇ ವೀರಶೈವ ಸಮಾಜದಲ್ಲಿಯೂ ಕಾರ್ಯಗಳು ನಡೆಯುತ್ತಿದ್ದವು. ಆದರೆ ವೀರಶೈವರಲ್ಲಿ ತಮ್ಮ ಸಂಸ್ಕೃತಿಯ ಮಹತ್ವದ ಅರಿವು ಇನ್ನೂ ಉಂಟಾಗಿದ್ದರಿಂದ ಈ ಉಚ್ಚ ಸ್ಥಿತಿಯು ಬರಲು ತೊಂದರೆಗಳುಂಟಾಗಿರುತ್ತವೆ.

ಶಿವಶರಣರ ಉಜ್ವಲ ಹಾಗು ಅನುಕರಣೀಯವಾದ ಚರಿತ್ರೆಗಳು ಆದಷ್ಟು ತೀವ್ರ ಬೆಳಕಿಗೆ ಬರುವದರಿಂದ ವೀರಶೈವ ಸಮಾಜಕ್ಕೂ ಕರ್ನಾಟಕಕ್ಕೂ ಬಹಳ ಸಹಾಯವಾಗಬಹುದಾಗಿದೆ. ಆದ್ದರಿಂದ ಈ ಖರ್ಚಿನ ಹಾಗೂ ಬಹಳ ಪರಿಶ್ರಮದ ಈ ಕೆಲಸಕ್ಕೆ ಮಹಾಸ್ವಾಮಿಗಳಾಗಲಿ ಶ್ರೀಮಂತರಾಗಲಿ ಮುಂದೆ ಬರಬಹುದೆಂದು ನಂಬಿದ್ದೇವೆ.

ಬೆಳಗಾವ ಜಿಲ್ಲೆಯಲ್ಲಿಯ ಮಹನೀಯರು ಶಿವಾನುಭವ ಕಾರ್ಯದಲ್ಲಿ ನಮಗೆ ಬಹಳ ಸಹಾಯ ಮಾಡಿದರು. ಅಲ್ಲಿಯ ವಿದ್ಯಾವಂತರೂ ಮಠಾಧಿಪತಿಗಳೂ, ವರ್ತಕರೂ ಅತ್ಯಂತ ಪ್ರೇಮಪುರಸ್ಸರವಾಗಿ ನಮಗೆ ಸಹಾಯ ಮಾಡಿದ್ದಕ್ಕೋಸ್ಕರ ನಾವು ಅವರಿಗೆ ಅತ್ಯಂತ ಆಭಾರಿಯಾಗಿದ್ದೇವೆ. ನಮಗೆ ಈ ಧನ ಸಹಾಯವು ದೊರೆಯದೆ ಹೋಗಿದ್ದರೆ ಈ ಪತ್ರಿಕೆಯನ್ನು ನಾವು ನಿಲ್ಲಿಸುವ ಪ್ರಸಂಗವು ಉಂಟಾಗುತ್ತಿತ್ತು. ಇದೇ ಪ್ರಕಾರ ನಮಗೆ ಉಳಿದ ಜಿಲ್ಲೆಯವರು ಸಹಾಯ ಮಾಡಿದಲ್ಲಿ ಈ ಪತ್ರಿಕೆಯ ಪುಟಗಳನ್ನು ಹೆಚ್ಚಿಸುವದಲ್ಲದೆ ಅದನ್ನು ಸಚಿತ್ರವನ್ನಾಗಿಯೂ ಮಾಡುವೆವು.

---

# ಸ್ಫುಟವಿಷಯ.

ನಾವು ಹೋದ ಸಂಚಿಕೆಯಿಂದ ಪ್ರಾರಂಭ ಮಾಡಿದ "ಶಿವಶರಣರ ಚರಿತ್ರೆಗಳು" ವೀರಶೈವ ವಾಙ್ಮಯಲ್ಲಿ ಹೊಸ ವಿಷಯವಾಗಿರುತ್ತದೆ. ಈ ಚರಿತ್ರೆಗಳ ಮಹತ್ವವು ಕನ್ನಡಿಗರಿಗೆ ಇನ್ನೂ ಅಪರಿಚಿತವಾಗಿರುತ್ತದೆ. ಇವುಗಳಲ್ಲಿ ವೀರಶೈವ ಧಾರ್ಮಿಕ ತತ್ವಗಳು ಅಡಕವಾಗಿರುತ್ತವೆ. ಅವು ಉಳಿದ ಪ್ರಾಂತಗಳಲ್ಲಿಯ ಶರಣರ ಚರಿತ್ರೆಗಳಂತೆ ಕೇವಲ ಭಕ್ತಿಪ್ರಾಧಾನ್ಯವಾದವುಗಳಲ್ಲ. ಬಸವಾದಿಪ್ರಮಥರು ಷಟ್‌ಸ್ಥಲಮಾರ್ಗವನ್ನು ಕಂಡುಹಿಡಿದು ಅದನ್ನು ಅವರು ನಾಡಿನಲ್ಲೆಲ್ಲ ಪ್ರಸಾರಮಾಡಿರುತ್ತಾರೆ. ಅವರು ಮಾಡಿದ ಈ ಕಾರ್ಯದ ಪರಿಣಾಮಗಳನ್ನು ಈ ಚರಿತ್ರೆಗಳ ಮೂಲಕ ನಾವು ಕಂಡುಹಿಡಿಯಲು ಶಕ್ಯವಿರುತ್ತದೆ. ಬಸವೇಶ್ವರನ ಕಾಲದಲ್ಲಿ ದೇಶದಲ್ಲೆಲ್ಲ ಒಂದು ಮಹತ್ವವಾದ ಕ್ರಾಂತಿಯುಂಟಾಯಿತು. ಈ ಕ್ರಾಂತಿಯ ಫಲವಾಗಿ ಬರೇ ಕರ್ನಾಟಕದಲ್ಲಷ್ಟೇ ಅಲ್ಲ, ನೆರೆ ಪ್ರಾಂತಗಳಾದ ತಮಿಳು ಮತ್ತು ತೆಲುಗು ದೇಶಗಳಲ್ಲಿಯೂ ಮಹಾರಾಷ್ಟ್ರ ದೇಶದಲ್ಲಿಯೂ ಕೂಡ ವೀರಶೈವತ್ವವು ಪ್ರಾದುರ್ಭವಿಸಿದ್ದು ಕಂಡುಬರುತ್ತದೆ. ಇದರಿಂದ ವೀರಶೈವರ ಸಂಖ್ಯೆಯು ಇಡೀ ದಕ್ಷಿಣ ಹಿಂದುಸ್ತಾನದಲ್ಲೆಲ್ಲ ಪಸರಿಸಿರುತ್ತದೆ. ತಮಿಳು ದೇಶದಲ್ಲಿ ಶೈವಮಾರ್ಗವು ಉನ್ನತಸ್ಥಿತಿಯನ್ನು ಹೊಂದಿರುತ್ತದೆಂಬುದೇನೋ ನಿಜವು. ಈ ಮಾರ್ಗವನ್ನು ಉಪದೇಶಿಸಿದವರು ೬೩ ಪುರಾತನರು ಮತ್ತು ಕೆಲವು ಗ್ರಂಥಕಾರರು ಮಾತ್ರ ಇದ್ದಾರೆ. ಆದರೆ ವೀರಶೈವ ಶರಣರ ಸಂಖ್ಯೆಯು ಇವರಕ್ಕಿಂತ ಎಷ್ಟೋಪಾಲು ಹೆಚ್ಚಾಗಿರುತ್ತದೆ. ಅವರು ಹಿಂದುಸ್ತಾನದ ಬಹುಭಾಗದಲ್ಲಿ ಉಂಟಾಗಿದ್ದಾರೆ. ಬಸವೇಶ್ವರನ ಕಾಲದಲ್ಲಿ ಉತ್ತರ ದೇಶದಲ್ಲಿಯ ಅನೇಕ ವಿದ್ವಾಂಸರು ಸಹ ಕಲ್ಯಾಣ ನಗರಕ್ಕೆ ಬಂದು ಷಟ್‌ಸ್ಥಲಮಾರ್ಗವನ್ನು ಅರಿತುಕೊಂಡು ಅದರ ಅನುಯಾಯಿಗಳಾಗಿದ್ದಾರೆ. ಕಾಶ್ಮೀರ, ಕಾಶೀ ಮತ್ತು ಗುಜರಾಥ ಈ ದೇಶಗಳಲ್ಲಿಯ ಬಹು ಜನರು ಆಗ ಕರ್ನಾಟಕಕ್ಕೆ ಬಂದು ವೀರಶೈವ ಮಾರ್ಗಕ್ಕೆ ಹೆಚ್ಚುಗೆಯನ್ನು ತಂದಿದ್ದಾರೆ. ವಾಚಕರು ಈ ದೃಷ್ಟಿಯನ್ನಿಟ್ಟುಕೊಂಡು ಈ ಚರಿತ್ರೆಗಳನ್ನು ಪರಿಶೀಲಿಸಿದಲ್ಲಿ ನಮ್ಮ ಈ ಅಭಿಪ್ರಾಯದ ಸತ್ಯಾಂಶವು ಅವರಿಗೆ ವಿದಿತವಾಗದೆ ಇರಲಾರದೆಂದು ಭಾವಿಸಿದ್ದೇವೆ.

ಸುತ್ತ ಪರಮಾತ್ಮನನ್ನು ನೆನೆಯುತ್ತ ಕುಳಿತಳು. ಆಗ ಪಾರಿಸನಾಥನು ಒಳಗೆ ಬಂದು ತನ್ನ ಸತಿಯು ನಡಿಸಿದ ಕಾರ್ಯಗಳನ್ನು ಕಂಡು ಪುತ್ತಿಷ್ಟು ಕೋಪಾವಿಷ್ಟನಾಗಿ ಒಂದು ಖಡ್ಗವನ್ನು ಹಿಡಿದುಕೊಂಡು ಒಳಗೆ ಬಂದು ಸೋಮವ್ವೆಯ ಮೇಲೇರಿ ಹೋದನು. ಆಗ ಆ ಅಬಲೆಯು ಭಯಭೀತಳಾದಳು. ಆವಳು 'ಆಹಾ, ಜ್ಯೋತಿರ್ಮಯನಾದ ಶಿವನೇ ಪರಮಾತ್ಮನೇ, ನೀನೇ ನನಗೆ ಗತಿಯು, ನನ್ನನ್ನು ಕಾಯು' ಎಂದು ಆ ದೀಪದ ಕುಡಿಯನ್ನು ಅಪ್ಪಿಕೊಂಡಳು. 'ಭಾವದಂತೆ ಲಿಂಗವು' ಎಂಬ ಶಿವಶರಣರ ನುಡಿಯಂತೆ ಆ ಕುಡಿಯು ಭಗ್ಗನೇ ಜ್ಯೋತಿರ್ಮಯ ಲಿಂಗವಾಯಿತು ! ಆ ಲಿಂಗದೊಳಗಿಂದ 'ಸತಿಯೇ ಭಯ ಪಡಬೇಡ' ಎಂಬ ಧ್ವನಿಯು ಹೊರಟಿತು ಮತ್ತು ಆದರಲ್ಲಿಯೇ ಆ ಶಿವಶರಣೆಯಾದ ಸೋಮವ್ವೆಯು ಅಡಗಿ ಹೋದಳು. ಅಡಗುವ ಸಮಯದಲ್ಲಿ ಸೋಮವ್ವೆಯು 'ಎಲೋ ಪರಮಾತ್ಮನೇ, ಇನ್ನು ಮೇಲೆ ನಿನ್ನ ಭಕ್ತಿಯ ಬೆಳಕು ಮೂರು ಲೋಕಗಳನ್ನು ಬೆಳಗಲಿ ಎಂಬ ವರವನ್ನು ಕೊಡು' ಎಂದು ಬೇಡಿಕೊಳ್ಳಲು ಆ ಜ್ಯೋತಿರ್ಮಯ ಲಿಂಗದಲ್ಲಿ 'ಹಾಗೆಯೇ ಆಗಲಿ' ಎಂಬ ಶಬ್ದವು ಹೊರಟಿತು ಮತ್ತು ಆ ಸೋಮವ್ವೆಯು ಆ ಪ್ರಕಾಶಮಯವಾದ ಲಿಂಗದಲ್ಲಿಯೇ ಅಡಗಿ ಬಿಟ್ಟಳು.

ಭಾವಿಕರು ಸೋಮವ್ವೆಯ ಈ ವೃತ್ತಾಂತದಲ್ಲಿ ವಿಶ್ವಾಸವುಳ್ಳವರಾಗಿ ಪೂರ್ಣವಾಗಿ ಅದನ್ನು ನಂಬಲಿ ಅಥವಾ ನಮ್ಮ ಆಧುನಿಕ ಲೌಕಿಕರು ಆಕೆಯು ತನ್ನ ಆಚರಣೆಯನ್ನು ನಡಿಸುವಲ್ಲಿ ತನ್ನ ಗಂಡನ ಕೈಯ್ಯಿಂದ ಖಡ್ಗದಿಂದ ಹತಳಾದಳೆಂದು ತಿಳಿಯಲಿ, ಹೇಗೆ ತಿಳಿದರೂ ಶಿವಾನುಭವದ ತತ್ವವನ್ನು ಪರಿಪಾಲಿಸುವಲ್ಲಿ ಬಸವೇಶ್ವರನ ಕಾಲದಲ್ಲಿ ಸ್ತ್ರೀಯರು ಸಹ ತಮ್ಮ ಪ್ರಾಣವನ್ನು ಕೊಡಲು ಹೇಗೆ ಸಿದ್ಧರಾಗಿದ್ದರೆಂಬುದಕ್ಕೆ ಸೋಹಳಿಯ ಸೋಮವ್ವೆಯ ಈ ಚರಿತ್ರೆಯು ಅತ್ಯಂತ ಹೃದಯದ್ರಾವಕವಾದ ಉದಾಹರಣೆಯಾಗಿದೆ.

---

# ಮಾದರ ಧೂಳಯ್ಯ.

ಬಸವೇಶ್ವರನ ಕಾಲದಲ್ಲಿ ಶಿವಾನುಭವದ ತತ್ವಗಳು ಪ್ರಸಾರವಾಗುತ್ತ ಹೋದ ಹಾಗೆ ಅಸ್ಪೃಶ್ಯರಲ್ಲೇನಕರು ಮಹತ್ವಿಕರೂ ವಚನಕಾರರೂ ಆಗಿದ್ದಾರೆ. ಅವರಲ್ಲಿ ಮಾದರ ಧೂಳಯ್ಯನು ಒಬ್ಬನಾಗಿದ್ದಾನೆ. ಅವನು ಮಾದರ ಕುಲದಲ್ಲಿ ಹುಟ್ಟಿ ಕಲ್ಯಾಣ ಪಟ್ಟಣದಲ್ಲಿ ಮೊಚ್ಚೆ ಹೊಲಿಯುವ ಕಾಯಕವನ್ನು ಮಾಡುತ್ತಿದ್ದನು. ಅವನು ಈ ಕಾಯಕದಿಂದ ತನಗೆ ದೊರಕಿದಷ್ಟು ಹಣವನ್ನು ಶರಣರ ಸೇವೆಗೆ ಸಲ್ಲಿಸುತ್ತ ದಾಸೋಹಭಾವದಿಂದಿರುತ್ತಿದ್ದನು. ಅವನು ತನ್ನ ಒಂದು ವಚನದಲ್ಲಿ ತನ್ನ ಈ ಕಾಯಕದ ರೀತಿಯನ್ನು ಹೇಳಿರುವದು ಹೇಗೆಂದರೆಃ—

'ಅರಿದು ಚುಚ್ಚುವರೆಲ್ಲರು ಧನದಟ್ಟೆ. ಮರೆದು ಚುಚ್ಚುವರೆಲ್ಲರು ಧನದಟ್ಟೆ. ನಾ ಚುಚ್ಚುವುದೆಲ್ಲವು ಸತ್ತ ಜೀವ ದನದಟ್ಟೆ. ಅಟ್ಟೆಯ ಕೊಯಿದು ಮೆಟ್ಟಿಸಿದೆ ಸತ್ಯರಿಗೆಲ್ಲರಿಗು, ಎನಗೆ ಬಟ್ಟೆ ಬಯಲ ತೋರಬೇಕೆಂದು. ನಿಮ್ಮ ಬಟ್ಟೆಯಲ್ಲಿ ನೀವೇ ಹೋಗಿ. ಎನ್ನ ಬಟ್ಟೆ—ಕಾಮಧೂಮಧೂಳೇಶ್ವರನ ಬಟ್ಟೆಯೇ ಸಾಕು.'

ಭಾವಃ— ಜ್ಞಾನಿಗಳು ಮತ್ತು ಅಜ್ಞಾನಿಗಳು ದನದ ತೊಗಲಿನಿಂದ ಮೊಚ್ಚೆಯನ್ನು ಮಾಡುತ್ತಾರೆ. ಆದರೆ ನಾನು ಸಂಸಾರದಿಂದ ದೂರಾದ ಜೀವವೆಂಬ ತೊಗಲಿನಿಂದ ಜೋಡನ್ನು ಸಿದ್ಧಪಡಿಸುತ್ತೇನೆ. ಇಂಥ ಜೋಡನ್ನು ನಾನು ಸಿದ್ಧಪಡಿಸಿ ಆದನ್ನು ಸತ್ಯರು ಮೆಟ್ಟಿಕೊಳ್ಳಲು ಅವರಿಗೆ ಕೊಡುತ್ತೇನೆ. ಹೀಗೆ ನಾನು ಮಾಡಿದಲ್ಲಿ ಬಟ್ಟೆಬಯಲು ಅಂದರೆ ಪರಮಾತ್ಮನು ನನಗೆ ದೊರಕುವನು. ಆದರೆ ಜನರು ತಮ್ಮ ಇಚ್ಛಾನುಸಾರ ತಮ್ಮ ತಮ್ಮ ಬಟ್ಟೆಯಲ್ಲಿ ಹೋಗುತ್ತಾರೆ. ಆದರೆ ನಾನು ಅವರ ಬಟ್ಟೆಯಲ್ಲಿ ಹೋಗದೆ ಪರಮಾತ್ಮನ ಬಟ್ಟೆಯಲ್ಲಿ ಹೋದರೆ ಸಾಕು ಎಂದು ಈ ವಚನದಲ್ಲಿ ನುಡಿದಿದ್ದಾನೆ.

ಹೀಗೆ ಧೂಳಯ್ಯನು ತನ್ನ ಕಾಯಕವನ್ನು ಮಾಡುತ್ತಿರಲು ಪರಮಾತ್ಮನು ಅವನ ಕಾಯಕಕ್ಕೆ ಮೆಚ್ಚಿ ಅವನಿಗೆ ಪ್ರತ್ಯಕ್ಷನಾಗಿ ನೀನು ಕೈಲಾಸಕ್ಕೆ ಬಂದು ನನ್ನ ಸಮೀಪದಲ್ಲಿರು ಎಂದು ಹೇಳಿದನು. ಆದರೆ ಧೂಳಯ್ಯನು ನನಗೆ ಕೈಲಾಸವಾಗಲಿ ಅಥವಾ ಬೇರೆ ಯಾವ ಪದ

ವಾಗಲಿ ಬೇಡ. ನನ್ನ ಕಾಯಕ ಮಾಡುತ್ತ ಶರಣರ ಸೇವೆಯಲ್ಲಿರುವ ಘನ ಪದವಿಯೇ ನನಗೆ ಸಾಕು ಎಂದು ನುಡಿದು ಪರಮಾತ್ಮನೊಡನೆ ಕೈಲಾಸಕ್ಕೆ ಹೋಗಲು ಒಪ್ಪಲಿಲ್ಲ. ಕಾಯಕವೇ ಕೈಲಾಸವೆಂತಲೂ ಇಹಲೋಕದಲ್ಲಿಯೇ ಅನೇಕ ಲೋಕಗಳಿವೆ ಎಂತಲೂ ಶಿವಶರಣರು ಆಗಿಂದಾಗ್ಗೆ ಸಾರಿದ್ದಾರೆ. ಶ್ರೇಷ್ಠವಾದ ಈ ತತ್ವಗಳಿಗನುಸರಿಸಿ ಮಾದರ ಧೂಳಯ್ಯನು ಪರಮಾತ್ಮನೊಡನೆ ಕೈಲಾಸಕ್ಕೆ ಹೋಗಲು ಒಪ್ಪಲಿಲ್ಲ. ಅವನು ಯಾರಿಗೂ ಗೊತ್ತಾಗದಂತೆ ತನ್ನ ಕಾಯಕವನ್ನು ಮಾಡುತ್ತ ಕಲ್ಯಾಣ ಪಟ್ಟಣದಲ್ಲಿ ವಾಸಮಾಡಿಕೊಂಡಿದ್ದನು.

ಹೀಗೆ ಕೆಲವು ಕಾಲ ಹೋಗಲು ಪರಮಾತ್ಮನು ಧೂಳಯ್ಯನ ಕಾಯಕದ ಮಹತ್ವವನ್ನು ಜಗತ್ತಿಗೆ ತೋರಬೇಕೆಂದು ಬಯಸಿ ಒಂದು ದಿನ ಧೂಳಯ್ಯನು ಚಮ್ಮಾವುಗೆಯನ್ನು ಉಳಿಯಿಂದ ಹೊಲಿಯುತ್ತ ಕುಳಿತಿರಲು ಆ ಉಳಿಯ ಮೊನೆಯಲ್ಲಿಯೇ ಆ ಮೊಚ್ಚೆಯಲ್ಲಿ ಪರಮಾತ್ಮನು ರೂಪುದೋರಿದನು. ಮತ್ತು ಆ ರೂಪಿನಲ್ಲಿಯೇ ಆ ಧೂಳಯ್ಯನು ಅಡಗಿ ಹೋದನು!

ಶರಣರಿಗೆ ಪರಮಾತ್ಮನ ಸಾನ್ನಿಧ್ಯಪದವು ಬೇಡ. ಆದ್ದರಿಂದ ಧೂಳಯ್ಯನು ಕೈಲಾಸಕ್ಕೆ ಹೋಗಲು ಅಲ್ಲಗಳೆದನು. ಆದರೆ ಸಾಮರಸ್ಯವು ಶರಣರ ಜೀವಿತದ ಧ್ಯೇಯವಾಗಿದೆ. ಆದ್ದರಿಂದ ಪರಮಾತ್ಮನು ಧೂಳಯ್ಯನನ್ನು ಈ ರೀತಿ ತನ್ನಲ್ಲಿ ಅಡಗಿಸಿಕೊಂಡನು.

ಮಾದರ ಧೂಳಯ್ಯನಿಗೆ ಇಲ್ಲಿ ಮೊಚ್ಚೆ ಹೊಲಿಯುವದೇ ಲಿಂಗ ಪೂಜೆಯಾಗಿ ಪರಿಣಮಿಸಿತು. ಹೇಗೆ ಸೊಹಳಿಯ ಸೋಮಣ್ಣಗೆ ದೀಪದ ಕುಡಿಯಲ್ಲಿ ಜ್ಯೋತಿರ್ಲಿಂಗವು ಆವಿರ್ಭವಿಸಿತೋ ಹಾಗೆಯೇ ಮಾದರ ಧೂಳಯ್ಯಗೆ ಮೊಚ್ಚೆ ಜೋಡನ್ನು ತನ್ನ ಉಳಿಯಿಂದ ಹೊಲಿಯುತ್ತಿರುವಾಗ ಆ ಉಳಿಯ ಮೊನೆಯಲ್ಲಿಯೇ ಪರಮಾತ್ಮನು ಪ್ರಕಟವಾದನು.

ಮಾದರ ಧೂಳಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಅವನು ವಚನಕಾರನೂ ಆಗಿದ್ದಾನೆ. ಅವನ ೧೦೨ ವಚನಗಳು ಈಗ ನಮಗೆ ಉಪಲಬ್ಧವಿವೆ. ಅವುಗಳಲ್ಲಿ ಅವನು ಮೋಕ್ಷವೆಂದರೇನು, ಅದನ್ನು ಹೇಗೆ ಪಡೆಯಬೇಕು, ಜ್ಞಾನದ ಸ್ವರೂಪವೇನು, ಕಾಯಕವನ್ನು

ಹೇಗೆ ಮಾಡಬೇಕು ಇವೇ ಮೊದಲಾದ ವಿಷಯಗಳನ್ನು ಅತ್ಯಂತ ತಾತ್ವಿಕ ರೀತಿಯಿಂದ ವಿವೇಚಿಸಿದ್ದಾನೆ.

---

## ಕೆಂಭಾವಿಯ ಭೋಗಣ್ಣ

ಕಲಬುರ್ಗಿ ಜಿಲ್ಲೆಯಲ್ಲಿ ಕೆಂಭಾವಿ ಎಂಬ ಗ್ರಾಮವಿದೆ. ಅದು ವಿಜಾಪುರ ಜಿಲ್ಲೆಯಲ್ಲಿರುವ ತಾಳೀಕೋಟೆಯಿಂದ ಈಶಾನ್ಯಕ್ಕೆ ೧೬ ಮೈಲು ದೂರದಲ್ಲಿದೆ. ಶಿವಶರಣನಾದ ದೇವರ ದಾಸಿಮಯ್ಯನ ಗ್ರಾಮವಾದ ಮುದನೂರು ಅಲ್ಲಿಂದ ನಾಲ್ಕು ಮೈಲು ಮಾತ್ರ ಇದ್ದು, ಕೇಶಿರಾಜನ ಗ್ರಾಮವಾದ ಕೊಂಡುಗುಳಿ, ಗೊಲ್ಲಾಳನ ಗ್ರಾಮವಾದ ಗೋಲಗೇರಿ, ಶಂಕರದಾಸಿಮಯ್ಯನ ಗ್ರಾಮವಾದ ನವಿಲೆ ಹೀಗೆ ಅನೇಕ ಶಿವಶರಣರ ಸ್ಥಾನಗಳು ಇದರಿಂದ ೩೦--೪೦ ಮೈಲು ಅಂತರದ ಮೇಲೆ ಇರುತ್ತವೆ. ಹೀಗೆ ಬಸವಾದಿ ಪ್ರಮಥರ ಕಾಲದಲ್ಲಿ ಅನೇಕ ಶಿವಶರಣರು ಪ್ರಸಿದ್ಧಿಗೆ ಬಂದ ಪ್ರದೇಶವು ಇದಾಗಿರುತ್ತದೆ.

ಕೆಂಭಾವಿಯಲ್ಲಿ ಚಂದಿಮರಸನೆಂಬ ರಾಜನು ಈ ಭಾಗವನ್ನು ಆಳುತ್ತಿದ್ದನು ಮತ್ತು ಭೋಗಣ್ಣನೆಂಬ ವಿಪ್ರನೂ ಅಲ್ಲಿ ವಾಸ ಮಾಡುತ್ತಿದ್ದನು. ಭೋಗಣ್ಣನು ವೇದ ಶಾಸ್ತ್ರದಲ್ಲಿ ಪಾರಂಗತನು, ವಿದ್ವಾಂಸನು, ಎಂದು ಬಹು ಪ್ರಸಿದ್ಧಿಯನ್ನು ಹೊಂದಿದವನಾಗಿದ್ದನು. ಆದರೆ ಅವನು ಶಿವಶರಣರ ಶಿವಾನುಭವದ ವಿಚಾರಗಳಿಗೆ ಒಲಿದವನಾಗಿ ವೀರಶೈವ ಧರ್ಮವನ್ನು ಸ್ವೀಕರಿಸಿದನು. ಅವನು ಅದನ್ನು ಸ್ವೀಕರಿಸಿದ ಬಳಿಕ ಅದರ ತತ್ವಗಳನ್ನು ಅತ್ಯಂತ ವಿಶ್ವಾಸದಿಂದ ಪಾಲಿಸುತ್ತ ಬಂದನು. ಶರಣರು ಭಕ್ತರಲ್ಲಿ ಭೇದವನ್ನು ಮತ್ತು ಜಂಗಮದಲ್ಲಿ ಕುಲವನು ಅರಸಬಾರದೆಂಬ ತತ್ವವಿದ್ದು ಇದನ್ನು ಅವನು ಅಕ್ಷರಶಃ ಪಾಲಿಸುವನು ಮತ್ತು ಧರ್ಮಚರ್ಚೆಗಳಲ್ಲಿ ಶಿವಾನುಭವದಿಂದ ಪರವಾದಿಗಳನ್ನು ಗೆಲ್ಲುವನು.

ಹೀಗಿರಲು ಶಿವನು ಭೋಗಣ್ಣನ ಭಕ್ತಿಯನ್ನು ಪರೀಕ್ಷಿಸಬೇಕೆಂದು ಒಬ್ಬ ಹೊಲೆಯನ ವೇಷವನ್ನು ಧಾರಣ ಮಾಡಿ, ಹೆಗಲಲ್ಲಿ ಮಿಣಿ, ಕೈಯ್ಯಲ್ಲಿ ಸಂಬಳಿಗೋಲು, ಇವುಗಳನ್ನು ಹಿಡಿದುಕೊಂಡು ಜಂಗಮ

ನಂತೆ ಹಣೆಯಲ್ಲಿ ವಿಭೂತಿ, ಕೊರಳಲ್ಲಿ ರುದ್ರಾಕ್ಷಿಗಳನ್ನು ಧರಿಸಿಕೊಂಡು ದಾರಿಯಲ್ಲಿ ಇದಿರಿಗೆ ಬರುತ್ತಿರಲು ಭೋಗಣ್ಣನು ಅವನು ಜಂಗಮ ನೆಂದು ಭಾವಿಸಿ, ಅವನಿಗೆ ಸಾಷ್ಟಾಂಗವೆರಗಿ ಅವನನ್ನು ಮನೆಗೆ ಕರೆದು ಕೊಂಡು ಬಂದು, ಭಯಭಕ್ತಿಯಿಂದ ಉನ್ನತಾಸನದಲ್ಲಿ ಕುಳ್ಳಿರಿಸಿ,ಲಿಂಗಾ ರ್ಚನೆಯನ್ನು ಮಾಡಿಸಿ, ಅವನ ಪಾದತೀರ್ಥವನ್ನು ತೆಗೆದುಕೊಂಡು, ಅವ ನೊಡನೆ ಪ್ರಸಾದವನ್ನು ಸ್ವೀಕರಿಸಿದನು. ಇದು ಅಲ್ಲಿಯ ಬ್ರಾಹ್ಮಣ ರಿಗೆ ತಿಳಿಯಲು ಅವರೆಲ್ಲರು ನೆರೆದು ಅರಸನಾದ ಚಂದಿಮರಸನಲ್ಲಿಗೆ ಹೋಗಿ, ಭೋಗಣ್ಣನು ಭಕ್ತಾಚಾರವೆಂದು ನೆಲೆಗೆಟ್ಟು, ಹೊಲೆಯನೆಂ ಬುದನ್ನು ತಿಳಿದೂ ತಿಳಿದೂ ಒಬ್ಬನನ್ನು ಕರೆದುಕೊಂಡು ಬಂದು ಅವ ನೊಡನೆ ಆರೋಗಿಸಿದನು. ಅಂದ ಬಳಿಕ ವಿಪ್ರಾಚಾರವೆಂಬುದೆಲ್ಲಿ ಉಳಿ ಯಿತು ? ಜಾತಿ ನೀತಿಗಳು ನೆಲೆಗೆಟ್ಟವು. ಇನ್ನು ಮೇಲೆ ನಿಮ್ಮೂ ರಲ್ಲಿ ಉಳಿಯಲಾಗದು. ಆತನನ್ನು ಕರೆಯಿಸಿ ಊರಿಂದ ಹೊರಡಿಸಬೇಕು ಎಂದು ದೂರಿದರು. ಆಗ ಚಂದಿಮರಸನು ಭೋಗಣ್ಣನನ್ನು ಕರಿಸಿ ಹೊಲೆಯನನ್ನು ಮನೆಯಲ್ಲಿ ಹೀಗೆ ಹೊಗಿಸುವರೇ ಎಂದು ಕೇಳಲು ಭೋಗಣ್ಣನು ಶಿವಭಕ್ತನಾದ ಹೊಲೆಯನೇ ಕುಲಜನು, ಶಿವಭಕ್ತಿ ಇಲ್ಲದ ವಿಪ್ರನೇ ಹೊಲೆಯನು, ಭಕ್ತರಲ್ಲಿ ಜಾತಿ ಸೂತಕವಿಲ್ಲೆಂಬ ಆಗಮವಾಕ್ಯ ಉಂಟು, ಆದ್ದರಿಂದ ಶಿವಭಕ್ತಿ ಇಲ್ಲದ ವಿಪ್ರರು ನನ್ನ ಮನೆಗೆ ಬರಲಾಗದು. ಶಿವಭಕ್ತಿ ಇದ್ದವನನ್ನು ಕರೆದೊಯ್ದರೆ ಏನು ದೋಷವು? ಎಂದೆನ್ನಲು, ಅಲ್ಲಿದ್ದ ವಿಪ್ರರು 'ನಾವೇನು ಹೊಲೆಯರೇ' ಎಂದು ರೋಷಾವೇಶವುಳ್ಳವರಾಗಿ ನುಡಿಯಲು, ಅರಸನಾದ ಚಂದಿ ಮರಸನು ಭೋಗಣ್ಣನ ಮೇಲೆ ಕುಪಿತನಾಗಿ ಇನ್ನು ಮೇಲೆ ನೀನು ನಮ್ಮೂರಲ್ಲಿ ಇರಬೇಡ, ಹೊರಟು ಹೋಗು ಎಂದು ಅಪ್ಪಣೆ ಕೊಡಲಾಗಿ ಅವನು ಹಾಗೇ ಆಗಲಿ ಎಂದು ನುಡಿದು ಕೂಡಲೇ ಊರನ್ನು ಬಿಟ್ಟು ಹೊರಬಿದ್ದನು.

ಆಗ ಪಟ್ಟಣದಲ್ಲಿ ವಿಲಕ್ಷಣವಾದ ಅನಾಹುತಗಳು ಸಂಭವಿಸ ಹತ್ತಿದವು. ಅಲ್ಲಿದ್ದ ಶಿವಾಲಯಗಳಲ್ಲಿಯ ಲಿಂಗಗಳು ಭೋಗ ಯ್ಯನ ಬೆನ್ನುಹತ್ತಿ ಹೊರಟವು. ಹೋಗುವಾಗ ಅವುಗಳಲ್ಲಿ ಕೆಲವು ಭೂಮಿಯಲ್ಲಿ ಉರುಳುತ್ತಲೂ ಕೆಲವು ಅಂತರಿಕ್ಷದಲ್ಲಿ ಹಾರು ತ್ತಲೂ ಕೆಲವು ಗರ್ಭಗುಡಿಯ ಕದವನ್ನಿಕ್ಕಿದ್ದರಿಂದ ಅದನ್ನು ಒಡೆದು

ಹೊರಬೀಳುತ್ತಲೂ ಅವು ಅವನ ಬೆನ್ನು ಹತ್ತಿ ಹೊರಟವು. ಇತ್ತ ಗ್ರಾಮದಲ್ಲಿಯ ಹಸುಗಳು ಹಾಲನ್ನು ಕರೆಯದೆ ಹೋದವು. ಜನರು ಮಾಡಿದ ಅನ್ನವು ಅಲ್ಲಿಯೇ ಹುಳಿತಿತು. ಪುಷ್ಪಗಳು ಬಾಡಿದವು. ಮುಂದೆ ವಿಪ್ರರು ತಮ್ಮ ನಿತ್ಯ ನೇಮಗಳನ್ನು ಮಾಡಬೇಕೆಂದು ದೇವಾಲಯಗಳನ್ನು ತೆರೆದು ನೋಡಲು, ಒಳಗೆ ಬರೇ ಪೀಠಗಳಿರುವದನ್ನು ಕಂಡು 'ಶಿವ ಶಿವಾ' ಭೋಗಣ್ಣನ ಕೂಡ ಆ ಲಿಂಗಗಳು ಹೋದವೇ! ಏನು ಉತ್ಪಾತವಾಯಿತು! ಎಂದು ಭಯಪಟ್ಟು ಅರಸನೆಡೆಗೆ ಓಡಿಬಂದು ನಡೆದ ಸಂಗತಿಗಳನ್ನು ತಿಳಿಸಿದರು. ಅವರು 'ಭೋಗಣ್ಣನು ಮಹಾ ಮಹಿಮನು, ಅವನನ್ನು ಪುನಃ ಪಟ್ಟಣಕ್ಕೆ ಬರಮಾಡಿಕೊಳ್ಳಬೇಕು' ಎಂದು ಹೇಳಿಕೊಂಡರು. ಆಗ ಅರಸನು ಕಲಶ ಕನ್ನಡಿ ಪಂಚ ಮಹಾವಾದ್ಯದಿಂದ ಪುರಜನರನ್ನೊಡಗೊಂಡು ಭೋಗಣ್ಣನ ಬೆನ್ನುಹತ್ತಿ ಹೋಗಲು ಅವನ ಸುತ್ತಲೂ ಶಿವಲಿಂಗಗಳೇ ಮುತ್ತಿರುವದನ್ನು ಕಂಡು, ಇದೇನು ಶಿವಲಿಂಗಗಳ ಯಾತ್ರೆಯೋ ಎಂಬಂತೆ ಇರುವ ಒಂದು ದೃಶ್ಯವನ್ನು ಕಂಡು, ಬ್ರಾಹ್ಮಣರು ಅವನಿಗೆ ನಾವು ಲಿಂಗ ಭಕ್ತಿಯನರಿಯದವರು, ಜಂಗಮವು ಲಿಂಗದ ಪ್ರಾಣವು, ಜಂಗಮದಂಗವು ಲಿಂಗವು, ಎಂಬುದನ್ನು ನಾವಿಂದು ಕಂಡೆವು, ನೀವು ಪಟ್ಟಣಕ್ಕೆ ಬರಬೇಕೆಂದು ಬೇಡಿಕೊಂಡರು. ಭೋಗಣ್ಣನು ಹಾಗೆಯೇ ಆಗಲೆಂದು ತಿರುಗಿ ಕೆಂಭಾವಿಗೆ ಬಂದನು. ಆಗ ಅವನೊಡನೆ ಇದ್ದ ಲಿಂಗಗಳು ಭಕ್ತನು ತಿರುಗಿ ತಮ್ಮಲ್ಲಿಗೆ ಬಂದನೆಂಬ ಸಂತೋಷದ ಭರದಲ್ಲಿಯೋ ಏನೋ ಎಂಬಂತೆ ತಮ್ಮ ತಮ್ಮ ಮೊದಲಿನ ಸ್ಥಾನಗಳನ್ನು ಬಿಟ್ಟುಕೊಟ್ಟು ತಮಗೆ ಸಿಕ್ಕ ಸಿಕ್ಕ ಪೀಠಗಳಲ್ಲಿ ಸಿಕ್ಕ ಹಾಗೆ ಕುಳಿತುಬಿಟ್ಟವು. ಇದರಿಂದ ದೊಡ್ಡ ಪೀಠಗಳಲ್ಲಿ ಸಣ್ಣ ಲಿಂಗಗಳು, ಸಣ್ಣ ಪೀಠಗಳಲ್ಲಿ ದೊಡ್ಡ ಲಿಂಗಗಳು ಹೀಗೆ ಸ್ಥಾನಪಲ್ಲಟವಾಗಿ ಕುಳಿತವು. ಭೋಗಣ್ಣನನ್ನು ಜಗತ್ತಿನಲ್ಲಿ ಮೆರೆಯಿಸಲು ಇದೊಂದು ಕುರುಹಾಗಿ ಉಳಿಯಲೆಂದು ಲಿಂಗಗಳು ಹೀಗೆ ಮಾಡಿದವೆಂದು ಮಹಾಕವಿಯಾದ ಹರಿಹರನು ತನ್ನ ರಗಳೆಯಲ್ಲಿ ಹೇಳಿದ್ದಾನೆ. ಈ ಪ್ರಕಾರ ಭೋಗಣ್ಣನು ಪಟ್ಟಣಕ್ಕೆ ಬಂದು ತನ್ನನ್ನು ವಂದಿಸುತ್ತಿದ್ದ ವಿಪ್ರರನ್ನು ಹರಿಸಿ ತಿರುಗಿ ಕಳಿಸಿದನು. ಹೀಗೆ ಭೋಗಣ್ಣನ ಮೂಲಕ ಶಿವಾನುಭವದ ಮಹತ್ವವು ಜಗತ್ತಿನಲ್ಲಿ ಮತ್ತಿಷ್ಟು ಬೆಳೆಯಿತು. ಕಡೆಗೆ ಆ ಗ್ರಾಮದಲ್ಲಿಯೇ ಭೋಗಣ್ಣನು ಲಿಂಗೈಕ್ಯನಾದನು.

ಕೆಂಭಾವಿಯಲ್ಲಿ ಈಗಲೂ 'ಭೋಗಿನಾಥ' ಎಂಬ ಪ್ರಸಿದ್ಧ ದೇವಾಲಯವಿದೆ. ಈ ಗ್ರಾಮದಲ್ಲಿ ಅನೇಕ ಶಿವಾಲಯಗಳು ಈಗಲೂ ಇದ್ದು ಅವುಗಳಲ್ಲಿಯ ಲಿಂಗಗಳೆಲ್ಲವು ಸರಿಯಾದ ಸ್ಥಳಗಳಲ್ಲಿರದೆ ದೊಡ್ಡ ಪೀಠಗಳಲ್ಲಿ ಸಣ್ಣ ಲಿಂಗಗಳು, ಸಣ್ಣ ಪೀಠಗಳಲ್ಲಿ ದೊಡ್ಡ ಲಿಂಗಗಳು ಹೀಗೆ ಅಸ್ತವ್ಯಸ್ತವಾಗಿ ಇರುವದನ್ನು ನಾವು ಅಲ್ಲಿ ನೋಡಬಹುದಾಗಿದೆ. ಬಸವೇಶ್ವರನು ತನ್ನ ವಚನಗಳಲ್ಲಿ ಕೆಂಭಾವಿ ಭೋಗಣ್ಣನನ್ನು ಬಹಳವಾಗಿ ಹೊಗಳಿದ್ದಾನೆ. ಮತ್ತು ಗಣಸಹಸ್ರದಲ್ಲಿಯೂ ಅವನ ಹೆಸರು ಬಂದಿರುತ್ತದೆ. ಆದ್ದರಿಂದ ಇವನು ಪುರಾತನ ಕಾಲದವನಾಗಿದ್ದಾನೆ.

---

## ಚಂಡಿಮರಸು.

ಚಂಡಿಮರಸನು ಕೆಂಭಾವಿಯಲ್ಲಿ ಅರಸನಾಗಿ ರಾಜ್ಯವಾಳುತ್ತಿದ್ದನು. ಅವನು ಬ್ರಾಹ್ಮಣ ಧರ್ಮವನ್ನನುಸರಿಸುತ್ತ ವೈದಿಕಾಚಾರವನ್ನು ಪಾಲಿಸುವವನಾಗಿದ್ದನು. ಭೋಗಣ್ಣನು ವೇದಶಾಸ್ತ್ರ ಪಾರಂಗತನಾಗಿ ಅದೇ ಗ್ರಾಮದಲ್ಲಿ ವಾಸಮಾಡುತ್ತಿದ್ದನು. ಆದರೆ ಅವನು ಮುಂದೆ ಶಿವಾನುಭವದ ತತ್ವಗಳಿಗೆ ಒಲಿದವನಾಗಿ ವೀರಶೈವ ಧರ್ಮವನ್ನು ಸ್ವೀಕರಿಸಿ ಜಾತಿ ಕುಲಗಳನ್ನು ಅಲ್ಲಗಳೆದು ಎಲ್ಲರೂ ಉಚ್ಚ ಕುಲದವರೆಂದು ಆಚರಿಸಹತ್ತಿದನು. ಇದರಿಂದ ಪಟ್ಟಣದಲ್ಲಿಯ ಬ್ರಾಹ್ಮಣರು ಅವನ ವಿಷಯವಾಗಿ ಅರಸನಾದ ಚಂದಿಮರಸನಿಗೆ ದೂರು ಹೇಳಲು ಅರಸನು ಅವನನ್ನು ಊರ ಬಿಟ್ಟು ಹೊರಗೆ ಹಾಕಿಸಿದನು. ಇದರ ವಿವರಗಳು ಭೋಗಣ್ಣನ ಚರಿತ್ರೆಯಲ್ಲಿ ಹಿಂದೆ ಬಂದಿವೆ. ಇದರಿಂದ ಪಟ್ಟಣದಲ್ಲಿ ಅನಾಹುತಗಳೇಳಲು ಚಂದಿಮರಸನು ಭೋಗಣ್ಣನನ್ನು ಪುನಃ ಪಟ್ಟಣದಲ್ಲಿ ಬರಮಾಡಿಕೊಂಡನು. ಆಗ ಅರಸನು ಅತ್ಯಂತ ಪಶ್ಚಾತ್ತಾಪವನ್ನು ಹೊಂದಿದವನಾಗಿ ವೀರಶೈವ ಧರ್ಮವನ್ನು ಸ್ವೀಕರಿಸಿದನು. ಇಷ್ಟೇ ಅಲ್ಲ, ಅವನು ತನ್ನ ರಾಜ್ಯವನ್ನು ಸಹ ಪರಿತ್ಯಜಿಸಿ

ಕೆಂಭಾವಿ ಗ್ರಾಮವನ್ನು ಬಿಟ್ಟುಕೊಟ್ಟು ಕೃಷ್ಣಾನದಿಯ ತೀರದಲ್ಲಿರುವ ಚಿಮ್ಮಲಗಿ ಎಂಬಗ್ರಾಮದಲ್ಲಿ ವಾಸಮಾಡಹತ್ತಿದನು. ಈ ಗ್ರಾಮವು ಈಗ ಬಾಗೇವಾಡಿ ತಾಲೂಕಿನಲ್ಲಿದೆ. ಶಿವಾನುಭವದ ತತ್ವಗಳು ಮನುಷ್ಯನ ಮನೋವೃತ್ತಿಯಲ್ಲಿ ಎಂಥ ಉಚ್ಚ ಪರಿಣಾಮಗಳನ್ನುಂಟು ಮಾಡುತ್ತ ವೆಂಬುದಕ್ಕೆ ಇದೊಂದು ಅತ್ಯುತ್ತಮ ಉದಾಹರಣೆಯಾಗಿದೆ.

ಈ ಕಾಲದಲ್ಲಿ ಚಂದಿಮರಸನು ನಿಜಗುಣನಿಂದ ದೀಕ್ಷೆಯನ್ನು ಹೊಂದಿದನು. ನಿಜಗುಣನಾದರೂ ವಚನಕಾರರಲ್ಲಿ ಅತ್ಯುಚ್ಚ ಸ್ಥಾನ ವನ್ನು ಪಡೆದವನು. ಆವನ ಮುದ್ರಿಕೆಯು 'ನಿಜಗುಣ ಯೋಗಿಯ ಯೋಗ', ಎಂದಿದ್ದು ಇದರಿಂದ ಇವನು ಲಿಂಗಾಂಗಸಾಮರಸ್ಯದ ರೀತಿಯನ್ನು ಚನ್ನಾಗಿ ಬಲ್ಲವನಾಗಿದ್ದನೆಂದು ತಿಳಿಯುತ್ತದೆ. ಇವನ ಶಿಷ್ಯತ್ವವನ್ನು ಚಂದಿಮರಸನು ವಹಿಸಿ ತಾನೂ ತನ್ನ ಅನುಭವವನ್ನು ವಚನಗಳ ಮೂಲಕ ಜಗತ್ತಿಗೆ ವಿಶದಪಡಿಸಹತ್ತಿದನು. ಅವನ ಮುದ್ರಿಕೆಯು 'ಸಿಮುಲಿಗೆಯ ಚನ್ನರಾಮಾ' ಎಂದಿದೆ. ನಾವು ನಮಗೆ ದೊರೆತ ಆತನ ವಚನಗಳನ್ನು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಸಿದ್ಧಿಸಿದ್ದೇವೆ. ಅವು ಅತ್ಯಂತ ಶ್ರೇಷ್ಠತರವಾದವುಗಳು. ಅವುಗಳನ್ನು ಉದಹರಿಸದೆ ಇದ್ದ ಯಾವ ವಚನ ಸಂಗ್ರಹಕಾರನೂ ಇರುವದಿಲ್ಲ. ಮುಂದೆ ಚಂದಿ ಮರಸನು ಚಿಮ್ಮಲಿಗೆಯಲ್ಲಿಯೇ ಸಮಾಧಿಸ್ಥನಾದನು.

ಅವನ ಹೆಸರಿನ ದೇವಾಲಯವು ಇದೇ ಗ್ರಾಮದಲ್ಲಿದೆ. ಈ ಗ್ರಾಮವು ಗದಗ-ವಿಜಾಪುರ ರೇಲ್ವೆ ಮಾರ್ಗದ ಮೇಲಿರುವ ಸೀತಿಮನೆ ಸ್ಟೇಶನ್ನಿನ ಸಮೀಪದಲ್ಲಿ ಕೃಷ್ಣಾ ನದಿಯ ಸೇತುವೆಯ ಪಶ್ಚಿಮಕ್ಕೆ ೨ ಮೈಲು ದೂರ ಇರುತ್ತದೆ. ಈ ಸೇತುವೆಯನ್ನು ಕಟ್ಟುವಾಗ ಅದರ ಕಮಾನು ಗಳ ತಳಹದಿಯು ನದಿಯ ಪಾತಳಿಯ ಮೇಲೆ ಬಂದ ಕಾರಣ ಪಶ್ಚಿಮಕ್ಕೆ ಒಂದು ದೊಡ್ಡ ಮಡುವು ಆಗಿದ್ದು ಅದರಲ್ಲಿ ಈ ದೇವಾಲಯವು ಈಗ ಮುಳುಗಿ ಹೋಗಿದೆ. ಆದರೆ ನದಿಯ ನೀರು ಕಡಿಮೆಯಾದಾಗ್ಗೆ ಈ ದೇವಾಲಯವು ಕೆಲವುಟ್ಟಿಗೆ ತೆರೆಯುತ್ತದೆ. ಈ ಗ್ರಾಮದ ಜನರು ಇದು 'ಚಂದಯ್ಯನ ಗುಡಿ' ಎಂದು ಕರೆಯುತ್ತಾರೆ. ಅವರಿಗೆ ಚಂದಿ ಮರಸನ ವೃತ್ತಾಂತವು ಗೊತ್ತಿರದ್ದರಿಂದ, ಅದು ನುಲಿಯ ಚಂದಯ್ಯನ ಗುಡಿ ಎಂದು ಅವರು ಭಾವಿಸಿರುತ್ತಾರೆ.




ವರ್ಷ ೨೧ ] ದಿಸೆಂಬರ ೧೯೪೬ [ ಸಂಚಿಕೆ ೩

## ವಿಷಯಾನುಕ್ರಮಣಿಕೆ.

೧ ಶ್ರೀಬಸವೇಶ್ವರನ ಹರಿಜನೋದ್ಧಾರವು. ೨೫
— ಶ್ರೀ. ಅನ್ನದಾನೀಶ್ವರ ವಿರಕ್ತಮಠ ರಾಣೆಬೆನ್ನೂರ.

೨ ಶಂ. ಬಾ. ಜೋಶಿಯವರ ಆಕ್ಷೇಪಾರ್ಹ ಭಾಷಣ. ೨[illegible]
— ಶ್ರೀ. ಅನ್ನದಾನೀಶ್ವರ ವಿರಕ್ತಮಠ ರಾಣೆಬೆನ್ನೂರ.

೩ ನಿಜದೇವ. (ಕವಿತೆ) — ಶ್ರೀ. ಶ. ಮ. ಹೊಂಬಳ ನರೇಗಲ್ಲ. ೩೪

೪ ಶಿಕ್ಷಣದಲ್ಲಿ ಸಂಗೀತ. — ಶ್ರೀ. ಜಿ. ಎಸ್. ಜ್ಯಕ್ತಿಮಠ ವಿಜಾಪೂರ. ೩೫

೫ ಮೈಸೂರ ಸಂಸ್ಥಾನ ದಿವಾನರಿಗೆ ಕೊಟ್ಟ ಬಿನ್ನವತ್ತಳೆ ೩೯

೬ ನುಲಿಯ ಚಂದಯ್ಯಗಳ ಸ್ಥಳ. — ಶ್ರೀ. ಸದಾಶಿವ ಶಿವಾಚಾರ್ಯ ಸ್ವಾಮಿಗಳು ಸಖರಾಯಪಟ್ಟಣ. ೪೮

೭ ವೀರಶೈವ ಸಂಸ್ಕೃತಿ ಪ್ರಕಾಶಕ ಸಮಿತಿ ಗದಗ ಸಾಹಿತ್ಯ ಪರೀಕ್ಷೆಗಳು. — ಶ್ರೀ. ನಾಗಭೂಷಣ ಶಾಸ್ತ್ರಿಗಳು ಗದಗ. ೫೧

೮ ಪಾದಪೂಜೆ ಪಾದೋದಕದ ನಿಜವಾದ ಮರ್ಮ. ೫೪
— ಶ್ರೀ. ವ್ಹಿ. ಸಿ. ಬ್ಯಾಹಟ್ಟಿ ಬಿ. ಎ.

೯. ಶಿವಶರಣರ ಚರಿತ್ರೆಗಳು—ಭಾಗ-೨ ಪ್ರಸ್ತಾವನೆ. ೫೭—೬೪
— ರಾ॥ ಬ॥ ಫ. ಗು. ಹಳಕಟ್ಟಿ ವಿಜಾಪುರ.

# ಶಿವಾನುಭವ ಸಹಾಯ್ಯ ಧನ.

(೧) ಶ್ರೀ. ಮಡ್ಡಿಪ್ಪ ವೀರಭದ್ರಪ್ಪ ಬೆಂಡಿಗೇರಿ ಮು. ಬೈಲ
ಹೊಂಗಲ ಇವರು ತಮ್ಮ ತಾಯಿಯವರಾದ ಶ್ರೀ. ೫ ೦--೦
ಗಂಗವ್ವಾ ಕೋಂ ವಿರಭದ್ರಪ್ಪಾ ಬೆಂಡಿಗೇರಿ ಇವರು
ಶಿವಾಧೀನರಾದ ಕಾಲಕ್ಕೆ ಅರ್ಪಿಸಿದ್ದು.

ಮೇಲಿನ ಕಾಣಿಕೆಯನ್ನು ಪ್ರೇಮದಿಂದ ಸ್ವೀಕರಿಸಿದ್ದು ಈ ಬಗ್ಗೆ ಅವರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಸಂಪಾದಕರು ಶಿವಾನುಭವ
ವಿಜಾಪೂರ.

# ಶಿವಾನುಭವ

| ವರ್ಷ ೨೧ | ಡಿಸೆಂಬರ ೧೯೪೬ | ಸಂಚಿಕೆ ೩ |
| --- | --- | --- |

## ಬಸವೇಶ್ವರನ ಹರಿಜನೋದ್ಧಾರವು ಗಾಂಧಿಯವರ ಹರಿಜನೋದ್ಧಾರಕ್ಕಿಂತ. ಎಷ್ಟೂ ಕಡಿಮೆಯಲ್ಲ.

(ಲೇಖಕರುಃ— ಶ್ರೀ. ಅನ್ನದಾನೀಶ್ವರ ವಿರಕ್ತಮಠ, ರಾಣಿಬಿನ್ನೂರ.)

೧೨ನೇ ಶತಮಾನದಲ್ಲಿ ಧಾರ್ಮಿಕ, ಸಾಮಾಜಿಕ, ಆರ್ಥಿಕ ಕ್ರಾಂತಿಗಳನ್ನು ಅಧ್ಯಾತ್ಮದ ತಳಹದಿಯ ಮೇಲೆ ನಿಲ್ಲಿಸಿ ಜನಜೀವನದ ನೈತಿಕ ಮಟ್ಟವನ್ನು ಮೇಲಕ್ಕೆತ್ತಿಹೋದ ಮಹಾನುಭಾವನಾದ ಬಸವೇಶ್ವರದೇವರು ಅಂದಿಗೂ ಇಂದಿಗೂ ಎಂದಿಗೂ ಪ್ರಾತಃಸ್ಮರಣೀಯರಾಗಿದ್ದಾರೆ. ಅವರ ಸಾಮಾಜಿಕ ಕ್ರಾಂತಿಯ ಬಗ್ಗೆ ಪ್ರಾಮುಖ್ಯವಾಗಿ ಇಲ್ಲಿ ಯೋಚಿಸೋಣ.

ಬಸವಣ್ಣನವರು ಅದ್ಭುತವಾದ ಸಾಮಾಜಿಕ ಕ್ರಾಂತಿಯನ್ನು ಮಾಡಿದರು. ಅವರ ಕಾಲದಲ್ಲಿ ಸಮಾಜದಲ್ಲಿ ಸ್ವಾತಂತ್ರ್ಯದ ಕಲ್ಪನೆಯು ಕೂಡ ಇರಲಿಲ್ಲ. ಮಾನವನು ಅನೇಕ ವಿಧಿನಿಷೇಧಗಳ ಕಟ್ಟುಗಳಿಂದ ಬಿಗಿಯಲ್ಪಟ್ಟಿದ್ದನು. ಆದರಿಂದ ಮಾನಸಿಕ ಗುಲಾಮಗಿರಿಯು ಅವನನ್ನು ಆವರಿಸಿ ಅವನ ಬುದ್ಧಿಯೂ ಮನವೂ ಆತ್ಮವೂ ವಿಕಾಸ ಹೊಂದದೆ ಹೋದವು. ಸದಸದ್ವಿವೇಕ, ಸತ್ಯಾಸತ್ಯ ವಿಮರ್ಶೆ, ಗುಣಗ್ರಾಹಕತೆ, ಬಂಧುಪ್ರೀತಿಗಳು ಸಮಾಜದಲ್ಲಿರಲಿಲ್ಲ.

ದೇಶಭಕ್ತ ಲಾಲಾಲಜಪತರಾಯರು ಒಂದುಕಡೆ ಹೇಳಿರುವಂತೆ ದೈಹಿಕ ದಾಸ್ಯತೆಗಿಂತಲೂ ಮಾನಸಿಕ ದಾಸ್ಯತೆಯು ಭಯಂಕರ ಅಪಾಯಕರವಾದುದು. ಏಕೆಂದರೆ ಮನುಷ್ಯನ ಮನಸ್ಸಿನಲ್ಲಿಯೇ ತಾನು ಗುಲಾಮನೆಂಬ ಭಾವನೆಯನ್ನು ಸ್ಥಿರೀಕರಿಸುತ್ತ ಹೋದಂತೆ ಅವನ ವ್ಯಕ್ತಿತ್ವ--ಮನುಷ್ಯತ್ವವೇ ವಿಕಾಸಹೊಂದದೆ ಯಾಂತ್ರಿಕ ಜಡಸ್ವರೂಪವನ್ನು ಧರಿಸಿದ ಅವನ ಮನವು ಪರಾವಲಂಬಿಯೂ ಚೈತನ್ಯರಹಿತವೂ ವಿಚಾರ ಶೂನ್ಯವೂ ಆಗಿ ಜೀವನದಲ್ಲಿ ತುಷ್ಟಿ-ಪುಷ್ಟಿಗಳು ನೆಲೆಗೊಳ್ಳುವದಿಲ್ಲ.

ಈ ದೃಷ್ಟಿಯಿಂದ ವಿಚಾರಿಸಿದರೆ ಸಮಾಜದಲ್ಲಿ ವರ್ಣಾಶ್ರಮ ಪದ್ಧತಿಯು ಎಷ್ಟು ಅನರ್ಥಗಳನ್ನುಂಟುಮಾಡಿದ್ದಿತೆಂಬುದು ಸಿದ್ಧವಾಗುತ್ತದೆ. ಊಚ ನೀಚ ತಳಹದಿಯ ಮೇಲೆ ನಿಂತ ವರ್ಣಗಳ ಕಲ್ಪನೆಯು ಒಬ್ಬ ಮನುಷ್ಯನನ್ನು ಅಸ್ಪೃಶ್ಯನನ್ನಾಗಿ ಮಾಡಿ ಅವನಲ್ಲಿ ಮನೋರೋಗವನ್ನುತ್ಪನ್ನ ಮಾಡಿದ್ದಿತು. ತತ್ಪರಿಣಾಮವಾಗಿ ಅಸ್ಪೃಶ್ಯನು ಮನುಷ್ಯತ್ವವನ್ನೇ ಕಳೆದುಕೊಂಡು ಬಿಟ್ಟನು. ಎರಡನೆಯವರ ಮೋರೆಯನ್ನು ನೋಡುತ್ತ ನಿಲ್ಲುವ ನಾಯಿಗಿಂತಲೂ ಅವನ ಸ್ಥಿತಿಯು ಕನಿಷ್ಟವಾಯಿತು. ಏಕೆಂದರೆ ನಾಯಿಯನ್ನು ಮುಟ್ಟಿಸಿಕೊಂಡರೂ ಚಿಂತೆಯಿಲ್ಲ. ಆದರೆ ಅಸ್ಪೃಶ್ಯನೆಂಬವನನ್ನು ಮುಟ್ಟಿಸಿಕೊಳ್ಳಬಾರದೆಂಬ ಹೇಯವಾದ ಕಲ್ಪನೆಯು ಸಮಾಜದಲ್ಲಿ ದೃಢಮೂಲವಾಯಿತು. ಮನುವು ತನ್ನ ಮನುಸ್ಮೃತಿಯ ೧೦ನೇ ಅಧ್ಯಾಯದಲ್ಲಿ ಅಸ್ಪೃಶ್ಯನನ್ನು ಶಾಶ್ವತ ಗುಲಾಮನನ್ನಾಗಿ ಪರಿವರ್ತಿಸುವ ವಿಧಿನಿಷೇಧಗಳ ಸಿವುಡನ್ನೇ ಬರೆದು ಹಿಂದೂಸಮಾಜದಲ್ಲಿ ಇವುಗಳನ್ನು ಪ್ರಚಾರಗೊಳಿಸಲು ಮೂಲ ಕಾರಣನಾದನು. ಅವನ ಸ್ಮೃತಿಯ ಪರಿಣಾಮವಾಗಿ ಹಿಂದೂಸಮಾಜವು ಹಿಂದುಳಿದ ಸಮಾಜವಾಗಿ ಪ್ರಗತಿಪರ ವಿಚಾರಗಳ ಬೆಳಕು ಬೀಳದಾಯಿತು. ಹಿಂದುಳಿದ ಸಮಾಜವಾಗಿರುವ ಹಿಂದೂಸಮಾಜದ ಪ್ರತಿಗಾಮೀ ಧೋರಣೆಗೆ ಅಸ್ಪೃಶ್ಯತೆಯಂಥ ಭಯಂಕರ ಕಲಂಕವೇ ಕಾರಣವೆಂದೂ ಅದು ಹೋಗಿ ಅಸ್ಪೃಶ್ಯರ ಉದ್ಧಾರವಾಗಬೇಕೆಂದೂ ಮಹಾತ್ಮಾ ಗಾಂಧಿಯವರು ಈಗ ಯತ್ನಿಸುತ್ತಿದ್ದಾರೆ.

ಆದರೆ ಬಸವೇಶ್ವರನು ಸಾಮೂಹಿಕವಾಗಿ ೮೦೦ ವರ್ಷಗಳ ಹಿಂದೆಯೇ ಅಸ್ಪೃಶ್ಯತೆಯ ಮೂಲವನ್ನೇ ತೆಗೆದುಹಾಕಿದ್ದಾನೆ. ಅಸ್ಪೃ

ಶ್ಯರ ಅಸ್ಪೃಶ್ಯತೆಯನ್ನು ಕಳೆದು ಹರಿಜನರೆಂದು ಗಾಂಧಿಯವರು ಕರೆದಂತೆ ಬಸವಣ್ಣನವರು ಅಸ್ಪೃಶ್ಯರ ಅಸ್ಪೃಶ್ಯತೆಯನ್ನು ಪರಿಣಾಮಕಾರಿಯಾಗಿ ತೆಗೆದುಹಾಕಿ ಲಿಂಗಾಂಗಿ ಎಂಬ ಹೆಸರನ್ನು ಕೊಟ್ಟರು. ಹರಿಜನರು ಹೇಗೆ ಆಚರಿಸಬೇಕೆಂದು ಗಾಂಧಿಯವರು ಹರಿಜನ ಪತ್ರಿಕೆಯಲ್ಲಿ ಹೇಳಿರುವರೋ ಅದೇ ಪ್ರಕಾರ ಶರಣಬಸವಣ್ಣನವರು ವಚನಶಾಸ್ತ್ರದಲ್ಲಿ ಹೇಳಿರುವರು.

ಹರಿಜನರಿಗೆ ಸಾರ್ವಜನಿಕ ಹಕ್ಕುಗಳಿರಬೇಕೆಂದು ಹೇಳಿದ ಗಾಂಧಿಯವರಂತೆಯೇ ಬಸವಣ್ಣನವರು ಹರಿಜನರಿಗೆ ಸಾಮಾಜಿಕ ಸುಖ-ಸೌಲಭ್ಯಗಳನ್ನು ಕಲ್ಪಿಸಿಕೊಟ್ಟಿದ್ದಾರೆ. ಹರಿಜನರ ನೈತಿಕ ಉನ್ನತಿಗೆ ಸವರ್ಣೀಗಳ ಉದಾರ ಭಾವನೆಯು ಕಾರಣವೆಂದು ಗಾಂಧಿಯವರು ಹೇಳುವಂತೆ ಬಸವಣ್ಣನವರೂ ಲಿಂಗಾಂಗಿಗಳ ಉದಾರ ತತ್ವಾಚರಣೆಯೇ ಇದಕ್ಕೆ ಕಾರಣವೆಂದು ಹೇಳಿರುವರು.

ಬಂಧುಪ್ರೀತಿ, ಗುಣಗ್ರಾಹಕತೆಗಳು ಹರಿಜನರಲ್ಲಿ ಉದ್ಯೋಗಾಭಿವೃದ್ಧಿಯಾಗುವಂತೆ ಮಾಡುತ್ತವೆಂದು ಗಾಂಧಿಯವರು ಹೇಳುವಂತೆ ಬಸವಣ್ಣನವರೂ ಹೇಳಿದ್ದಲ್ಲದೆ ಕಾಯಕ ತತ್ವದ ಮೂಲಕ ಯತ್ನಿಸಿದ್ದಾರೆ. ಗಾಂಧಿಯವರ ಹರಿಜನೋದ್ಧಾರದ ಪರಿಣಾಮವಾಗಿ ಡಾ. ಅಂಬೇಡಕರರಂಥ ವಿಚಾರ ವಾದಿಗಳು ಬೆಳಕಿಗೆ ಬಂದಂತೆ ಬಸವಣ್ಣನವರ ಹರಿಜನೋದ್ಧಾರದ ಪರಿಣಾಮವಾಗಿ ಹರಳಯ್ಯ, ಶಿವನಾಗಮಯ್ಯ, ಚೆನ್ನಯ್ಯ, ಕಕ್ಕಯ್ಯ ಮೊದಲಾದ ಮಹಾತ್ಮರಾದ ಶರಣರು ಬೆಳಕಿಗೆ ಬಂದು ಸಮಾಜೋನ್ನತಿಗೆ ಮಹತ್ವದ ಕಾರಣಪುರುಷರಾದರು.

ಗಾಂಧಿಯವರ ಹರಿಜನೋದ್ಧಾರದ ಫಲವಾಗಿ ಸ್ತ್ರೀಯರು ಮುಂದೆ ಬಂದಂತೆ ಬಸವಣ್ಣನವರ ಹರಿಜನೋದ್ಧಾರದ ಫಲವಾಗಿ ಸ್ತ್ರೀಪುರುಷ ಸಮಾನತೆಯು ಉಂಟಾಗಿ ಕಲ್ಯಾಣಮ್ಮ ಮೊದಲಾದ ಸ್ತ್ರೀಯರು ಸ್ತ್ರೀಪ್ರಪಂಚವನ್ನೇ ಬೆಳಗಿದರು.

ಗಾಂಧಿಯವರು ಹರಿಜನ ಧಾರ್ಮಿಕ ಉನ್ನತಿಗೆ ದೇವಾಲಯ ಪ್ರವೇಶದಂಥ ಕಾಯಿದೆಗಳಿಂದ ಯತ್ನಿಸುತ್ತಿರುವಂತೆ ಬಸವಣ್ಣನವರು

ಲಿಂಗಾಂಗಸಾಮರಸ್ಯ ತತ್ವ ಪ್ರತಿಪಾದನೆ ಆಚರಣೆಗಳಿಂದ ಹೆಚ್ಚಿಗೆ ಫಲಕಾರಿಯಾಗುವಂತೆ ಯತ್ನಿಸಿದರು. ಪ್ರತಿಯೊಬ್ಬ ಮಾನವನು ಅವನು ಯಾವದೇ ಜಾತಿಯವನಿರಲಿ, ವರ್ಣದವನಿರಲಿ, ಲಿಂಗಧಾರಣೆಗೆ ಹಕ್ಕುದಾರನೆಂದು ಅವರು ಹೇಳಿ ಜಾತಿಭೇದದ ಮೂಲವನ್ನೇ ಲಿಂಗತತ್ವದ ಮೂಲಕ ಕಿತ್ತಿಹಾಕಿದರು.

ಗಾಂಧಿಯವರು ತಮ್ಮ ೧೦ ತತ್ವಗಳ ಮೂಲಕ ಜಾತಿಭೇದವನ್ನು ತೆಗೆದುಹಾಕುತ್ತಿರುವಂತೆ ಬಸವಣ್ಣನವರು ತಮ್ಮ ಷಟ್‌ಸ್ಥಲಾಚರಣೆಯ ಯೋಗದಿಂದ ಜಾತಿಭೇದದ ಹುಚ್ಚು ಕಲ್ಪನೆಯನ್ನು ದೂರೀಕರಿಸಿದರು.

ಗಾಂಧಿಯವರು ಹರಿಜನ ಕನ್ನೆಯನ್ನು ಒಬ್ಬ ಬ್ರಾಹ್ಮಣನಿಗೆ ಕೊಟ್ಟು ಲಗ್ನಮಾಡಿದಂತೆ ಬಸವಣ್ಣನವರು ಬ್ರಾಹ್ಮಣ ಕನ್ನೆಯನ್ನು ಹರಿಜನನಿಗೆ ಕೊಟ್ಟು ಲಗ್ನ ಮಾಡಿ ವರ್ಣಗಳ ಕೋಟೆಯನ್ನು ಛಿನ್ನವಿಚ್ಛಿನ್ನ ಮಾಡಿಬಿಟ್ಟರು.

ಗಾಂಧಿಯವರು ಸಾತ್ವಿಕವಾದ ಸಸ್ಯಾಹಾರದ ಮೂಲಕ ಸಹಭೋಜನವನ್ನು ಸಾಗಿಸಿ ಏಕೀಕರಣಕ್ಕೆ ಸಹಾಯಕರಾದಂತೆ ಬಸವಣ್ಣನವರು ಪ್ರಸಾದಿಸ್ಥಲದ ತತ್ವದ ಮೂಲಕ ಸಹಭೋಜನಕ್ಕೆ ಪ್ರೋತ್ಸಾಹಿಸಿ ಏಕೀಕರಣಕ್ಕೆ ಪೋಷಕರಾದರು. ಈಪ್ರಕಾರ ಮಹಾತ್ಮಾ ಗಾಂಧಿಯವರ ಹರಿಜನೋದ್ಧಾರಕ್ಕಿಂತಲೂ ಮಹಾನುಭಾವರಾದ ಬಸವಣ್ಣನವರ ಹರಿಜನೋದ್ಧಾರ ಕಾರ್ಯವು ಎಷ್ಟೂ ಕಡಿಮೆಯಲ್ಲ, ಇಷ್ಟೇ ಅಲ್ಲ, ಅದು ಹೆಚ್ಚಿನ ತರಗತಿಯದೆಂಬ ಮಾತು ಸಿದ್ಧವಾಗುತ್ತದೆ. ಹೀಗೆ ಬಸವಣ್ಣನವರಂತೆ ಸಾಮೂಹಿಕವಾಗಿ ಮತ್ತು ಪರಿಣಾಮಕಾರಿಯಾಗಿ ತತ್ವ ದೃಷ್ಟ್ಯಾ ಅಸ್ಪೃಶ್ಯತಾ ನಿವಾರಣೆಯನ್ನೂ ಹರಿಜನರ ಉದ್ಧಾರವನ್ನೂ ಯಾವ ಅವತಾರ ಪುರುಷರೂ ಮಾಡಿಲ್ಲವೆಂಬುದು ಇತಿಹಾಸದಿಂದ ತಿಳಿದುಬರುತ್ತದೆ.

ವಸ್ತುಸ್ಥಿತಿಯು ಹೀಗಿದ್ದು ಕೆಲವರು ಉದಾಹರಣಾರ್ಥವಾಗಿ ಧಾರವಾಡದ ಶಂ. ಬಾ. ಜೋಶಿಯಂಥವರು ಹೋದ ನಾಡಹಬ್ಬದ ಕಾಲದಲ್ಲಿ ರಾಣೆಬೆನ್ನೂರಲ್ಲಿ ಕರ್ನಾಟಕ ಸಂಘದ ಆಶ್ರಯದಲ್ಲಿ ನಗರಭವನದಲ್ಲಿ ಬಸವಣ್ಣನವರ ಅಸ್ಪೃಶ್ಯತಾ ನಿವಾರಣೆಯ ಮಹಾಕಾರ್ಯ

ವನ್ನು ಕೇಳುಗಳೆದು ಮಾತಾಡಿದ್ದನ್ನು ನೋಡಿದರೆ ವಿಚಾರವಂತ ತರುಣ ಕನ್ನಡಿಗರಿಗೆ ಅತ್ಯಂತ ವಿಷಾದವೂ ಕನಿಕರವೂ ಉಂಟಾಗದೆ ಇರದು. ಇಂಥ ಭಾಷಣಗಳನ್ನು ನಂಬಿ ಯಾರೂ ವಿಚಾರಶೂನ್ಯರಾಗದೆ ಸ್ವತಂತ್ರ ವಾಗಿ ವಿಚಾರಿಸಿ ಬಸವೇಶ್ವರರ ಜಯಭೇರಿಯನ್ನು ಹೊಡೆಯಲಿ.

---

# ಶಂ. ಬಾ. ಜೋಶಿಯವರ ಆಕ್ಷೇಪಾರ್ಹ ಭಾಷಣ.

( ಲೇಖಕಃ— ಅನ್ನದಾನೀಶ್ವರ ವಿರಕ್ತಮಠ ರಾಣೇಬೆನ್ನೂರ. )

---

ತಾ॥ ೪-೧೦-೪೬ ನೇ ಶುಕ್ರವಾರ ಸಾಯಂಕಾಲ ೬॥ ಗಂಟೆಗೆ ರಾಣೇಬೆನ್ನೂರ ಮುನಸಿಪಾಲಿಟಿಯ ಕಟ್ಟಡದಲ್ಲಿ ಧಾರವಾಡದ ಶ್ರೀಮಾನ್ ಶಂ. ಬಾ. ಜೋಶಿಯವರು ' ನಾಳಿನ ಸಮಾಜ ' ಎಂಬ ವಿಷಯದ ಮೇಲೆ ಕರ್ನಾಟಕ ಸಂಘದವರ ಆಶ್ರಯದಲ್ಲಿ ಭಾಷಣ ಮಾಡಿದರು. ಅವರ ಭಾಷಣವನ್ನು ನಾನು ಮೊದಲಿನಿಂದ ಕೊನೆಯ ವರೆಗೆ ಕೇಳಿ ಅದರಲ್ಲಿಯ ಆಕ್ಷೇಪಾರ್ಹ ಅಂಶಗಳನ್ನೆತ್ತಿ ಈ ಲೇಖನವನ್ನು ಬರೆಯ ಲೇಬೇಕಾಗಿದೆ. ಏಕೆಂದರೆ ಸಮಾಜದಲ್ಲಿ ವಿಶೇಷತಃ ತರುಣರ ಮೇಲೆ ಇದರಿಂದ ತೀರ ತಪ್ಪು ತಿಳಿವಳಿಕೆಗಳಾಗುವ ಸಂಭವವಿದೆ.

### ಆಕ್ಷೇಪಾರ್ಹ ಅಂಶಗಳು.

(೧) ಶರಣರೂ ದಾಸರೂ ಕೈಲಾಸ ವೈಕುಂಠಗಳನ್ನೇ ಗಮ್ಯವಾ ಗಿಟ್ಟುಕೊಂಡು ಈ ಭೂಲೋಕವನ್ನು ಮರೆತರು. ಅವರ ಸಂಕಲ್ಪದಂತೆ ಅವರಿಗೆ ಕೈಲಾಸ ವೈಕುಂಠಗಳು ಸಿಕ್ಕವು. ಈ ಲೋಕದ ಸುಖ ಸಿಗಲಿಲ್ಲ.

(೨) ಬಸವಣ್ಣನವರಲ್ಲಿಗೆ ಅರುವತ್ತು ಜನರು ಬದನೇಕಾಯಿಗ ಳನ್ನು ಕಟ್ಟಿಕೊಂಡು ಬಂದರು; ಬಸವಣ್ಣನವರು ಅವುಗಳನ್ನು ನೋಡಿದ ಕೂಡಲೇ ಅವು ಲಿಂಗಗಳಾದವು.

(೩) ಬಸವಣ್ಣನವರ ಅಸ್ಪೃಶ್ಯತಾ ನಿವಾರಣೆಗೂ ಮಹಾತ್ಮಾ ಗಾಂಧಿಯವರ ಅಸ್ಪೃಶ್ಯತಾ ನಿವಾರಣೆಗೂ **«ಭೂಮ್ಯಾಕಾಶದಷ್ಟು»** ಅಂತರವಿದೆ.

(೪) ಲಿಂಗಾಯತರು ಬೇರೆ ಜನರಿಗೆ ಲಿಂಗ ಕಟ್ಟಿ ತಮ್ಮಲ್ಲಿ ತೆಗೆದು ಕೊಳ್ಳುವದು ತಮ್ಮ-ಸ್ವಾರ್ಥದ ಸಲುವಾಗಿಯಲ್ಲದೆ ಆ ಜನರ ಉದ್ಧಾರಕ್ಕಾಗಿ ಅಲ್ಲ.

(೫) ವಿಜ್ಞಾನದ ಸಹಾಯ ತೆಗೆದುಕೊಂಡು ಲಿಂಗಕ್ಕೆ ಬೇರೆ ಅರ್ಥ ಹಚ್ಚಿ ಅದನ್ನು ಉಳಿಸಲಿಕ್ಕೆ ಹೋಗಬಾರದು. ಸ್ವಾತಂತ್ರ್ಯ ಬೇಕಾದರೆ ಲಿಂಗ-ಜನಿವಾರಗಳು ಮಾಯವಾಗಲೇಬೇಕು.

(೬) ಈಗ ಸದ್ಯಕ್ಕೆ ಲಿಂಗ ಜನಿವಾರಗಳನ್ನು ಬಿಡದಿದ್ದರೂ ಇನ್ನು ಇಪ್ಪತ್ತೈದು ವರ್ಷಗಳಲ್ಲಿ ಅವುಗಳನ್ನು ಬಿಡಬೇಕು. ಈಗ ಮನಸ್ಸಿನಲ್ಲಿ ಅವು ಬೇಡ ಎಂಬ ಭಾವನೆ ಬರಬೇಕು.

(೭) ಧೃತರಾಷ್ಟ್ರನು ಕುರುಡ. ಅಂದರೆ ರಾಷ್ಟ್ರವನ್ನು ಕೈಯಲ್ಲಿ ಹಿಡಿದವನು ದರ್ಪದಿಂದ ವರ್ತಿಸಿದರೆ ಕುರುಡರಾಗುವರೆಂದರ್ಥ. ಈ ತಾತ್ವಿಕ ಅರ್ಥವು ತಿಳಿಯದಿದ್ದರೆ ಮಹಾಭಾರತದ ಮಹತ್ವವು ತಿಳಿಯುವದಿಲ್ಲ.

(೮) ಯಜ್ಞವೆಂದರೆ ಸಂಕಲ್ಪ.

(೯) ಭಾವಗರ್ಭಿತವಾದ ಇಂಪಾದ ಸಂಸ್ಕೃತ ಮಂತ್ರಗಳ ಮಹತ್ವವನ್ನು ನಾನು ಬಲ್ಲೆ. ಆದರೆ ಕನ್ನಡದಲ್ಲಿ ಮಂತ್ರ ಅಂದರೆ ಬರುವದಿಲ್ಲವೇ, ಎಂದು ಈಗಿನ ಹುಡುಗರು ಕೇಳಿದರೆ ಏನು ಹೇಳಬೇಕು?

(೧೦) ಚಾತುರ್ವರ್ಣಗಳು ಇರಬೇಕು. ಆದರೆ ಜನ್ಮದಿಂದ ಇರಬಾರದು. ಗುಣ ಕರ್ಮಗಳಿಂದ ನಿರ್ಣಯವಾಗಬೇಕು.

(೧೧) ಗುಣಕರ್ಮ ವಿಶಿಷ್ಟವಾದ ವರ್ಣಗಳ ವ್ಯವಸ್ಥೆಯು ಪ್ರಾಚೀನ ಕಾಲದಲ್ಲಿ ವೇದಗಳಲ್ಲಿ ಇದ್ದದರಿಂದಲೇ ಶ್ರೀ ಕೃಷ್ಣನಿಗೆ ಗೀತೆಯಲ್ಲಿ "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ" ಎಂದು ಹೇಳಲು ಶಕ್ಯವಾಯಿತು.

(೧೨) ಕಾಂಗ್ರೆಸ್ ರಾಜ್ಯ ಬಂದ ಕೂಡಲೇ ಎಲ್ಲೆಲ್ಲಿಯೂ ಖಾದೀ ಟೊಪ್ಪಿಗೆಗಳೇ ಕಾಣಿಸುತ್ತವೆ.

## ಆಕ್ಷೇಪ ನಿರಸನ.

(೧) ಹರಿದಾಸರು ವೈಕುಂಠವನ್ನು ಗಮ್ಯವಾಗಿಟ್ಟುಕೊಂಡಿದ್ದರೂ ಅದು ಇರಬಹುದು. ಆದರೆ ಶಿವಶರಣರು ಮಾತ್ರ ಕೈಲಾಸವನ್ನು ತಮ್ಮ ಗುರಿಯನ್ನಾಗಿ ಇಟ್ಟುಕೊಂಡಿಲ್ಲ. ಈ ಭೂಲೋಕವನ್ನೇ ಅವರು ನಂದನವನವನ್ನಾಗಿ ಮಾಡಲು ಹೆಣಗಿದರೆಂಬುದು ವಚನ ಶಾಸ್ತ್ರದಿಂದ ಸಿದ್ಧವಾಗುತ್ತದೆ. ಕೈಲಾಸವಾಗಲಿ ಅಲ್ಲಿಯ ಶಿವನಾಗಲಿ ಶರಣರ ಧ್ಯೇಯವಸ್ತುವಲ್ಲ.

(೨) ಬದನೇಕಾಯಿ ಲಿಂಗವಾದ ವಿಷಯವು ಪುರಾಣಗಳಲ್ಲಿ ಹೇಳಿದೆಯೇ ವಿನಃ ವಚನಶಾಸ್ತ್ರ-ದಿವ್ಯಾನುಭವದ ವಚನಶಾಸ್ತ್ರದಲ್ಲಿಲ್ಲ. ಎಲ್ಲ ಧರ್ಮಗಳ ಪುರಾಣಗಳಲ್ಲಿಯೂ ಪವಾಡಗಳ ವರ್ಣನೆಯಿದೆ ಎಂಬುದನ್ನು ಲಕ್ಷಿಸತಕ್ಕದ್ದು. ಆದರೂ ಆ ಪವಾಡಗಳಲ್ಲಿರುವ ಗರ್ಭಿತಾರ್ಥಕ್ಕೆ ಮಹತ್ವ ಕೊಡತಕ್ಕದ್ದು.

(೩) ಧೈರ್ಯದಿಂದ, ವೈಯ್ಯಕ್ತಿಕ ಸ್ವಾತಂತ್ರ್ಯದಿಂದ, ಬ್ರಾಹ್ಮಣತ್ವವನ್ನು ಬಿಟ್ಟು ಬಸವಣ್ಣನವರು ಸಮಾನತ್ವವನ್ನು-ಲಿಂಗತತ್ವವನ್ನು-ಅಂಗೀಕರಿಸಿದರು. ಧರ್ಮವು ವೈಯ್ಯಕ್ತಿಕವಾಗಿರುವದರಿಂದ ಆ ಪ್ರಕಾರ ಅವರು ಮಾಡಿದ್ದು ದೋಷವೇನೂ ಅಲ್ಲ. ತಮ್ಮ ಸಮಾನತೆಯ ತತ್ವದ ಪ್ರಕಾರ ಬಸವಣ್ಣನವರು ಅಸ್ಪೃಶ್ಯರ ಉದ್ಧಾರ ಮಾಡಿದರು. ಅದರಿಂದ ಅಸ್ಪೃಶ್ಯರಿಗೆ ಉಚ್ಚ ಸಂಸ್ಕೃತಿಯಲ್ಲಿ ಬರಲು ಶಕ್ಯವಾಗಿ ಸುಸಂಸ್ಕೃತರಾದರು. ಗಾಂಧಿಯವರು ತಮ್ಮ ತತ್ವ (ಹತ್ತು ವ್ರತಗಳ ಸಮರಸ)ದ ಪ್ರಕಾರ ಅಸ್ಪೃಶ್ಯರನ್ನು ಉದ್ಧರಿಸಹತ್ತಿದ್ದಾರೆ. ಎಂದಮೇಲೆ “ಭೂಮ್ಯಾಕಾಶ”ದಷ್ಟು ಅಂತರವಾವುದು? ಮಹಾತ್ಮಾ ಗಾಂಧಿಯವರೂ ಈಗ ಅಸ್ಪೃಶ್ಯರು ಗುಡಿಯಲ್ಲಿ ಪ್ರವೇಶಿಸಿ ಲಿಂಗಪೂಜೆ ಮಾಡಲಿ ಎಂದು ಏಕೆ ಹೇಳುತ್ತಿದ್ದಾರೆ?

(೪) ಜಾತಿಭೇದವಿಲ್ಲದ, ಸದಾಚಾರ ಮತ್ತು ಸದ್ಭಕ್ತಿಗಳುಳ್ಳ ಜನರಿಗೆ ಲಿಂಗ ತತ್ವೋಪದೇಶ ಮಾಡಬೇಕೆಂದೇ ವಚನಗಳಲ್ಲಿ ಹೇಳಿದೆ. ಸಿಕ್ಕ ಸಿಕ್ಕವರಿಗೆ ಅದನ್ನು ಕಟ್ಟಬಾರದು. ತತ್ವಬಿಟ್ಟು ಲಿಂಗ ಕಟ್ಟಿದರೆ ಸ್ವಾರ್ಥಕ್ಕೆ ಅವಕಾಶವಿರುವದು ಸಹಜ. ಒಂದು ವೇಳೆ ಹೀಗೆ ಕಟ್ಟಿ

ದಲ್ಲಿ ಕೆಳಗಿನ ಜನರು ಮೇಲೆ ಬಂದು ಅರ್ಥಾತ್ ಉಚ್ಚ ಸಂಸ್ಕೃತಿಗೆ ಬಂದು ಸಮಾನತೆ ಅವರಿಗೆ ಸಿಕ್ಕಿ ತಮ್ಮ ಉತ್ಕ್ರಾಂತಿಯನ್ನು ಮಾಡಿಕೊಳ್ಳುವ ಸಂಭವವದೆ. ಹೀಗಾದರೆ ಹಾನಿಯೇನು? ಆದರೂ ಲಿಂಗಾಯತರು ರಾಜಕೀಯ ಕಾರಣದಿಂದ ಲಿಂಗ ಕಟ್ಟಬಾರದು. ಎರಡನೆಯವರನ್ನು ಸುಸಂಸ್ಕೃತರನ್ನಾಗಿ ಮಾಡುವ ಉದ್ದೇಶದಿಂದಲೇ ಕಟ್ಟಬೇಕು.

(೫) ಲಿಂಗ ಜನಿವಾರಗಳು ಹೋದಕೂಡಲೇ ಸ್ವಾತಂತ್ರ್ಯ ಸಿಗುವದಿಲ್ಲ. ಲಿಂಗ ಜನಿವಾರಗಳು ಹೋದರೂ ಅವುಗಳಿಗೆ ಆಧಾರವಾದ ಸಮಾನ ಸಂಸ್ಕೃತಿ ಮತ್ತು ಯಜ್ಞ ಸಂಸ್ಕೃತಿಗಳ ತಾಕಲಾಟವು ಹೋಗುವದಿಲ್ಲ. ಆದರೆ ಸಂಸ್ಕೃತಿಯು ನಾಶವಾಗುವ ಸಂಭವವು ಯಾವಾಗಲೂ ಇಲ್ಲ. ಸ್ವಾತಂತ್ರ್ಯಕ್ಕೆ ಅನುಕೂಲವಾದ ಸಂಸ್ಕೃತಿಯು ಯಾವದೆಂಬುದನ್ನು ನಿರ್ಣಯಿಸಿ ಅದನ್ನು ಸ್ವೀಕರಿಸಿ ಉಚ್ಚ ನೀಚ ತಳಹದಿಯ ಮೇಲೆ ನಿಂತ ಸಂಸ್ಕೃತಿಯನ್ನು ಬದಲಾಯಿಸಬೇಕು.

ವಿಜ್ಞಾನವೆಂದರೆ ಸಾಯಿನ್ಸ್. ಲಿಂಗವೆಂದರೆ ಒಂದು ವಿಶಿಷ್ಟ 'ಫಿಲಾಸಫಿ' ತತ್ವಜ್ಞಾನ. ವಿಜ್ಞಾನದ ಸಹಾಯವು ಲಿಂಗತತ್ವಜ್ಞಾನಕ್ಕೆ ಅಂದರೆ ಸಾಯಿನ್ಸದ ಸಹಾಯವು ಫಿಲಾಸಫಿಗೆ, ಸಿಕ್ಕರೆ ಒಳ್ಳೇದಲ್ಲವೇ? ಆದರೆ ಲಿಂಗ ತತ್ವಜ್ಞಾನವು ಉಳಿಯಲೇಬಾರದೆಂದು ಅನ್ನುವದು ಮಾತ್ರ ಪೂರ್ವಗ್ರಹವೇ ಸರಿ.

(೬) ಲಿಂಗ ಜನಿವಾರಗಳು ಸ್ವಾತಂತ್ರ್ಯಕ್ಕೆ ನಿರುಪಯೋಗವೆಂದ ಮೇಲೆ ಈಗಲೇ ಬಿಡಬೇಕೆಂದು ಬಲವಾದ ಚಳವಳಿ ಹೂಡುವದು ಶ್ರೀ. ಜೋಶಿಯವರಿಗೆ ಭೂಷಣವು. ಇಪ್ಪತ್ತೈದು ವರ್ಷಗಳಲ್ಲಿ ಅವುಗಳನ್ನು ಬಿಡಿರೆಂದು ಅವರು ಹೇಳುವದರಿಂದ ಅವರ ಅಭಿಪ್ರಾಯದ ಪ್ರಕಾರ ಸ್ವಾತಂತ್ರ್ಯವು ಇನ್ನೂ ೨೫ ವರ್ಷ ಮುಂದಕ್ಕೆ ನೂಕಲ್ಪಟ್ಟಂತಾಗುವದು.

(೭) ತಾತ್ವಿಕ ಅರ್ಥ ತಿಳಿಯದಿದ್ದರೆ ಮಹಾಭಾರತದ ಮಹತ್ವವು ತಿಳಿಯುವದಿಲ್ಲವೆಂದ ಮೇಲೆ ವಚನಗಳ ತಾತ್ವಿಕ ಅರ್ಥವು ತಿಳಿಯದಿದ್ದರೆ ವಚನಗಳ ಮಹತ್ವವು ತಿಳಿಯುವದಿಲ್ಲವೆಂದು ಜೋಶಿಯವರಿಗೆ ಹೇಳಬಹುದಲ್ಲವೇ?

(೮) ಯಜ್ಞವೆಂದರೆ ಸಂಕಲ್ಪವೆಂದು ಅರ್ಥ ಹೇಳುವದಾದರೆ ಲಿಂಗವೆಂದರೆ ಪರಮಾತ್ಮನೆಂದು ಏಕೆ ಹೇಳಬಾರದು?

(೯) ಕನ್ನಡದಲ್ಲಿ ಮಂತ್ರ ಅನ್ನಲಿಕ್ಕೆ ಬರುತ್ತದೆ ಎಂದೇ ಹೇಳಬೇಕು. ಕನ್ನಡನ್ಮ್ಮನ ಕುವರರಿಗೆ ಸಂಸ್ಕೃತದ ಮೋಹವೇಕೆ? ಅದು ಸತ್ತ ಭಾಷೆಯಲ್ಲವೇ?

(೧೦) ಗುಣಕರ್ಮಗಳಿಂದ ಚಾತುರ್ವರ್ಣಗಳೆಂದರೆ ಅವುಗಳನ್ನು ನಿರ್ಣಯಿಸುವವರಾರು? ಒಂದು ವೇಳೆ ನಿರ್ಣಯಿಸಿದರೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಹಳೇ ರಾಷ್ಟ್ರಘಾತುಕ ಹೆಸರುಗಳೇ ಏಕೆ ಇರಬೇಕು? ಜನಿವಾರ ಹೋದರೂ ಯಜ್ಞಸಂಸ್ಕೃತಿಯು ಸುಧಾರಕ ಸ್ವರೂಪು ಇರಬೇಕೆಂದು ಹೇಳಿದಂತಲ್ಲವೇ ಇದು?

(೧೧) ಗುಣಕರ್ಮ ವಿಶಿಷ್ಟ ವರ್ಣಾಶ್ರಮಗಳನ್ನು ಶ್ರೀಕೃಷ್ಣ ಪರಮಾತ್ಮನು ಸ್ವತಂತ್ರವಾಗಿ ಹೇಳಿರಬಹುದು. ವೇದಗಳನ್ನು ನೋಡಿಯೇ ಹೇಳಿರುವನೆಂದು ಯಾವ ಆಧಾರದಿಂದ ಹೇಳುವಿರಿ? ವಿಚಾರಗಳು ಸ್ವತಂತ್ರವಾಗಿ ವಿಕಾಸವಾಗುವದಿಲ್ಲವೆಂದು ಹೇಳಿದರೆ ಅದು ಸಂಕುಚಿತ ಬುದ್ಧಿಯ ದ್ಯೋತಕವಲ್ಲವೇ? ಪ್ರಸಿದ್ಧ ತತ್ವಜ್ಞಾನಿಗಳಾದ ಪ್ರೊ. ರಾನಡೆಯವರು ತಮ್ಮ "A Constructive Survey of Upanishadic Philosophy" ಎಂಬ ತಮ್ಮ ಗ್ರಂಥದಲ್ಲಿ ವಿಚಾರಗಳು ಸ್ವತಂತ್ರವಾಗಿ ವಿಕಾಸವಾಗುವವೆಂಬುದು ಶಕ್ಯವಿದೆಯೆಂದು ಸಿದ್ಧಮಾಡಿದ್ದಾರೆ. ಅದನ್ನು ಜೋಶಿಯವರು ನಿರೀಕ್ಷಿಸುವದು ಅವರಿಗೆ ಪ್ರಯೋಜನಕಾರಿಯು.

(೧೨) ಕಾಂಗ್ರೆಸ್ ರಾಜ್ಯಗಳು ಬಂದಕೂಡಲೇ ಗಾಂಧೀಟೊಪ್ಪಿಗೆಗಳು ಎಲ್ಲ ಕಡೆಗೆ ಕಂಗೊಳಿಸುವದು ಸ್ವಾಭಾವಿಕ. ಅದು ಮನುಷ್ಯ ಸ್ವಭಾವವಾಗಿದೆ. ಇದರಲ್ಲಿ ತಪ್ಪೇನು?

---

# ನಿಜದೇವ.

—•—:*:—

ಗುಡಿಯೊಳಿಲ್ಲ ದೇವನು
ಪಡಿಯೊಳಿಲ್ಲ ದೇವನು
ಮನದೊಳಡಗಿದಾತನೇ ದೇವನು ॥

ಮನದ ಹೊಲಸನಿಟ್ಟುಕೊಂಡು
ಜರದ ಮಡಿಯನುಟ್ಟುಕೊಂಡು ॥
ನಾಮವನ್ನು ಬಡಿದುಕೊಂಡು ॥
ಎಡೆಯನೊಂದು ಹಿಡಿದುಕೊಂಡು
ಗುಡಿಯ ಸುತ್ತುವರಿದುಕೊಂಡು ॥
ಮೂರ್ತಿ ಇದಿರು ಅಡ್ಡ ಉದ್ದ ಬಿದ್ದುಕೊಂಡು ॥
ಗಲ್ಲಗಲ್ಲ ಬಡಿದುಕೊಂಡಾಕ್ಷಣಕೆ!
ಸಿಗುವನೇ ದೇವರು.!

ನಿಜವ ತಿಳಿದು ನೋಡು ಮನವೆ ॥
ನಿನ್ನೀ ಆತ್ಮನಲಿ ಅಡಗಿರುವ ದೇವರನು ॥
ಎರಡು ಬಗೆಯದಿರೊಂದು ಪಂಕ್ತಿಯಲಿ ಮನವೆ
ನಿಜವ ತಿಳಿಯದೆ ಮಾತಬೇಡಲೆ ಮನವೆ
ನಿಜದೇವನಿರುವನು ನಿನ್ನೀ ಆತ್ಮನಲಿ ।

—ಶಂ. ಮ. ಹೊಂಬಳ, ನರೇಗಲ್ಲ.

———

# ಶಿಕ್ಷಣದಲ್ಲಿ ಸಂಗೀತ.

(ಲೇಖಕಃ—ಶ್ರೀಯುತ ಜಿ. ಎಸ್. ಜ್ಯುಕ್ತಿಮಠ, ಸಂಗೀತ ಶಿಕ್ಷಕ.)



ಜಗತ್ತಿನಲ್ಲಿ ಪ್ರತಿಯೊಂದು ಪ್ರಾಣಿಗೆ ಆನಂದವು ಬೇಕೇಬೇಕು. ಅನೇಕ ಕಷ್ಟಗಳನ್ನು ಜಯಿಸಿ ಅಪರಿಮಿತ ಆನಂದದಲ್ಲಿ ವೈಮರೆತು ದುಃಖದ ಅಂಶವೂ ಕೂಡ ಸುಳಿಯದಿರುವ ಸ್ಥಿತಿಯು ಒದಗಬೇಕಾದರೆ ಗಾಯನವು ಅತ್ಯುತ್ತಮ ಸಾಧನವೆಂದು ಹೇಳಿದರೆ ತಪ್ಪಾಗದು. ಅದಕ್ಕಾಗಿ ಆರ್ಯರು "ಸದ್ಯಃ ಫಲಾನಿ ಗೀತಃ" ಎಂದು ಹೇಳಿದರು. "ಗೀತಂ ವಾದ್ಯಂ ನರ್ತನಂ ಚ ತ್ರಯಂ ಸಂಗೀತ ಮುಚ್ಯತೆ." ಗಾಯನ ವಾದ್ಯ ನೃತ್ಯ ಇವುಗಳ ಕಾರ್ಯಕ್ರಮವು ಪ್ರಾರಂಭವಾದ ಕಾಲಕೆ ಕುತೂಹಲದಿಂದ ಕೇಳಲು ಕುಳಿತಾಗ ಆಗುವ ಆನಂದವನ್ನು ವರ್ಣಿಸಲು ಅಸದಳವೇ ಸರಿ. ಗಾನ ಸುಧೆಯ ಹೊನಲು ಹೊರಸೂಸಿ ಹರಿವ ಆ ಅಮರವಾದ ಅಮೃತವನ್ನು ಪಾನಮಾಡಿ ಅದರಲ್ಲಿ ತಲ್ಲೀನರಾಗಿ ಅದರ ಆನಂದವನ್ನು ವ್ಯಕ್ತಮಾಡಲು ಸಾಧ್ಯವಾಗದೆ ಜನರು ತಾಳಹಾಕುವದನ್ನೂ ತಲೆಯನಲ್ಲಾಡಿಸುವದನ್ನೂ ನಸು ಅರಳಿದ ನೇತ್ರಗಳನ್ನು ಆಗಾಗ್ಗೆ ಹೊರಹೊಮ್ಮುವ ಅವರ ಪ್ರೇಮೋದ್ಗಾರಗಳನ್ನೂ ನೋಡಿದರೆ ಅವರ ಆನಂದವನ್ನು ಅಳತೆ ಮಾಡುವದು ಸಮುದ್ರವನ್ನು ಅಳೆದಂತೆಯೇ ಸರಿ.

ಒಂದು ಆಕಳಿನ ಕರುವು ತನ್ನ ತಾಯಿಯ ಮೊಲೆಯನ್ನು ಧ್ವನಿ ಮಾಡುತ್ತಲೂ ದವಡೆಯ ಎಡಬಲದಲ್ಲಿ ನೊರೆಯನ್ನು ಸೂಸುತ್ತಲೂ ಕುಡಿಯುತ್ತಿರಲು ಆ ಕರುವಿನ ಆನಂದವನ್ನೂ ಒಂದು ಗಿಳಿಯು ಇಂಚರದಿಂದ ಚೀತ್ಕರಿಸುತ್ತ ಪಕ್ಕಗಳನ್ನು ಬಡೆಯುತ್ತ ಪಕ್ವವಾದ ಮಾವಿನ ಹಣ್ಣಿನ ತನಿರಸವನ್ನು ಗಿಡದ ಶಾಖೆಯಲ್ಲಿ ಕುಳಿತು ಪಾನಮಾಡುತ್ತಿರುವಾಗ ಆ ಗಿಳಿಯ ಆನಂದವನ್ನೂ ಹೇಳಲು ಹೇಗೆ ಅಸದಳವೋ, ಹಾಗೆಯೇ ಗಾಯನದ ಆನಂದವನ್ನು ಕೂಡ ವ್ಯಕ್ತಗೊಳಿಸುವದು ಅಸದಳವೇ ಸರಿ.

ಗಾಯನದ ಧ್ವನಿಯು ಕೇಳಿಸಿದ ಕೂಡಲೇ ಎಂಥ ಅಳುವ ಕೂಸುಗಳಾದರೂ ಕೂಡ ಅಳುವದನ್ನು ಬಿಡುವವು. ಅಷ್ಟೇ ಅಲ್ಲ, ಆನಂದಧಿಂದ

ನಲಿದಾಡಲಿಕ್ಕೆ ಹತ್ತುವವು. ಸುಪ್ರಸಿದ್ಧ ಡಾಕ್ಟರರೂ ಕೂಡ ಗಾಯನ ದಿಂದ ಎಷ್ಟೋ ರೋಗಗಳು ಗುಣವಾಗುತ್ತವೆ, ಮಾನಸಿಕ ರೋಗ ವಿದ್ದರಂತೂ ಅವಶ್ಯವಾಗಿ ಗಾಯನ ಸಂಬಂಧವನ್ನು ಬೆಳಿಸಲೇಬೇಕು, ಅದರ ಹೊರ್ತು ಬೇರೆ ಔಷಧವೇ ಇಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ.

ಉತ್ತಮವಾದ ಸಂಗೀತವನ್ನು ಕೇಳಿದಕೂಡಲೇ ಹಾಡಬೇಕೆಂಬ ಸ್ಫೂರ್ತಿಯು ಬಹುತರ ಎಲ್ಲರಿಗೂ ಆಗುವದು ಸಹಜವು. ಜಗತ್ತೇ ನಾದಮಯವಿದೆ. ಸೃಷ್ಟಿಯಲ್ಲಿ ಒಂದು ಪ್ರಕಾರದ ಸಂಗೀತವು ಯಾವಾಗಲೂ ನಡೆದಿರುವದು. ಭ್ರಮರಗಳ ಗುಂಜಾರವವೂ ಕೋಕಿಲೆಗಳ ಮಂಜುಳಗಾನವೂ ಗಿಳಿಗಳ ಇಂಚರವೂ ಮಂದವಾಗಿ ಹರಿಯುವ ಹಳ್ಳಗಳ ಶಾಂತಸಪ್ಪಳವೂ ಗಿಡಗಳ ಎಲೆಗಳಿಂದುಂಟಾಗುವ- ಸುಳ್ ಎಂಬ ಧ್ವನಿಯೂ ಕೇಳುವವರಿಗೆ ಆನಂದವನ್ನುಂಟುಮಾಡದೇ ಇರವು. ಗ್ರಹಗಳು ಆಕಾಶದಲ್ಲಿ ಭ್ರಮಣ ಮಾಡುವಾಗ ಗಾಯನ ಮಾಡುತ್ತವೆಂಬ ತಿಳುವಳಿಕೆಯು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಪ್ರಾಚೀನಕಾಲ ದಿಂದಲೂ ರೂಢವಾಗಿದೆ. ಆದುದರಿಂದಲೇ ಶೆಕ್ಸಪೀಯರ್ ಕವಿಯು-- "ಆಕಾಶದಲ್ಲಿ ಅಸಂಖ್ಯವಾದ ತಾರೆಗಳು ಗಾನಮಾಡುತ್ತ ತಮ್ಮ ಮಾರ್ಗ ವನ್ನು ಕ್ರಮಿಸುತ್ತವೆ. ನಾವು ನಶ್ವರವಾದ ಜಡದೇಹದಲ್ಲಿರುವ ಪರ್ಯಂತರ ಆ ಗಾನಗಳು ನಮ್ಮ ಕಿವಿಗೆ ಬೀಳುವದಿಲ್ಲ." ಎಂದು ಬರೆದಿದ್ದಾನೆ.

"ಸಂಗೀತವನ್ನು ಕೇಳಿ ಯಾರಿಗೆ ಆನಂದವಾಗುವದಿಲ್ಲವೋ ಅವರು ವಿಶ್ವಾಸಘಾತಕರೂ ರಾಜದ್ರೋಹಿಗಳೂ ನೀಚರೂ ಇರುವರೆಂದು" ಇದೇ ಕವಿಯು ಬರೆದಿದ್ದಾನೆ.

ಗಾಯನದಿಂದ ಬ್ರಹ್ಮಾನಂದಕ್ಕಿಂತಲೂ ಹೆಚ್ಚಿನ ಆನಂದವಾಗುತ್ತದೆ. ಇಲ್ಲದಿದ್ದರೆ ನಾರದನಂಥ ವೈರಾಗ್ಯಶಾಲಿಯ ಮನಸ್ಸು ಗಾಯನದಿಂದ ಹೇಗೆ ಆಕರ್ಷಿತವಾಗುತ್ತಿತ್ತು? ಒಮ್ಮೊಮ್ಮೆ ಗಾಯನವನ್ನು ಕೇಳಿ ಅಂತಃಕರಣವು ವಿಹ್ವಲವಾಗುತ್ತದೆ. ರಮ್ಯ ವಸ್ತುಗಳನ್ನು ಮತ್ತು ಮಧುರವಾದ ಹಾಡುಗಳನ್ನು ಕೇಳಿ ದುಃಖಿಯಾದ ಮನುಷ್ಯನು ಸಹ ಉತ್ಸುಕನಾಗುತ್ತಾನೆ. ಪೂರ್ವಜನ್ಮದಲ್ಲಿಯ ಸಖ್ಯವು ತನ್ನಷ್ಟಕ್ಕೆ ತಾನೇ ನೆನಪಾಗುತ್ತದೆ. ಯಾಕಂದರೆ ಅಂಥ ಸಖ್ಯದಿಂದುಂಟಾದ ಭಾವನೆಗಳು ಈ ಜನ್ಮದಲ್ಲಿ ಸಹ ಸ್ಥಿರವಾಗಿರುವವು.

ಸಂಗೀತವು ಶಿಕ್ಷಣದ ಒಂದು ಸಾಧನವಾಗಿದೆ. ಈಶ್ವರಭಜನೆಗೆ ಸಂಗೀತವು ಅವಶ್ಯವು. ಪುರಂದರದಾಸ, ತುಕಾರಾಮ, ಮೊದಲಾದ ಸಾಧುಗಳು ದೇವರ ಮಹಿಮೆಯ ಪದಗಳನ್ನು ರಚಿಸಿ ಹರಿಭಜನೆಯನ್ನು ಮಾಡಿ ವೈಕುಂಠ ಪ್ರಾಪ್ತಿಯನ್ನು ಮಾಡಿಕೊಳ್ಳಲಿಲ್ಲವೇ? ಜಡ ಪದಾರ್ಥಗಳನ್ನು ಆಕರ್ಷಿಸುವ ಶಕ್ತಿಯು ಸಂಗೀತದಲ್ಲಿ ಉಂಟೆಂದು ಅನೇಕ ಕವಿಗಳು ಬರೆದಿದ್ದಾರೆ. ಹಿಂದಿನ ಕಾಲದಲ್ಲಿ ಶ್ರೀಕೃಷ್ಣನ ವೇಣುಗಾಯನದ ಮಂಜುಳ ಧ್ವನಿಯಿಂದ ನದಿಗಳ ವೇಗವು ಕಟ್ಟಾಗಿ ಅವುಗಳ ಗತಿ ಭಗ್ನವಾಗಿ ಪ್ರೇಮದಿಂದ ಕಂಪಿತವಾದ ತರಂಗಗಳು ಹಾರಿ ಬಂದು ಶ್ರೀಕೃಷ್ಣನ ಚರಣ ಧೂಳಿಯನ್ನು ಸೇವಿಸುತ್ತಿದ್ದವು.

ಕವಿಗಳು ಸಂಗೀತಪ್ರಶಂಸೆಯನ್ನು ಮಾಡಿದಂತೆ ಗದ್ಯಗ್ರಂಥಕಾರರೂ ಮಾಡಿದ್ದಾರೆ. ಅವರಲ್ಲಿ ಪ್ಲೇಟೋನು "ಸಂಗೀತದಿಂದ ಕಲ್ಪನಾ ಶಕ್ತಿಯು ಹೆಚ್ಚಾಗಿ ವಿಚಾರದ ಕ್ಷೇತ್ರವು ದೊಡ್ಡದಾಗುವದು. ದುಃಖದಲ್ಲಿದ್ದರೂ ಸುಖವಾಗುವದು. ಎಲ್ಲ ವಸ್ತುಗಳು ಆನಂದಮಯವಾಗಿ ಕಂಡುಬರುವವು. ನ್ಯಾಯದೇವತೆಯ ಮೇಲೆ ಧೃಢವಿಶ್ವಾಸವುಂಟಾಗುವದು. ಪ್ರೇಮದ ಅಭಿವೃದ್ಧಿಯಾಗುವದು ಮತ್ತು ಪ್ರೇಮದಲ್ಲಿ ಆಸಕ್ತಿಯು ಹೆಚ್ಚುವದು" ಎಂದು ಬರೆದಿದ್ದಾನೆ.

ಕಾರ್ಲಾಯಿಲ್‌ನು "ಭಿನ್ನ ಭಿನ್ನ ದೇಶದ ಜನರು ಬೇರೆ ಬೇರೆ ಭಾಷೆಗಳನ್ನಾಡುತ್ತಿದ್ದರೂ ಅವರೆಲ್ಲರೂ ಪರಮೇಶ್ವರನ ಗುಣಾನುವಾದವನ್ನು ಸಂಗೀತದಿಂದ ಜರುಗಿಸಿ ಆತನ ಸ್ವರೂಪದ ಸ್ವಲ್ಪ ಜ್ಞಾನ ಮಾಡಿಕೊಳ್ಳುವರು." ಎಂದು ಬರೆದಿದ್ದಾನೆ.

ಪ್ರಾಚೀನ ಕಾಲದಿಂದ ಶ್ರಮದ ಕೆಲಸಗಳನ್ನು ಮಾಡುವಾಗ ಪದಗಳನ್ನು ಹಾಡುವ ಪರಿಪಾಠವು ರೂಢಿಯಲ್ಲಿದೆ. ಹೆಂಗಸರು ಬೀಸುವಾಗ, ಕುರುಬರು ಕುರಿಗಳನ್ನು ಕಾಯುವಾಗ, ಮೀನುಗಾರನು ಮೀನುಗಳನ್ನು ಹಿಡಿದುಕೊಂಡು ಬರುವಾಗ, ಒಕ್ಕಲಿಗನು ನೇಗಿಲಹೊಡೆಯುವಾಗ, ಹೊಲಕ್ಕೆ ಗೊಬ್ಬರ ಹಾಕುವಾಗ, ಕಣದಲ್ಲಿ ಹಂತಿಯನ್ನು ಹೊಡೆಯುವಾಗ, ರಾಶಿಯನ್ನು ಮನೆಗೆ ತರುವಾಗ, ಗಿರಣಿಯ ನೌಕರರು ಗಿರಣಿಯಲ್ಲಿ ಕೆಲಸ ಮಾಡುವಾಗ ಮತ್ತು ಅರಳೆಯನ್ನು ಜಾಡಿಸುವಾಗ, ಪುಠಾಣಿ ಭಟ್ಟಿಯಲ್ಲಿ ನೌಕರರು ಕೆಲಸ ಮಾಡುವಾಗ, ಅಲ್ಲದೆ ಗಾಂಧೀಜಿಯವರು ಕೂಡ ನೂಲುತ್ತ ಆ ರಾಟಿಯ ನಾದದೊ

ಡನೆ ಭಜನೆ ಮಾಡುವಾಗ, ಅಂದರೆ ಎಂಥ ಕಷ್ಟಕರವಾದ ಕೆಲಸ ಮಾಡಿದರೂ ಗಾಯನದ ಆನಂದದಲ್ಲಿಯೇ ತಲ್ಲೀನರಾಗಿ ಕೆಲಸ ಮಾಡುತ್ತಾರೆ. ಇದರಿಂದ ಹೊಸ ಹುರುಪು ಉಂಟಾಗುತ್ತದೆ. ಆದರಿಂದ ಶ್ರಮವು ಪರಿಹಾರವಾಗುತ್ತದೆ. ಸಂತೋಷ ಸಮುದ್ರದಲ್ಲಿ ಮುಳುಗಿಸುವಲ್ಲಿ ಗಾಯನವೊಂದನ್ನು ಬಿಟ್ಟಮೇಲೆ ಈ ಲೋಕದಲ್ಲಿ ಯಾವದೂ ಇಲ್ಲನೆಂದು ವ್ಯಕ್ತವಾಗುತ್ತಿದೆ. ಕಲಾಕುಮಾರರು ಬರೆದ ಕವನವು ಹೀಗೆ ಇದೆ—

"ಬರಲಿ ಸಹಿಸುವೆ ನಾಕನರಕವು ।
ಗಾನ ಬಳಿಯೊಳು ನೀನಿರೆ ।
ನೀನು ಪ್ರೇಮದ ಮೂಲ ವಿಶ್ವದ ॥
ಶೀಲ ಸುಮಧುರ ಗಾನವೇ ।
ಏರಿಳಿಸುವೆ ವಿಶ್ವಹೃದಯವ ।
ಮಾಯೆಯೆನಿಸಿಹ ಗಾನವೇ ॥೧॥

ಇದರ ಯೋಗ್ಯತೆಯನ್ನು ಬೇರೆ ಹೇಳಲು ಕಾರಣವಿಲ್ಲ. ಅಂತೆಯೇ ಮುಂಬಯಿ ವಿಶ್ವವಿದ್ಯಾಲಯವೊಂದನ್ನು ಬಿಟ್ಟು ಉಳಿದೆಲ್ಲ ವಿಶ್ವವಿದ್ಯಾಲಯಗಳು ಈ ವಿದ್ಯೆಯ ಕಡೆಗೆ ಲಕ್ಷಗೊಟ್ಟು ಇದನ್ನು ಪಠ್ಯಕ್ರಮದಲ್ಲಿ ಒಂದು ವಿಷಯವನ್ನಾಗಿ ಏರ್ಪಡಿಸಿರುತ್ತವೆ. ಅನೇಕ ಕಾರಣಗಳಿಂದ ಆಲಸ್ಯವನ್ನು ಹೊಂದಿದ ಹುಡುಗರಿಗೆ ಹುರುಪನ್ನೂ ಓದಿ ಬೇಸರಪಟ್ಟ ವಿದ್ಯಾರ್ಥಿಗಳ ಮೆದುಳನ್ನು ಶಾಂತಗೊಳಿಸಿ ಆನಂದವನ್ನೂ ಉಂಟುಮಾಡಿ ಮತ್ತೆ ಓದಲು ನವಚೇತನವನ್ನು ಕೊಡುತ್ತಿದೆ. ಪಠ್ಯಪುಸ್ತಕಗಳಲ್ಲಿಯ ಕವನಗಳನ್ನು ರಾಗಸಮೇತವಾಗಿ ಅಂದರೆಕೇಳುವವರಿಗೆ ಇಂಪಾಗಿ ಆ ಕವನದಲ್ಲಿ ಅವರಿಗೂ ಆಸಕ್ತಿಯುಂಟಾಗುತ್ತದೆ. ಇಷ್ಟೇಅಲ್ಲ, ಹುಡುಗರಿಗೆ ಆ ಕವನವು ಬೇಗ ಪಾಠವಾಗುತ್ತದೆ. ಮತ್ತು ಶಾರೀರಿಕ ಶಿಕ್ಷಣದಲ್ಲಿಯೂ ಗಾಯನವು ಅವಶ್ಯ ಬೇಕಾಗುವದು. ಶಾಲೆಗಳಲ್ಲಿ ಸಭೆಯನೇರ್ಪಡಿಸಿದರೆ, ಮನೋರಂಜನ ಕಾರ್ಯಕ್ರಮಗಳನ್ನು ಕೈಕೊಂಡರೆ, ಗಾಯನವು ಬೇಕೇಬೇಕು. ಹೀಗೆ ಗಾಯನವು ಶಿಕ್ಷಣದಲ್ಲಿ ಅವಶ್ಯವಾಗಿದೆ. ನಾವು ಕೆಳಗಿನ ತರಗತಿಯನ್ನು ತೆಗೆದುಕೊಳ್ಳೋಣ, ಅಂದರೆ ಬಿನ್ನಿಎತ್ತೆಯನ್ನು. ಆಗ ಹುಡುಗರಲ್ಲಿ ಹೆಚ್ಚು ತಿಳುವಳಿಕೆಯಿಲ್ಲದ ಮೂಲಕ ಅಭ್ಯಾಸದ ಕಡೆಗೆ ಲಕ್ಷವೇ ಇರುವದಿಲ್ಲ. ಅಂದಮೇಲೆ ಆ ಹುಡುಗರ ಲಕ್ಷವನ್ನೆಳೆಯಬೇಕಾದರೆ ಮೊದಲು ಆ ಹುಡುಗರಿಗೆ ಕಲಿಸಬೇಕೆನ್ನುವ

ಗುರುಗಳು ಸರಾಗವಾದ ಸರಳವಾದ ಧಾಟಿಯಲ್ಲಿ ಕಿವಿಗೆ ಇಂಪಾಗು ವಂತೆ ಕೆಲವು ಕವನಗಳನ್ನು ಆ ಹುಡುಗರೆದುರಿಗೆ ಅನ್ನಬೇಕು. ಆಗ ಆ ಹುಡುಗರ ಮನಸ್ಸು ಆ ಕವನದಲ್ಲಿ ಆಸಕ್ತಿಯನ್ನು ಹೊಂದಿ ಹುಡು ಗರೂ ಕೂಡ ಅನ್ನಲು ಪ್ರಾರಂಭ ಮಾಡುವವು. ಆದ್ದರಿಂದ ನಾನಾ ವಿಷಯ ಗಳಲ್ಲಿರುವ ಕವನಗಳನ್ನು ಆ ಹುಡುಗರಿಗೆ ಅನ್ನಲಿಕ್ಕೆ ಕಲಿಸಬೇಕು. ಅಂದರೆ ಆ ಕವನಗಳು ಬೇಗ ಪಾಠವಾಗುವವು. ಆಮೇಲೆ ಆಯಾಯ ವಿಷಯಗಳ ಮೇಲೆ ಕಲಿಸಲು ಅನುಕೂಲವಾಗುವದು. ಒಟ್ಟಿಗೆ ಸರಾ ಗವಾಗಿ ಸರಳ ಧಾಟಿಗಳಲ್ಲಿ ಭಾವಪೂರಿತವಾಗುವ ಹಾಗೆ ಅನ್ನುವ ಶಿಕ್ಷಕ ರಿಂದಲೇ ಈಗಿನ ಶಿಕ್ಷಣವು ಯಶಸ್ವಿಯಾಗುವದು. ಸಂಗೀತದ ಲವ ಲವಿಕೆಯಿದ್ದ ಹುಡುಗರೇ ಬಹುತರವಾಗಿ ವಕ್ತೃತ್ವಶಾಲಿಗಳಾಗುತ್ತಾರೆ ಮತ್ತು ಪ್ರತಿಯೊಂದು ವಿಷಯದಲ್ಲಿ ಉತ್ಸುಕರಾಗುತ್ತಾರೆ. ಎಂಥ ಮಂದ ಹುಡುಗರಿದ್ದರೂ ಅವರನ್ನು ಸಂಗೀತ ಶ್ರವಣದಿಂದ ಹುರುಪುಹು ಮ್ಮಸಗಳಿಂದ ಕೂಡಿದವರನ್ನಾಗಿ ಮತ್ತು ಬುದ್ಧಿ ಚಾತುರ್ಯವುಳ್ಳವರನ್ನಾಗಿ ಮಾಡಬಹುದು.

---

## ಮೈಸೂರು ಸಂಸ್ಥಾನದ ದಿವಾನರವರಾದ ದಿವಾನ್‌ಬಹದ್ದೂರ್
## ಸರ್ ಏ. ರಾಮಸ್ವಾಮಿ ಮೊದಲಿಯಾರ್
### ಬಿ. ಎ., ಬಿ. ಎಲ್., ಕೆ. ಸಿ. ಎಸ್. ಐ., ಡಿ. ಸಿ. ಎಲ್.
## ಇವರಿಗೆ ಕೊಟ್ಟ ಬಿನ್ನವತ್ತಳೆ.

[ತಾ॥ ೨೯ನೇ ಅಕ್ಟೋಬರ ೧೯೪೭ ನೇ ದಿವಸ] ಮೈಸೂರು ಸಂಸ್ಥಾನ ದಲ್ಲಿಯ ವೀರಶೈವ ಸಮಾಜದವರು, ಬಸಪ್ಪ ಇಂಟರ ಮೀಡಿಏಟ್ ಕಾಲೇಜ ಬೆಂಗಳೂರು ಇಲ್ಲಿ ಈಗ ಆ ಸಂಸ್ಥಾನದ ಮುಖ್ಯ ಸಚಿವರಾದ ದಿ॥ ಬ॥ ಸರ್. ಏ. ರಾಮಸ್ವಾಮಿ ಮುದಲಿಯಾರ್ ಇವರಿಗೆ ಒಂದು ಬಿನ್ನ ವತ್ತಳೆಯನ್ನು ಸಮರ್ಪಿಸಿದರು. ಇದರಲ್ಲಿ ಸಚಿವರ ಕಾರ್ಯಕ್ಷಮತೆಯಲ್ಲದೆ ವೀರಶೈವ ಧರ್ಮದ ಪೂರ್ವೇತಿಹಾಸ,, ಅದರ ವಾಙ್ಮಯ, ಅದರ ರಾಜಕೀಯ ಮಹತ್ವ, ಮತ್ತು ಈಗ ಅದು ಕೈಕೊಂಡಿರುವ ಅನೇಕ ಸಮಾಜ ಸಂಸ್ಕರಣ ಪ್ರಯತ್ನಗಳು ಇವುಗಳ ವಿವರಣೆಗಳು ಇರುವ ವಲ್ಲದೆ ಈಗ ನಡೆದಿರುವ ರಾಜಕೀಯ ಬದಲಾವಣೆಗಳ ವಿಷಯ.ವಾ

ಗಿಯೂ ಅದರಲ್ಲಿ ಕೆಲವು ಮಹತ್ವದ ಅಭಿಪ್ರಾಯಗಳು ವ್ಯಕ್ತವಾಗಿರುತ್ತವೆ. ಸಂಸ್ಕೃತಿಯ ರಕ್ಷಣೆ, ಸಾಮಾಜಿಕ ಸುಧಾರಣೆಯ ಪ್ರಯತ್ನಗಳು ಮತ್ತು ರಾಜಕೀಯ ಅನುಕೂಲತೆಗಳು, ಇವೆಲ್ಲವುಗಳ ಮೇಲೆ ನಾಡಿನ ಏಳ್ಗೆಯು ಅವಲಂಬಿಸಿರುತ್ತದೆಂಬುದು ನಿರ್ವಿವಾದವು. ಇವೆಲ್ಲವು ಪರಸ್ಪರಾವಲಂಬಿಗಳಾಗಿವೆ. ಈ ಸಂಗತಿಯನ್ನು ಮೈಸೂರು ವೀರಶೈವ ಸಮಾಜದವರು ಲಕ್ಷಿಸಿ ತಮ್ಮ ಬಿನ್ನವತ್ತಳೆಯಲ್ಲಿ ಆವಶ್ಯಕ ಸಂಗತಿಗಳನ್ನು ನಿರೂಪಿಸಿರುತ್ತಾರೆ. ದಿವಾನರವರಾದರೂ ಬಿನ್ನವತ್ತಳಿಕೆಯಲ್ಲಿ ನಿರೂಪಿಸಿದ ತತ್ವಗಳನ್ನು ಸಮರ್ಥಿಸಿ ತಮ್ಮ ಸದಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಹೀಗೆ ಮುಖ್ಯಾಧಿಕಾರಿಗಳೂ ಬಹುಜನ ಸಮಾಜದ ಪ್ರಮುಖರೂ ಪರಸ್ಪರ ಸಹಾಯ ಸಹಾನುಭೂತಿಯುಳ್ಳವರಾಗಿ ವರ್ತಿಸಿದಲ್ಲಿ ನಾಡಿನ ಅಭಿವೃದ್ಧಿಯು ತೀವ್ರವಾಗಿ ಆಗುವದರಲ್ಲಿ ಏನೂ ಸಂದೇಹವಿರಲಾರದು. — ಸಂಪಾದಕ.]

ವೀರಶೈವ ಸಮಾಜದವರ ಪರವಾಗಿ ನಾವು ತಮ್ಮನ್ನು ಮೈಸೂರು ಸಂಸ್ಥಾನಕ್ಕೆ ಹೃತ್ಪೂರ್ವಕವಾಗಿ ಸ್ವಾಗತಿಸ ಬಯಸುತ್ತೇವೆ. ಮೈಸೂರು ದೇಶದ ಜನರಲ್ಲಿ ತಮಗಿರುವ ವಿಶೇಷವಾದ ಆಸಕ್ತಿ, ಇಂಡಿಯಾ, ಯೂರೋಪ್ ಮತ್ತು ಅಮೇರಿಕಾ ಖಂಡಗಳ ರೀತಿನೀತಿಗಳಲ್ಲಿ ತಮಗಿರುವ ವಿಶೇಷ ಜ್ಞಾನ, ನ್ಯಾಯವಿಧಾಯಕ ಸಭೆಗಳು, ವೈಸರಾಯರ ಮಂತ್ರಿಮಂಡಲ ಮತ್ತು ಅಂತರರಾಷ್ಟ್ರೀಯ ಸಮ್ಮೇಳನಗಳು ಇವುಗಳಲ್ಲಿ ತಮಗಿರುವ ಅಮೋಘವಾದ ಅನುಭವ, ಸಂಯುಕ್ತ ರಾಷ್ಟ್ರಗಳ ಸಾಮಾಜಿಕ ಮತ್ತು ಆರ್ಥಿಕ ಸಭೆಯ ಅಧ್ಯಕ್ಷತೆಯ ವಿಶಿಷ್ಟವಾದ ಮಹಾಗೌರವವನ್ನು ಭಾರತೀಯರಿಗೆ ಮೊಟ್ಟಮೊದಲಾಗಿ ಸಂಯುಕ್ತ ರಾಷ್ಟ್ರಮಂಡಲಿಯವರು ನೀಡುವಂತೆ ಮಾಡಿ, ಆ ಮನ್ನಣೆಯನ್ನು ಪ್ರಥಮತಃ ತಮಗೆ ಗಳಿಸಿದ ತಮ್ಮ ಅಸಾಧಾರಣವಾದ ವಾಗ್ಧೋರಣೆ ಮತ್ತು ವಿಮರ್ಶಾವಿಚಕ್ಷಣೆ; ಹಿಂದೆಂದೂ ಯಾವ ದಿವಾನರೂ ಯಾವುದೊಂದು ದೇಶೀಯ ಸಂಸ್ಥಾನಕ್ಕೂ ಪ್ರಾಯಶಃ ತಾರದಿರಬಹುದಾದ ತಮ್ಮ ಅಂತರರಾಷ್ಟ್ರೀಯವಾದ ಉಜ್ವಲ ಕೀರ್ತಿ, ಇವೆಲ್ಲಕ್ಕಿಂತಲೂ ಮೇಲಾಗಿ ಮೈಸೂರು ದೇಶದ ಪ್ರಭುಗಳಲ್ಲಿ ತಮಗಿರುವ ವಿಶೇಷವಾದ ಭಕ್ತಿಗೌರವಗಳು-ಇವುಗಳೆಲ್ಲವೂ ಸಹ ಅತ್ಯುನ್ನತವಾದ ಮೈಸೂರು ದಿವಾನ್‌ಪದವಿಗೆ ಈಗಿನ ಪರಿಸ್ಥಿತಿಯಲ್ಲಿ ತಮ್ಮನ್ನು ಸರ್ವವಿಧದಲ್ಲಿಯೂ ಅರ್ಹರ

ನ್ನಾಗಿ ಮಾಡಿರುವ ತಮ್ಮ ಅದ್ವಿತೀಯ ಪ್ರತಿಭೆಯಲ್ಲಿ ಕಂಡುಬರುವ ಕೆಲವು ಅಂಶಗಳಾಗಿವೆ. ಸ್ವಾಮಿ, ತಮ್ಮನ್ನು ಸಂಸ್ಥಾನದ ಪ್ರಧಾನ ಮಂತ್ರಿಗಳನ್ನಾಗಿ ಆರಿಸಿಕೊಂಡುದಕ್ಕಾಗಿ ಆಳುವ ಮಹಾಸ್ವಾಮಿಯವರಿಗೂ ಮತ್ತು ಈ ವಿಷಯದಲ್ಲಿ ಮಹಾಸ್ವಾಮಿಯವರಿಗೆ ಸಲಹೆಕೊಟ್ಟ ಮಹಾಶಯರಿಗೂ ನಾವು ತುಂಬಾ ಕೃತಜ್ಞರಾಗಿದ್ದೇವೆ. ಮೊನ್ನೆತಾನೆ ನಡೆದ ಪ್ರಜಾಪ್ರತಿನಿಧಿ ಸಭೆಯ ಅಧಿವೇಶನದ ವಾತಾವರಣದಲ್ಲಿ ತಮ್ಮ ಪ್ರತಿಭೆಯಿಂದುಂಟಾದ ಸ್ಪಷ್ಟ ಬದಲಾವಣೆಯನ್ನು ಪ್ರತಿಯೊಬ್ಬರೂ ನೋಡಿದ್ದಾರೆ. ಶಾಸನ ಸಭೆಗಳಲ್ಲಿ ಅನುಸರಿಸಬೇಕಾದ ಕ್ರಮಬದ್ಧವಾದ ರೀತಿನೀತಿಗಳ ವಿಷಯದಲ್ಲಿ ತಮಗಿರುವ ವಿಶೇಷ ಪರಿಜ್ಞಾನವನ್ನೂ ತಮ್ಮ ಮುಂದೆ ಇಡಲ್ಪಟ್ಟ ಕಠಿಣ ಸಮಸ್ಯೆಗಳನ್ನು ಪರಿಹಾರಮಾಡುವುದರಲಿ ತಮಗಿರುವ ವಿಶೇಷ ದಕ್ಷತೆ ವಿಚಕ್ಷಣೆಗಳನ್ನೂ ಆ ಅಧಿವೇಶನವು ನಿರ್ವಿವಾದವಾಗಿ ಪ್ರಕಾಶಪಡಿಸಿದೆ. ಅಧಿಕಾರಸೂತ್ರವನ್ನು ತಾವು ವಹಿಸಿಕೊಂಡ ತರುಣದಲ್ಲೇ ಅಂದರೆ ಇದೇ ವರ್ಷದ ಆಗಸ್ಟ್ ಮಾಹೆ ಹದಿನೇಳನೆಯ ತಾರೀಖಿನಲ್ಲಿ ತಾವು ಮಾಡಿದ ಸಾರ್ವಜನಿಕ ಭಾಷಣದಲ್ಲಿ ಅಪ್ಪಣೆಕೊಡಿಸಿದ ಈ ಕೆಳಗಿನ ವಾಕ್ಯಗಳು ಗಮನಾರ್ಹವಾಗಿವೆ.

"ಸಾರ್ವಜನಿಕ ವಿಷಯವಾಗಿ ನನ್ನನ್ನು ನೋಡಲಪೇಕ್ಷಿಸುವ ಯಾರೊಬ್ಬರೇ ಆಗಲಿ, ಬಡವರು ಬಲ್ಲಿದರೆಂಬ ಭೇದವಿಲ್ಲದೆ, ಹಗಲು ವೇಳೆಯ ಯಾವುದೊಂದು ಉಚಿತಕಾಲದಲ್ಲಾಗಲೀ ನನ್ನನ್ನು ನೋಡಬಹುದು; ಯಾವುದಾದರೂ ವಿಶೇಷ ಮತ್ತು ಜರೂರಾದ ಸಂದರ್ಭವಿದ್ದ ಪಕ್ಷದಲ್ಲಿ ರಾತ್ರಿಯ ಆವೇಳೆಯಲ್ಲೂ ನನ್ನನ್ನು ನೋಡಬಹುದು."

ಇದು ಸಾಧಾರಣವಾಗಿ ಅಧಿಕಾರಿ ವರ್ಗದವರು ಅನುಸರಿಸುವ ಪದ್ಧತಿಗಳಿಂದ ಭಿನ್ನವಾಗಿದ್ದು, ಆನಂದದಾಯಕವಾಗಿದೆ. ಈ ತಮ್ಮ ಭರವಸೆಯು ಪ್ರಜೆಗಳಿಗೆ ಅಪಾರವಾದ ಸಂತೋಷವನ್ನುಂಟುಮಾಡಿದೆ. ಇದರಿಂದ ತಮ್ಮಲ್ಲಿರುವ ಪ್ರಜಾಸೇವಾಗುಣದ ಔನ್ನತ್ಯವೂ ಮತ್ತು ತಾವು ಅಧಿಕಾರ ಪದವಿಗಳಿಗೆ ಮಾರುಹೋಗಿಲ್ಲವೆಂಬಂಶವೂ ವ್ಯಕ್ತಪಡುವುವಲ್ಲದೆ, ನಿಮ್ಮಲ್ಲಿ ಸ್ವಭಾವಸಿದ್ಧವಾಗಿರುವ ಪ್ರಜಾನುರಾಗ ಮನೋಭಾವವು ಪ್ರಕಾಶಿತವಾಗಿದೆ.

ಈ ಮಾನಪತ್ರವನ್ನು ಸಮರ್ಪಿಸುವ ಸುಯೋಗವನ್ನು ಪಡೆದಿರುವ ವೀರಶೈವ ಸಮಾಜದ ವಿಷಯದಲ್ಲಿ ಕೆಲವು ಅಂಶಗಳನ್ನು ತಮ್ಮ

ಅವಗಾಹನೆಗೆ ತರಲು ಅಪ್ಪಣೆ ಬೇಡುತ್ತೇವೆ. ನಮ್ಮ ಮತವು ವೇದಗಳಷ್ಟೇ ಪುರಾತನವಾದುದು. "ಉತ್ತರ ಮೀಮಾಂಸ" ಎಂದು ಪ್ರಸಿದ್ಧವಾಗಿರುವ ವೇದದ ಜ್ಞಾನಕಾಂಡವೇ ಇದರ ಮೂಲವಾಗಿದೆ. ಜೈನಮತವು ಬೌದ್ಧಮತಕ್ಕಿಂತಲೂ ಪ್ರಾಚೀನವಾದಾಗ್ಯೂ, ವೀರಶೈವ ಮತವು ಜೈನಮತವು ಪ್ರಾಮುಖ್ಯತೆಗೆ ಬರುವುದಕ್ಕಿಂತ ಬಹಳ ಹಿಂದೆಯೇ ನೆಲೆಸಿತ್ತು. ವಿಶೇಷ ಕ್ರೌರ್ಯದಿಂದಲೂ ಮತ್ತು ಅಸಹ್ಯತೆಯಿಂದಲೂ ಕೂಡಿದ ಪಶುವಧೆಗಳನ್ನೊಳಗೊಂಡ ವೈದಿಕ ಯಜ್ಞಗಳ ಪ್ರಭಾವಶಕ್ತಿಯು ಕುಗ್ಗುತ್ತಾ ಬಂದಾಗ, ಸ್ವತಂತ್ರ ವಿಚಾರಜ್ಞರಾದ ಅನೇಕ ಮಂದಿ ಜ್ಞಾನಿಗಳು ಜನ್ಮವೆತ್ತಿ, ಹೊಸ ಮತಗಳನ್ನೂ ವೇದಾಂತ ತತ್ವಗಳನ್ನೂ ಉಪದೇಶಿಸಲು ಉಪಕ್ರಮಿಸಿದರು. ಮಾನವನ ಜೀವನದಲ್ಲಿ ಭಾವನೆಗಳೇ ಅಂದರೆ— ಮತೀಯ ನಂಬಿಕೆಗಳು, ರಾಜಕೀಯ ನಿಯಮಗಳು, ತಾತ್ವಿಕ ಶ್ರದ್ಧೆಗಳು ಮತ್ತು ವಿಜ್ಞಾನ ತತ್ವಗಳೇ, ಪರಿಣಾಮಕಾರಿಗಳಾದ ಚೈತನ್ಯಗಳಾಗಿವೆಯೆಂದು, ಅಧುನಿಕ ಶಾಸ್ತ್ರೀಯ ಚರಿತ್ರಕಾರರು ಒಪ್ಪಿದ್ದಾರೆ. ವೀರಶೈವ ಮತಸ್ಥಾಪಕರು ಅಹಿಂಸಾ ಧರ್ಮದ ಪವಿತ್ರತೆಯನ್ನು ಉದ್ಘೋಷಿಸಿ, ಪ್ರಾಣಿವಧೆಯನ್ನು ಖಂಡಿಸಿದರು- ಅದಕ್ಕೆ ಬದಲಾಗಿ ಉಪನಿಷತ್ತುಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವ ಅಂತರ್ಯಯಜ್ಞ ಅಥವಾ ಲಿಂಗಪೂಜೆಯೇ ಆಧಾರವಾಗುಳ್ಳ ಧ್ಯಾನವನ್ನು ಅವರು ಜೀವನದ ಗುರಿಯನ್ನಾಗಿ ವಿಧಿಸಿದರು. ಉಪನಿಷತ್ತುಗಳಲ್ಲಿ—ಅದರಲ್ಲಿಯೂ ಮುಖ್ಯವಾಗಿ ಶ್ವೇತಾಶ್ವತರ ಉಪನಿಷತ್ತಿನಲ್ಲಿ—ವಿವರಿಸಲ್ಪಟ್ಟಿರುವ ವಿಶೇಷ ಶಕ್ತಿಯನ್ನುಳ್ಳ ಪರಮಾತ್ಮತತ್ವವನ್ನು ಅನುಸರಿಸಿ ದೇವದೇವತೆಗಳಲ್ಲಿ ಶಿವನೇ ಮಹೋನ್ನತನೆಂದು ವೀರಶೈವ ಮತಾಚಾರ್ಯರು ಪ್ರಚಾರಮಾಡಿದರು. ಅಷ್ಟೇ ಅಲ್ಲದೆ ಅವರು ವೇದಾಂತ ತತ್ವವು ಜಾತಿ ಕೋಮುಗಳ ಭೇದಭಾವವಿಲ್ಲದೆ ಇಡೀ ಮಾನವ ಜಾತಿಗೆ ಕೊಡಲ್ಪಟ್ಟಿರುವ ದೈವಿಕ ವರವೆಂದು ಸಾರಿದರು. ಉಪನಿಷತ್ತುಗಳು ಮಾನವನ ಹಕ್ಕುಬಾಧ್ಯತೆಗಳ ಪವಿತ್ರವಾದ ಶಾಸನಗಳೆಂದು ಘೋಷಿಸಿ ಅವರು ವೀರಶೈವಮತಕ್ಕೆ ಹಿಂದುಗಳ ಪೈಕಿ, ಅತ್ಯಂತ ಮೇಲುಪಂಗಡದಿಂದ ಅತ್ಯಂತ ಕೀಳು ಪಂಗಡದವರೆವಿಗೂ ಇರುವ ಎಲ್ಲಾ ಕೋಮಿನವರನ್ನೂ ಸೇರಿಸಿಕೊಂಡು ತಾವು ಪ್ರತಿಪಾದಿಸಿದ ಈ ಘನ ತತ್ವವನ್ನು ಅನುಷ್ಠಾನಕ್ಕೆ ತಂದರು. ನಮ್ಮ ಆಚಾರ್ಯರು ಬ್ರಹ್ಮಸೂತ್ರಗಳಿಗೆ ವಿಶೇಷ ಪಾಂಡಿತ್ಯ

ದಿಂದ ಕೂಡಿದ ಭಾಷ್ಯಗಳನ್ನು ಬರೆದಿದ್ದಾರೆ. ನಮ್ಮ ತತ್ವಜ್ಞಾನವೂ ಮತ್ತು ಅದರಿಂದುಂಟಾಗುವ ಆತ್ಮವಿಕಾಸತೆಯೂ ಬ್ರಾಹ್ಮಣ ಮತ್ತು ಜೈನ ಪಂಗಡಗಳ ಅತ್ಯಂತ ಪ್ರಸಿದ್ಧರಾದ ಹಲವು ವಿದ್ವಾಂಸರನ್ನೂ ಕವಿವರ್ಯರನ್ನೂ ಆಕರ್ಷಿಸಿ ಅವರು ವೀರಶೈವ ಮತವನ್ನು ಅವಲಂಬಿಸುವಂತೆ ಮಾಡಿವೆ. ಈಗಲೂ ಸಹ ಆಂಧ್ರದೇಶದಲ್ಲಿ ವೀರಶೈವ ಮತವನ್ನವಲಂಬಿಸಿರುವ ಸಾವಿರಾರು ಸಾಂಪ್ರದಾಯಿಕ ಬ್ರಾಹ್ಮಣ ಕುಟುಂಬಗಳಿರುತ್ತವೆ.

ವೀರಶೈವರು ನಮ್ಮ ದೇಶದ ಭಾಷಾಭಿವೃದ್ಧಿಗೂ ವಿಶೇಷವಾಗಿ ಶ್ರಮಿಸಿದ್ದಾರೆ. ಸಂಸ್ಕೃತ, ಕನ್ನಡ, ತಮಿಳು ಮತ್ತು ತೆಲುಗು ಭಾಷೆಗಳಲ್ಲಿ ಅವರು ರಚಿಸಿರುವ ಅಮೂಲ್ಯವಾದ ವಿವಿಧ ಗ್ರಂಥಗಳಿಂದಲೂ ಸಹ ಅವರು ಹಿಂದೂಗಳಲ್ಲಿ ವಿಶೇಷ ಪ್ರತಿಭಾಶಾಲಿಗಳಾದ ಒಂದು ಪಂಗಡದವರೆಂದು ಪ್ರಖ್ಯಾತಿ ಗಳಿಸಿದ್ದಾರೆ. ನಮ್ಮ ಆಚಾರ್ಯರ ಪೈಕಿ ಕೆಲವರು ಕ್ರಿ. ಪೂ. ೨ನೆಯ ಶತಮಾನದಲ್ಲಿದ್ದರೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಮಹಾಭಾರತದಲ್ಲಿ ವೀರಶೈವರ ಪ್ರಸ್ತಾಪವಿದೆ. ಪ್ರಸಿದ್ಧರಾದ ಕೆಲವು ಸ್ಮೃತಿಕಾರರು ವೀರಶೈವಮತದ ತತ್ವಗಳನ್ನು ಪ್ರಸ್ತಾಪಿಸಿ ವಿಮರ್ಶಿಸಿದ್ದಾರೆ. ದಕ್ಷಿಣ ಹಿಂದೂಸ್ಥಾನದ ಶಾಸನಗಳಿಂದ, ಕ್ರಿ. ಶ. ೬ನೆಯ ಶತಮಾನದಲ್ಲಿದ್ದ ಸುಪ್ರಸಿದ್ಧ ಪಲ್ಲವರಾಜರಾದ "ಅತ್ಯಂತ ಕಾಮ", "ರಾಜಸಿಂಹ" ಮತ್ತು "ಗುಣಭರ"ರು ವೀರಶೈವರಾಗಿದ್ದರೆಂದು ನಿರ್ವಿವಾದವಾಗಿ ಗೊತ್ತಾಗಿದೆ. ಸಾಹಿತ್ಯ ಗ್ರಂಥಗಳಿಂದಲೂ, ಶಾಸನಗಳಿಂದಲೂ ಸಹ, ವೀರಶೈವರು ಪೂರ್ವದ್ವೀಪ ಸ್ತೋಮದಲ್ಲೂ ನೆಲಸಿದ್ದರೆಂಬುದು ತಿಳಿದುಬರುತ್ತದೆ. ಚೀಣಾದೇಶದ ಯಾತ್ರಿಕನೂ ಮತ್ತು ಪ್ರಸಿದ್ಧ ಚರಿತ್ರಕಾರನೂ ಆದ ಫಾಹಿಯಾನನು, ಕ್ರಿ. ಶ. ೫ನೆಯ ಶತಮಾನದಲ್ಲಿಯೇ ವೀರಶೈವರು ಜಾವಾದ್ವೀಪದಲ್ಲಿ ನೆಲಸಿದ್ದುದನ್ನು ಸ್ವತಃ ನೋಡಿದ್ದಾನೆ. ಸುಪ್ರಸಿದ್ಧವಾದ ವಿಜಯನಗರ ಸಾಮ್ರಾಜ್ಯದಲ್ಲಿ, ಒಂದು ಶತಮಾನಕ್ಕಿಂತಲೂ ಹೆಚ್ಚುಕಾಲ ವೀರಶೈವರು ರಾಜನೀತಿಯನ್ನು ರೂಪುಗೊಳಿಸಿ ಕೀರ್ತಿಗಳಿಸಿದ್ದಾರೆ. ವಿಜಯನಗರ ಸಾಮ್ರಾಜ್ಯದ ಪ್ರಬಲವಾದ ಸೈನ್ಯದೊಡನೆ ಸಿಂಹಳದ್ವೀಪಕ್ಕೆ ಮುತ್ತಿಗೆ ಹಾಕಿ, ಅಲ್ಲಿಯ ರಾಜನನ್ನು ನಿಗ್ರಹಿಸಿ, ಆತನು ಸಾಮ್ರಾಜ್ಯಕ್ಕೆ ಕಪ್ಪಕಾಣಿಕೆಗಳನ್ನು ಸಲ್ಲಿಸುವಂತೆ ಮಾಡಿದ ಶೂರ ಸೈನ್ಯಾಧಿಪತಿಯು ವೀರಶೈವ

ನಾಗಿದ್ದನೆಂಬುದು ಗಮನಾರ್ಹವಾದ ಸಂಗತಿಯಾಗಿದೆ. ಈ ಕಾಲದಲ್ಲಿ ನೂರಾರು ಮಂದಿ ವೀರಶೈವ ವಿದ್ವಾಂಸರೂ, ಕವಿಗಳೂ ಮತ್ತು ವೇದಾಂತಿಗಳೂ ರಾಜಾಸ್ಥಾನವನ್ನಲಂಕರಿಸಿ, ವಿಶೇಷ ಪಾಂಡಿತ್ಯವನ್ನೊಳಗೊಂಡ ಗ್ರಂಥಗಳನ್ನು ರಚಿಸಿದರು. ಇಡಿಯ ಹಿಂದೂ ದೇಶಕ್ಕೂ ಮತ್ತು ಹಿಂದೂ ಸಂಸ್ಕೃತಿಗೂ ಮಹಾ ವಿಪತ್ತೊದಗಿದ್ದ ಕಾಲದಲ್ಲಿ, ವೀರಶೈವರು ಇತರ ಪಂಗಡದವರೊಡನೆ ಸಹಕರಿಸಿ, ಅವೆರಡನ್ನೂ ಸಂರಕ್ಷಿಸಿದರು. ಈ ಮಹತ್ಕಾರ್ಯದ ಫಲವನ್ನು ನಮ್ಮ ನಾಡು ಇಂದಿಗೂ ಅನುಭವಿಸುತ್ತಿದೆ. ವಿಜಯನಗರದ ಕೆಲವು ಚಕ್ರವರ್ತಿಗಳು ವೀರಶೈವರಾಗಿದ್ದರು. ಅವರು ಸಂಸ್ಕೃತ ಭಾಷಾ ಪಂಡಿತರೂ ಆಗಿದ್ದರು. ಈಗಿನ ಶಿವಮೊಗ್ಗ, ಕಡೂರು, ಹಾಸನ ಮತ್ತು ತುಮಕೂರು ಜಿಲ್ಲೆಗಳನ್ನು ಮಾತ್ರವೇ ಅಲ್ಲದೆ, ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳನ್ನೂ ಸಹ ನಗರದ ವೀರಶೈವ ಸಾಮ್ರಾಜ್ಯವು ಒಳಗೊಂಡಿತ್ತೆಂಬುದು ನಾವು ಮರೆಯಲಾಗದ ಅಂಶವಾಗಿದೆ. ಆ ಸಾಮ್ರಾಜ್ಯವು ಎರಡು ಶತಮಾನಗಳಿಗಿಂತಲೂ ಹೆಚ್ಚುಕಾಲ ಊರ್ಜಿತಸ್ಥಿತಿಯಲ್ಲಿದ್ದು, ರಾಜನೀತಿ ಕುಶಲತೆಯಲ್ಲಿ ತನ್ನ ಪ್ರೌಢಿಮೆಯನ್ನು ವ್ಯಕ್ತಪಡಿಸಿತು. ಮಹಮ್ಮದೀಯರು, ಕ್ರೈಸ್ತರು ಮೊದಲಾದ ಅನೇಕ ಬೇರೆ ಬೇರೆ ಮತಾವಲಂಬಿಗಳನ್ನೂ ಸಹ ವೀರಶೈವರು ಸಹನ ಬುದ್ಧಿಯಿಂದ ಕಂಡು, ತಮ್ಮಲ್ಲಿದ್ದ ಅನ್ಯಧರ್ಮ ಸಹಿಷ್ಣುತೆಯನ್ನು ವ್ಯಕ್ತಪಡಿಸಿ ಪ್ರಸಿದ್ಧರಾಗಿರುತ್ತಾರೆ. ಕೊಡಗಿನ ಯೋಧಶ್ರೇಷ್ಠರಾದ ರಾಜರು ವೀರಶೈವರಾಗಿದ್ದರು. ಹೀಗೆಯೇ ಪಶ್ಚಿಮ ತೀರದಲ್ಲಿ ಗೋವಾದಿಂದ ಕೊಡಗಿನವರೆಗೂ ವ್ಯಾಪಿಸಿದ್ದ ರಾಜ್ಯವನ್ನು, ವೀರಶೈವ ರಾಜರೇ ಆಳುತ್ತಿದ್ದರು. ಮೈಸೂರು ಯುದ್ಧದ ವಾಂದಿವಾಷ್ ಕದನದಲ್ಲಿ ಗಣ್ಯರೆನಿಸಿಕೊಂಡ ಪುಂಗನೂರು ರಾಜರು ವೀರಶೈವರಾಗಿದ್ದರು. ಮಹಾಪ್ರತಿಭಾಶಾಲಿಯಾದ ಶಿವಾಜಿಯೊಡನೆ ವಿಶೇಷ ಪರಾಕ್ರಮದಿಂದ ಕಾದಾಡಿದ ಬೆಳವಾಡಿಯ ಮಲ್ಲಮ್ಮರಾಣಿಯು ವೀರಶೈವಳಾಗಿದ್ದಳು. ಈಸ್ಟ್‌ಇಂಡಿಯಾ ಕಂಪೆನಿಯ ಆಂಗ್ಲ ಸೈನ್ಯದೊಡನೆ ಹೋರಾಡಿ, ಕೀರ್ತಿಯನ್ನು ಗಳಿಸಿದ ಕಿತ್ತೂರು ಚನ್ನಮ್ಮನೂ ಸಹ ಒಬ್ಬ ವೀರಶೈವ ರಾಣಿಯಾಗಿದ್ದಳು. ಕ್ರಿ. ಶ. ೧೩೯೯ ರಿಂದ ೧೫೦೫ ರ ವರೆಗೆ ಮೈಸೂರಿನ ಪ್ರಭುಗಳು ವೀರಶೈವರಾಗಿದ್ದರು. ಧೀರರೂ ಮತ್ತು ವಿಶೇಷ ಪ್ರತಿಭಾಶಾಲಿಗಳೂ ಆದ

ಒಬ್ಬ ಜಂಗಮ ಒಡೆಯರೇ ಮೈಸೂರು ರಾಜರ ಪೂರ್ವೀಕರನ್ನು ಅವರಿಗೊದಗಿದ್ದ ವಿಪತ್ತಿನಿಂದ ಪಾರುಮಾಡಿ, ಅವರ ಶತ್ರುಗಳನ್ನು ನಾಶಮಾಡಿ ಶಾಶ್ವತವಾದ ಕೀರ್ತಿಯನ್ನು ಸಂಪಾದಿಸಿದರು.

ಈ ಮೇಲೆ ಸೂಚಿಸಿರುವ ಅಂಶಗಳಿಂದ ನಮ್ಮ ಪೂರ್ವೀಕರು ರಾಜ್ಯಗಳ ರಚನೆ ಮತ್ತು ರಕ್ಷಣೆಗಳಲ್ಲಿಯೂ, ಹಿಂದೂ ಸಂಸ್ಕೃತಿಯ ಉದ್ಧಾರ ಮತ್ತು ಪ್ರಚಾರಗಳಲ್ಲಿಯೂ ಎಷ್ಟರಮಟ್ಟಿಗೆ ನಿಪುಣರಾಗಿದ್ದರೆಂಬುದು ಸ್ಪಷ್ಟವಾಗುತ್ತದೆ. ಇದಲ್ಲದೆ, ನಮ್ಮ ಸಮಾಜದವರು ಮೈಸೂರು ರಾಜರಲ್ಲಿ ಅನೂಚೀನವಾಗಿ ಪ್ರದರ್ಶಿಸಿಕೊಂಡು ಬಂದಿರುವ ರಾಜಭಕ್ತಿಯು ಚರಿತ್ರಾರ್ಹವಾದ ವಿಷಯವೆಂದು ವ್ಯಕ್ತಪಡುತ್ತದೆ.

ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಬೇಕೆಂದು ಸರಕಾರದವರು ಅಪೇಕ್ಷಿಸಿದಾಗ, ಎಲ್ಲರಿಗಿಂತ ಮೊದಲು ಮುಂದೆಬಂದು ಸರಕಾರದ ನೀತಿಯನ್ನು ಗೌರವಿಸಿ ವಿದ್ಯಾರ್ಥಿನಿಲಯಗಳನ್ನು ಕಟ್ಟಿಸಿದವರು ವೀರಶೈವರೇ ಆಗಿರುತ್ತಾರೆ. ನಮ್ಮ ಸಮಾಜದ ಧರ್ಮಾತ್ಮರು ಇಡೀ ಸಂಸ್ಥಾನದಲ್ಲೇ ಪ್ರಸಿದ್ಧವಾದ ಕೆಲವು ದೊಡ್ಡ ಆಸ್ಪತ್ರೆಗಳನ್ನೂ ಮತ್ತು ಛತ್ರಗಳನ್ನೂ ಕಟ್ಟಿಸಿರುತ್ತಾರೆ. ಇಷ್ಟೇ ಅಲ್ಲದೆ ಅವರು ಎಲ್ಲಾ ಕೋಮುಗಳ ಜನರ ಉಪಯೋಗಕ್ಕಾಗಿಯೂ ಪಾಠಶಾಲೆಗಳನ್ನೂ ಮತ್ತು ಪ್ರೌಢ ವಿದ್ಯಾಲಯಗಳನ್ನೂ ಸಹ ಸ್ಥಾಪಿಸಿದ್ದಾರೆ. ಈ ಸಂಸ್ಥಾನದಲ್ಲಿ ವೀರಶೈವರು ಸುಮಾರು ೮೦ ಲಕ್ಷ ರೂಪಾಯಿಗಳಿಗಿಂತಲೂ ಹೆಚ್ಚಾದ ಧನ ವ್ಯಯ ಮಾಡಿ ಧರ್ಮಕಾರ್ಯಗಳನ್ನು ಮಾಡಿರುತ್ತಾರೆ. ನಾವು ಈ ದೇಶದಲ್ಲಿ ಒಂದು ನೆಲೆಯಾದ ಸ್ಥಾನವನ್ನು ಹೊಂದಿದ್ದೇವೆ. ನಮ್ಮ ಸಮಾಜದವರು ಅವರ ಪ್ರಜಾಸಂಖ್ಯಾನುಗುಣವಾಗಿಯೂ ಮತ್ತು ಸಂಸ್ಥಾನದ ವರಮಾನಕ್ಕೆ ಅವರು ಸಲ್ಲಿಸುತ್ತಿರುವ ಕಂದಾಯಗಳ ಪ್ರಮಾಣಕ್ಕನುಸಾರವಾಗಿಯೂ ಸರ್ಕಾರದ ಎಲ್ಲಾ ಶಾಲೆಗಳಲ್ಲಿಯೂ ಸರಿಯಾದ ಪ್ರಾತಿನಿಧ್ಯವನ್ನು ಹೊಂದಲು ಹಕ್ಕುಬಾಧ್ಯತೆಗಳನ್ನುಳ್ಳವರಾಗಿದ್ದಾರೆ.

ಜನಸಾಮಾನ್ಯದ ಸ್ಥಿತಿಯನ್ನು ಉತ್ತಮಗೊಳಿಸುವ ಮತ್ತು ಸಂಸ್ಥಾನದ ಖ್ಯಾತಿಯನ್ನು ವರ್ಧಿಸುವ, ಎಲ್ಲಾ ಸಾರ್ವಜನಿಕ ಉಪಯುಕ್ತವಾದ ಕಾರ್ಯಗಳಲ್ಲೂ ನಾವು ವಿಶೇಷ ಶ್ರದ್ಧೆಯುಳ್ಳವರಾಗಿದ್ದೇವೆ. ತಮ್ಮ ಅಧಿಕಾರಾವಧಿಯಲ್ಲಿ ಸಾರ್ವಜನಿಕ ಶಿಕ್ಷಣಾಭಿವೃದ್ಧಿ,

ಹೆಚ್ಚಾದ ವೈದ್ಯಕೀಯ ಸಹಾಯ, ನವೀನ ವ್ಯವಸಾಯಕ್ರಮಗಳ ಯೋಜನೆ, ಕೈಗಾರಿಕೆಗಳ ಅಭಿವೃದ್ಧಿ, ಸುವ್ಯವಸ್ಥಿತ ಗ್ರಾಮಪುನರುಜ್ಜೀವನ ಕಾರ್ಯ–ಇವುಗಳೆಲ್ಲವೂ ವಿಶೇಷವಾದ ಸಾಮರ್ಥ್ಯದಿಂದ ನಿರ್ವಹಿಸಲ್ಪಡುವುದೆಂದು ನಂಬಿರುತ್ತೇವೆ.

ಈ ಸಂದರ್ಭದಲ್ಲಿ ಕೆಲವು ಮುಖ್ಯವಾದ ರಾಜಕೀಯ ವಿಷಯಗಳನ್ನೂ ಸಹ ಪ್ರಸ್ತಾಪಿಸುವುದು ಉಚಿತವಾಗಿಯೆ ಇದೆ. ಈಗ ನಮ್ಮ ಇಂಡಿಯಾ ದೇಶವು ಹಿಂದೆ ಎಂದೂ ಕಾಣದ ರಾಜಕೀಯ ಆಂದೋಳನದಲ್ಲಿದೆ. ಇಲ್ಲಿ ಅತಿ ತೀವ್ರವಾದ ಪರಿವರ್ತನಗಳಾಗುತ್ತಿವೆ. ಇವುಗಳ ಪರಿಣಾಮವಾಗಿ, ಮೈಸೂರಿನ ಆಡಳಿತ ಕ್ರಮದಲ್ಲೂ ಸಹ ಕೆಲವು ಬದಲಾವಣೆಗಳಾಗಬೇಕೆಂಬ ಒತ್ತಾಯವು ಕೆಲವು ಕಡೆಗಳಿಂದ ಬರುತ್ತಿದೆ. ಮೈಸೂರು ಸಂಸ್ಥಾನದಲ್ಲಿ, ಸನ್ನಿವೇಶಕ್ಕೆ ತಕ್ಕಂತೆ ಇಂಬಾಗುವ ಆಡಳಿತ ಯಂತ್ರದಲ್ಲಿ, ದಿನೇ ದಿನೇ ಹೆಚ್ಚುತ್ತಿರುವ ಅವಶ್ಯಕತೆಯನ್ನನುಸರಿಸಿ, ಜನಜಾಗ್ರತೆಗೆ ತಕ್ಕಂತೆ, ಪ್ರಜಾನುರಾಗವನ್ನು ಇನ್ನೂ ಹೆಚ್ಚು ವರ್ಧಿಸುವ ಮಾರ್ಪಾಟುಗಳನ್ನು, ಉಚಿತ ಬದಲಾವಣೆಗಳಿಂದ, ಪ್ರಾಯಶಃ ಜಾರಿಗೆ ತರಬಹುದು. ಆದಾಗ್ಯೂ ಇಂದು ಜಗತ್ತಿನಲ್ಲಿ ಯಾವ ಎರಡು ರಾಷ್ಟ್ರಗಳಲ್ಲಿಯೇ ಆಗಲಿ ಒಂದೇ ರೂಪಿನ ರಾಜ್ಯಾಂಗರಚನೆಯು ಇಲ್ಲದಿರುವದನ್ನು ನೋಡಿದರೆ, ಒಂದು ಗಮನಾರ್ಹವಾದ ವಿಷಯವು ಸ್ಪಷ್ಟಪಡುವುದು. ಕೇವಲ ಒಂದು ರಾಜ್ಯಾಂಗ ರಚನೆಯ ರೂಪಮಾತ್ರದಿಂದಲೇ ಪ್ರಜೆಗಳು ಸ್ವರ್ಗಕ್ಕೇರುವಂತೆಯೂ ಇಲ್ಲ, ನರಕಕ್ಕಿಳಿಯುವಂತೆಯೂ ಇಲ್ಲ. ಮಾದರಿ ಮೈಸೂರು ಆಡಳಿತದ ವಿದ್ಯೆಯಲ್ಲಿ ಚೆನ್ನಾಗಿ ನುರಿತು, ತನ್ನ ಸಾಧನಾ ವೈವಿಧ್ಯದಿಂದ ಪ್ರಪಂಚವನ್ನೇ ಬೆರಗುಮಾಡಿದೆ. ಪ್ರಜಾನುರಾಗದ ನೆಲೆಯ ಮೇಲೆ ಅಲ್ಲಿಯೇ ಹುಟ್ಟಿ ಬೆಳೆದ ರಾಜ್ಯಾಂಗ ರಚನೆಯು, ದೇಶೀಯರ ಕುಶಲತೆಗೆ ಅನುಗುಣವಾಗಿವೆ. ಅನೇಕಸಾರಿ ಎದ್ದು ಬಿದ್ದು, ಈಗ ಕೇವಲ ಅನಿಶ್ಚಿತಾವಸ್ಥೆಯಲ್ಲಿರುವ, ಬ್ರಿಟಿಷ್ ಇಂಡಿಯಾ ಪ್ರಾಂತೀಯ ಸರ್ಕಾರದ ಮಾದರಿಯನ್ನು ಮುಂದಿನ ಪರಿಣಾಮದ ವಿವೇಚನೆಯಿಲ್ಲದೆ, ಇಲ್ಲಿಯೂ ಅನುಸರಿಸಲೇಬೇಕೆಂದು ವಾದಿಸುವ ಹಠವಾದಿಗಳಿಂದ ನಾವು ದೂರವಾಗಿರಲಿಚ್ಛಿಸುತ್ತೇವೆ. ಬ್ರಿಟಿಷ್ ಇಂಡಿಯಾ ಪ್ರಾಂತೀಯ ಸರ್ಕಾರ ಪದ್ಧತಿಯನ್ನು ಅಂಧರಂತೆ ಅನುಕರಿಸುವುದರಿಂದ ಮೈಸೂರಿನಲ್ಲಿ ವಿಶೇಷ ದುಷ್ಪರಿಣಾಮಗಳುಂಟಾ

ಗಬಹುದೆಂದು, ಮೈಸೂರು ರಾಜ್ಯಾಂಗ ಸುಧಾರಣಾ ಸಮಿತಿಯುವರು ಈ ಮೊದಲೇ ಬಲವಾಗಿ ಎಚ್ಚರಿಸಿದ್ದಾರೆ. ಇತ್ತೀಚೆಗೆ ನಡೆದ ಕಲಕತ್ತೆ ನಗರದ ಗಲಭೆಗಳೂ ಮತ್ತು ಪೂರ್ವ ಬಂಗಾಲದ ಘೋರಕೃತ್ಯಗಳೂ ಈಗಿನ ಬ್ರಿಟಿಷ್ ಇಂಡಿಯಾ ಪ್ರಾಂತೀಯ ಸರ್ಕಾರ ಪದ್ಧತಿಯಿಂದುಂಟಾಗಬಹುದಾದ ಫಲಗಳನ್ನು ಸೂಚಿಸುವುದೇ ಆದರೆ, ಮೈಸೂರು ದೇಶವು ಬ್ರಿಟಿಷ್ ಇಂಡಿಯಾ ಪ್ರಾಂತೀಯ ಮಾದರಿಯನ್ನು ಹೊಂದದೇ ಇರುವುದು ನಿಜವಾಗಿಯೂ ಅದರ ಸೌಭಾಗ್ಯ. ಆದುದರಿಂದ ಕೇವಲ ಸರ್ಕಾರದ ರೂಪ ರಚನೆಗಿಂತಲೂ ಅದರ ಧ್ಯೇಯಗಳಿಗೂ ಮತ್ತು ಅದರ ಚಾಲಕರಿಗೂ ಹೆಚ್ಚು ಪ್ರಾಮುಖ್ಯತೆಯನ್ನು ಕೊಡಬೇಕಾದ್ದುದು ಅತ್ಯಾವಶ್ಯಕ. ಏಕೆಂದರೆ ಹೇಗೆ ಜನಸಾಮಾನ್ಯದ ಹಿತಕ್ಕಾಗಿ ಸರ್ಕಾರವು ಎಷ್ಟರಮಟ್ಟಿನ ಸೇವೆಯನ್ನು ಸಲ್ಲಿಸುವುದೆಂಬುದನ್ನು ಧ್ಯೇಯಗಳು ನಿರ್ಧರಿಸುತ್ತವೆಯೋ ಹಾಗೆಯೇ ಸರ್ಕಾರದ ಸೂತ್ರವನ್ನು ವಹಿಸುವವರ ಈ ಸೇವಾದಕ್ಷತೆಯ ಗುಣವನ್ನು ನಿರ್ಧರಿಸುತ್ತಾರೆ. ಸ್ವಾಮಿ, ತಾವು ಜನಸಾಮಾನ್ಯದ ಸೌಖ್ಯವನ್ನು ಹೆಚ್ಚಿಸುತ್ತೀರೆಂದೂ ಸರ್ಕಾರದ ಸೇವೆಯ ಮಟ್ಟವನ್ನು ಇನ್ನೂ ಉತ್ತಮಗೊಳಿಸುತ್ತೀರೆಂದೂ ನಾವು ನಿರೀಕ್ಷಿಸುತ್ತೇವೆ. ಪ್ರಚಲಿತವಾದ ಆಧುನಿಕ ಸರ್ಕಾರದ ಧ್ಯೇಯಗಳನ್ನು ಸ್ವಾಭಾವಿಕವಾಗಿ ಅರಿತು ಅನುಷ್ಠಾನಕ್ಕೆ ತರಲು ಸಹಜವಾದ ಶಕ್ತಿಯನ್ನು ಹೊಂದಿರುವ, ವಿವೇಕಿಗಳಾದ ನಮ್ಮ ಪ್ರಭುಗಳು ಅನೇಕ ದೇಶೀಯ ಸಂಸ್ಥಾನಗಳಲ್ಲಿ ಕಂಡುಬಾರದಿರುವ ರಾಜಕೀಯ ಸುಧಾರಣೆಗಳನ್ನು ಜಾರಿಗೆ ತಂದು ಪ್ರಜಾವಾತ್ಸಲ್ಯವನ್ನು ಅನನ್ಯ ಸಾಧಾರಣವಾಗಿ ಗಳಿಸಿ ಪ್ರಖ್ಯಾತರಾಗಿರುವರಲ್ಲದೆ ಜನಪ್ರಿಯವಾದ ರಾಜ್ಯಾಂಗ ಯಂತ್ರವನ್ನು ಸ್ಥಿರವಾಗಿ ಸ್ಥಾಪಿಸಿದ್ದಾರೆ. ಸ್ವಾಮಿ, ತಾವು ಸರ್ಕಾರದ ರೂಪಮಾತ್ರಕ್ಕಿಂತಲೂ ಅದರ ಧ್ಯೇಯಗಳಿಗೂ ಮತ್ತು ಫಲಗಳಿಗೂ ಹೆಚ್ಚು ಗಮನವನ್ನು ಕೊಡುವಿರೆಂದು ನಾವು ಹಾರೈಸುತ್ತೇವೆ. ಮೈಸೂರು ದೇಶದಲ್ಲೂ ಮತ್ತು ಹೊರಗಡೆಯಲ್ಲೂ ವ್ಯಾಪಿಸಿರುವ ರಾಜಕೀಯ ಘರ್ಷಣೆಗಳ ಮತ್ತು ವಿವಾದಗಳ ನಡುವೆ ನಮ್ಮ ಸಂಸ್ಥಾನವು ಸುರಕ್ಷಿತವಾಗಿರುವಂತೆಯೂ ಪ್ರಜೆಗಳ ಸುಖಸಂಪತ್ತು ಅಭಿವೃದ್ಧಿಯಾಗುವಂತೆಯೂ ದೃಢವಾದ ರಾಜನೀತಿಯನ್ನು ತಾವು ದಯವಿಟ್ಟು ಅನುಸರಿಸಬೇಕೆಂದು ನಾವು ವಿನಯದಿಂದ ಪ್ರಾರ್ಥಿಸುತ್ತೇವೆ. ಕೊನೆಯದಾಗಿ ಶ್ರೀಮಾನ್ ಮಹಾರಾಜರವರಿಗೆ

ರಾಜಪುತ್ರಿಯ ಜನನವಾಗಿರುವುದಕ್ಕೋಸ್ಕರ ನಮ್ಮ ವಿನಯಪೂರ್ವಕ ವಾದ ಅಭಿನಂದನೆಗಳನ್ನೂ ಮೈಸೂರು ಸಿಂಹಾಸನದಲ್ಲಿ ನಮಗಿರುವ ಅಚಲ ರಾಜಭಕ್ತಿ ವಿಶ್ವಾಸಗಳನ್ನೂ ತಾವು ಶ್ರೀಮಾನ್ ಮಹಾರಾಜರವ ರಿಗೆ ದಯವಿಟ್ಟು ಅರ್ಪಿಸಬೇಕೆಂದು ಕೇಳಿಕೊಳ್ಳುತ್ತೇವೆ.

ನಿಮ್ಮ ಆಯುರಾರೋಗ್ಯಕ್ಕೂ ರಾಜ್ಯಾಡಳಿತದ ಯಶಸ್ಸಿಗೂ ಭಗ ವಂತನನ್ನು ಪ್ರಾರ್ಥಿಸುತ್ತೇವೆ.

---

## ನುಲಿಯ ಚಂದಯ್ಯಗಳ ಸ್ಥಳ.

(ಲೇ:--ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳು ಸಖರಾಯಪಟ್ಟಣ)

[ನುಲಿಯ ಚಂದಯ್ಯನು ಬಸವೇಶ್ವರನ ಕಾಲದಲ್ಲಿ ಒಬ್ಬ ಪ್ರಸಿದ್ಧ ಶರಣನೂ ವಚನಕಾರನೂ ಆಗಿದ್ದಾನೆ. ಅವನ ಚರಿತ್ರೆಯು ಶಿವಶರ ಣರ ಚರಿತ್ರೆಗಳು ಭಾಗ ೨ ಇದರಲ್ಲಿ ಬಂದಿದೆ. ವಿಜಾಪುರ ಪಟ್ಟಣದಿಂದ ಪೂರ್ವಕ್ಕೆ ೧೮ ಮೈಲುಗಳ ಮೇಲಿರುವ ಶಿವಣಿಗಿ ಎಂಬ ಗ್ರಾಮದಲ್ಲಿ ಚಂದಯ್ಯನದೊಂದು ದೇವಾಲಯವಿದ್ದುದರಿಂದ ಈ ಗ್ರಾಮವು ನುಲಿಯ ಚಂದಯ್ಯನ ಸ್ಥಾನವಾಗಿರಬಹುದೆಂದು ನಾವು ಊಹಿಸಿ ಅದರಲ್ಲಿ ಬರೆ ದಿದ್ದೇವೆ. ಆದರೆ ಅವನ ಗ್ರಾಮವು ಕಡೂರ ಜಿಲ್ಲೆಯಲ್ಲಿಯ ತರೀಕೆರೆಗೆ ಸಮೀಪವಾಗಿರುವ ನಂದಿ ಎಂಬುದು ಇರುವದಾಗಿ ಈ ಲೇಖಕರು ಇಲ್ಲಿ ಬರೆದ ಲೇಖದಿಂದ ಕಂಡುಬರುತ್ತದೆ. ಆರೀತಿ ಅಲ್ಲಿ ಐತಿಹ್ಯಗಳೂ ಇರುತ್ತ ವೆಂದು ಅವರಿಂದ ತಿಳಿದುಬರುತ್ತಿದೆ. ಈ ಸ್ಥಳವು ಬಳ್ಳಿಗಾವಿ ಬನವಾಸಿ ಪ್ರಾಂತಕ್ಕೆ ಸಮೀಪವಾದುದು. ಇಲ್ಲಿ ಹಿಂದಿನ ಕಾಲದಲ್ಲಿ ಬಹುಜನ ಶಿವಶ ರಣರು ಆಗಿಹೋಗಿದ್ದಾರೆ. ಆದ್ದರಿಂದ ನಂದಿಯೇ ನುಲಿಯ ಚಂದಯ್ಯನ ಗ್ರಾಮವಾಗಿರಬಹುದು. ಶಿವಶರಣರ ಸ್ಥಾನಗಳನ್ನು ಸಂಶೋಧಿಸು ವದು ಅತ್ಯಂತ ಅಗತ್ಯವಾದುದು. ವಾಚಕರು ಶ್ರೀ ಸದಾಶಿವ ಶಿವಾ ಚಾರ್ಯರಂತೆಯೇ ಶಿವಶರಣರ ಸ್ಥಾನಗಳ ವಿವರಗಳನ್ನು ನಮಗೆ ತಿಳಿಸಿ ದಲ್ಲಿ ಶಿವಾನುಭವ ಪತ್ರಿಕೆಯ ಮೂಲಕ ನಡೆದಿರುವ ಸಂಶೋಧನ ಕಾರ್ಯ ಗಳಿಗೆ ಅವರು ಬಹಳ ಸಹಾಯಮಾಡಿದಂತಾಗುತ್ತದೆ. --ಸಂಪಾದಕ]

ನಮ್ಮೀ ಭಾರತಭೂಮಿಯಲ್ಲಿ ಶ್ರೀ ಶಿವಶರಣ ಶರಣೆಯರು ಹರ್ಷದಿಂದ ಪಾದವಿಟ್ಟು ನೆಲಸಿದ ನೆಲವೇ ಮಹಾಕ್ಷೇತ್ರವಾಗಿ ಪರಿಣಮಿಸಿರುವ ನಿದರ್ಶನವು ಪುರಾಣೇತಿಹಾಸ ಪ್ರಸಿದ್ಧವಾದುದು.

ಮೈಸೂರು ಸ್ಟೇಟ ತರೀಕೆರೆ ತಾಲೂಕು ಲಿಂಗದಹಳ್ಳಿ ಹೋಬಳಿಗೆ ಸೇರಿದ ನಂದಿಯೆಂಬುದೊಂದು ಸಣ್ಣ ಹಳ್ಳಿ. ಆ ಹಳ್ಳಿಯ ಅನತಿ ದೂರದಲ್ಲಿರುವ ಚಿಕ್ಕದೊಂದು ಹಳ್ಳದ ತೀರದಲ್ಲಿ ಶಿವಶರಣ ನುಲಿಯ ಚಂದಯ್ಯಗಳು ಪಾದ ಊರಿದ ನೆಲವೇ ಪುಣ್ಯ ಕ್ಷೇತ್ರವಾಗಿ ಪರಿಣಮಿಸಿದೆ. “ನುಲಿಯ ಕಾಯಕ"ದಿಂದ ಅಂದರೆ ಹುರಿ ಹಗ್ಗಮಾಡಿ ಮಾರಿ ಆದರಿಂದ ಬಂದ ಹಣದಿಂದ ಹರಗುರು ಚರಸೇವಾ ಸಂತೃಪ್ತಿಯನು ನಡೆಸುತಿದ್ದುದರಿಂದ ‘‘ನುಲಿಯ ಚಂದಯ್ಯ’’ಗಳೆಂಬ ಹೆಸರು ಅನ್ವರ್ಥಕವಾಗಿದೆ.

ಶಿವಶರಣ ನುಲಿಯ ಚಂದಯ್ಯಗಳು ಅಂದು ತಮ್ಮ ಸತ್ಯಸಂಕಲ್ಪ ಸತ್ಕಾಯಕದಿಂದ ನಡೆಯಿಸುತಿದ್ದ ‘‘ಶಿವದಾಸೋಹವು” ಇಂದು ಪ್ರತಿ ವರುಷ ಆಶ್ವೀಜ ಮಾಸದಲ್ಲಿ ಒಂದುವಾರ ಪೂರಾ ಅವಿಚ್ಛಿನ್ನವಾಗಿ ನಡೆಯುತಲಿದೆ. ಆಗ್ಗೆ ಅಲ್ಲಿಗೆ ದೂರದೂರ ಪ್ರದೇಶದ ಸ್ತ್ರೀಪುರುಷರು ಭಕ್ತಾದಿಗಳು ಭಕುತಿ ವಿಶ್ವಾಸಗಳಿಂದ ಬಂದು ಗುಗ್ಗುಳ ಹೊರವುದು, ಕಸಗುಡಿಸುವುದು, ಎಲೆತೆಗೆಯುವುದು, ಗೋಮಯ ಹಚ್ಚಿಸುವುದು ಮುಂತಾದ ಸೇವೆಗಳನ್ನು ಭಕ್ತಿವಿಶ್ವಾಸದಿಂದಾಚರಿಸಿ ಕೃತಕೃತ್ಯರಾಗುತಿದ್ದಾರೆ. ಸುಮಾರು ಹತ್ತಿಪ್ಪತ್ತು ಸಾವಿರಕ್ಕೆ ಕಮ್ಮಿ ಇಲ್ಲದೆ ಜನ ಸೇರುತ್ತದೆ. ದಾಸೋಹ ಕಾರ್ಯಗಳು ನಡಿಯುತ್ತವೆ.

ಆ ಮಹಾ ಕ್ಷೇತ್ರದಲ್ಲಿ ಒಂದು ವಾರದ ವರೆಗೆ ಇರಿವೆ, ಗೊದ್ದ, ನೊಣ, ಕಾಗೆಗಳ ಹರಿದಾಟ ಹಾರಾಟದ ಸುಳುವೂ ಕೂಡ ಬಹುಮಟ್ಟಿಗಿಲ್ಲದಿರುವುದೊಂದು ಮಹತ್ವದ ವಿಶೇಷ ಸಂಗತಿಯಾಗಿದೆ. ಮಹಾದಾಸೋಹ ಕಾರ್ಯ ಸುರುವಿಗೆ ತರೀಕೆರೆ ಎಣ್ಣೆಹೊಳೆ ವಿರಕ್ತಮಠದ ಮೂರ್ತಿಗಳು ಸದರಿ ಶಿವಶರಣರ ಜೋಳಿಗೆ ಬೆತ್ತ ಸಮೇತ ನಂದಿ, ಸುಣ್ಣದಹಳ್ಳಿ, ದೋರನಹಾಳು, ಗ್ರಾಮದ ಕೆಲಭಕ್ತರೊಂದಿಗೆ ವಾದ್ಯ ವೈಭವದೊಡನೆ ಹೊರಟು ಆ ಸತ್ಕಾಯಕದ ಮೂಲಕ ಬಂದ

ಹಣದಿಂದ ಮಹಾ ದಾಸೋಹ ಕಾರ್ಯವನ್ನು ಸದರಿ ಗ್ರಾಮಗಳ ಭಕ್ತಾದಿಗಳ ನೆರವಿನಿಂದ ಬಹಳ ವಿಜೃಂಭಣೆಯಿಂದ ತೃಪ್ತಿಕರವಾಗಿ ನಡೆಯಿಸುತ್ತಾರೆ.

**ಈ ಕ್ಷೇತ್ರದಲ್ಲಿ** ಸದರಿ ಎಣ್ಣೆಹೊಳೆ ಮಠಕ್ಕೆ ಸಂಬಂಧಪಟ್ಟ ಪುರಾತನ ಮೂರ್ತಿಗಳ ಗದ್ದುಗೆಯೂ, **ಸ್ವಯಂಭು ಸಿದ್ಧೇಶ್ವರಲಿಂಗಮೂರ್ತಿಯೂ** ಕಂಗೊಳಿಸುತ್ತಿವೆ. ಇಲ್ಲಿಗೆ ಕೆಲವರುಷಗಳ ಹಿಂದೆ ಭಕ್ತರು ಅರ್ಪಿಸಿದ ಅಪಾರ ಧನರಾಶಿಯನ್ನು ಖರ್ಚುಮಾಡಿ ವಿಶಾಲ ಭವ್ಯಗಳಾದ ಪಾಕಶಾಲೆ, ಭೋಜನಾಲಯ, ಪದಾರ್ಥ ಸಂಗ್ರಹಾಲಯ ಮೊದಲಾದ ಕಟ್ಟಡಗಳನ್ನು ಹೊಸದಾಗಿ ಕಟ್ಟಿಸಿರುತ್ತಾರೆ.

ಒಟ್ಟಿನಲ್ಲಿ ಮಹಾಶರಣರು ಪಾದ ಊರಿದ ಈ ಮಹಾಸ್ಥಾನವು ಕಲಿಪ್ರಚುರದೀ ಕಾಲದಲ್ಲು ಕೂಡ ಜಾಗ್ರತ ಕಲಾಸ್ಥಾನವಾಗಿರುವುದೆಂದು ಮನಗಂಡಿದ್ದನ್ನುಸುರಿದರೆ ಅದು ಅತಿಶಯೋಕ್ತಿಯಾಗಲಾರದೆಂದು ಭಾವನೆ.

ಈ ತರದ ಮಹಾಕ್ಷೇತ್ರಾರ್ಥಿಗಳಾಗಿ ಹೋಗುವುದು ಪ್ರತಿಯೊಬ್ಬ ವೀರಶೈವ ಸ್ತ್ರೀ ಪುರುಷರಿಗೆ ಶ್ರೇಯೋಭೂಷಣಪ್ರದವಾದುದೆಂದು ತಿಳಿಸದಿರಲಾರೆವು.

---

# ವೀರಶೈವ ಸಂಸ್ಕೃತಿ ಪ್ರಕಾಶಕ ಸಮಿತಿ ಗದಗ ಸಾಹಿತ್ಯ ಪರೀಕ್ಷೆಗಳು.

(ಲೇಖಕಃ-ಶ್ರೀ. ನಾಗಭೂಷಣ ಶಾಸ್ತ್ರಿಗಳು ವೀರಶೈವ ಸಂಸ್ಕೃತ ಪ್ರಕಾಶಕ ಸಮಿತಿ ಕಾರ್ಯಾಧ್ಯಕ್ಷ. )

## ವೀರಶೈವ ವಿದ್ಯಾಪೀಠದ ಅವಶ್ಯಕತೆ.

ಈಗ ಜಗತ್ತಿನಲ್ಲಿ ಪ್ರತಿದಿನ ಪ್ರತಿಕ್ಷಣದಲ್ಲಿಯೂ ತೀವ್ರವಾದ ಬದಲಾವಣೆಯಾಗುತ್ತ ನಡೆದಿರುವದು. ಪ್ರತಿಯೊಂದು ಜನಾಂಗವು ತನ್ನದೇ ಆದ ವಿಶಿಷ್ಟ ಸಂಸ್ಕೃತಿಯನ್ನು ಉಳಿಸಿ ಬೆಳಸಿ ಬೆಳಗಿಸಿಕೊಳ್ಳಲು ಘನಘೋರ ಸಂಗ್ರಾಮವನ್ನು ಕೂಡಾ ಹೂಡಲು ಸಿದ್ಧವಾಗಿದೆ. ಇಂಥ ಕಾಲದಲ್ಲಿ ಜಗತ್ತಿನಲ್ಲಿಯೇ ತೀರ ಹಿಂದುಳಿದ ದೇಶವೆನಿಸಿದ ಹಿಂದುಸ್ಥಾನದಲ್ಲಿ ದೂರ ಹಿಂದುಳಿದ ಪ್ರಾಂತವೆಂದರೆ ಕನ್ನಡನಾಡು. ಅದರಲ್ಲಿಯೂ ವೀರಶೈವ ಸಮಾಜವು ಹಿಂದುಳಿದದ್ದಾಗಿದೆಂಬುದನ್ನು ನೆನಸಿಕೊಂಡರೆ ಯಾವ ಸ್ವಾಭಿಮಾನಿಗೆ ವ್ಯಸನವೆನಿಸಲಿಕ್ಕಿಲ್ಲ!

ಮಾನವ ಜನಾಂಗವು ಅನಂತ ಜಾತಿ ಮತ ಪಂಥಗಳ ತೊಡಕಿನಲ್ಲಿ ಸಿಕ್ಕುಕೊಂಡು ಬಳಲುತ್ತಿದ್ದಾಗ ಅವೆಲ್ಲವುಗಳನ್ನು ಹೊಡೆದೋಡಿಸಿ ಸಮಾನತೆ ಸ್ವತಂತ್ರತೆ ಸಹೋದರತೆ ಇವುಗಳ ತಳಹದಿಯಮೇಲೆ ಧರ್ಮಮಂದಿರವನ್ನು ಕಟ್ಟಿ ಅದರಲ್ಲಿ ಶಾಂತಿದೇವಿಯ ಪ್ರತಿಷ್ಠೆ ಮಾಡಲು ಹೆಣಗಿದವರು ವೀರಶೈವ ಶರಣರಲ್ಲವೇ! ಶರಣರು ಕಂಡುಹಿಡಿದ ತತ್ವಗಳು ಇದೇ ಮಾನವ ಪ್ರಪಂಚವನ್ನೇ ಉದ್ಧಾರಮಾಡುವಂತವುಗಳಾಗಿರುವದೆಂಬುದನ್ನು ಎಲ್ಲ ನಿಷ್ಪಕ್ಷಪಾತಿ ಪಂಡಿತರು ಒಪ್ಪಿಕೊಂಡಿರುವರು. ಕನ್ನಡ ನಾಡಿನ ಇತಿಹಾಸವು ಅತ್ಯುಜ್ವಲವಾಗಿ ಬೆಳಗುವಂತಾದುದು ಶಿವಶರಣರ ಸಚ್ಚರಿತ್ರಗಳಿಂದ. ಹೀಗಿದ್ದರೂ ವೀರಶೈವರು ಹಿಂದುಳಿಯಲು ಕಾರಣವೇನು? ಎಂಬ ಪ್ರಶ್ನೆಯು ಇಂದಿನ ಸುಧಾರಕರ ಮುಂದೆ ಬಿಡಿಸಲಿಕ್ಕೆ ಬಾರದಷ್ಟು ಬಿಗಿಯಾಗಿರುವದು.

ಯಾವ ಭೇದವನ್ನು ಹೊಡೆದೋಡಿಸಲು ವೀರಶೈವ ಧರ್ಮವು ಉದಯಿಸಿತೋ ಅಂಥ ಅನಂತ ಭೇದಗಳನ್ನು ತನ್ನಲ್ಲಿಯೇ ಕಲ್ಪಿಸಿಕೊಂಡು ಹೇಚಾಡುತ್ತಿರುವದು ಎಂಥ ಅಜ್ಞಾನ! ಹಿಂದಿನ ಶರಣರ ಅನುಭವಿಗಳ ನಡೆನುಡಿಗಳಂತೆ ಇದ್ದ ಅನಾದರವೇ ಇಂದಿನವರ ಅಜ್ಞಾನಕ್ಕೆ ಕಾರಣವಾಗಿದೆ. ಪರಭಾಷೆ ಪರಸಂಸ್ಕೃತಿಯ ಮೋಹವು ಇದಕ್ಕೆ ಪೂರ್ಣ ಸಹಾಯವಾಗಿರುವದು. ಇದೆಲ್ಲಾ ನಿರ್ಮೂಲವಾಗಿ ನಾಶಹೊಂದಿ ವೀರಶೈವರ ಉಚ್ಚ ಸಂಸ್ಕೃತಿಯ ಸ್ವಚ್ಛ ಬೆಳಕು ಎಲ್ಲಕಡೆಗೂ ಬೀಳಲಿಕ್ಕೆ ಶರಣರ ಸಾಹಿತ್ಯ ಪ್ರಚಾರವೇ ಪರಮೋಪಾಯ. ಸಾಹಿತ್ಯವು ಸಂಸ್ಕೃತಿಯ ವಾಹಕವು. ಸಾಹಿತ್ಯದ ಪ್ರಚಾರವನ್ನೇ ಸಂಸ್ಕೃತಿಯ ಪ್ರಚಾರವು ಅವಲಂಬಿಸಿರುವದು. ಈ ಕಾಲದಲ್ಲಿ ಶರಣಸಾಹಿತ್ಯವನ್ನು ಮೊದಲು ಪ್ರಚಾರಕ್ಕೆ ತರಲು ಪ್ರಯತ್ನಿಸಿದವರಲ್ಲಿ **ರಾ. ಬ. ಹಳಕಟ್ಟಿಯವರಿಗೆ ಅಗ್ರಸ್ಥಾನವುಂಟು.** ಶ್ರೀಯುತರು ಕತ್ತಲ ಕೋಣೆಗಳಲ್ಲಿ ಇದ್ದುಕೊಂಡಿದ್ದ ಅನೇಕ ಸಾಹಿತ್ಯ ಪುಸ್ತಕಗಳನ್ನು ಬೆಳಕಿಗೆ ತರಲು ದೊಡ್ಡ ತಪಸ್ಸನ್ನೇ ಮಾಡಿರುವರೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಅವರಿಗೆ ಇಡೀ ಕನ್ನಡನಾಡು ಚಿರಋಣಿಯಾಗಿರುವದು. ಅವರ ಪರಿಶ್ರಮದ ಪರಿಣಾಮವಾಗಿ ಇಂದಿನ ಸುಶಿಕ್ಷಿತರು ಶರಣ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಲು ತೊಡಗಿರುವರಲ್ಲದೆ ಕೆಲವು ವಿಮರ್ಶಾತ್ಮಕ ಪುಸ್ತಕಗಳು ಅವರಿಂದ ಹೊರಬಿದ್ದಿವೆ. ಇದೊಂದು ಶುಭಚಿನ್ಹ. ಗದಗಿನ ವೀರಶೈವ ಪ್ರಕಾಶಕ ಸಮಿತಿಯು ಶರಣರ ಸಾಹಿತ್ಯವನ್ನು ಹೆಚ್ಚಾಗಿ ಪ್ರಚಾರಗೊಳಿಸುವ ನಿಮಿತ್ತವಾಗಿ ಸಾಹಿತ್ಯ ಪರೀಕ್ಷೆಗಳನ್ನೇರ್ಪಡಿಸಿರುವರು. ಐದು ವರುಷಗಳಿಂದ ಈ ಪರೀಕ್ಷೆಯು ನಡೆಯುತ್ತಲಿದೆ. ಈಗಾಗಲೇ ೪ ಸಾವಿರ ವಿದ್ಯಾರ್ಥಿಗಳು ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುವರು. ಕರ್ನಾಟಕದ ಎಲ್ಲ ಭಾಗಗಳಲ್ಲಿಯೂ ಕೇಂದ್ರಗಳಾಗಿವೆ. ಕಾಶಿ ಪುಣೆ ಮುಂತಾದ ಪರಪ್ರಾಂತಗಳಲ್ಲಿರುವ ಕನ್ನಡಿಗರೂ ಅಭ್ಯಾಸದಲ್ಲಿ ತೊಡಗಿದ್ದಾರೆ. ಎಲ್ಲ ಜಾತಿಯ ಸ್ತ್ರೀಪುರುಷರು ಇದರಲ್ಲಿರುವರು. ಇನ್ನು ಬೆಳೆಯುವದರಲ್ಲಿಯೇ ಇದೆ. ಆದರೆ ಇಷ್ಟಕ್ಕೆ ನಾವು ಸಂತುಷ್ಟರಾಗಿ ಕುಳಿತುಕೊಳ್ಳಲು ಸಾಧ್ಯವಿಲ್ಲ. ಈಗ **"ವೀರಶೈವ ವಿದ್ಯಾಪೀಠ"ವು** ಸ್ಥಾಪಿಸಲ್ಪಡುವದು ಅತ್ಯಗತ್ಯವಾಗಿದೆ. ಸಮಿತಿಯವರು ಈ ಬಗ್ಗೆ ವಿಚಾರ ನಡೆಸಿರುವರು. ಈ ಕಾರ್ಯವು ಸಣ್ಣದಲ್ಲ.

ಲಕ್ಷಗಟ್ಟಲೆ ರೂಪಾಯಿಗಳು ಬೇಕಾಗುವವು. ಸ್ವಸಂಸ್ಕೃತಿಯ ಅಭಿಮಾನವುಳ್ಳ ವಿದ್ಯಾವಂತರು ಪ್ರಾಧ್ಯಾಪಕರಾಗಿ ಕೆಲಸ ಮಾಡಬೇಕಾಗುವದು. ಶರಣರ ಉಚ್ಚ ತತ್ವಗಳನ್ನು ಪರಸ್ಪರ ವಿಚಾರ ವಿನಿಮಯದಿಂದ ಅಭ್ಯಾಸಮಾಡಿ ಪರಭಾಷೆಗಳಲ್ಲಿಯೂ ಕೂಡಾ ಗ್ರಂಥರಚನೆ ಮಾಡಿ ಪ್ರಚಾರ ಮಾಡುವ ಕಾರ್ಯವು ಒಂದು ವಿದ್ಯಾಪೀಠದ ಅಂಗವಾಗುವದು. ಈ ಕಾರ್ಯಕ್ಕೆ ನಮ್ಮ ಸಮಾಜದ ಧರ್ಮಗುರುಗಳೂ ಶ್ರೀಮಂತರೂ ಗಂಟು ಬಿದ್ದರೆ ನಮ್ಮ ಸಮಾಜದ ಭಾಗ್ಯ ತೆರೆಯಿತೆಂದು ಹೇಳಬಹುದು. ಗುರುಗಳಾದವರು ಸ್ವಕರ್ತವ್ಯದಲ್ಲಿ ಜಾಗ್ರತರಾಗದಿರುವದು ತೀರ ಶೋಚನೀಯ ವಿಷಯ. ಪಾಶ್ಚಾತ್ಯ ಶಿಕ್ಷಣ ಪ್ರಭಾವದಿಂದ ಇಂದಿನ ಬಹುಸಂಖ್ಯಾಕ ಶಿಕ್ಷಿತರಲ್ಲಿ ಸ್ವಧರ್ಮ ಆಚ್ಚ ಸಂಸ್ಕೃತಿಗಳ ವಿಷಯದಲ್ಲಿ ಆದರಾಭಿಮಾನವಿಲ್ಲದಿರುವದೇನೂ ಆಶ್ಚರ್ಯವಲ್ಲ. ಧರ್ಮಪೀಠದಲ್ಲಿದ್ದವರೂ ಕೂಡ ಅದೇ ಮಾರ್ಗದಲ್ಲಿರುವದು ತೀರ ಅಚ್ಚರಿ. ಈಗ ಅಂಧಶ್ರದ್ಧೆಯ ಯುಗವು ಮುಗಿದು ವಿಚಾರ ಸ್ವಾತಂತ್ರ್ಯದ ನವಯುಗವು ಪ್ರಾರಂಭವಾಗಿದೆ. ಯಾರು ಏನು ಮಾಡುವರು, ಏಕೆ, ಎಂಬುದು ಎಲ್ಲರಲ್ಲಿಯೂ ಹುಟ್ಟಹತ್ತಿದೆ. ಇಂಥ ಕಾಲದಲ್ಲಿಯೂ ಗುರುಗಳು ಎಚ್ಚತ್ತು ತಮ್ಮ ಕರ್ತವ್ಯದಲ್ಲಿ ತೊಡಗದಿದ್ದಲ್ಲಿ ಗುರುಪೀಠಗಳ ಮಾನಮರ್ಯಾದೆಗಳಿಗೆ ಭಂಗಬರುವದು. ಕೇವಲ ಇಂಗ್ಲಿಷ ಭಾಷೆಯಿಂದ ಏನೂ ಪ್ರಯೋಜನವಿಲ್ಲ ಎಂದು ರಾಷ್ಟ್ರದ ನಾಯಕರು ಕೂಗಿ ಕೂಗಿ ಹೇಳುತ್ತಿದ್ದರೂ ನಮ್ಮವರು ಅದಾವುದನ್ನು ಲೆಕ್ಕಿಸದೆ ಇನ್ನು ಪರಭಾಷೆಯ ದಾಸ್ಯವೃತಿಯನ್ನೇ ವ್ಯಕ್ತ ಮಾಡುತ್ತಿರುವರು. ಅದಕ್ಕಾಗಿ ಹೆಚ್ಚಾಗಿ ಧನವ್ಯಯ ಮಾಡುತ್ತಿರುವದು ವಿಷಾದಕರ. ಇನ್ನುಮೇಲಾದರೂ ಗುರುಗಳು ತಮ್ಮ ಸ್ಥಾನಮಾನಕ್ಕೆ ತಕ್ಕ ಕಾರ್ಯಗಳಲ್ಲಿ ತೊಡಗಿದರೆ ಅವರಿಂದ ನಮ್ಮ ನಾಡಿಗೂ ಭಾರತಕ್ಕೂ ತದ್ವಾರಾ ಇಡೀ ಜಗತ್ತಿಗೂ ಅಪಾರವಾದ ಕಲ್ಯಾಣವಾಗುತ್ತದೆ. ಅದಕ್ಕಾಗಿ ಶ್ರೀಮಂತರೂ ಧೀಮಂತರೂ ತ್ಯಾಗಮಾಡಲು ಸಿದ್ಧರಾಗಬೇಕಾಗುವದು. ಬಂಗಾರದ ಮೃದುತನ ಅಕ್ಕಸಾಲಿಗನ ಜಾಣತನ ಕೂಡಿದರೆ ಹೇಗೆ ಒಂದು ಉತ್ತಮ ಕೃತಿಯಾಗುವದೋ ಹಾಗೆ ಗುರುಗಳಿಗೆ ಶ್ರೀಮಂತರೂ ಧೀಮಂತರೂ ನೆರವಾದರೆ ಹೆಚ್ಚು ಕಲ್ಯಾಣ ಕಾರ್ಯವಾಗುವದು. ವೀರಶೈವ ವಿದ್ಯಾಪೀಠವು ಶೀಘ್ರವಾಗಿ ಸ್ಥಾಪಿತವಾಗಲು ಎಲ್ಲ ಧರ್ಮಗುರುಗಳೂ ಶ್ರೀಮಂತರೂ

ಧೀಮಂತರೂ ಮುಂದೆ ಬಂದು ನಮ್ಮ ಹಿರಿಯರು ನಮಗಾಗಿ ಸಂಪಾದಿಸಿಟ್ಟ ಜ್ಞಾನಸಂಪತ್ತನ್ನು ಉಪಯೋಗ ಮಾಡಿಕೊಂಡು ಧನ್ಯರಾಗುವರೆಂದು ನಂಬಿದ್ದೇವೆ. ಮತ್ತೊಮ್ಮೆ ಕನ್ನಡ ನಾಡು ತನ್ನ ಸಹಜವಾದ ಗೌರವವನ್ನು ಜಗತ್ತಿಗೆ ಬೀರುವಂತಾಗಲಿ.

---

## ಪಾದಪೂಜೆ ಪಾದೋದಕದ ನಿಜವಾದ ಮರ್ಮ.

(ಲೇಖಕಃ--- ಶ್ರೀಯುತ ವ್ಹಿ. ಸಿ. ಬ್ಯಾಹಟ್ಟಿ, ಬಿ. ಎ.)

ಶಿವಭಕ್ತರಾದ ಶರಣರು ಪಾರಮಾರ್ಥ ಸಾಧನೆಗೆ ಭಕ್ತಿ, ಧ್ಯಾನ ಜ್ಞಾನ ಮತ್ತು ಕ್ರಿಯೆಯ ಸಮನ್ವಯ ಯೋಗವನ್ನು ಉಪಯೋಗಿಸುತ್ತಾರೆಂಬದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಲಿಂಗ ಪೂಜೆ ನಿರೀಕ್ಷಣೆಗಳಿಂದ ಮನಸ್ಸಿನ ಸ್ಥಿರತೆ ಪ್ರಸನ್ನತೆಗಳನ್ನು ಪಡೆಯಲು ಭಕ್ತಿ ಧ್ಯಾನಗಳೇ ಸಾಧನಗಳಾಗುವವು. ದೇವನು ಭಕ್ತದೇಹಿಕನಾದ್ದರಿಂದ ದೇಹವೆಂಬ ದೇವಾಲಯದಲ್ಲಿದ್ದ ಜೀವನು ವ್ಯಾಪಕನಾದ ಈಶ್ವರನಲ್ಲದೆ ಬೇರೆ ಅಥವಾ ಅನ್ಯವಲ್ಲ. ತನ್ನ ತಾನರಿತರೆ ತಾನೇ ದೇವನಲ್ಲದೆ ಬೇರೆ ದೇವರಿಲ್ಲ. ಜೀವೇಶ್ವರರಿಗೆ ಐಕ್ಯವಲ್ಲದೆ ಭಿನ್ನತೆ ಇಲ್ಲ. ಅಂಗಕ್ಕೂ ಲಿಂಗಕ್ಕೂ ಸಾಮರಸ್ಯತೆ ಅಲ್ಲದೆ ಭೇದವಿಲ್ಲ. ತತ್ ತ್ವಂ ಅಸಿ ಎಂಬುದೇ ಜ್ಞಾನ ಸಾಧನವು. ಇದನ್ನು ಶ್ರವಣ ಮನನ ನಿಧಿಧ್ಯಾಸಾದಿಗಳಿಂದ ಸಾಧಿಸಬಹುದು. ಹೀಗೆಂಬ ಜ್ಞಾನವನ್ನೇ ಪಾದಪೂಜೆ ಪಾದೋದಕ ಸ್ವೀಕಾರವೆಂಬ ಕ್ರಿಯೆಯನ್ನು ನಿತ್ಯ ಆಚರಿಸಿ ಅಂಗಕ್ಕಳವಡಿಸಿಕೊಳ್ಳುವ ವೈಸಿರಿ ಮಾಡಿಕೊಳ್ಳುವ ಕ್ರಿಯಾಸಾಧನವಾಗುವದು. ಅದರ ವಿವರ ಮುಂದಿನಂತೆ ಇರುವದು. ಕ್ರಿಯಾಮೂರ್ತಿಯು ಲಿಂಗಧರಿಸಿ ಇಷ್ಟಲಿಂಗವಿಡಿದು ಮಂತ್ರಜಪದೊಂದಿಗೆ ಧ್ಯಾನಾಸಕ್ತನಾಗಿ ಶೂನ್ಯ ಸಿಂಹಾಸನಸ್ಥನಾಗುವನು. ಶಿವಭಕ್ತನಾದ ಲಿಂಗಧಾರಿಯು ಸಾಷ್ಟಾಂಗವೆರಗಿ ಅಹಂಕಾರ ನಿರಸನದ್ವಾರಾ ಭಯಭಕ್ತಿ

ಯಿಂದ ಪಾದಪೂಜೆಗೆ ಆರಂಭಿಸುವನು. ನೆರೆದ ಭಕ್ತರೆಲ್ಲರೂ ಭಕ್ತಿಯನ್ನು ಆಚರಿಸಿ ಭಕ್ತಿಪಥವನ್ನು ನಡೆದು ತೋರಿಸಿ ಮಾರ್ಗದರ್ಶಕ ದೇಶಿಕನಾದ ಬಸವನ ಸ್ತೋತ್ರವನ್ನು ಪಾಡಿ ಭಕ್ತಿಪರವಶರಾಗುವರು. ಪಾದಪೂಜೆಗೆ ಕುಳಿತ ಶಿವಭಕ್ತನು ಪಾದಪೂಜೆ ಗೈಯುವಾಗ್ಗೆ ಪಾದದ ಬೆರಳುಗಳ ಮೇಲೆ ಪಂಚಾಕ್ಷರೀ ಮಂತ್ರದ ಪ್ರಣವಗಳನ್ನೂ ಪಾದದ ಮೇಲೆ ಬಸವ ಮಂತ್ರದ ಪ್ರಣವುಗಳನ್ನೂ ಓಂಕಾರದ ಮೂರು ಮಾತ್ರಾಕ್ಷರಗಳಾದ ಅ ಉ ಮ ಗಳನ್ನೂ ಬರೆಯುವನು. ಇದರ ಮರ್ಮವನ್ನು ಸ್ವಲ್ಪದರಲ್ಲಿ ಹೇಳುವದಾದರೆ ಪಂಚಾಕ್ಷರಿಯ ಪ್ರಣವುಗಳಿಂದ ಪಂಚಮಹಾಭೂತಗಳಲ್ಲಿ ವ್ಯಾಪಕನಾಗಿ ಕಾಣದಂತೆ ಅಡಗಿದ ಪರಶಿವನು, ಆ ಪಂಚಮಹಾಭೂತಗಳ ಪಂಚೀಕರಣದಿಂದ ನಿರ್ಮಾಣವಾದ ಭಕ್ತನ ದೇಹದಲ್ಲಿ ಕ್ರಿಯಾಮೂರ್ತಿಯ ದೇಹದಲ್ಲಿ ಗುಹೇಶ್ವರ ರೂಪದಲ್ಲಿರುವನು. ಅ ಉ ಮ ಮಾತ್ರಾಕ್ಷರಗಳಿಂದ ಆ ಪರಶಿವನು ಜಾಗ್ರ ಸ್ವಪ್ನ ಸುಷುಪ್ತಿ ಎಂಬ ಅವಸ್ಥಾತ್ರಯಗಳಲ್ಲಿಯೂ ಸ್ಥೂಲ, ಸೂಕ್ಷ್ಮ ಕಾರಣವೆಂಬ ತನುತ್ರಯಗಳಲ್ಲಿಯೂ ಇಷ್ಟ, ಪ್ರಾಣ, ಭಾವಲಿಂಗರೂಪವಾಗಿಯೂ ಕ್ರಮವಾಗಿ ಗುರು ಲಿಂಗ ಜಂಗಮರೂಪವಾಗಿಯೂ ವಿಶ್ವ ತೈಜಸ ಪ್ರಾಜ್ಞರೆಂಬ ಜೀವರುಗಳಾಗಿಯೂ ಆ ಒಬ್ಬ ಪರಶಿವನೇ ಈ ರೂಪ ಧರಿಸಿ ಈ ರೂಪಗಳ ಮರೆಯಲ್ಲಿ 'ಭಾವದ ಮರೆಯ ಬ್ರಹ್ಮದಂತೆ' ಎಂಬಂತೆ ಅಲಿಪ್ತನಾಗಿ ಸಂಗರಹಿತನಾಗಿ ಈ ಅವಸ್ಥೆಗಳು ಮೂರು, ತನುಗಳು ಮೂರು, ಇವುಗಳ ಗುಣಧರ್ಮಗಳನ್ನು ಹೊದ್ದದೆ ಸಾಕ್ಷೀ ಸ್ವರೂಪನಾಗಿ ತಾನೇತಾನಾಗಿ ಜ್ಯೋತಿರ್ಲಿಂಗವಾಗಿ ವಿರಾಜಿಸುತ್ತಿರುವನು. ಆದ್ದರಿಂದ ಈ ಭಾವದಿಂದ ಮಾಡಿದ ಪೂಜೆಯು ಅಂತಶ್ಶಕ್ತಿಯನ್ನು ವಿಕಾಸಗೊಳಿಸುತ್ತದೆ. ಭಕ್ತಿಪರವಶತೆಯಿಂದ ಭಕ್ತಿದೇಶಿಕನಾದ ಭಕ್ತಿಪಥಕ್ಕೆ ಪ್ರಥಮಾಚಾರ್ಯನಾದ ಮಂತ್ರಮೂರ್ತಿಯಾದ ಬಸವ ಮಂತ್ರಾಕ್ಷರಗಳ ಸ್ಮರಣಪೂರ್ವಕ ಶಿವಭಕ್ತನು ಹೀಗೆ ಪೂಜಿಸಿ ಲಿಂಗಾಂಗೈಕ್ಯದ ಜೀವೇಶ್ವರೈಕ್ಯದ ತತ್ ತ್ವಂ ಅಸಿ ಎಂಬ ಮಹಾಜ್ಞಾನವನ್ನು ಕ್ರಿಯೆಗೆ ಇಳಿಸಿ ನಿತ್ಯ ಆಚರಿಸಿ ಈ ತ್ರಿಕಾಲ ಅಬಾಧಿತ ವಿಚಾರ ಮತ್ತು ಕ್ರಿಯೆ ಇವುಗಳಿಂದ ಪೂರ್ಣವಾದ ಪಾದೋದಕವನ್ನು ಜ್ಞಾನೋದಕವಾದ್ದರಿಂದ ಅದನ್ನು ಸ್ವೀಕರಿಸಿ ಮಾಂಸಮಯ ಶರೀರವನ್ನು ಮಂತ್ರಮಯವಾಗಿ ಮಾಡಿ ಭಕ್ತಿಭಾವನೆಯಿಂದ ಜ್ಞಾನಯುಕ್ತ ಕ್ರಿಯೆಯನ್ನು

ಆಚರಿಸಿ ಲಿಂಗಾಂಗ ಸಾಮರಸ್ಯದ ತಿಳಿವನ್ನು ಹೊಂದುವದೇ ಶಿವ ಭಕ್ತನ ಧ್ಯೇಯವು. ಇದನ್ನು ಚನ್ನಾಗಿ ತಿಳಿಯಲು ಅದ್ಯರ ವಚನ ಗ್ರಂಥಗಳನ್ನು ಅಭ್ಯಸಿಸುವದು ವಿಹಿತವಾದದ್ದು.

ಈರೀತಿಯಾಗಿ ವಿಚಾರ ಮತ್ತು ಅನುಭವದಿಂದ ತಿಳಿಯಬಹುದಾದ ಜ್ಞಾನವನ್ನು ಕ್ರಿಯೆಗೆ ಇಳಿಸಿ ಲಿಂಗಾಯತರು ನಿತ್ಯ ಆನಂದ ಪಡೆಯುವರು. ಆದ್ದರಿಂದಲೇ ಸಿದ್ಧಾಂತಶಿಖಾಮಣಿಕಾರರು ತಮ್ಮ ಗ್ರಂಥದ ಆರಂಭದಲ್ಲಿ ವೀರಶೈವರು ಜೀವೇಶ್ವರೈಕ್ಯರೂಪ ವೇದಾಂತ ವಿದ್ಯೆಯಲ್ಲಿ ಸದಾ ರಮಿಸುವರು ಎಂದು ಬರೆದಿದ್ದು ಯಥಾರ್ಥ ಹಾಗೂ ಎಲ್ಲರ ನಿದರ್ಶನಕ್ಕೆ ಬರುವಂತಹದು ಇದೆ.

---

ರಾಯಿಸದ ಮಂಚಣ್ಣ ಅವನ ಹೆಂಡತಿ ರಾಯಮ್ಮನೂ ಹಡಪದಪ್ಪಣ್ಣ ಅವನ ಹೆಂಡತಿ ಲಿಂಗಮ್ಮನೂ ಇವರೆಲ್ಲರೂ ವಚನಕಾರರಿದ್ದಾರೆ. ಈ ಸ್ತ್ರೀಯರ ವಚನಗಳಲ್ಲಿ ಶಿವಾನುಭವದ ಉಚ್ಚ ತತ್ವಗಳ ನಿರೂಪಣೆಯು ಇರುತ್ತವೆ.

ಶಿವಶರಣರ ಚರಿತ್ರೆಗಳಲ್ಲೆಲ್ಲ ಅವರ ಸತಿಯರ, ತಾಯಿತಂದೆಗಳ, ಅಕ್ಕ ತಂಗಿಯರ, ಚಿಕ್ಕ ಮಕ್ಕಳ, ವರ್ತನೆಗಳ ಉಲ್ಲೇಖಗಳು ಆಗಿಂದಾಗ್ಗೆ ಬರುತ್ತವೆ. ಅವರೆಲ್ಲರೂ ಪರಸ್ಪರರ ಶಿವಾನುಭವದ ನಡೆಗೆ ಅನುಕೂಲರಾಗಿ ವರ್ತಿಸಿದ್ದನ್ನು ನಾವು ಇವುಗಳಲ್ಲಿ ಕಾಣುತ್ತೇವೆ. ಒಂದು ವೇಳೆ ಗಂಡನು ತಪ್ಪು ಮಾರ್ಗವನ್ನು ಹಿಡಿದಿದ್ದರೆ ಅವನ ಸತಿಯು ಅವನನ್ನು ಹಾದಿಗೆ ಹಚ್ಚಿದ್ದಾಳೆ. ಹೀಗೆ ಅವಳು ಯಾವಾಗಲೂ ಅವನಿಗೆ ಅನುಕೂಲಳಾಗಿ ವಿಧೇಯಳಾಗಿ ನಡಿದಿದ್ದಾಳೆ. ಅವನ ಕಷ್ಟಗಳಲ್ಲಿ ತಾನೂ ಭಾಗವಹಿಸಿ ನಡೆದಿದ್ದಾಳೆ. ಹೀಗೆ ಶಿವಶರಣ ಶರಣೆಯರ ವರ್ತನೆಯು ಇದೆ. ಇದು ಕೆಳಗಿನ ಉದಾಹರಣೆಗಳಿಂದ ಸ್ಪಷ್ಟವಾಗುತ್ತದೆ.

ಆದಯ್ಯನು ಸೋಮನಾಥನನ್ನು ಕರೆತರಲು ಸೌರಾಷ್ಟ್ರಕ್ಕೆ ಹೊರಟನು. ಅವನು ಊರಿಗೆ ತಿರುಗಿ ಬರುವ ವರೆಗೂ ಅವನ ಹೆಂಡತಿಯಾದ ಪದ್ಮಾವತಿಯು ಉಪವಾಸವಿದ್ದಳು. ಸಿದ್ಧರಾಮನು ಅಮುಗಿದೇವನನ್ನು ಪಟ್ಟಣದ ಹೊರಗೆ ಹಾಕಿದನು. ಆಗ ಅಮುಗಿದೇವನ ಹೆಂಡತಿಯಾದ ವರದಾನಿಯಮ್ಮನು ಅವನ ನೇಗಿಯ ಉಪಕರಣಗಳನ್ನು ಹೊತ್ತುಕೊಂಡು ಪತಿಯೊಡನೆ ಹೊರಬಿದ್ದಳು. ಕೋವೂರು ಬ್ರಹ್ಮಯ್ಯನು ರಾಜಧಾನಿಯನ್ನು ಬಿಟ್ಟು ಕೆಲಕಾಲ ಏಕಾಂತವಾಸದಲ್ಲಿದ್ದನು. ಆಗ ಅವನ ಮಗನನ್ನು ಕೊಂದುಹಾಕಿದರು. ಆದರೂ ಅವನ ತಾಯಿಯಾದ ಕಳಾವತಿಯು ತನ್ನ ಪತಿಯ ಅಪ್ಪಣೆಯಂತೆ ರಾಜ್ಯಭಾರ ನಡಿಸುತ್ತ ಬಂದಳು. ಚಾರಮರಾಯನಿಗೆ ಮೊದಲು ಶಿವಜ್ಞಾನವನ್ನು ಮಾಡಿಕೊಟ್ಟವಳು ಅವನ ಹೆಂಡತಿಯು. ತಂಗಟೂರು ಮಾರಯ್ಯನು ಹನ್ನೆರಡು ವರ್ಷ ಬಸವೇಶ್ವರನ ಸೇವೆ ಮಾಡುತ್ತ ತನ್ನ ಮನೆಗೆ ಬಾರದಿದ್ದರೂ ಅವನ ಹೆಂಡತಿಯು ಅವನಿಗೆ ಏನೂ ಅಡ್ಡ ಬರಲಿಲ್ಲ. ಅವಳು ಶಿವಾನುಭವದಂತೆ ನಡೆಯುತ್ತ ಪ್ರಾಣಲಿಂಗಿ ಸ್ಥಳವನ್ನು ಹೊಂದಿದಳು. ಅವಳ ಸೇವಕಳೂ ಕೂಡ ಅವಳಂತೆಯೇ ವರ್ತಿಸಿದಳು. ನಿರ್ಲಜ್ಜ ಶಾಂತಯ್ಯನಿಗೆ ದಿಗಂ

ಬರಿಯಾಗುವ ಪ್ರಸಂಗವು ಉಂಟಾಯಿತು. ಆಗ ಅವನ ಹೆಂಡತಿಯೂ ಕೂಡ ದಿಗಂಬರಿಯಾಗಲು ಸಿದ್ಧಳಾದಳು! ಸಗರದ ಬ್ರಹ್ಮಯ್ಯನು ಪ್ರಸಾದವೇ ಮುದ್ದೆಂದು ಭಾವಿಸಿ ನಡೆವಲ್ಲಿ ತಪ್ಪಲು ಅವನ ಹೆಂಡತಿಯಾದ ಶಿವದೇವಿಯು ಅವನನ್ನು ಎಚ್ಚರಿಸಿದಳು. ಗುಪ್ತಮಂಚಣ್ಣನು ಸಮಾಧಿಯನ್ನು ಹೊಂದಲಾಗಿ ಅವನೊಡನೆ ಅವನ ಹೆಂಡತಿಯೂ ಸಮಾಧಿಯನ್ನು ಹೊಂದಿದಳು. ವರದಾನಿ ಗುಡ್ಡಮ್ಮೆಯು ಅದ್ಭುತವಾದ ಕಾರ್ಯಗಳನ್ನು ಮಾಡುತ್ತ ದೇಶವನ್ನು ಸಂಚರಿಸುತ್ತಾ ಇದ್ದಳು. ಆಗ ಅವಳ ಗಂಡನಾದ ಸಂಗಮನಾಥನು ಅವಳಿಗೆ ಸಹಾಯ ಮಾಡುತ್ತ ಅವಳೊಡನೆ ಇದ್ದನು. ಮಾದರ ಚನ್ನಯ್ಯನ ಲಿಂಗಾರ್ಪಿತ ಕಾರ್ಯಗಳಲ್ಲಿ ಅವನ ಹೆಂಡತಿಯು ಅವನಿಗೆ ಯಾವಾಗಲೂ ಅನುಕೂಲಳಾಗಿಯೇ ವರ್ತಿಸಿದ್ದಾಳೆ. ಹಾಗೆಯೇ ಮೋರನ ಮೇಮಯ್ಯನ ಹೆಂಡತಿಯು ಗಂಗಾದೇವಿಯು ವರ್ತಿಸಿದ್ದಾಳೆ. ಅವಳು ತನ್ನ ವಶಕ್ಕೆ ಬಂದ ಬಂಗಾರವನ್ನೆಲ್ಲ ಗಂಡನು ಹೇಳಿದಂತೆ ತಿಪ್ಪೆಯಲ್ಲಿ ಒಗೆದುಬಿಟ್ಟಳು! ಅಗ್ಗವಣಿಯ ಹೊನ್ನಯ್ಯನ(ವ್ರತವು ತಪ್ಪಲು ಅವನ ಹೆಂಡತಿಯು ಓಲೆಯ ಶಾಂತಯ್ಯನ ಮೊರೆ ಹೋಗಬೇಕೆಂದು ಅವನಿಗೆ ಉಪದೇಶ ಮಾಡಿದಳು. ಅಜಗಣ್ಣ ಮುಕ್ತಾಯಕ್ಕಗಳು ಸಹೋದರ ಸಹೋದರಿಯರು. ಆದರೂ ಒಂದೇ ಮನೆತನದವರಂತೆ ಅವರು ಪ್ರೀತಿಯಿಂದ ಇದ್ದರು. ಇಬ್ಬರೂ ವಚನಕಾರರು. ಇವೆಲ್ಲವು ಶಿವಾನುಭವಿಗಳಾದ ಸ್ತ್ರೀಯರ ಉಚ್ಚನಡೆಗಳಾಗಿವೆ. ಶಿವಾನುಭವ ಶಾಸ್ತ್ರವು ಸ್ತ್ರೀಯರಿಗೆ ಉಚ್ಚ ಸ್ಥಾನವನ್ನು ಕೊಟ್ಟಿದ್ದರಿಂದ ಅವರು ಹೀಗೆ ಶಿವಜ್ಞಾನಿಗಳಾಗಿ ತಮ್ಮ ಪತಿಗಳ ಕೂಡ ಉತ್ತಮ ಗೃಹಿಣಿಯರಾಗಿ ಆಚರಿಸಿದ್ದಾರೆ.

## ವೀರಶೈವ ಸ್ತ್ರೀಯಳು ಅವಿವಾಹಿತರಾಗಿ ಉಳಿಯಬಹುದು.

ವೀರಶೈವ ಧರ್ಮದ ಪ್ರಕಾರ ಸ್ತ್ರೀಯರು ಪುರುಷರಷ್ಟೇ ಸ್ವಾತಂತ್ರ್ಯವುಳ್ಳವರಿದ್ದಾರೆ. ಅವರಿಗೆ ಲಿಂಗಧಾರಣವಿರುವದರಿಂದ ಅವರು ತಮ್ಮ ಆಚರಣೆಗಳ ಸಾಮರ್ಥ್ಯದಿಂದಲೇ ಮೋಕ್ಷವನ್ನು ಹೊಂದತಕ್ಕದ್ದು. ಬ್ರಾಹ್ಮಣ ಧರ್ಮದಲ್ಲಿರುವಂತೆ ಅವರು ಮೋಕ್ಷ ಹೊಂದುವಲ್ಲಿ ತಮ್ಮ ಪತಿಗಳ ಕ್ರಿಯೆಗಳ ಮೇಲೆ ಅವಲಂಬಿಸಿರುವ ಕಾರಣವಿಲ್ಲ. ಆದ್ದರಿಂದ ವೀರಶೈವ ಸ್ತ್ರೀಯಳು ಲಗ್ನವಾಗಲೇಬೇಕೆಂಬ ನಿರ್ಬಂಧವಿರುವದಿಲ್ಲ. ಅವಳು ಲಗ್ನ

ಮಾಡಿಕೊಳ್ಳುವದು ಅವಳ ಇಚ್ಛೆಯ ಮೇಲೆ ಅವಲಂಬಿಸಿರುತ್ತದೆ. ಆದ್ದರಿಂದ ಶಿವಶರಣೆಯರಲ್ಲಿ ಅನೇಕರು ಅವಿವಾಹಿತವಾಗಿ ಉಳಿದಿದ್ದಾರೆ.

ಶಿವಶರಣೆಯಾದ ಅಕ್ಕ ಮಹಾದೇವಿಯು ಕಡೆಯುವರೆಗೂ ಅವಿವಾಹಿತಳಾಗಿ ಉಳಿದಳು. ಬೊಂತಾದೇವಿಯು ಕಾಶ್ಮೀರ ದೇಶದ ರಾಜಕುಮಾರಿಯು. ಅನೇಕರು ಅವಳನ್ನು ವರಿಸಲು ಇಚ್ಛಿಸಿದರು. ಆದರೆ ಅವಳು ಯಾರನ್ನೂ ಲಗ್ನವಾಗದೆ ಕಲ್ಯಾಣ ಪಟ್ಟಣದಲ್ಲಿಯೇ ಅವಿವಾಹಿತಳಾಗಿ ಉಳಿದಳು. ಗೊಗ್ಗವ್ವೆಯ ತಾಯಿತಂದೆಗಳು ಅವಳು ಲಗ್ನವಾಗಬೇಕೆಂದು ಬಹಳ ಇಚ್ಛಿಸಿದರು. ಆದರೆ ಅವಳು ಲಗ್ನವಾಗುವದನ್ನು ನಿರಾಕರಿಸಿ ಕಡೆಯುವರೆಗೂ ಹಾಗೆಯೇ ಉಳಿದಳು. ವರದಾನಿಗುಡ್ಡವ್ವೆಯು ಕಲ್ಯಾಣ ಪಟ್ಟಣದಲ್ಲಿರುವ ವರೆಗೆ ಲಗ್ನವಾಗದೆ ಇದ್ದಳು. ಆದರೆ ಅವಳು ತನ್ನ ಗ್ರಾಮಕ್ಕೆ ಹೋದ ಬಳಿಕ ಸಂಗಮನಾಥನೆಂಬುವನನ್ನು ವರಿಸಿದಳು. ಹೀಗೆ ವೀರಶೈವರಲ್ಲಿ ಸ್ತ್ರೀಯಳು ಲಗ್ನವಾಗುವದು ಅಥವಾ ಬಿಡುವದು ಅವಳ ಇಚ್ಛೆಯ ಮೇಲೆ ಇದೆ. ವೀರಶೈವರಲ್ಲಿ ಸ್ತ್ರೀಯರಿಗೆ ಸ್ವತಂತ್ರಾಧಿಕಾರವಿರುವದರಿಂದ ಅವರು ಹೀಗೆ ವರ್ತಿಸಿದಲ್ಲಿ ಯಾವ ದೋಷವೂ ಇರುವದಿಲ್ಲ.

## ಸ್ತ್ರೀಯರು ಕಾಯಕ ಮಾಡತಕ್ಕದ್ದು.

ಶಿವಾನುಭವದ ಪ್ರಕಾರ ಸ್ತ್ರೀಯಳಿಗೆ ಸ್ವಾತಂತ್ರಾಧಿಕಾರವಿರುವದರಿಂದ ಕೆಲವೊಂದು ಉದ್ಯೋಗವನ್ನು ಕೈಕೊಂಡು ಅವಳು ಅದರಿಂದ ಉಪಜೀವನವನ್ನು ಹೊಂದತಕ್ಕದ್ದು. ಅಂದರೆ ಹೇಗೆ ಪುರುಷರಿಗೆ ಕಾಯಕದ ತತ್ವಗಳು ಅನ್ವಯಿಸುತ್ತವೆಯೋ ಹಾಗೆಯೇ ಅವು ಸ್ತ್ರೀಯಳಿಗೂ ಅನ್ವಯಿಸುತ್ತವೆ. ಆದ್ದರಿಂದ ಬಸವೇಶ್ವರನ ಕಾಲದಲ್ಲಿ ಬಹುಜನ ಶಿವಶರಣೆಯರು ಪುರುಷರಂತೆ ಕೆಲವೊಂದು ಉದ್ಯೋಗವನ್ನು ಕೈಕೊಂಡು ಅದರಿಂದ ಅವರು ಉಪಜೀವನವನ್ನು ಹೊಂದುತ್ತ ದಾಸೋಹಿಗಳಾಗಿ ವರ್ತಿಸಿದ್ದಾರೆ.

ಅಮ್ಮವ್ವೆಯು ಬ್ರಾಹ್ಮಣಿಯು. ಅವಳ ಚಿಕ್ಕ ವಯಸ್ಸಿನಲ್ಲಿಯೇ ಅವಳ ತಂದೆ ತಾಯಿ, ಪತಿಗಳೆಲ್ಲರೂ ತೀರಿಕೊಳ್ಳಲು ಅವಳು ಅನಾಥಳಾದಳು. ಆದರೆ ಅವಳು ಆಗ ಭಿಕ್ಷೆ ಬೇಡಲಿಲ್ಲ. ಅವಳು ರಾಟೆಯ

ಕಾಯಕವನ್ನು ಕೈಕೊಂಡಳು. ಪಿಟ್ಟವ್ವೆಯು ಮುದುಕಿಯಾಗಲು ದೋಸೆಗಳನ್ನು ಮಾಡುವ ಕಾಯಕವನ್ನು ಕೈಕೊಂಡಳು. ಕದಿರೆ ರೆಮ್ಮವ್ವೆಯು ನೂಲುವ ಕಾಯಕವನ್ನು ಕೈಕೊಂಡಳು. ಅಣ್ಣಲದೇವಿಯು ಬೆರಣಿಗಳನ್ನು ಆಯುವ ಕಾಯಕವನ್ನು ಕೈಕೊಂಡಿದ್ದಳು. ಏಲೇರಿಯ ಅಮ್ಮವ್ವೆಯು ಒಕ್ಕಲುತನ ಮಾಡುತ್ತಿದ್ದಳು. ಒಂದುವೇಳೆ ಇಂಥ ಕಾಯಕಗಳು ಸ್ತ್ರೀಯರ ದೇಹಕ್ಕೆ ಕಷ್ಟಕರವೆನಿಸಿದಲ್ಲಿ ಅವರು ತಮಗೆ ಸುಲಭವಾದ ಬೇರೊಂದು ಜನೋಪಯೋಗೀ ಕಾಯಕವನ್ನು ಮಾಡತಕ್ಕದ್ದು. ಆದ್ದರಿಂದ ಸತ್ಯಕ್ಕನು ಶಿವಭಕ್ತರ ಮನೆಗಳಿಗೆ ಹೋಗಿ ಅವುಗಳನ್ನು ಉಡಿಗಿ ಸಮ್ಮಾರ್ಜನೆಯನ್ನು ಮಾಡುವಳು. ಇವಳು ವಚನಕಾರಳೂ ಇದ್ದಾಳೆ. ಸೇವಿಕೆ ಗೌರವ್ವೆಯು ಶಿವಭಕ್ತರ ಕೂಟಗಳಲ್ಲಿ ಮತ್ತು ಪ್ರಸ್ತಗಳಲ್ಲಿ ಹೋಗಿ ಅಲ್ಲಿಗೆ ಬಂದ ಸ್ತ್ರೀಪುರುಷರುಗಳಿಗೆ ದಾರಿಯನ್ನು ತೋರಿಸಿ ಅವರವರ ಸ್ಥಾನಗಳಲ್ಲಿ ಕುಳ್ಳಿರಿಸುವಳು. ತೊಂಗಿನ ಮಹಾದೇವಿಯು ಬೆಳಗಿನಲ್ಲೆದ್ದು ಭಕ್ತರನ್ನು ಎಚ್ಚರಿಸಿ ಅವರವರ ನಿತ್ಯದ ಕಾಯಕಕ್ಕೆ ತೊಡಗಿಸುವಳು. ಹೀಗೆ ಬಸವೇಶ್ವರನ ಕಾಲದಲ್ಲಿ ಸ್ತ್ರೀಯರು ಅನೇಕ ವಿಧವಾದ ಕಾಯಕಗಳನ್ನು ಮಾಡಿದ್ದಾರೆ.

ಕೆಲವು ಶಿವಶರಣೆಯರು ವಿದ್ವಾಂಸರಿದ್ದು ಅವರು ತಮ್ಮ ವಿದ್ವತ್ತೆಯ ಉಪಯೋಗವನ್ನು ಇತರರಿಗೆ ಮಾಡಿಕೊಡುವ ಕಾಯಕವನ್ನು ಕೈಕೊಂಡಿದ್ದರು. ಉದಾಹರಣಾರ್ಥವಾಗಿ ವೀರದೇವಮ್ಮನು ಶಿವಾನುಭವ ಶಾಸ್ತ್ರದಲ್ಲಿ ಪಾರಂಗತಳಾಗಿ ಶಿವಶರಣರ ನಾನಾವಿಧ ವಚನಗಳನ್ನು ದಿನಾಲು ಮೂರು ಹೊತ್ತು ಸ್ತ್ರೀಯರಲ್ಲಿ ಓದಿ ಹೇಳುವ ಕಾಯಕವನ್ನು ಮಾಡುತ್ತಾ ಇದ್ದಳು. ಇದರಿಂದ ಅವಳಿಗೆ 'ಉಗ್ಗಡಿಸುವ ಕನ್ನೆ ವೀರಾದೇವಿ' ಎಂಬ ಹೆಸರು ಉಂಟಾಗಿತ್ತು. ಶಿವ ಮಹಾದೇವಿಯು ದಿನಾಲು ಸ್ತ್ರೀಯರಿದ್ದಲ್ಲಿಗೆ ಹೋಗಿ ಶಿವಶರಣರ ಚರಿತ್ರೆಗಳದ್ದ ಪುರಾಣಗಳನ್ನು ಓದಿ ಹೇಳುವಳು. ವಿಮಳಾದೇವಿಯು ತನ್ನ ಶಿವಾನುಭವವನ್ನು ಇತರ ಸ್ತ್ರೀಯರಿಗೆ ಬೋಧಿಸಿ ಅವರಿಗೆ ಸುಜ್ಞಾನ ದೀಕ್ಷೆಯನ್ನು ಕೊಡುವಳು. ಹೀಗೆ ಬಸವೇಶ್ವರನ ಕಾಲದಲ್ಲಿ ಸ್ತ್ರೀಯರು ಅನೇಕ ತರದ ಕಾಯಕಗಳನ್ನು ಕೈಕೊಂಡು ತಮ್ಮ ಮತ್ತು ಸಮಾಜದ ಉದ್ಧಾರವನ್ನು ಮಾಡಿದ್ದಾರೆ.

ಬಹುಜನ ಸ್ತ್ರೀಯರು ಇಂಥ ಕಾಯಕಗಳನ್ನು ಕೈಕೊಳ್ಳದಿದ್ದರೂ ಮನೆಯಲ್ಲಿಯೇ ಇದ್ದುಕೊಂಡು ಮನೆಗೆಲಸ ಮಾತ್ರ ಶಿವಾನುಭವದಲ್ಲಿ ಇರುವವರಾಗಿದ್ದರು. ಇವರು ಮಾಡುತ್ತಿದ್ದ ಮನೆಗೆಲಸಗಳೂ ಕೂಡ ಕಾಯಕಗಳಲ್ಲಿ ಬರುತ್ತವೆ.

## ಮನೆತನದ ಆಸ್ತಿಯಲ್ಲಿ ಸ್ತ್ರೀಯರಿಗೆ ಭಾಗ.

ಸ್ತ್ರೀಯರು ಕಾಯಕಗಳನ್ನು ಮಾಡಿಕೊಂಡು ತನಗೆ ದೊರೆತದ್ದನ್ನು ದಾಸೋಹ ಕಾರ್ಯಗಳಿಗೆ ಉಪಯೋಗಿಸುವವರಾದ್ದರಂದ ಅವರು ದುಡಿದದ್ದು ಅವರಿಗೆಯೇ ಸಲ್ಲತಕ್ಕದ್ದು. ಇದೇ ಧರ್ಮಾಚರಣೆಗೆ ಸಮ್ಮತವಾದುದು. ಅವರು ಎರಡನೆಯವರು ದುಡಿದದ್ದನ್ನು ತಮ್ಮ ದಾಸೋಹಕ್ಕೆ ಉಪಯೋಗಿಸುವದು ಶಿವಾನುಭವಕ್ಕೆ ವಿರೋಧವಾದುದು. ಆದ್ದರಿಂದ ಸ್ತ್ರೀಯರು ಮನೆತನದಲ್ಲಿದ್ದರೂ ಕೂಡ ಅವರು ಶ್ರಮಪಟ್ಟು ಗಳಿಸಬೇಕು. ಒಂದು ವೇಳೆ ಮನೆತನದಲ್ಲಿದ್ದವರು ಸಾಮೂಹಿಕವಾಗಿ ದುಡಿಯುತ್ತಿದ್ದರೆ ಅದರಲ್ಲಿ ಅವಳು ಅವರಿಗೆ ಸಹಾಯವಾಗಬೇಕು. ಹೀಗೆ ಸಹಾಯವಾಗಿ ಎಲ್ಲರೂ ದುಡಿದದ್ದರಲ್ಲಿ ಅವಳು ತನ್ನ ಭಾಗವನ್ನು ತೆಗೆದುಕೊಂಡು ಅದರ ಮೂಲಕ ದಾಸೋಹ ಕಾರ್ಯಗಳನ್ನು ನಡಿಸತಕ್ಕದ್ದು. ವೀರಶೈವರಾದ ಸ್ತ್ರೀ ಪುರುಷರು ಸಮಾನಾಧಿಕಾರವುಳ್ಳವರಾದ್ದರಿಂದ ಅವರಿಗೆ ಸಲ್ಲತಕ್ಕ ಈ ಭಾಗವು ಪುರುಷರಿಗಿರುವಷ್ಟೇ ಇರುತ್ತಿದೆ. ಹೀಗೆ ಹಿಂದಿನ ಕಾಲದಲ್ಲಿ ಶಿವಶರಣರು ಆಚರಿಸಿದ್ದಾರೆ. ಆದರೆ ಈ ತತ್ವವು ಬ್ರಾಹ್ಮಣ ಧರ್ಮಶಾಸ್ತ್ರಗಳಲ್ಲಿ ಇರುವ ಸಂಭವವಿಲ್ಲ. ಯಾಕಂದರೆ ಈ ಶಾಸ್ತ್ರಗಳ ಪ್ರಕಾರ ಸ್ತ್ರೀಯರಿಗೆ ಸ್ವತಂತ್ರಾಧಿಕಾರವಿರುವದಿಲ್ಲ. ಆದ್ದರಿಂದ ಅವರಿಗೆ ಮನೆತನದ ಆಸ್ತಿಯಲ್ಲಿ ಭಾಗವು ಸಿಗದೆ 'ಪೋಟಿಗಿ' ಮಾತ್ರ ದೊರೆಯುತ್ತದೆ. ಆದರೆ ಶಿವಾನುಭವದ ಪ್ರಕಾರ ಸ್ತ್ರೀಯರು ಸ್ವತಂತ್ರಾಧಿಕಾರವುಳ್ಳವರಾದ್ದರಿಂದ ಅವರಿಗೆ ಮನೆತನದ ಆಸ್ತಿಯಲ್ಲಿ ಸ್ವತಂತ್ರ ಹಿಸೆ ಅಥವಾ ಭಾಗವು ದೊರೆಯುವದು. ಇದೇ ಶಿವಾನುಭವದ ಸರಿಯಾದ ಆಚರಣೆಯು. ಇದು ಶಿವಶರಣಿಯಾದ ಶಿವಪ್ರಿಯನಾಚಿಯ ಚರಿತ್ರೆಯಿಂದ ತಿಳಿದುಬರುತ್ತದೆ.

ಶಿವಪ್ರಿಯನಾಚಿಯು ಚಂದವೂರು ಎಂಬ ಗ್ರಾಮದವಳು. ಅವಳಿಗೆ ಅಣ್ಣನಾಚಯ್ಯ ಮತ್ತು ಆರುಣಾದ್ರಿ ಎಂಬ ಅಣ್ಣಂದಿರಿದ್ದರು. ಅವರ

ತಂದೆಯು ತೀರಿಕೊಂಡ ಬಳಿಕ ಈ ಮೂವರೂ ಮನೆತನದ ಆಸ್ತಿಯಲ್ಲಿ ಸಮವಾಗಿ ಮೂರು ಭಾಗಗಳನ್ನು ಮಾಡಿಕೊಂಡರು. ಹೀಗಿರುವಲ್ಲಿ ಅಣ್ಣನಾಚಯ್ಯನು ವ್ಯಾಪಾರಕ್ಕೋಸ್ಕರ ಪರದೇಶಕ್ಕೆ ಹೋಗಿ ಅಲ್ಲಿಯೇ ಮೃತನಾದನು. ಆದ್ದರಿಂದ ಅವನು ಬಹಳ ದಿವಸ ತನ್ನ ಗ್ರಾಮಕ್ಕೆ ಬಾರದಿರಲು ಅರುಣಾದ್ರಿಯು ತನ್ನ ತಂಗಿಗೆ ಬಂದ ಪಾಲನ್ನು ಅವಳ ಕಡೆಯಿಂದ ಬಲಾತ್ಕಾರದಿಂದ ಕಸೆದುಕೊಂಡು ಬಿಟ್ಟನು. ಆದರೆ ಶಿವ ಪ್ರಿಯನಾಚಿಯು ಪರಮಾತ್ಮನ ಕೇವಲ ಭಕ್ತಳು. ಅವಳು ತನ್ನ ಕಿರಿಯ ಣ್ಣನು ಮಾಡಿದ ಅನ್ಯಾಯಕ್ಕೋಸ್ಕರ ಪರಮಾತ್ಮನಲ್ಲಿ ಮೊರೆ ಇಡಲು, ಪರಮಾತ್ಮನು ಅಣ್ಣನಾಚಯ್ಯನ ರೂಪನ್ನು ಧರಿಸಿಕೊಂಡು ಗ್ರಾಮಕ್ಕೆ ಬಂದು ಶಿವಪ್ರಿಯನಾಚಿಯ ಪಾಲನ್ನು ಅವಳಿಗೆ ಅರುಣಾದ್ರಿಯ ಕಡೆಯಿಂದ ತಿರುಗಿ ಕೊಡಿಸಿದನು. ಹೀಗೆ ಈ ಚರಿತ್ರೆಯು ಇದ್ದು ಇದರಿಂದ ವೀರಶೈವ ಸ್ತ್ರೀಯರಿಗೆ ಮನೆತನದ ಆಸ್ತಿಯಲ್ಲಿ ಸ್ವತಂತ್ರ ಪಾಲು ಇರುತ್ತದೆಂಬುದು ತಿಳಿದುಬರುತ್ತಿದೆ.

## ಶಿವಶರಣರಾದ ಬಾಲ ಬಾಲಿಕೆಯರು.

ಬ್ರಾಹ್ಮಣ ಧರ್ಮಶಾಸ್ತ್ರದ ಪ್ರಕಾರ ಬಾಲಕರು ಯಜ್ಞೋಪವೀತ ವನ್ನು ಧಾರಣ ಮಾಡುವವರೆಗೆ ಅವರಿಗೆ ವೇದಾಧಿಕಾರವಿರುವದಿಲ್ಲ. ಆದ್ದರಿಂದ ಧರ್ಮಶಾಸ್ತ್ರವನ್ನು ಅಭ್ಯಸಿಸಲು ಅವರು ಅನರ್ಹರಿರುತ್ತಾರೆ. ಆದರೆ ಶಿವಾನುಭವದ ಪ್ರಕಾರ ಬಾಲಬಾಲಿಕೆಯರು ಹುಟ್ಟಿದಾರಭ್ಯ ಲಿಂಗಧಾರಣೆಗೆ ಯೋಗ್ಯರು. ಆದ್ದರಿಂದ ಅವರ ಶಿವಾನುಭವದ ವರ್ತ ನೆಯು ಅಂದಿನಿಂದಲೇ ಪ್ರಾರಂಭವಾಗುತ್ತದೆ. ಅಂದಿನಿಂದಲೇ ಅವರ ಮಾನಸಿಕ ಮತ್ತು ಬೌದ್ಧಿಕ ಬೆಳವಣಿಗೆಯು ಆಗಹತ್ತುತ್ತಿದೆ. ಇದು ಕ್ರಮಕ್ರ ಮೇಣ ಹೆಚ್ಚುತ್ತಲೇ ಹೋಗುತ್ತಿದೆ. ಶಿವಾನುಭವವು ಈ ತತ್ವವನ್ನು ಸ್ವೀಕ ರಿಸಿದ್ದರಿಂದ ವೀರಶೈವರಲ್ಲಿ ಅನೇ ಬಾಲಬಾಲಿಕೆಯರು ಶಿವಶರಣ ಶರ ಣೆಯರಾಗಿದ್ದಾರೆ. ಅವರ ಶಿವಾನುಭವದ ಆಚರಣೆಯ ಮೂಲಕ ಪರಮಾತ್ಮನು ಅವರಿಗೆ ಒಲಿದಿದ್ದಾನೆ. ಶಿವಶರಣರ ಚರಿತ್ರೆಗಳು ಭಾಗ ೧ ಮತ್ತು ೨ ಈ ಗ್ರಂಥಗಳಲ್ಲಿ ಬಾಲಕರಾದ ವೈದುನರಾಮಯ್ಯ, ಶಂಕಿ ತೊಂಡಿ, ಗೊಲ್ಲಾಳ, ಬಾಲಲಿಂಗಣ್ಣ ಮತ್ತು ಬಾಲಿಕೆಯರಾದಕೋಲಂಬೆ, ಕೋಳೂರು ಕೊಡಗೂಸು, ಹಾವಿನಹಾಳ ಕಲ್ಲಯ್ಯನ ಮಗಳಾದ ಕಲ್ಲವ್ವೆ,

ಇವರ ಚರಿತ್ರೆಗಳು ಬಂದಿವೆ. ಕೋಲಂಬೆಯು ದೇವರಿಗಾಗಿ ಮಾಡಿದ ಹುಲ್ಲು ಗುಡಿಸಲು ಅವಳ ಭಕ್ತಿಗೋಸ್ಕರ ಅದು ಕಲ್ಲುಗುಡಿಯಾಯಿತು. ಶಂಕಿತೊಂಡಿಯು (ಶಿವಶರಣರ ಚರಿತ್ರೆಗಳು ಭಾಗ ೧–ಪುಟ ೧೩೬ ನೋಡಿರಿ.) ತಾನು ಪರಮಾತ್ಮನ ಗುಡಿಗೋಸ್ಕರ ಕೂಡಿಸಿಟ್ಟ ಕಲ್ಲುಗಳಲ್ಲಿ ಒಂದು ಕಲ್ಲು ಕಡಿಮೆಯಾಗಲು ಅವನು ತನ್ನ ಶಿರವನ್ನು ಅರ್ಪಿಸಲು ಸಿದ್ಧನಾದನು. ವೈದುನ ರಾಮಯ್ಯನು ಪರಮಾತ್ಮನು ತನ್ನ ಭಾವ ನೆಂದು ತಿಳಿದು ಇವನೆಲ್ಲಿದ್ದಾನೆಂದು ಶ್ರೀಶೈಲದಲ್ಲಿ ಹುಡುಕುತ್ತಿರಲು ಅವನು ಅವನಿಗೆ ಪ್ರತ್ಯಕ್ಷನಾಗಿ ಅವನ ಮನೆಗೆಯೇ ಬಂದನು. ತರಳ ನಾದ ಗೊಲ್ಲಾಳನಿಗೆ ಕುರಿಯು ಹಿಕ್ಕಿಯೇ ಲಿಂಗವಾಯಿತು. ಕೊಡ ಗೂಸು ಅರ್ಪಿಸುತ್ತಿದ್ದ ಹಾಲನ್ನು ಪರಮಾತ್ಮನು ಪ್ರತ್ಯಕ್ಷ ಸ್ವೀಕರಿಸುವವ ನಾದನು. ಚಿಕ್ಕಮಾದಣ್ಣ, ಮಹಾದೇವಿ ಮತ್ತು ಬಾಲಲಿಂಗಣ್ಣ ಇವ ರೆಲ್ಲರೂ ಶಿವಾನುಭವಿಗಳು. ಆದ್ದರಿಂದ ಬಾಲಲಿಂಗಣ್ಣನ ಇಚ್ಛೆಯಂತೆ ಚಿಕ್ಕಮಾದಣ್ಣನ ಪ್ರಾಣವು ಸುಂದಿರುಗಿ ಬಂದಿತು. ಈ ಪ್ರಕಾರ ವೀರ ಶೈವರಲ್ಲಿ ಶಿವಶರಣರ ಸ್ಥಾನವನ್ನು ಹೊಂದಿದ ಅನೇಕ ಬಾಲಬಾಲಿ ಕೆಯರಾಗಿಹೋಗಿದ್ದಾರೆ.

ಶಿವಾನುಭವದ ಮೂಲಕ ಕುಟುಂಬಗಳು ಉಚ್ಚ ಸಂಸ್ಕೃತಿಯನ್ನು ಹೊಂದುತ್ತವೆ. ಇದರಿಂದ ಅವುಗಳಲ್ಲಿರುವ ಸ್ತ್ರೀಪುರುಷ ಬಾಲಬಾಲಿಕೆ ಯರೆಲ್ಲರೂ ಹೀಗೆ ಉಚ್ಚ ಸ್ಥಿತಿಯನ್ನು ಹೊಂದಿದ್ದಾರೆ.

## ವೀರಶೈವ ಧರ್ಮದ ಪ್ರಸಾರ.

ಇನ್ನುಮುಂದೆ ನಾವು ವೀರಶೈವ ಧರ್ಮವು ಪ್ರಸಾರ ಹೊಂದಲು ಕಾರಣಗಳಾವವೆಂಬುದನ್ನು ಕುರಿತು ಸಂಕ್ಷಿಪ್ತವಾಗಿ ವಿವೇಚಿಸುತ್ತೇವೆ. ಇದರಲ್ಲಿ ನಾವು ಈ ವರೆಗೆ ಪ್ರಸಿದ್ಧಮಾಡಿರುವ ಶಿವಶರಣರ ಚರಿತ್ರೆಗ ಳನ್ನೇ ಆಧಾರವಾಗಿಟ್ಟುಕೊಂಡು ನಿರೂಪಿಸುತ್ತೇವೆ. ಆದರೆ ಆರಂಭ ದಲ್ಲಿ ನಾವು ವೀರಶೈವ ಧರ್ಮದ ಕೆಲವು ಸಾಮಾನ್ಯ ಲಕ್ಷಣಗಳನ್ನು ವಿವರಿಸುವದು ಅವಶ್ಯವಿರುತ್ತದೆ.

## ವೀರಶೈವ ಧರ್ಮವು
## ಜನಸಮುದಾಯದ ಸರ್ವಸಾಮಾನ್ಯ ಧರ್ಮವು.

ವೀರಶೈವ ಸಮಾಜವು ಕರ್ನಾಟಕದ ಮಧ್ಯ ಮತ್ತು ಉತ್ತರ ಭಾಗಗಳಲ್ಲಿರುವ ಅನೇಕ ಸಮಾಜಗಳಲ್ಲೆಲ್ಲ ಬಹು ನಿಬಿಡವಾಗಿ ಹಬ್ಬಿ

ರುವದು ಕಂಡುಬರುತ್ತದೆ. ಇಲ್ಲಿ ವೀರಶೈವರ ಜನ ಸಂಖ್ಯೆಯು ಸುಮಾರು ೨೫ ರಿಂದ ೩೦ ಲಕ್ಷದ ವರೆಗೆ ಇರುತ್ತದೆ. ಹೀಗೆ ಒಂದೇ ಕಡೆಗೆ ದಟ್ಟವಾದ ಜನವಸತಿಯುಳ್ಳ ಧರ್ಮವು ಹಿಂದುಸ್ತಾನದಲ್ಲಿ ಸೀಖ ಧರ್ಮದ ಹೊರತಾಗಿ ಬೇರೆ ಯಾವ ಧರ್ಮದಲ್ಲಿಯೂ ಇರುವದು ಕಂಡುಬರುವದಿಲ್ಲ. ಮುಸಲ್ಮಾನ, ಬ್ರಾಹ್ಮಣ ಧರ್ಮೀಯರ ಸಂಖ್ಯೆಯು ವೀರಶೈವರ ಸಂಖ್ಯೆಗಿಂತಲೂ ಅನೇಕ ಮಡಿ ಹೆಚ್ಚಿಗೆ ಇರುತ್ತಿದೆ. ಆದರೆ ಅವರ ವಸತಿಯು ಬೇರೆ ಬೇರೆ ಪ್ರಾಂತಗಳಲ್ಲಿ ಹರಿದು ಹಂಚಿಹೋಗಿರುತ್ತದೆ. ಹೀಗೆ ವೀರಶೈವ ಧರ್ಮವು ಒಂದೇ ಕಡೆಗೆ ಅನೇಕ ಸಮಾಜಗಳಲ್ಲಿ ದಟ್ಟವಾಗಿ ಹಬ್ಬಿದ್ದರ ಮೇಲಿಂದ ಅದು ಹಿಂದಿನ ಕಾಲದಲ್ಲಿ ಜನಸಮುದಾಯಕ್ಕೆಲ್ಲ ಸರ್ವಸಾಮಾನ್ಯಧರ್ಮವಾಗಿದ್ದಿತೆಂಬುದನ್ನು ತೋರಿಸುತ್ತದೆ. ಹೀಗೆ ಅದು ಪ್ರಸಾರಹೊಂದುವದಕ್ಕೆ ಆವ ಸಂಗತಿಗಳು ಕಾರಣವಾದವೆಂಬುದನ್ನು ನಾವು ಇಲ್ಲಿ ನಿರ್ದೇಶಿಸುತ್ತೇವೆ.

## ಶಿವಶರಣರು ರಾಜ್ಯಾಧಿಕಾರಿಗಳಿಂದ ಸಹಾಯ ಹೊಂದಿಲ್ಲ.

ಅನೇಕರು ಶಿವಶರಣರು ಹಿಂದಿನ ಕಾಲದಲ್ಲಿ ರಾಜಕೀಯ ಅಧಿಕಾರಿಗಳಿಂದ ಸಹಾಯವನ್ನು ಹೊಂದಿ ಹೀಗೆ ತಮ್ಮ ಧರ್ಮವನ್ನು ಬೆಳಿಸಿದರೆಂದು ತಿಳಿದಿದ್ದಾರೆ. ಆದರೆ ಇದು ತೀರ ತಪ್ಪು ತಿಳುವಳಿಕೆ ಎಂಬುದು ಶಿವಶರಣರ ಚರಿತ್ರೆಗಳಿಂದ ತಿಳಿದು ಬರುತ್ತಿದೆ. ಶಿವಶರಣರು ರಾಜ್ಯಾಧಿಕಾರಿಗಳಿಂದ ಯಾವ ಸಹಾಯವನ್ನೂ ಹೊಂದಿರುವದಿಲ್ಲ. ಇಷ್ಟೇ ಅಲ್ಲ, ಅವರು ಇಂಥ ಅಧಿಕಾರಿಗಳಿಂದ ಆಗಿಂವಾಗ್ಗೆ ವಿರೋಧಿಸಲ್ಪಟ್ಟಿದ್ದಾರೆ.

ಶಿವಶರಣರು ಕರ್ನಾಟಕದಲ್ಲಿ ಉದಯವಾದ ಕಾಲದಲ್ಲಿ ಜೈನ, ಬ್ರಾಹ್ಮಣ, ಪಾಶುಪತ, ಕಾಳಾಮುಖ ಮೊದಲಾದ ಧರ್ಮಗಳು ಉಚ್ಚಸ್ಥಿತಿಯನ್ನು ಹೊಂದಿದ್ದವು. ಆ ಧರ್ಮಗಳಲ್ಲಿ ಈ ಕಾಲದಲ್ಲಿ ಅನೇಕ ಧರ್ಮಸ್ಥಾಪಕರೂ, ವಾಙ್ಮಯವಿಶಾರದರೂ, ಪಂಡಿತರೂ, ಕಲಾವಿದರೂ ಆಗಿಹೋಗಿದ್ದಾರೆ. ಇವರನ್ನು ಆಗಿನ ಮಹತ್ವದ ರಾಜಮನೆತನಗಳಾದ ಚಾಲುಕ್ಯ, ಹೊಯಿಸಳರೂ ಅವರ ಮಾಂಡಲಿಕರಾದ ಶಿಲಾಹಾರ, ಕಲಚೂರ್ಯ, ನೋಣಂಬ ಪಲ್ಲವ, ಪಾಂಡ್ಯವಂಶದವರೂ ಪುರಸ್ಕರಿಸುವವರಾಗಿದ್ದರು. ಇಂಥ ರಾಜರ ಸಹಾಯವು ಶಿವಶರಣರಿಗೆ ದೊರೆತಿದ್ದುದು ಶಿವಶರಣರ ಯಾವ ಚರಿತ್ರೆಯಲ್ಲಿಯೂ ಕಂಡುಬರು

**ಕೆಳಗೆ ಕಾಣಿಸಿದ ಗ್ರಂಥಗಳು ಹಿತಚಿಂತಕ ಪ್ರಿಂಟಿಂಗ ಪ್ರೆಸ್ ವಿಜಾಪುರ, ಇಲ್ಲಿ ದೊರೆಯುತ್ತವೆ.**

---

| | | ಬೆಲೆ. |
|---|---|---|
| ೧. | ಹೊಸ ಪದ್ಧತಿಯ ಬಸವೇಶ್ವರ ವಚನಗಳು. | ೨—೦—೦ |
| ೨. | ಮಹಾದೇವಿಯಕ್ಕನ ವಚನಗಳು. | ೦—೧೨—೦ |
| ೩. | ಘನಲಿಂಗನ ವಚನಗಳು. | ೦—೧೨—೦ |
| ೪. | ಭಕ್ತಿಯ ವಚನಗಳು. | ೦—೧೦—೦ |
| | ಶಿವಶರಣರ ಚರಿತ್ರೆ. ಭಾಗ ೧ | ೧—೧೨—೦ |
| ೬. | ಆದಯ್ಯನ ವಚನಗಳು. | ೦—೮—೦ |
| ೭. | ಮಡಿವಾಳ ಮಾಚಿದೇವನ ವಚನಗಳು. | ೦—೧೨—೦ |

ಗ್ರಂಥಗಳ ಲಿಸ್ಟಿಗೆ ಬರೆಯಿರಿ.—

---

**ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.**
**ವಾರ್ಷಿಕ ಚಂದಾ ಅಂಚೆವೆಚ್ಚಸಹಿತ ರೂ. ೪—೧೨—೦ ವ್ಹಿ. ಪಿ. ಖರ್ಚು ೮—೪—೦**



ವರ್ಷ ೨೧ ] ಜನವರಿ ೧೯೪೭ [ ಸಂಚಿಕೆ ೪

# ವಿಷಯಾನುಕ್ರಮಣಿಕೆ.


೧. ವಚನ ಸಾಹಿತ್ಯ—ಶ್ರೀಯುತ ಮ. ಮಲ್ಲಪ್ಪ ಕನ್ನಡ ಶಾಲಾ ಹುಲಗೂರು. ೫೭

೨. ಶಿವಯೋಗೀಶ್ವರರ ಶಿವಪೂಜೆ – ಶ್ರೀ. ಮಧುರ ಚೆನ್ನ–ಹಲಸಂಗಿ ೬೫

೩. ಸಂಗೀತ ಶಾಸ್ತ್ರ—ಶ್ರೀ. ಜಿ. ಎಸ್. ಜುಕ್ತಿಮಠ ೭೨

೪ ದೇಗುಲ ಮರ (ಕವಿತೆ)

೫. ಮಾನವ ಧರ್ಮ—ಶ್ರೀ. ವಿ. ರು. ಕೊಪ್ಪಳ–ಧಾರವಾಡ ೭೭

೬. ಅಷ್ಟಾವರಣ ಶ್ರೀ. ಸದಾಶಿವಶಿವಾಚಾರ್ಯ ಸ್ವಾಮಿಗಳು ಸಖರಾಯಪಟ್ಟಣ. ೮೬

೭. ಶಿವಶರಣರ ಚರಿತ್ರೆಗಳು—ಭಾಗ–೨ ಪ್ರಸ್ತಾವನೆ. ೬೫–೭೨
—ರಾ॥ ಬ॥ ಫ. ಗು. ಹಳಕಟ್ಟಿ ವಿಜಾಪುರ.

# ಶಿವಾನುಭವ ಸಹಾಯ ಧನ.

ಮೈಸೂರ ಪ್ರಾಂತದ ಚನ್ನಗಿರಿ ತಾಲೂಕ ಉಬ್ರಾಣಿ ಹೋಬಳಿ ಕಗಿ ಗ್ರಾಮದಲ್ಲಿ ಶ್ರೀ. ಈರಣ್ಣೋರ ಗೌ|| ಬಸಪ್ಪನವರ ಗ್ರಹದಲ್ಲಿ ತಾ. ೧೭-೯-೪೬ ನೇ ದಿವಸ ಶ್ರೀ ಮನ್ನಿರಂಜನ ಸಂಗಮನಾಥ ಮಹಾಸ್ವಾಮಿಗಳವರ ಅಪ್ಪಣೆ ಪ್ರಕಾರ ಶಿವಾನುಭವ ಮಂಟಪದ ಸಭೆ ಸೇರಿದ್ದಿತು. ಹರಪನಹಳ್ಳಿ ತಾಲೂಕ ಪುಣಬಗಟ್ಟಿ ಮಠದ ಶ್ರೀ. ಬಸಪ್ಪ ಸ್ವಾಮಿಗಳವರು ಅಧ್ಯಕ್ಷರಾಗಿದ್ದರು. ಈ ಕಾಲಕ್ಕೆ ಕೆಳಗಿನ ಮಹಾಜನಗಳು ಶಿವಾನುಭವ ಸಹಾಯಕ್ಕಾಗಿ ಹಣವನ್ನು ಕೊಟ್ಟಿರುತ್ತಾರೆ.

| | | ರೂ. ಆ. ಪೈ. |
|---|---|---|
| ಶ್ರೀಯುತ | ಈರಣ್ಣೋರ ಗೌ|| ಬಸಪ್ಪನವರು. | ೨-೦-೦ |
| | ಕಾಕನೂರ ಮಲ್ಲಯ್ಯನವರು. | ೨-೦-೦ |
| ,, | ಒಡ್ಡನಪಾಳ ವೀರಪ್ಪನವರು. | ೧-೦-೦ |
| ,, | ಶಿವನೇರ ಸಣ್ಣಲಿಂಗಪ್ಪನವರು. | ೧-೦-೦ |
| | ಶಿದ್ದಳ್ಳಾರ ಶಿದ್ರಾಮಪ್ಪನವರು. | ೧-೦-೦ |
| | ಗಂಗೋನಹಳ್ಳಿ ಚನ್ನಬಸಪ್ಪನವರು | ೧-೦-೦ |
| | ಗಂಗೋನಹಳ್ಳಿ ಮಲ್ಲಪ್ಪನವರು. | ೧-೦-೦ |
| | ಅಂತು. | ೯-೦-೦ |

ಮೇಲಿನ ಕಾಣಿಕೆಯನ್ನು ಪ್ರೇಮದಿಂದ ಸ್ವೀಕರಿಸಿದ್ದು ಈ ಬಗ್ಗೆ ಅವರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

**ಸಂಪಾದಕರು ಶಿವಾನುಭವ**

**ವಿಜಾಪೂರ.**

ಶಿವಾನುಭವ

| ವರ್ಷ ೨೧ | ಜಾನೇವಾರಿ ೧೯೪೭ | ಸಂಚಿಕೆ ೪ |
|---|---|---|

# ವಚನಸಾಹಿತ್ಯ.

(ಲೇಖಕಃ-ಶ್ರೀಯುತ ಮ. ಮಲ್ಲಪ್ಪ ಕನ್ನಡ ಜಾಣ "ಜನತಾ ಜ್ಞಾನಪ್ರಚಾರಕ" ಹಲಗೂರು, ಜಿ॥ ಮೈಸೂರು.)

ಪ್ರತಿಯೊಂದು ನಾಡಿನಲ್ಲಿಯೂ, ಪ್ರತಿಯೊಂದು ಕಾಲದಲ್ಲಿಯೂ ಒಂದಲ್ಲ ಒಂದು ತೆರದಲ್ಲಿ ಕ್ರಾಂತಿಯೂ ಉತ್ಪತ್ತಿಯಾಗುವುದು ಸಹಜವು. ಕನ್ನಡನಾಡಿನಲ್ಲಿ ಹನ್ನೆರಡನೆಯ ಶತಮಾನದ ವೇಳೆಯಲ್ಲಿ ಕನ್ನಡ ಸಾಹಿತ್ಯದ ಸ್ವಾತಂತ್ರ್ಯಯುಗದಲ್ಲಿ ಧರ್ಮಕ್ರಾಂತಿಯು ಜನಿಸಿತು. ಆ ಧರ್ಮಕ್ರಾಂತಿಯು ಸಾಹಿತ್ಯಸಾಧನದಿಂದ ಹೊರಹೊಮ್ಮಿತು. ಆಗ ಉತ್ಪತ್ತಿಯಾದ ಸಾಹಿತ್ಯದ ವೈಶಿಷ್ಟತೆಯು ಬಹು ಪ್ರಧಾನವಾಗಿದೆ. ಆಗಿನ ಕಾಲದ ಹಿಂದೆ ಕನ್ನಡ ಸಾಹಿತ್ಯವು ಪ್ರೌಢಶೈಲಿಯಿಂದ, ಸಂಸ್ಕೃತದ ಎರಕದಿಂದ ಕೂಡಿ ಬೆಳಗುತ್ತಿತ್ತು. ಅದು ಪಂಡಿತರಿಗೆ ಮಾತ್ರ ಮನೋರಂಜನೆಯಾಗಿತ್ತು. ಇನ್ನು ಪಾಮರರ ಗತಿಯನ್ನು ಕೇಳುವಂತಿಲ್ಲ. ಇಂತಹ ಸಮಯದಲ್ಲಿ ಎಲ್ಲರಿಗೂ ರುಚಿಸುವಂತಹ ಸಾಹಿತ್ಯದ ಉದ್ಭವವು ಉಂಟಾಯಿತು. ಈ ಉದ್ಭವಕ್ಕೆ ಮೂಲ ಕರ್ತರು ಶಿವಶರಣರು. ದೇಶೀಯ ಛಂದೋರೂಪಗಳು— ವಚನಶೈಲಿ, ರಗಳೆ, ಷಟ್ಪದಿ,— ಬಸವಣ್ಣ, ಅಕ್ಕಮಹದೇವಿ, ಹರಿಹರ, ರಾಘವಾಂಕ ಇತ್ಯಾದಿ ವೀರಶೈವ ಮಹಾವ್ಯಕ್ತಿಗಳಿಂದ ಹೊರಬಂದು ಸಾಹಿತ್ಯ ಕ್ರಾಂತಿಯ ಜನ್ಮವು ಮೊದಲಾಯಿತು. ವಚನಗಳು ಶುದ್ಧ ದೇಶೀಯ ಸಂಸ್ಕೃತಿಯಿಂದ ಮಿಂಚಿ ಮಿಣುಕಾಡಲು ತೊಡಗಿದವು. ಇವು ಶಿವಶರಣರ ಹೃದಯ

ವಿದ್ರಾವಕವಾದ ಗೀತಗಳು. ಧಾರ್ಮಿಕ ನೈತಿಕೋಪದೇಶವು. ಇವುಗಳ ಪ್ರಧಾನಗುರಿಯು ಗಹನವಾದ ತತ್ವ ವಿಚಾರಗಳನ್ನು ಸುಲಭವಾದ ಶೈಲಿಯಲ್ಲಿ ಸುಲಭವಾದ ಭಾಷೆಯಲ್ಲಿ ಜನಸಾಮಾನ್ಯಕ್ಕೆ ತಿಳಿಸಿದೆ.

ಕನ್ನಡದಲ್ಲಿ ನೂತನವಾಹಿನಿಯ ಚಲನವಲನದ ಆರಂಭ. ಅಂದು ಸರ್ವಸಾಮಾನ್ಯರ ಗಮನವು ಇತ್ತ ಸೆಳೆಯಿತು. ಹಿಂದಿನವರ ಪ್ರೌಢತೆಯನ್ನೂ, ಮುಂದಿನವರ ಸಂಪ್ರದಾಯತೆಯನ್ನೂ ಕಿತ್ತೊಗೆದು, ತಮಗೆ ತಿಳಿದುದನ್ನು, ಹೊಳೆದುದನ್ನು ನಿರ್ಭೀತಿಯಿಂದ ಸ್ವತಂತ್ರವಾಗಿ ಸರಳತೆಯಿಂದಲೂ, ಸಹಜತೆಯಿಂದಲೂ ಹೇಳಿಬಿಡುತ್ತಿದ್ದರು. ಶರಣರ ಇಂತಹ ನುಡಿಗಟ್ಟನ್ನು ವಚನವೆಂಬ ನಾಮಧೇಯದಿಂದ ಸಾಹಿತಿಗಳು ಕರೆದರು. ವಚನಸಾಹಿತ್ಯವು ಅಪಾರವು. ನಿರ್ದಿಷ್ಟವಾಗಿ ವಚನಕಾರರು ಇಷ್ಟು ಎಂಬುದನ್ನು ಇನ್ನೂ ಗೊತ್ತುಪಡಿಸಿಲ್ಲ. ಉರಿಗಾಂಚಿನ್ನದ ಗಣಿಯಂತೆ ವಚನ ವಾಙ್ಮಯದ ಗಣಿಯು ಅಪಾರವಾದುದು. ವಚನಗಳ ಸೃಷ್ಟಿಕರ್ತ ಧರ್ಮಪ್ರೇಮಿ ಬಸವಣ್ಣನವರು. ವಿಭೂತಿಗಳು ಮತಪ್ರಸಾರಣೆಗೆ ಮೂಲ ಸಾಧನವನ್ನು ಕನ್ನಡ ಸಾಹಿತ್ಯವನ್ನಾಗಿ ಮಾಡಿಕೊಂಡರು. ಷಟ್‌ಸ್ಥಳವು ವೀರಶೈವ ಧರ್ಮದ ಒಂದು ಮುಖ್ಯ ಅಂಗವೆಂದು ಹೇಳಿ ತತ್ವೀಕರಿಸಿದರು. ಷಟ್‌ಸ್ಥಳದ ತತ್ವಗಳು ಬಹು ವಿಶಾಲವಾಗಿಯೂ, ವಿಶದವಾಗಿಯೂ ಇರುವುದನ್ನು ಬಸವಣ್ಣನವರ ವಚನಗಳಲ್ಲಿ ಕಾಣಬಹುದು. ವಿಶ್ವಕ್ಕೇ ಸಮನ್ವಯವಾಗುವ ಧರ್ಮತತ್ವದ ಸೃಷ್ಟಿಯನ್ನು ಈ ವಿಭೂತಿಯ ಸಾಹಿತ್ಯನಿರ್ಮಾಪನದಲ್ಲಿ ನೋಡಬಹುದು. ಮನುಷ್ಯನು ನಿಜವಾದ ಸುಖಗಳನ್ನು ಅನುಭವಿಸಲು ಯಾವ ಮಾರ್ಗವು ಅಗತ್ಯ ಎಂಬುದನ್ನೂ, ಇಡೀ ನಾನಾ ಮಾನವ ಜೀವನದ ನಡೆನುಡಿಗಳನ್ನೂ ಕನ್ನಡಿಯಲ್ಲಿ ಪ್ರತಿಬಿಂಬಿಸಿದಂತೆ ವರ್ಣಿತವಾಗಿದೆ. ಅಕ್ಕಮಹದೇವಿಯ ಅಧ್ಯಾತ್ಮೀಯ ಕಥೆಯ ತತ್ವಗಳೂ ಅಲ್ಲಮನ ವೇದಾಂತ ತತ್ವಗಳೂ, ಬಹು ರಮ್ಯವಾಗಿ ವರ್ಣಿತವಾಗಿವೆ. ಸಿದ್ಧರಾಮಯ್ಯ, ಅಂಬಿಗರಚೌಡಯ್ಯ, ಮಡಿವಾಳಮಾಚಯ್ಯ, ಮಾದಾರಚನ್ನಯ್ಯ, ಹಡಪದಹಂಪಣ್ಣ, ಮೆರೆಮಿಂಡಯ್ಯ, ಚನ್ನಬಸವಣ್ಣ, ಉರಿಲಿಂಗಪೆದ್ದಿ, ದೇವರದಾಸಿಮಯ್ಯ, ನೀಲವ್ವ, ಸುಗ್ಗವ್ವೆ ಇತ್ಯಾದಿ ವಚನಕಾರರು ಮತ್ತು ವಚನಕಾರ್ತಿಯರು ಸೃಷ್ಟಿಸಿದ ಕಲೆಯು

ಕಾರ್ಯರೂಪದಲ್ಲಿ ಬಂದು ಆಚಂದ್ರಾರ್ಕದವರಿಗೂ ಯಶಸ್ವಿಯಿಂದ ಜೀವಿಸಿ ಬದುಕುವಂತೆ ಮಾಡಿತು. ಇದಕ್ಕೆ ವೀರಗೆಚ್ಚಿನ, ಕ್ರಾಂತಿಕಾರಕ ಸೇವೆಯು ತಳಹದಿಯು. ಇಂದು ವಚನಕಾರರು ಕಾಲಾಂತರವಾಗಿದ್ದಾರೆ. ಆದರೆ ಅವರ ಕಲಾಕೃತಿಯು ಮಾತ್ರ ಜೀವದ ಉಸಿರಿನಿಂದ ಕೂಡಿ ತೇಜೋಮಯವಾಗಿ ದಿವ್ಯ ಕಳೆಯಿಂದ ವಿರಾಜಿಸುತ್ತಿದೆ. ಅಖಿಲ ಮಾನವ ಕೋಟಿಗೊಪ್ಪುವ, ಸಮ್ಮತವಾಗುವ ಧರ್ಮತತ್ವಗಳು ಇವುಗಳಲ್ಲಿ ಅಡಗಿವೆ. ಅತ ಏವ ಶರಣಸಾಹಿತ್ಯವು ದಿವ್ಯನಾಗಿ ಮೆರೆಯುತ್ತಿದೆ. ವಚನ ಸಾಹಿತ್ಯದ ವೈಶಿಷ್ಟ್ಯವು ಬಹು ಸೊಗಸಾಗಿದೆ. ಸದಾರ್ಕ್ಷಿಣ್ಯವಾಗಿ ನುಡಿದ ಸತ್ಯ ನುಡಿಗಳಿವೆ. ವಚನದ ತೇಜಸ್ಸು ಮತ್ತು ಓಜಸ್ಸು ಬಹುವಾಗಿ ಮಿಲಿನವಾಗಿರಲು ಇದೇ ಮೂಲಕಾರಣವು. ಇವುಗಳಲ್ಲಿರುವ ಸತ್ಯ ಭಾಷೆಯು ಕಟಕ್ಕನೆ ಮನಸ್ಸಿಗೆ ಹಿಡಿಯುವದು. ಇಲ್ಲಿನ ಸರಳತೆಯಿಂದ ಓದಿದ ಕೂಡಲೆ ಅಲ್ಲಿಯ ತತ್ವಗಳ ನೈಜತೆಯು ಮನದಲ್ಲಿ ತಕ್ಷಣವೇ ಪ್ರಕಾಶಿಸುವುದು. ಆಕರ್ಷಣ ಶಕ್ತಿಯು ಬಲವಾಗಿ ಇವುಗಳಲ್ಲಿ ಬೇರೂರಿದೆ. ಈ ವಚನಗಳಲ್ಲಿ ಮೋಸ, ಕುಯುಕ್ತಿ, ಕಾಪಟ್ಯವು ಇಲ್ಲವೇಇಲ್ಲವು. ಏತಕ್ಕೆಂದರೆ ಶರಣರು ತಮ್ಮ ಮನದಲ್ಲಿ ಇದ್ದ ವಿಷಯವನ್ನು ಇದ್ದಹಾಗೆಯೇ ಹೇಳಿರುವರು. ಇವುಗಳಲ್ಲಿ ನಿರ್ವಿವಾದ ಬಲವು ಹುಟ್ಟಿದೆ. ಶರಣರು ಸ್ವಲ್ಪವೂ ಅಂಜಿಕೆ ಅಳುಕನ್ನೂ ಭೀತಿಬೆದರಿಕೆಯನ್ನೂ ಇಟ್ಟುಕೊಂಡಿರಲಿಲ್ಲ. ಪರರ ಅಭಿಲಾಷೆ ಆಕಾಂಕ್ಷೆಗಳಂತೆ ನುಡಿಯುತ್ತಿರಲಿಲ್ಲ. ಮನೋಧೈರ್ಯದಿಂದ ತಮ್ಮ ನಡೆನುಡಿಗಳನ್ನು ಪ್ರವಹಿಸುತ್ತಿದ್ದರು. ಅತ ಏವ ನಿರ್ಭೀತಿಯೂ, ಧೈರ್ಯವೂ ಇದರಲ್ಲಿ ಕಾಣುತ್ತಿದೆ. ಸಮಾಜದ ತಪ್ಪು ಒಪ್ಪುಗಳನ್ನೂ, ಮಾನವನ ಕುಂದು ಕೊರತೆಗಳನ್ನೂ ಇದ್ದಹಾಗೆಯೇ ಅಚ್ಚಳಿಯದಂತೆ ಮರೆಮಾಚದೆ ಹೊರಗೆಡವುತ್ತಿದ್ದರು. ಈ ಕಾರಣದಿಂದ ಶಿವಶರಣರು ಅರ್ಥಾತ್ ವಚನಕಾರರು ಸಮಾಜಸುಧಾರಕರ ಪೀಠದಲ್ಲಿ ನಿಜವಾದ ಪೀಠವನ್ನು ಅಲಂಕರಿಸಿರುವರು. ಇದರಲ್ಲಿ ಪಕ್ಷಪಾತವಾದ ನುಡಿಗಳಾವವೂ ಇಲ್ಲವು. ನುಡಿಯಂತೆ ನಡೆಯುವುದನ್ನು ಇದರಲ್ಲಿ ಕಾಣಬಹುದು. ನೈತಿಕ ಬಲಕ್ಕೆ, ನೈತಿಕ ಶೀಲಕ್ಕೆ, ನೈತಿಕ ನಡೆಗೆ ಪ್ರಧಾನತೆಯನ್ನು ಶರಣರು ಕೊಟ್ಟಿರುವುದು ಕಾಣಬರುತ್ತದೆ. ವಚನಸಾಹಿತ್ಯದ ನುಡಿಯಲ್ಲಿ ಸಾರವೂ ಚೈತನ್ಯವೂ ತುಂಬಿದೆ. ಶಿವಶರಣರು ತಮ್ಮ ನುಡಿಗಳಿಂದ ಜನಾಂಗದ

ಹೃದಯವನ್ನು ಮೇಲ್ಮಟ್ಟಕ್ಕೆ ತಂದಿದ್ದಾರೆ ಎಂಬುದನ್ನು ವಚನಸಾಹಿತ್ಯವು ತೋರಿಸಿದೆ.

ವಚನಕಾರರು ಸಾಮಾನ್ಯರ ಜೀವನವನ್ನು ಅರಿತವರು. ಜನಾಂಗದ ಜೀವನದ ಅಂತರಾಳವನ್ನೇ ಬದಲಾಯಿಸಿತು. ಸಾಮಾನ್ಯ ಅನುಭವಗಳನ್ನು ಪುಷ್ಟೀಕರಿಸಿ, ಬಣ್ಣಗಟ್ಟಿ ಅವುಗಳನ್ನು ಒಂದು ಮಹತ್ವವುಳ್ಳದ್ದನ್ನಾಗಿ ಮಾಡಿದ ಕಲೆಗಾರರು ವಚನಕಾರರು. ಜನಜೀವನದ ಹಿಂದಣ ಕಟ್ಟುಗಳು ಕಡಿಮೆಯಾದವು ಮತ್ತು ಜನರ ವಿವೇಕದ ಅಂತಸ್ತು ಏರಿಹೋಯಿತು. “ಪರೋಪಕಾರಂ ಇದಂ ಶರೀರಂ ಸಾರ್ಥಕಂ” ಎಂಬ ನುಡಿಯೇ ಇವರ ಜೀವನರಹಸ್ಯವಾಗಿದ್ದಿತು. ಭಕ್ತಿ, ಜ್ಞಾನ ಮತ್ತು ಕರ್ಮ ಇವುಗಳ ಪ್ರಧಾನತೆಯು ಈ ಶರಣರ ನಡೆನುಡಿಯಲ್ಲಿ ಅಡಗಿರುವುದು ಕಾಣಬರುತ್ತದೆ. ಸಾಹಿತ್ಯ ಸೇವೆಯನ್ನು, ಸಮಾಜ ಸೇವೆಯನ್ನು ತ್ರಿಕರಣಪೂರ್ವಕವಾಗಿ ಮಾಡಿದ್ದಾರೆ. ವಚನಕಾರರು ಸಾಹಿತ್ಯ ಪ್ರಪಂಚದಲ್ಲಿ ದಿವ್ಯಜ್ಯೋತಿಗಳಂತೆಯೂ, ಮುಕ್ತಿಜ್ಯೋತಿಗಳಂತೆಯೂ ಮಿರುಗುತ್ತಿದ್ದಾರೆ. ಸಾಹಿತ್ಯವು ಜನಜೀವನದ ಪ್ರತಿಬಿಂಬವೆಂಬುದನ್ನು ಸಾರ್ಥಕಪಡಿಸಿದರು. ಶರಣರು ತಮ್ಮ ಸಾಹಿತ್ಯ ಮತ್ತು ಸಂಸ್ಕೃತಿಗಳ ಪಾಲನೆಗಾಗಿ, ಪ್ರಗತಿಗಾಗಿ ಹಗಲಿರುಳೂ ಕಷ್ಟಸುಖವನ್ನು ಎಣಿಸದೆ ದುಡಿದ ದೈವವ್ಯಕ್ತಿಗಳು. ಲಿಂಗವಂತರ ಸಂಸ್ಕೃತಿಯಲ್ಲಿ ಜೈನರ ಅಹಿಂಸಾಧರ್ಮ, ಬೌದ್ಧರ ಸಮತಾವಾದ, ದ್ರಾವಿಡರ ಭಕ್ತಿಮಾರ್ಗ, ಆರ್ಯರ ತತ್ವಜ್ಞಾನ, ಸಿಕ್ಖರ ಧರ್ಮನಿಷ್ಠೆ ಇವುಗಳನ್ನು ನಾವು ನೋಡಬಹುದು ಎಂಬುದನ್ನು ವಚನಸಾಹಿತ್ಯವು ತೋರಿಸಿದೆ.

ವಚನಕಾರರ ಧೈರ್ಯ, ಕ್ರಿಯಾಬಲ, ಮನೋದಾರ್ಢ್ಯ ಸಂಕಲ್ಪ, ನಿಷ್ಕಾಪಟ್ಯ, ಸರಳಜೀವನ, ಅಧಿಕಾರಬಲ, ಸದ್ವಿನಯ, ಭಕ್ತಿ ಇವುಗಳು ವಚನಸಾಹಿತ್ಯವನ್ನು ಕಂಗೊಳಿಸುವಂತೆ ಮಾಡಿದವು. ಯಾವ ಭಾರತೀಯ ಪಂಡಿತರು ಜ್ಞಾನವಾದವನ್ನು ಬಾಳಿನ ಸರ್ವ ಶ್ರೇಷ್ಠ ಪವಿತ್ರ ಕ್ರಿಯೆ ಎಂದು ತಿಳಿದಿದ್ದರೋ ಅಂತಹ ಶ್ರೇಷ್ಠ ತತ್ವವು ವಚನಸಾಹಿತ್ಯದಲ್ಲಿ ಕಾಣುತ್ತದೆ. ವಿಶ್ವಬಂಧುತ್ವ, ವಿಶ್ವಪ್ರೇಮವು ವಚನಕಾರರ ತಿರುಳು ಹುರುಳಾಗಿತ್ತೆಂಬುದು ವಚನಗಳಿಂದ ಅರಿವಾಗುತ್ತದೆ. ಅಧ್ಯಾತ್ಮ ವಿದ್ಯೆಯಲ್ಲಿ ಪ್ರಪಂಚದ ಸಕಲ ವಿದ್ಯೆಗಳ ಕೇಂದ್ರವೆಂದೂ ಬಹುಕಾಲದ ಸಾಧನಾಶಕ್ತಿಯಿಂದ ಮಾನವನು ಇದನ್ನು ಸಾಧಿಸಬಹುದೆಂದೂ,

ಬಾಳಿನ ಗುರಿಯು ಇದೇ ಆಗಿರುವುದೆಂದೂ, ಈ ವಿದ್ಯೆಯ ಆದರ್ಶ ದಿಂದಲೇ ಸಮಾಜದಲ್ಲಿ ಸುರೀಗುಣಗಳ ವಿಕಾಸವುಂಟಾಗಿ ವಿಶ್ವಶಾಂ ತಿಯು ಬೇರೂರುವುದೆಂದೂ ವಚನಸಾಹಿತ್ಯವು ಸಾರುತ್ತಿದೆ. ಕನ್ನಡ ಸಾಹಿತ್ಯಕ್ಕೆ ಯಶಸ್ಸು ಸಿಕ್ಕುವಂತೆ ಮಾಡಿದುದರಲ್ಲಿನ ಶ್ರೇಷ್ಠಸ್ಥಾನವು 'ವಚನಸಾಹಿತ್ಯಕ್ಕೆ. ವಚನಸಾಹಿತ್ಯವು ವೀರಶೈವ ಧರ್ಮದ ತಿರುಳನ್ನೂ ಕರ್ಮದ ಹುರುಳನ್ನೂ ನೈತಿಕನಿಲುವಿಕೆಯನ್ನೂ ಪ್ರತಿಪಾದಿಸುವುದು. ವೇದ ಆಗಮಗಳಲ್ಲಿರುವ ಧರ್ಮಾಚರಣೆಗಳ ರಹಸ್ಯವನ್ನೂ ಉಪನಿಷತ್ತು ಗಳಲ್ಲಿರುವ ತತ್ತ್ವದ ಮಟ್ಟವನ್ನೂ ತಿಳಿಗನ್ನಡದಲ್ಲಿ ಪಂಡಿತಪಾಮರರಿಗೆ ತಿಳಿಯುವಂತೆ ಮಾಡಿದವರು ವಚನಕಾರರು. ಸ್ವತಂತ್ರ ವಿಷಯದ ಸುಂದರ ಸೃಷ್ಟಿಯು ಇದು. ಉಪಮೆಗಳ ನವೀನತೆಯನ್ನೂ, ನಿಪುಣ ತೆಯನ್ನೂ ಇದರಲ್ಲಿ ಕಾಣಬಹುದು. ಯೋಗಮಾರ್ಗವನ್ನೂ, ಗುರು ಶಿಷ್ಯರ ವಿಷಯವನ್ನೂ, ವಚನಕಾರರ ಶ್ರೇಷ್ಠತೆಯನ್ನೂ ಬಹು ಹೃದ ಯಂಗಮಯವಾಗಿರುವ ಪ್ರಚೋದಿತ ವಿಚಾರತೆಯನ್ನೂ ಇದರಲ್ಲಿ ನೋಡಬಹುದು. ಭಾವೋದ್ರೇಕವೂ, ವಿಷಯಮಾರ್ಪಾಡುವೂ, ಆನಂದ ಸ್ಫುರಿತವೂ ಇದರಲ್ಲಿ ಅಳವಟ್ಟಿದೆ. ವಚನ ಸೌಂದರ್ಯವು ಹೃದಯ ವನ್ನು ಆವರಿಸಿಕೊಂಡು, ಮನೋಭಿತ್ತಿಯ ಮೇಲೆ ಅದರ ಚಿತ್ರವು ಮೂಡಿ ರಂಜಿಸುವುದು. ಇದರಲ್ಲಿ ಸರ್ವಜನಾದರಣೀಯ ವಿಷಯವಿದೆ.

ನಿಶ್ಚಿತಾರ್ಥವನ್ನು ಬೋಧಿಸುವ ಪ್ರಮಾಣ ತತ್ವಗಳು ವಚನಕಾರರ ನುಡಿಗಳು. ಸ್ವಯಂಪೂರ್ತಿಯುತ ಅನುಭಾವಿಕ ನುಡಿಗಟ್ಟುಗಳು ವಚನ ಗಳು. ಪರವಸ್ತು ದರ್ಶಕವಾದ ಶಬ್ದರಾಶಿಯು ಶಿವಶರಣರ ಮಾತ ಗಳು. ಉದಾತ್ತ ವೇದಾಂತ ಬೋಧೆಯನ್ನೂ ಇದರಲ್ಲಿ ಕಾಣಬ ಹುದು. ಎಳ್ಳಿನಲ್ಲಿ ಎಣ್ಣೆಯೂ, ದಧಿಯಲ್ಲಿ ತುಪ್ಪವೂ, ಚಿಲುಮೆಯಲ್ಲಿ ನೀರೂ, ಕಾಷ್ಠದಲ್ಲಿ ಅಗ್ನಿಯೂ ಇರುವಹಾಗೆ ತನ್ನ ಆತ್ಮದಲ್ಲಿಯೇ ಪರಮಾತ್ಮನು ಇದ್ದಾನೆ ಎಂಬ ರಹಸ್ಯವನ್ನು ತಿಳಿಸಿದ ಉಪನಿಷತ್ತು ನಮಗೆ ದೊರೆತಿಲ್ಲವೇ? "ಉದಕದೊಳಗೆ ಬಚ್ಚಿಟ್ಟ ಬಯಕೆಯ ಕಿಚ್ಚಿನಂತೆ ಇದ್ದಿತ್ತು. ಸಸಿಯೊಳಗಣ ರಸದ ರುಚಿಯಂತೆ ಇದ್ದಿತ್ತು. ನನೆಯೊಳಗಣ ಪರಿಮಳದಂತೆ ಇದ್ದಿತ್ತು. ಕೂಡಲಸಂಗಮದೇವರ ನಿಲವು ಕನ್ನೆಯ ಸ್ನೇಹದಂತೆ ಇದ್ದಿತ್ತು" ಎಂಬ ವಚನವು ಅರಿ ವಾದಲ್ಲಿ ಮೇಳ್ಗಣ ಪ್ರಶ್ನೆಗೆ ಉತ್ತರ ದೊರಕಿದಂತೆಯೇ ಸರಿಯು. "ಆತ್ಮ

ಸಾಕ್ಷಾತ್ಕಾರವಾದ ಅನಂತರ ಸಾಧಿಸುವ ಉತ್ತರ ಭಾಗವು ಲಿಂಗಾಂಗ ಸಾಮರಸ್ಯವು. ವಚನಕಾರರ ನುಡಿಗಳು ಜಗದುಪಕಾರಕವಾದ ಶಿವಾನುಭವ ವಾಕ್ಯಗಳು. ತಮ್ಮ ತಮ್ಮ ಅನುಭವವನ್ನು ಇದ್ದುದನ್ನು ಇದ್ದ ಹಾಗೆಯೇ ಸಂದೇಹ ಬರದಂತೆ ತಿಳಿಸಿದವರು ವಚನಕಾರರು" "ದೇವನೊಬ್ಬ ನಾಮ ಹಲವು. ಪರಮಪತಿವ್ರತೆಗೆ ಗಂಡನೊಬ್ಬ. ಮತ್ತೊಂದಕ್ಕೆರಗಿದರೆ ಕಿವಿಮೂಗ ಕೊಯ್ಯುವನು." "ಹಲವು ದೈವದ ಎಂಜಲ ತಿಂಬುವರರೇನೆಂಬೆ ಕೂಡಲಸಂಗಮದೇವ" ಎಂಬ ವಚನವೂ, "ಇಂದ್ರ ಮಿತ್ರಂ ವರುಣಮಗ್ನಿಮಾಹು—ರಥೋದಿವ್ಯಯಃ ಸಸುಪರ್ಣೋಗರುತ್ಮಾನ್" ಏಕಂಸದ್ವಿಪ್ರಾಬಹುಧಾವದಂತ್ಯಗ್ನಿಂ ಯಮಂಮಾ ತಹಿಶ್ವಾನಮಾಹುಃ." ಎಂಬ ರುಕ್ಕನ್ನು ಒಂದು ಹೆಜ್ಜೆ ಮುಂದೆ ದಾಟಿರುವುದು. ಇದರಿಂದ ವಚನಸಾಹಿತ್ಯವು ದಿವ್ಯಸಾಹಿತ್ಯವೆಂಬುದು ಅರಿವಾಗುವುದು.

ಆರ್ಯರಿಗೆ ಉಪನಿಷತ್ತುಗಳು ಕನ್ನಡಿಗರಿಗೆ ವಚನಗಳು ಬಹು ಪ್ರಧಾನವು. ಕಿರಿಯದರಲ್ಲಿ ಹಿರಿದಾದ ಅರ್ಥವಿರುವ ನುಡಿಗಟ್ಟುಗಳು ಇದರಲ್ಲಿವೆ. ಇದರಲ್ಲಿ ವಿಧ ವಿಧ ಭಾವಗಳನ್ನೂ, ವಿಷಯಗಳನ್ನೂ, ಕರುಳುಕಟ್ಟಿ ಹೃದಯ ಮುಟ್ಟಿ ಮೆದುಳ ಮೆಟ್ಟಿ ಮನ ಮೆಚ್ಚುವಂತೆ ಮಾಡುವ ನವೀನ ಶೈಲಿಯನ್ನೂ ತೊಡರಿಲ್ಲದೆ ನೋಡಿ ಬಲ್ಲೆವು. ಬರಿ ವಾಗಾಡಂಬರಕ್ಕೆ ಗಮನಗೊಡದೆ ಭಾವ ವಂಜನವನ್ನು ಪ್ರಧಾನವಾಗಿ ಇಟ್ಟುಕೊಂಡು ಓದುಗರ ಹೃದಯವನ್ನು ಎಳೆದುಕೊಳ್ಳುವ ಸಾರ ಶಕ್ತಿ ಇದೆ. ಇದು ತನ್ನ ಹೃದಯ ಪ್ರೇರಣೆ, ಪ್ರೇಮ ಪೂರಿತ, ಭಾವ ಭಾಷೆಗಳಿಂದ ಎಲ್ಲ ಜನರ ಮನಸ್ಸನ್ನು ಆಕರ್ಷಿಸಿಕೊಳ್ಳುವುದು. ಭವ್ಯಾನಂದವು ಇದರ ವಾಚನದಿಂದ ಉದಯಿಸುವುದು. ಬಳಕೆಯ ಮಾತುಗಳೂ, ವ್ಯವಹಾರಿಕ ಉಪಮಾನಗಳೂ, ತಿಳಿಗನ್ನಡ ಶಬ್ದಗಳೂ; ಚೊಳ್ಳು ಟೊಳ್ಳಿಲ್ಲದ ನುಡಿಗಳೂ ಇದರಲ್ಲಿ ತುಂಬಿವೆ. ಉದ್ಯಮ ಶೀಲ ಸಂಗೀತಗಾರನೂ ಕೂಡ ಪ್ರಾಸ ಬದ್ಧವಾಗಿಯೂ, ತಾಳ ಲಯ ಗತಿಯಿಂದಲೂ ಹಾಡಲು ಯೋಗ್ಯವಾದ ನುಡಿಗಟ್ಟಾಗಿವೆ. ಅಹಂಭಾವದ ಅಳಿಸುವಿಕೆಯೂ ಸೌಂದರ್ಯದ ಕೂಡಿಸುವಿಕೆಯೂ ಇವುಗಳಲ್ಲಿ ಇದೆ ಎಂಬುದು ವಚನಗಳಿಂದ ವಿದಿತ ಗೋಚರವಾಗುವುದು. ಅನುಭವಸಿದ್ಧವಾದ ಆತ್ಮವಾಣಿಯೇ ಶರಣರ ನುಡಿ. ಗುಣಕ್ಕೆ ಮಾತ್ಸರ್ಯ

ಉಂಟೆ? ಇಲ್ಲವು. ಇದರ ಅಂತರಾರ್ಥವು ವಚನಕಾರರ ಜೀವನ ಸಿದ್ಧಾಂತದಲ್ಲಿ ಅಡಗಿದೆ. ಇವರು ಹೇಳುವ ರೀತಿ ನೀತಿ, ಆಚಾರ ವಿಚಾರ, ನೇಮ ನಿಷ್ಠೆ, ನಯ ದಯಾದಿ ಗುಣಗಳು ಪ್ರತಿಯೊಬ್ಬ ನನ್ನೂ ದಯಾಶೀಲನನ್ನಾಗಿ ಮಾಡುತ್ತವೆ. ಈ ತತ್ವಗಳು ವಿಶ್ವವ್ಯಾಪ ಕವೂ ಎರಡು ವರ್ಣನೆಯೂ ಇಲ್ಲದೆ ಅಂತರಂಗವೆಂಬ ಹೂವಿನ ಮೊಗ್ಗನ್ನು ಅರಳಿಸುವ ನೇಸರಾದ ನಂಬಿಕೆಯ ಮಡಿಯ ನೇಹವಿದೆ. ವಿಶ್ವಸಾಹಿತ್ಯದಲ್ಲಿ ಕನ್ನಡವು ಪ್ರಗತಿ ಪೀಠವನ್ನು ಪಡೆದರೆ ಏನಾದರೂ ಅದು ಕೂಡ ವಚನ ಸಾಹಿತ್ಯದಿಂದ ಎಂದು ಹೇಳಬಹುದು. ಪ್ರೇಮವೇ ದೇವರು, ದೇವರೇ ಪ್ರೇಮವು, ಎಂಬ ತತ್ವಜ್ಞಾನಿಗಳ ಮತವನ್ನು ವಚನ ಕಾರರು ಸಾಧಿಸಿದ್ದಾರೆ. ವೀರಶೈವರ ವಿಶ್ವಪ್ರೇಮದ ವ್ಯಾಪನೆಯು ಮಹತ್ವಪೂರ್ಣಕಾರಿಯಾದದ್ದು.

"ಬಸವ ಯುಗದಲ್ಲಿ ಹುಟ್ಟಿದ ವಚನಗಳ ಸಂಖ್ಯೆ ನೂರ ಅರ ವತ್ತು ಕೋಟಿ ಎಂದು ಇತಿಹಾಸವಿದೆ. ಬಸವನ ಕಾಲಕ್ಕೆ ಈಚೆಯೂ ಹಲವರು ವಚನಗಳನ್ನು ಬರೆದಿದ್ದಾರೆ. ಈ ವಚನಗಳು ಕನ್ನಡ ಸಾಹಿತ್ಯದಲ್ಲಿ ಪೂಜ್ಯಸ್ಥಾನವನ್ನು ಪಡೆಯಲು ಅರ್ಹವಾಗಿವೆ. ಇವು ಗೂಢವಾದ ವೇದಾಂತ ವಿಷಯಗಳನ್ನು ಸುಲಭ ಮಾತುಗಳಿಂದ ಬಿಗಿ ಯಾದ ಶೈಲಿಯಲ್ಲಿ ಮನಮುಟ್ಟುವಂತೆ ಭೋಧಿಸುತ್ತವೆ" ಎಂದು ಕವಿ ಚರಿತ್ರಕಾರರು ಹೇಳಿರುವರು. "ಹಾಲ ತೊರೆಗೆ ಬೆಲ್ಲದಂತಹ ಕೆಸರು ಸಕ್ಕರೆಯಂತಹ ಮಳಲು ತವರಾಜನಂತಹ ನೊರೆ ತೆರೆಗಳು ಇಂತಪ್ಪ ಆದ್ಯರ ವಚನ ವಿರಲು ಬೇರೆ ಬಾವಿಯ ತೋಡಿ ಉಪ್ಪು ನೀರು ಸವಿ ದಂತಾಯಿತ್ತಯ್ಯ ಎನ್ನಯುಕ್ತಿ" ಎಂದು ಬಸವಣ್ಣನವರು ನುಡಿದಿರು ವರು. ಇಂದು ವಚನ ಸಾಹಿತ್ಯವು ಎಲ್ಲರ ಚಿತ್ತವನ್ನು ಸೂರೆಗೊಂ ಡಿದೆ. ವೀರಶೈವೇತರರಾದ ಶ್ರೀಮಾನ್ ಕುಂದಣಗಾರರು, ಶ್ರೀಯುತ ಎಂ. ಆರ್. ಶ್ರೀನಿವಾಸ ಮೂರ್ತಿಯವರು, ಶ್ರೀನಿವಾಸರು, ಅ. ನ. ಕೃಷ್ಣರಾಯರು, ದಿವಂಗತ ಟಿ. ಎಸ್ ವೆಂಕಣಯ್ಯನವರು, ಪ್ರೊಫೆಸರು ಕೃಷ್ಣಶಾಸ್ತ್ರಿಗಳೂ ಇತ್ಯಾದಿ ಮಹನೀಯರು ಶರಣಸಾಹಿತ್ಯದ ಸವಿ ಯನ್ನು ಮೆದ್ದು ಅದರಿಂದ ತಾವು ಸಹ ಪಾಕ ಮಾಡಿ ಕನ್ನಡಿಗರಿಗೆ ನೀಡಿರುವರು. ಈ ಕುರುಹೆ ವಚನ ಸಾಹಿತ್ಯದ ಮೇಲ್ಮೆಗೆ ಸಾಕ್ಷಿಯು. "ವಚನಕಾರರ ನೈತಿಕ ಮತ್ತು ಸಾಮಾಜಿಕ ವಿಚಾರಗಳನ್ನು ನೋಡಿ

ದರೆ ಅವರು ಯಾವ ಬಗೆಯ ಸಮಾಜ ಸಂಘಟನೆಯನ್ನು ಮಾಡ ಬೇಕೆನ್ನುತ್ತಿದ್ದರು ಎಂಬುದು ಸ್ಪಷ್ಟವಾಗುವುದು. ಅವರು ಸಂಸಾರ ವನ್ನು ಬಿಡ ಹೇಳದೆ ಆತ್ಮ ವಿಕಾಸವಾಗುವಂತೆ ಅದನ್ನು ಮಾಡಬೇ ಕೆಂದು ಉಪದೇಶಿಸಿದರು. "ನೀತಿಯು ಸಮಾಜದ ಆಧಾರಸ್ತಂಭ ವಿರುವುದೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ" ಎಂದು ಶ್ರೀಮಾನ್ ದಿವಾ ಕರರು ಹೇಳಿರುವರು. ವಚನಕಾರರ ಪ್ರಾಶಸ್ತ್ಯವನ್ನು ಹೇಳಿದ ಶ್ರೀಮಾನ್ ದಿವಾಕರರು ವಚನ ಸಾಹಿತ್ಯದ ಮೇಲ್ಮೆಯನ್ನು ಕುರಿತು ಇಂತು ಹೇಳಿರುವರು. " ಸ್ವಯಂವರಕ್ಕೆ ಸಿದ್ಧಳಾದ ಅರಸುಮಗಳಂತೆ ನಾನಾ ಚಿನ್ನ ರನ್ನದ ವಸ್ತ್ರಾಲಂಕಾರ ಭೂಷಿತಳಾಗದಿದ್ದರೂ, ವಚನ ವಧು ಋಷಿ ಕನ್ಯೆಯಾಕೆ ತನ್ನ ನಿರ್ವ್ಯಾಜ, ನೈಸರ್ಗಿಕ ಚಲುವಿನಿಂದಲೂ ವನಸುಲಭವಾದ ಹೂಚಿಗುರುಗಳಿಂದಲೂ ಶೋಭಿಸುತ್ತಿರುವಳು." ಸುಲಭಶೈಲಿಯ ಅಗಾಧವಾದ ವಚನಸಾಹಿತ್ಯದ ಮುಖದಿಂದ ವಚನ ಕಾರರು ಕನ್ನಡದೇವಿಗೆ, ಬಹುವಾದ, ಭವ್ಯವಾದ ಸೇವಾರ್ಪಣೆ ಮಾಡಿ ರುವರು. ವಚನಸಾಹಿತ್ಯವು ಅಮರರಿಂದಲೂ ಅಳಿಸದಂತಹ ದಿವ್ಯ ಸಾಹಿತ್ಯವು ಇಂತಹ ಸುತೆಯನ್ನು ಪಡೆದ ಕನ್ನಡದೇವಿಯು ಪುಣ್ಯ ವಂತಳು. ರಮ್ಯವಾಗಿ, ಮನೋಹರವಾಗಿ, ಹರ್ಷದಾಯಕವಾಗಿರುವ ವಚನ ವಧುವು ಸಕಲರಿಗೂ ಮಾನ್ಯಳಾಗಿ, ಪ್ರಿಯಳಾಗಿ ಬಹುಕಾಲ ಬದುಕಿ ಜೀವಿಸಲು ಮಾಡಬೇಕಾದ ಕರ್ತವ್ಯಭಾವವು ವೀರ ಕನ್ನಡಿ ಗರ ಮೇಲೆ ಬಿದ್ದಿದೆ.

---

# ಶಿವಯೋಗೀಶ್ವರರ ಶಿವಪೂಜೆ.

(ಲೇಖಕಃ— ಮಧುರಚೆನ್ನ ಹಲಸಂಗಿ, ತಾ॥ ಇಂಡಿ ಜಿ॥ ವಿಜಾಪುರ.)



"ಪಶ್ಚಿಮ ಪದ್ಮಾಸನದಲ್ಲಿ ಕುಳಿತು, ನಿಟ್ಟೆಲುವ ಮುರಿದು, ತುಟಿ ಮಿಡುಕದೆ, ಅಟ್ಟೆ ಆಡಿತಲ್ಲಾ; ಬಿಟ್ಟ ಕಣ್ಣು, ಬಿಗಿದ ಹುಬ್ಬು, ಬ್ರಹ್ಮರಂಧ್ರದಲ್ಲಿ ಕಟ್ಟ ಗುಡಿಯು, ಕೂಡಲಸಂಗಮದೇವ ಹಿಡಿವಡೆದ."

"ಬೆಳಗಿನೊಳಗಿನ ಮಹಾಬೆಳಗು, ಶಿವಶಿವ, ಪರಮಾಶ್ರಯವೇ ತಾನಾಗಿ, ಶತಪತ್ರ ಕಮಲ (ಸಹಸ್ರದಲ) ಕರ್ಣಿಕಾ ಮಧ್ಯದಲ್ಲಿ ಸ್ವತಃ ಸಿದ್ಧನಾಗಿಪ್ಪ ನಮ್ಮ ಕೂಡಲಸಂಗಮದೇವ.''

ಎಂದು ಶ್ರೀ. ಬಸವಣ್ಣನವರು ಪ್ರಾಣಲಿಂಗದ ಪರಮಪ್ರಕಾಶದ ಅನುಪಮಾನಂದವನ್ನು ಬಣ್ಣಿಸಿರುವರಷ್ಟೆ? ಇದೇ ಶಿವಯೋಗ; ಇದೇ ಆಂತರಿಕ ಶಿವಪೂಜೆ.

"ಜಗದಗಲ ಮುಂಟಪಕ್ಕೆ ಮುಗಿಲಗಲದ ಮೇಲುಕಟ್ಟಿನಲ್ಲಿ ಚಿತ್ರ ವಿಚಿತ್ರವ ನೋಡುತ್ತ ನೋಡುತ್ತ ನೋಡುತ್ತ; ಧ್ಯಾನ ವಿಶ್ರಾಮ ದಲ್ಲಿ ದಿಟ ದಿಟವೆಂಬುದೊಂದು ದರುಶನವ ನೋಡುತ್ತ ನೋಡುತ್ತ ನೋಡುತ್ತ; ಗಗನ ಗಂಭೀರದಲ್ಲಿ ಉದಯವಾಯಿತ್ತ ಕಂಡೆನು, ಗುಹೇಶ್ವರನೆಂಬ ಲಿಂಗವು ತಾನೆಯಾಗಿ.''

"......ಪರಮಾನಂದದ ಮಠದೊಳಗೆ, ಪರಿಣಾಮ ಪಶ್ಚಿಮ ಜ್ಯೋತಿಯ ಬೆಳಗಿನಲ್ಲಿ, ಪರುಷದ ಸಿಂಹಾಸನವನಿಕ್ಕಿ, ಪ್ರಾಣಲಿಂಗ ಮೂರ್ತಿಗೊಂಡಿರಲು ಶ್ರೀಮದಖಂಡ ಪರಿಪೂರ್ಣ ಪೂಜೆಯ ಮಾಡುವವರಿಗೆ ನಮೋ ನಮೋ ಎಂಬೆ ಗುಹೇಶ್ವರಾ.''

ಎಂದು ಶ್ರೀಮದಲ್ಲಮಪ್ರಭುಗಳು ನಿರೂಪಿಸಿದ ಪರಮಾನಂದ ಪ್ರಾಣಲಿಂಗಪೂಜೆಯೇ ಶಿವಯೋಗಿಗಳ ದಿವ್ಯ ಪೂಜೆಯೆಂದು ಬೇರೆ ಹೇಳುವ ಕಾರಣವಿಲ್ಲ.

"ಪಶ್ಚಿಮ ಕದವ ತೆರೆದು, ಬಚ್ಚಬರಿಯ ಬೆಳಗ ನೋಡಲೊಲ್ಲದೆ, ಕತ್ತಲೆಯ ಬಾಗಿಲಿಗೆ ಮುಗ್ಗಿ, ಕಣ್ಣುಕಾಣದ ಅಂಧಕರಂತೆ ಜಾರಿ ಜಾರಿ ಎಡವಿಬಿದ್ದು, ಕರ್ಮಕ್ಕೆ ಗುರಿಯಾಗುವ ಮರ್ತ್ಯದ ಮನುಜರಿರಾ ನೀವು ಕೇಳಿರೋ ಹೇಳಿಹೆನು, ನಮ್ಮ ಶರಣರ ನಡೆ ಎಂತೆಂದರೆ; ಕತ್ತಲೆಯ ಬಾಗಿಲಿಗೆ ಕದವನಿಕ್ಕಿ, ಪಶ್ಚಿಮ (ಅಂತರ್ಮುಖ) ಕದವ ತೆರೆದು, ಬಚ್ಚಬರಿಯ ಬೆಳಗಿನೊಳಗೆ ಲೋಲಾಡುವ ಶರಣರ ಪಾದಕ್ಕೆ ಮತ್ತೊಂದು ಬಾರಿ ಎರಗಿ ಸುಖಿಯಾದೆನಯ್ಯ, ಅಪ್ಪಣ್ಣಪ್ರಿಯ ಚನ್ನಬಸವಣ್ಣಾ."

"ತನುವೆಂಬ ಹುತ್ತದಲ್ಲಿ ಮನವೆಂಬ ಸರ್ಪ ಹೆಡೆಯನುಡಗಿಕೊಂಡಿರಲು, ಜ್ಞಾನಶಕ್ತಿ ಬಂದು ಎಬ್ಬಿಸಲು, ಉರಿ ಭುಗಿಲೆನುತ್ತ, ಹೆಡೆಯನೆತ್ತಿ ಊರ್ಧ್ವಕ್ಕೇರಲು, ಅಷ್ಟಮದವೆಲ್ಲ ಸುಟ್ಟುಗುಟ್ಟಿದವು, ಕರಣಂಗಳೆಲ್ಲ ಉರಿದುಹೋದವು. ಇದ್ದ ಶಕ್ತಿಯನೆ ಕಂಡು, ಮನ ನಿಶ್ಚಯವಾದುದನೆ ಕಂಡು, ಪಶ್ಚಿಮ ಕದವ ತೆರೆದು, ಬಚ್ಚಬರಿಯ ಬೆಳಗಿನೊಳಗೆ ಓಲಾಡಿ ಸುಖಿಯಾದೆನಯ್ಯ, ಅಪ್ಪಣ್ಣಪ್ರಿಯ ಚೆನ್ನಬಸವಣ್ಣಾ."

ಎಂದು, ಕೇವಲ ಪ್ರಾಣಲಿಂಗಿಸ್ಥಲದ ಮರ್ಮವನ್ನು ಬಿಚ್ಚಿ ತೋರಿಸುವ ಮುತ್ತಿನಂತೆ ಹೊಳೆಯುವ ಒಂದು ನೂರೇ ವಚನಗಳನ್ನು ಬರೆದ ಶಿವಶರಣೆ ಲಿಂಗಮ್ಮ, ಶಿವಶರಣರಾದ ಹಡಪದ ಅಪ್ಪಣ್ಣಗಳ ಪತ್ನಿ, ವಿವರಿಸುವ ಬೆಳಗಿನೊಳಗಿನ ಬೆಳಗು ಪ್ರಾಣಲಿಂಗದ ಪರಮಾನಂದ ಪರಂಜ್ಯೋತಿಯೇ ಅಲ್ಲವೆ?

"ಪ್ರಾಣಲಿಂಗ ಸಂಬಂಧಿಗಳೆಂದು ನುಡಿವರು ಅನೇಕರುಂಟು, ಪ್ರಾಣಲಿಂಗದ ಕಳೆಯನಾರು ಅರಿಯರಲ್ಲ. ಪ್ರಾಣಲಿಂಗದ ಕಳೆ ಎಂದಡೆ– ಆಧಾರದಲ್ಲಿ ಎಳೆಯ ಸೂರ್ಯನಂತೆ ಬೆಳಗುತಿರ್ಪುದು ನೋಡಾ; ಸ್ವಾಧಿಷ್ಠಾನದಲ್ಲಿ ಪೌರ್ಣಿಮೆಯ ಚಂದ್ರನಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು; ಮಣಿಪೂರಕದಲ್ಲಿ (ನಾಭಿಯಲ್ಲಿ) ಮಿಂಚಿನ ಲತೆಯಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು; ಅನಾಹತ (ಹೃದಯ)ದಲ್ಲಿ ಸ್ಫಟಿಕದ ಶಲಾಕೆಯಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು; ವಿಶುದ್ಧಿಯಲ್ಲಿ (ಕಂಠದಲ್ಲಿ) ಮೌಕ್ತಿಕದ ಗೊಂಚ

ಲಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು; ಆಜ್ಞೆಯಲ್ಲಿ (ಭ್ರೂಮಧ್ಯದಲ್ಲಿ) ರತ್ನದೀಪ್ತಿಯಂತೆ ಬೆಳಗುತಿರ್ಪುದು ನೋಡಾ ಪ್ರಾಣ ಲಿಂಗವು; ಬ್ರಹ್ಮರಂಧ್ರದಲ್ಲಿ ಸಹಸ್ರದಳದಲ್ಲಿ) ಸ್ವಯಂಜ್ಯೋತಿಯಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು; ಶಿಖೆಯಲ್ಲಿ (ಶಿಖಾಚಕ್ರ ದಲ್ಲಿ) ಶುದ್ಧ ತಾರೆಯಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು; ಪಶ್ಚಿಮದಲ್ಲಿ (ಪಶ್ಚಿಮಚಕ್ರದಲ್ಲಿ) ಉಳಕ ನಕ್ಷತ್ರದಂತೆ ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು. ಇಂತಪ್ಪ ಪ್ರಾಣಲಿಂಗದ ಕಳೆಯನರಿದು ಪ್ರಾಣವ ಸಂಯೋಗಿಸಿ ಪ್ರಳಯವ ಗೆಲಲರಿಯದೆ......ಒಡಲ ಹೊರೆವ ವರ ಪ್ರಾಣಲಿಂಗ ಸಂಬಂಧಿಗಳೆಂತೆಂಬೆನಯ್ಯ ಅಖಂಡೇಶ್ವರಾ."

"ಹೊರಗಣ ಒಂಬತ್ತು ಬಾಗಿಲ ಮುಚ್ಚಿ, ಒಳಗೆ ಅಂಬರ ಬಾಗಿಲ ಬೀಗವ ತೆಗೆದು, ಒಳಪೊಕ್ಕು ನೋಡಲು, .....ರವಿಕೋಟಿ ಪ್ರಭೆ ಯಂತೆ ರಾಜಿಸುವ ಮಹಾಲಿಂಗವನು ಕಂಡು,......ಒಳಗೆ ಪೊಕ್ಕು, ಕಂಗಳಿಗೆ ಮಂಗಳವಾದ ಶಿವನ ಸಭೆಯಂ ಕಂಡು, ಅಲ್ಲಿ ಹೊಡೆವ ಭೇರೀನಾದ, ತುಡುಮು ತಾಳ, ಮದ್ದಳೆ, ಗಡಬಡ ಝಲ್ಲೆಂಬ ಸಮೇಳ, ಕಂಸಾಳನ ನಾದವ, ನುಡಿಸುವ ವೀಣೆ, ಕಿನ್ನರಿ ಸ್ವರಮಂಡಲ, ತಂಬೂರಿ, ಕಾಮಾಕ್ಷಿಯ ನಾದ, ಭೋರಿಡುವ ಶಂಖ ಗಂಟೆಯ ನಾದ, ಸ್ವರಗೈವ ನಾಗಸ್ವರ, ಕೋಗಿಲ, ಕೂಗಿಡುವ ಕಹಳೆ, ಹೆಗ್ಗಾಳಿ, ಚಿಸಿಕಾಳಿ, ಕರ್ಣೆಯನಾದ, ಇಂತಿವು ಮೊದಲಾದ ನಾನಾ ಪ್ರಮಾಣಂ (ಪ್ರತ್ಯಯಂ) ಗಳ ಕಂಡು......ಪರಶಿವನನೊಡವೆರೆದು ಪರಿಪೂರ್ಣ ವಾದ ಮಹಾಶರಣರ ತೋರಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ."

ಎಂದು ಶ್ರೀ ಷಣ್ಮುಖ ಸ್ವಾಮಿಗಳು ಪ್ರಾಣಲಿಂಗಿ ಸ್ಥಲದ ಅನೇಕ ಪ್ರಕಾರದ ಜ್ಯೋತಿಗಳ ಹಾಗೂ ನಾದಗಳ ಮಹಾ ವೈಭವವನ್ನು ಚಿತ್ರಿ ಸಿರುವರು.

ಸುಮಾರು ಒಂದು ನೂರು ವರ್ಷಗಳ ಹಿಂದೆ ಆಗಿ ಹೋದ ಮಹಾ ಮಹಿಮರಾದ ಮುಳಗುಂದದ ಶ್ರೀ ಬಾಲಲೀಲಾ ಮಹಾಂತ ಸ್ವಾಮಿ ಗಳ "ಕೈವಲ್ಯ ದರ್ಪಣ"ದಲ್ಲಿ ಆತ್ಮಲಿಂಗನನ್ನು ಪರಮಾತ್ಮನ ಶಿಶುವೆಂದು ವರ್ಣಿಸಿ ಹಾಡಿದ ಲಾಲಿಯು (ಜೋಗುಳವು) ಬಹಳೇ ಆನಂದದಾಯಕ ವಾಗಿರುವದು. ಅದು ಹೇಗೆಂದರೆ—

"ಲಾಲಿ ಲಾಲಿಯು ಪರ ಬ್ರಹ್ಮದ ಶಿಶುವೆ ।
ಮಾಲೆಯ ಧರಿಸುವೆ ಮಲ್ಲಿಗೆ ಹೂವಿನ ॥ಪ॥

ಅಷ್ಟ ದಳದ ಕಮಲ ತೊಟ್ಟಿಲೊಳಗೆ ಮಲಗಿ ।
ಶ್ರೇಷ್ಠ ಸದ್ಗುಣ ಹಸ್ತ ಪದಗಳ ಹಾಡುತ ।
ನೆಟ್ಟಗೆ ನಿಟಲ ಭ್ರೂಮಧ್ಯದ ಜ್ಯೋತಿಯ ।
ದೃಷ್ಟಿಸಿ ನೋಡುತ ಕುಲು ಕುಲು ನಗುತಿಹ ॥೧॥

ಪ್ರಣವ ಘೋಷದ ನಾಗಸ್ವರ ವೇಣಿ ವಾಸುಕಿ ।
ಝುಣ ಝುಣಂ ಘಲ್ಗಿಜ್ಜೆ ತಾಳ ಮೃದಂಗ ಭೇರಿ ।
ಢಣ ಢಣೆಂಬುವ ಗಂಟೆ ಜಾಗುಟೆ ನಾದವ।
ಒಣ್ಣಿಸಲಿವ ಶಿವ ಸುಖಮಯ ಕಂದನೆ ॥೨॥

ಫಲ ಪದಗಳ ಮೀರಿ ಶಿವಪದವೆಂಬುವ ।
ಹೊಳೆವ ಮೇಲುಪ್ಪರಿಗೆ ಮೇಲೆ ಕುಳಿತು ಮಾಯಾ- ।
ಕಲಿಯುಗ ನರ್ತಕಿಯಾಟವ ನೋಡುತೆ ।
ನಲಿವ ಪರಶಿವ ಮಹಂತಲಿಂಗ ಶ್ರೀಬಾಲಕ ॥೩॥

ಲಾಲಿ ಲಾಲಿಯು ಪರ ಬ್ರಹ್ಮದ ಶಿಶುವೆ...... ॥

ಇದೇ ರೀತಿಯಲ್ಲಿ—"ಲಿಂಗಪೂಜೆ ಆಗುತದೆಯಣ್ಣಾ । ಈ ದೇಹ ವೆಂಬ ಗುಡಿಯ ಒಳಗೆ। ಲಿಂಗಪೂಜೆ ಆಗುತದೆಯಣ್ಣಾ ॥" ಮುಂತಾ ದುದಾಗಿ ಅನುಭವಪದಗಳನ್ನು ಅನೇಕರು ಹಾಡುತ್ತಿರುವದನ್ನು ನಾವು ಎಲ್ಲೆಲ್ಲಿಯೂ ಕೇಳುತ್ತೇವೆ.

ಇದೆಲ್ಲ ವಾಙ್ಮಯವಾಯಿತು. ಇನ್ನು ಇದರ ಅಗಾಧವಾದ ದೃಶ್ಯ ಚಿತ್ರವನ್ನು ಬಿಜಾಪುರ ಜಿಲ್ಲೆಯ, ಇಂಡಿ ತಾಲೂಕಿನ ಸಾಲೋಟಗಿ ಎಂಬ ಊರಲ್ಲಿರುವ ಶ್ರೀ ಶಿವಯೋಗೀಶ್ವರರ ದೇವಾಲಯದಲ್ಲಿ ಪ್ರತಿ ಸೋಮವಾರ ರಾತ್ರಿಯ ಕಾಲಕ್ಕೆ ಮುನ್ನೂರು ನಾನೂರು ವರುಷ ಗಳಿಂದ ನಡೆದು ಬಂದ "ಶ್ರೀ ಶಿವಯೋಗೀಶ್ವರರ ಶಿವಪೂಜೆ" ಯ ಸಮಾ ರಂಭದಲ್ಲಿ ಕಂಡು ಆನಂದಿಸಬಲ್ಲೆವು.

'ಶ್ರೀ ಶಿವಯೋಗೀಶ್ವರರು' ಮುನ್ನೂರು ನಾನೂರು ವರುಷಗಳ ಹಿಂದೆ ಬಿಜಾಪುರದ ಬಾದಶಹರ ಕಾಲದಲ್ಲಿ ಆಗಿಹೋದ ಒಬ್ಬ ಮಹಾ ಪುರುಷರು. ಕೊಡೇಕಲ್ಲಿನ ಬಸವೇಶ್ವರ, ಶಿರಹಟ್ಟಿಯ ಫಕೀರೇಶ್ವರ, ವಿಜಯನಗರದವರ ಕಾಲದಲ್ಲಿ ಮಕ್ಕೆಗೆ ಹೋಗಿ ಏಳುನೂರು ಖಲಿಂದರರಿಗೆ ಗುರುವಾಗಿ ಬಂದ ಮಳೆಯ ಮಲ್ಲೇಶ್ವರ ಇವರಂತೆ, ಮೊಗಲಾಯಿಯಲ್ಲಿ ಜನ್ಮತಾಳಿ ಬಿಜಾಪುರದ ರಾಜ್ಯದಲ್ಲಿ (ಸಾಲೋಟಗಿಯಲ್ಲಿ) ಬಂದು ನೆಲಿಸಿ ಹಿಂದೂ ಮುಸಲ್ಮಾನರೆಲ್ಲರಿಗೆ ಸಮಾನ ಪ್ರೇಮಿಕರಾಗಿ, ಬಿಜಾಪುರದ ಬಾದಶಹರಿಂದ ವಿಶೇಷ ಮನ್ನಣೆಗೆ ಪಾತ್ರರಾಗಿ, ಹಸುರು ಚಲ್ಲಣ ಹಸರು ಬೆತ್ತಗಳನ್ನು ಧರಿಸಿ ಹಿಂದೂ ಮುಸಲ್ಮಾನರ ಐಕ್ಯವನ್ನು ಸಾಧಿಸಿದವರು ಈ ನಮ್ಮ ಶ್ರೀ ಶಿವಯೋಗೀಶ್ವರರು.

ಬಿಜಾಪುರದ ಬಾದಶಹರು ಇವರಿಗೆ ಪರಮ ಭಕ್ತಿಯಿಂದ "ಅಲಾದೀನ ಪೀರ" ಅಂದರೆ—ಅಲ್ಲಾ ಅಥವಾ ಶಿವ, ದೀನ ಅಂದರೆ ಧರ್ಮ ಅಥವಾ ಯೋಗ, ಪೀರ ಅಂದರೆ ಸಾಧು ಅಥವಾ ಗುಡಿಯೊಳಗಿನ ದೇವರು (ಅಲ್ಲಾ = ಶಿವ, ದೀನ್ = ಯೋಗ, ಪೀರ = ಸ್ವಾಮಿ ಅರ್ಥಾತ್ ಶಿವ-ಯೋಗಿ-ಸ್ವಾಮಿ, ಶಿವಯೋಗೀಶ್ವರ) ಎಂದು ಸಂಬೋಧಿಸುತ್ತಿದ್ದರಂತೆ. (೧)

ಲಿಂಗಾಯತ, ಬ್ರಾಹ್ಮಣ, ಮುಸಲ್ಮಾನ ಇವರೆಲ್ಲರಿಗೆ ಪ್ರಿಯಕರರೂ ಪೂಜ್ಯರೂ ಆಗಿದ್ದ ಶ್ರೀ ಶಿವಯೋಗೀಶ್ವರರು ಕಾಲಜ್ಞಾನ ರೂಪವಾದ ಹಾಗೂ ನೀತಿ ಮತ್ತು ಭಕ್ತಿಗೆ ಸಂಬಂಧಿಸಿದ ಅನೇಕ "ಡಂಗುರಪದಗಳ"ನ್ನು ರಚಿಸಿ ಲೋಕವನ್ನೆಚ್ಚರಿಸಿರುವರು. ಅವರ ಪದಗ

---

(೧) ಟೀಕು:—ಇಂಥ ಮಹಾತ್ಮರು ಆ ಕಾಲದಲ್ಲಿ ಮೊಗಲಾಯಿಯಲ್ಲಿಯೂ, ಉಳಿದ ಕರ್ನಾಟಕದಲ್ಲಿಯೂ ಅನೇಕರು ಆಗಿ ಹೋಗಿರುವರು. ಆ ಕಾಲದಲ್ಲಿ ಮೊಗಲಾಯಿಯಲ್ಲಿ, ಶ್ರೀ ಅನಂತ ಚೈತನ್ಯ, ಕೇಶವ ಚೈತನ್ಯ, ರಾಘವ ಚೈತನ್ಯ ಬಾಬಾ ಚೈತನ್ಯರೆಂಬ ಬ್ರಾಹ್ಮಣ ಧರ್ಮದ ಮಹಾ ಪುರುಷರು ಲಾಡ್ಲೇ ಮಸೇಖ್, ಬಂದೇ ನವಾಜ ಮೊದಲಾದ ಮಹಮ್ಮದೀಯ ನಾಮಗಳನ್ನು ಧಾರಣ ಮಾಡಿ ಹಿಂದೂ ಮುಸಲ್ಮಾನರಲ್ಲಿ ಐಕ್ಯವನ್ನು ಹುಟ್ಟಿಸಿರುವರೆಂತಲೂ, ಶ್ರೀ ಶಿವಯೋಗೀಶ್ವರರೂ ಅವರೊಳಗಿನವರೇ ಒಬ್ಬರು ಆಗಿರಬಹುದೇನೋ ಎಂತಲೂ ಸಾಲೋಟಗಿಯಲ್ಲಿರುವ ನನ್ನೊಬ್ಬ ಗೆಳೆಯರು, ಹೇಳುತ್ತಿರುವರು. ಆದರೆ ಇದರಲೆಷ್ಟು ತಥ್ಯವಿದೆಯೋ ಇನ್ನೂ ಸ್ಪಷ್ಟವಾಗಿ ತಿಳಿದಿಲ್ಲ.

ಳನ್ನು ಅಲ್ಲಿಯ ಅನೇಕ ಜಂಗಮ ಪ್ರಮುಖರು ಶ್ರೀ ಶಿವಯೋಗೀಶ್ವರರ ಶಿವಪೂಜೆಯ ಕಾಲಕ್ಕೆ (ಹಾಗೂ ಜಾತ್ರೆ ಮೊದಲಾದ ಉತ್ಸವಗಳ ಕಾಲಕ್ಕೆ) ಹಾಡುತ್ತಿರುವರು.

ಶ್ರೀ ಶಿವಯೋಗಿಶ್ವರರ ಈ ಶಿವಪೂಜೆ ಎಂಬುದೊಂದು ಅಗಾಧವಾದ ಸಂಗತಿಯಾಗಿದೆ. ಪ್ರತಿ ಸೋಮವಾರ ರಾತ್ರಿ (ಊರೊಳಗಿರುವ) ಉಪದೇಶಾಲಯದಲ್ಲಿ ಜರುಗುವದು. ನನ್ನ ಗೆಳೆಯರು ' ಇಲ್ಲಿಯ ವಾದ್ಯಗಳ ಸ್ವರ ಸಮ್ಮೇಳನವು ಬಹಳೇ ಬೇರೆ ಬಗೆಯಾಗಿದೆ. ಯಾವ ಊರಿನವರು ಬಂದರೂ ಇಂತಹದನ್ನು ನಾವೆಲ್ಲಿಯೂ ಕೇಳಿಲ್ಲವೆನ್ನುವರು. ಮತ್ತು ಶಿವಪೂಜೆಯ ಕಾಲಕ್ಕೆ ಒಂದರಿಂದ ಮೊದಲು ಮಾಡಿ ನೂರಾ ಎಂಟರ ವರೆಗೆ ದೀಪಗಳನ್ನು ಗದ್ದುಗೆಗೆ ಬೆಳಗುವರು. ' ಎಂದು ಹೇಳಿದರು. ಆದರೆ ಮೊದಲಿಗೆ ಇದರಿಂದ ನನಗೇನೂ ಅಗಾಧವೆನಿಸಲಿಲ್ಲ. ಆದರೆ 'ಶಿವಪೂಜೆ'ಯ ಸಂಭ್ರಮವನ್ನು ನೋಡಿದ ಬಳಿಕ ಪ್ರತ್ಯಕ್ಷ ಶಿವಯೋಗ ಸಾಮ್ರಾಜ್ಯವನ್ನೇ ಬಾಹ್ಯರೂಪದಲ್ಲಿ ಪ್ರಕಟಗೊಳಿಸಿರುವುದಾಗಿ ಕಂಡು ಬಂದದ್ದರಿಂದ ನನಗೆ ಅಗಾಧವಾಯಿತು. ಅದರ ವರ್ಣನೆಯನ್ನಿಲ್ಲಿ ಬರೆಯುವೆನು.

ಹಿಂದಿನ ಕಾಲದ ಸಂಸ್ಥಾನಿಕರಂತೆ ಡ್ರೆಸ್ಸು ಮಾಡಿಕೊಂಡು ಪೂಜಿಸುವ ಸ್ವಾಮಿಗಳು ಗದ್ದುಗೆಯ ಇದಿರಿಗೆ ಕುಳಿತುಕೊಳ್ಳುವರು. ಅವರಿಗೊಬ್ಬ "ಪ್ರಧಾನಿ" ಎಂಬವನು ದೀಪಗಳನ್ನು ಅಣಿಮಾಡಿಕೊಡುವನು. ಗರ್ಭಗುಡಿಯಲ್ಲಿಯೇ ಮಾಮೂಲಿಯವರಾದ ಹತ್ತೆಂಟು ಜನರು ನಗಾರಿ, ಕರಡಿ, ದೊಡ್ಡತಾಳ, ಸಣ್ಣತಾಳ, ಜಾಂಗುಟೆ, ಗಂಟೆ, ಜೋಡು ತುತೂರಿ ಮೊದಲಾದ ಅನೇಕ ವಾದ್ಯಗಳನ್ನು ಬಾರಿಸುವದಕ್ಕೆ ಸಜ್ಜಾಗಿ ನಿಂತಿರುವರು. ಅನೇಕ ಭಕ್ತರು ಇದನ್ನೆಲ್ಲ ನೋಡುವುದಕ್ಕೆ ಬಂದಿರುತ್ತಿರುವರು. ಇದೆಲ್ಲ ಒಂದೇ ಒಂದಾದ ಗರ್ಭಗುಡಿಯ ಒಳಭಾಗದಲ್ಲಿ.

ಆಗ ಒಂದು ದೀಪದಿಂದ, ಮೂರರಿಂದ, ಐದರಿಂದ, ಏಳು-ಒಂಬತ್ತು - ಹನ್ನೊಂದು ಮೊದಲಾಗಿ ದೀಪಗಳಿಂದ ಬೇರೆ ಬೇರೆ ಹಿತ್ತಾಳಿಯ ಧೂಪಾರತಿಗಳಂಥ ವಿವಿಧಾಕಾರದ ಉಪಕರಣಗಳಿಂದ ಗದ್ದುಗೆಗೆ ಬೆಳಗುವರು. ಆಗ ಒಂದೊಂದು ಪ್ರಕಾರದ ಜ್ಯೋತಿಯನ್ನು ಬೆಳಗುವಕಾಲಕ್ಕೆ ಸಕಲವಾದ್ಯ ಸಮ್ಮೇಳನದವರು ಒಂದೊಂದು ಪ್ರಕಾರದ ತಾಳಗತ್ತಿನಿಂದ ಏಕಕಾಲಕ್ಕೆ ಎಲ್ಲ ವಾದ್ಯಗಳನ್ನ ನುಡಿಸುವರು.

ದೀಪಗಳನ್ನು ಅರ್ಧಚಂದ್ರಾಕಾರದ ಆಕೃತಿಗಳಲ್ಲಿಯೂ ಚೌಕಾ ಕೃತಿಗಳಲ್ಲಿಯೂ ಅನೇಕಾನೇಕ ಆಕೃತಿಗಳಲ್ಲಿಯೂ ಹೊಂದಿಸಿ ಆಯಾ ಆಕೃತಿಗಳಾಗುವಂತೆ ಏರ್ಪಡಿಸಿ ಅವುಗಳಿಂದ ಬೆಳಗುವರು. ಕಡೆಕಡೆಗೆ ಒಂದು ದುಂಡಗಿನ ಸಣ್ಣ ತಟ್ಟೆಯಲ್ಲಿ ಸುಮಾರು ೭೦ ಬತ್ತಿಗಳನ್ನು ಬಿಡಿ ಬಿಡಿಯಾಗಿ ಹೊಂದಿಸಿ ಎಲ್ಲವುಗಳನ್ನು ಒಮ್ಮೆಗೆ ಹೊತ್ತಿಸಿ ಬೆಳ ಗುವರು. ಆಗ ಕೇವಲ ಚಂದ್ರ ಬಿಂಬದಂತೆ ಅದು ಕಾಣುವುದು. ಕಟ್ಟ ಕಡೆಗೆ ಒಂದು ದೊಡ್ಡ ತಟ್ಟೆಯಲ್ಲಿ ೧೦೮ ಬತ್ತಿಗಳನ್ನು ಹೊಂದಿಸಿ ಇಡೀ ತಟ್ಟೆಯ ತುಂಬ ಒಂದೇ ಮಹಾಜ್ವಾಲೆಯಾಗುವಂತೆ ಮಾಡಿ ಬಹು ವೈಭವದಿಂದ ಬೆಳಗುವರು. ಆಗ ಸೂರ್ಯೋದಯವಾದಂತೆ ಬೆಳಕು ಭುಗಿಲ್ ಭುಗಿಲ್ ಎಂದು ಪ್ರಜ್ವಲಿಸುವದು. ಅದರ ಜೊತೆಗೆ ಅನೇ ಕಾನೇಕ ಅದ್ಭುತ ನಾದಗಳೂ (ವಾದ್ಯಗಳೂ) ನಡೆದೇ ಇರುವವು.

"ಚಂದ್ರನ ಕಲೆಯ ಹಾಗೆ, ಸೂರ್ಯನ ಕಿರಣಗಳ ಹಾಗೆ, ಮಿಂ ಚುಗಳ ಪ್ರಕಾಶದ ಹಾಗೆ, ಮುತ್ತು ಮಾಣಿಕ ನವರತ್ನ ದೀಪ್ತಿಗಳ ಹಾಗೆ ಪ್ರಕಾಶಮಯವಾಗಿಹುದು. ಎಂದು ಶ್ರೀ ತೋಂಟದ ಸಿದ್ಧಲಿಂಗಯ ತಿಗಳು ತಮ್ಮದೊಂದು ವಚನದಲ್ಲಿ ಹೇಳಿದಂತೆ ಇವೆಲ್ಲ ಜ್ಯೋತಿಗಳೂ ನಾದಗಳೂ ಶಿವಯೋಗದ ಆಂತರಿಕ ಅನುಭವಗಳೆಂಬುದು ಆಗ ಸಹ ಜವಾಗಿ ಅದನ್ನು ನೋಡುವವರ ಅಂತಃಕರಣಕ್ಕೆ ಅನಿಸುವದು.

ಅಪೇಕ್ಷೆಯುಳ್ಳವರು ಶ್ರೀ ಶಿವಯೋಗೀಶ್ವರರ ಈ ದಿವ್ಯ ಶಿವಪೂಜೆ ಯನ್ನು ಸಾಲೋಟಗಿಗೆ ಹೋಗಿ ಪ್ರತ್ಯಕ್ಷವಾಗಿ ಕಂಡು ಶಿವಯೋಗದಲ್ಲಿ ಪ್ರೀತಿಯನ್ನುಂಟು ಮಾಡಿಕೊಳ್ಳಬೇಕು.

ಭಗವಾನ್ ಶ್ರೀ ಅರವಿಂದರು ಯೋಗದಿಂದಲ್ಲದೆ ಇನ್ನಾವುದರಿಂ ದಲೂ ಇಂದಿನ ಜಗತ್ತಿನ ಬದಲಾವಣೆಯಾಗಲಾರದೆಂದು ತಮ್ಮ "ಯೋಗ ಮತ್ತು ಅದರ ಉದ್ದೇಶ" ಎಂಬ ಗ್ರಂಥದಲ್ಲಿ ಹೇಳಿರುವರು. ಬಲ್ಲ ವರು ಹೀಗೆ ಅನೇಕಾನೇಕ ಪ್ರಕಾರದ ಪಠನ ಮನನ ನಿರೀಕ್ಷಣಗ ಳಿಂದ ಯೋಗದಲ್ಲಿ ಅಭಿರುಚಿಯನ್ನು ಹುಟ್ಟಿಸಿಕೊಂಡು ನವಯುಗದ ದಾರಿಯನ್ನು ಅನುಸರಿಸಬೇಕು.

---

# ಸಂಗೀತಶಾಸ್ತ್ರ.

(ಲೇಖಕ: — ಗಾಯನ ಕಲಾಕೋವಿದ, ಶ್ರೀ. ಜಿ. ಎಸ್ ಜ್ಯಕ್ತಿಮಠ)



ಸುಪ್ರಸಿದ್ಧವಾದ ಭರತಖಂಡದಲ್ಲಿ ಪ್ರಚಾರಗೊಂಡಿರುವ ಸಕಲ ಶಾಸ್ತ್ರಗಳಿಗೂ ವೇದಗಳೇ ಮೂಲವೆಂಬುದು ಶಿಷ್ಟರಿಗೆ ತಿಳಿದ ವಿಚಾರವೇ ಆಗಿದೆ. ಅದರಲ್ಲಿ ಮೂರನೆಯದಾದ ಸಾಮವೇದವನ್ನು ಪುರೋಹಿತರು ಆರ್ಷೇಯವಾಗಿ ಸಪ್ತಸ್ವರಗಳ ಸಮೇತ ಗಾನಮಾಡುತ್ತಿದ್ದಾರಷ್ಟೇ. ನಾರದಶಿಕ್ಷೆಯಲ್ಲಿ ಸಾಮಸ್ವರಕ್ಕೂ ಸಂಗೀತಸ್ವರಕ್ಕೂ ಇರುವ ತಾರತಮ್ಯವು ಹೇಳಿದೆ. ಆದಕಾರಣ ಸಂಗೀತಶಾಸ್ತ್ರ ಅಥವಾ ಗಂಧರ್ವವೇದವೆಂಬ ಉಪವೇದವು ಸಾಮವೇದ ಜನ್ಯವು. ವೇದದಲ್ಲಿ ವೀಣಾವಾದನಸಮೇತ ಗಾಯನ ಸಂಪತ್ಕರವೆಂದೂ ಪುರೋಹಿತರು ಮಂತ್ರಗಳನ್ನು ಹೇಳಬೇಕಾದರೆ ನಾದದೊಡನೆ ಹೇಳಬೇಕೆಂದೂ ವೇದದಲ್ಲಿ ಹೇಳಿದೆ.

ಪ್ರಾಚೀನಕಾಲದ ಋಷಿಗಳು ಪರ್ವತಗಳಲ್ಲಿಯೂ ಅರಣ್ಯಗಳಲ್ಲಿಯೂ ವಾಸಿಸುತ್ತಿದ್ದರೂ ವೀಣೆಯನ್ನು ಬಾರಿಸುತ್ತ ವೇದಪಠನವನ್ನು ಮಾಡುತ್ತಿದ್ದರು. ಹೋಮಹವನಗಳಲ್ಲಾದರೂ ವೀಣೆಯ ಕೂಡ ಮಂತ್ರಗಳನ್ನು ಹೇಳುತ್ತಿದ್ದರು. ಪುರಾಣ ಕಾಲದಲ್ಲಿ ಸಂಗೀತದ ಮಹತ್ವವು ಕಡಿಮೆ ಇದ್ದಿಲ್ಲ. ನಾರದಋಷಿಗಳು ವೀಣೆಯ ಮೇಲೆ ಗೋವಿಂದನ ಭಜನೆಯನ್ನು ಮಾಡುತ್ತ ತ್ರಿಲೋಕ ಸಂಚಾರ ಮಾಡುತ್ತಿದ್ದರೆಂದು ಪುರಾಣಗಳಲ್ಲಿ ಕಂಡುಬರುವದು. ವಾಲ್ಮೀಕಿ ಮುನಿಗಳು ಲವಕುಶರಿಗೆ ರಾಮಭಜನೆಯನ್ನು ಸಂಗೀತಾನುಸಾರವಾಗಿ ಮಾಡುವಂತೆ ಕಲಿಸಿದ್ದರು. ರಾವಣನು ಸಂಗೀತಶಾಸ್ತ್ರದ ಮೇಲೆ ಗ್ರಂಥವನ್ನು ಬರೆದಿದ್ದನಂತೆ. ಅವನ ಸಭೆಯಲ್ಲಿ ರಾಕ್ಷಸಿಯರೂ ಅಪ್ಸರ ಸ್ತ್ರೀಯರೂ ಗಾಯನ ನೃತ್ಯಗಳಿಂದ ಆನಂದವನ್ನುಂಟು ಮಾಡುತ್ತಿದ್ದರಂತೆ. ಯಮುನೆಯ ದಂಡೆಯಲ್ಲಿ ಮುರಲೀಧರನು ತನ್ನ ಕೊಳಲನ್ನೂದಿ ಗೋಪಿಕಾಸ್ತ್ರೀಯರ ಮನಸ್ಸನ್ನು ಆಕರ್ಷಿಸುತ್ತಿದ್ದನಲ್ಲದೆ ಗೋವುಗಳಿಗೆ ಸಂತೋಷವನ್ನುಂಟು ಮಾಡುತ್ತಿದ್ದನಂತೆ. ರಾವಣನು ಆಯಾಯ ರಸಕ್ಕೆ ಸಂಬಂಧವಾದ

ರಾಗಗಳಿಂದೊಡಗೂಡಿದ ಸ್ತೋತ್ರಪದ್ಯಗಳಲ್ಲಿಯೇ ತಲ್ಲೀನನಾಗಿ ಭಕ್ತಿ ಪರವಶನಾಗಿ ಭಾವೋದ್ರೇಕದಿಂದ ನಲಿದು ಶಿವನನ್ನೊಲಿಸಿದನು. ಹನುಮಂತನು ಕೂಡ ಹಾಗೆಯೇ ಮಾಡಿದ್ದಾನೆ. ಇನ್ನೂ ಅನೇಕ ಸಾಧು ಸಂತರು ಕೂಡಾ ದೇವನನ್ನು ಗಾಯನದ ಮಾರ್ಗದಿಂದಲೇ ಸಾಧಿಸಿದ್ದಾರೆ. ವ್ರತಗಳನ್ನಾದರೂ ಇದೇ ಮಾರ್ಗದಿಂದ ಪೂರ್ತಿಗೊಳಿಸಿದ್ದಾರೆ. ಸಂಗೀತದ ಜ್ಞಾನವು ವೇದಪಠಣಕ್ಕೆ ಮತ್ತು ದೇವರ ನಾಮಸ್ಮರಣೆ ಮಾಡುವದರಲ್ಲಿ ಏಕಾಗ್ರ ಚಿತ್ತಕ್ಕೆ ಅವಶ್ಯವಾದುದರಿಂದ ವೈದಿಕರೂ ಗೃಹಸ್ಥರೂ ಅದನ್ನು ಅಭ್ಯಾಸಿಸುತ್ತಿದ್ದರು. ವಿಕ್ರಮಾದಿತ್ಯ ಭೋಜ ಮೊದಲಾದ ಪ್ರಸಿದ್ಧ ರಾಜರು ನಾಯಕರೂ ವಾದಕರೂ ಆಗಿದ್ದರು. ಕಾದಂಬರಿಯಲ್ಲಿ ಮುಖ್ಯ ಕಥಾನಾಯಕನಾದ ಚಂದ್ರಾಪೀಡನು ರಾಜಪದವನ್ನು ಭೋಗಿಸಲಿಕ್ಕೆ ತನ್ನಲ್ಲಿ ಪಾತ್ರತೆಯುಂಟಾಗಬೇಕೆಂದು ನೃತ್ಯ ವಾದ್ಯಗಳ ಜ್ಞಾನವನ್ನು ಮಾಡಿಕೊಂಡಿದ್ದನೆಂದು ಕಾದಂಬರಿಯಲ್ಲಿ ಓದುತ್ತೇವೆ. ಪೂರ್ವದಲ್ಲಿ ರಾಜಪುತ್ರರೂ ರಾಜಕನ್ಯೆಯರೂ ಸಂಗೀತವನ್ನು ಅಭ್ಯಾಸಿಸುತಿದ್ದರು. ಆದರೆ ಮುಸಲ್ಮಾನರ ರಾಜ್ಯವು ನೆಲೆಗೊಂಡಂದಿನಿಂದ ಈ ಕಲೆಯು ಅಪಕರ್ಷವು ಆರಂಭವಾಗಿ ಕಡೆಗೆ ಅದು ವೇಶ್ಯಾಸ್ತ್ರೀಯರ ಕೈ ಸೇರಿತು. ಆ ಮೇಲೆ ಅವರು ಆ ಕಲೆಯ ಸೌಂದರ್ಯವನ್ನೂ ಅದರ ಉನ್ನತವಾದ ಮಾನಸ್ಥಾನಗಳನ್ನೂ ಕೆಡಿಸಿದರು.

ಇತ್ತೀಚಿಗೆ ಆ ಕಲೆಯು ತನ್ನ ಮೊದಲಿನ ಸ್ಥಾನದ ಸಮೀಪದಲ್ಲಿ ಬರುವದರಲ್ಲಿದೆ. ಈ ಕಲೆಯು ಮತ್ತೆ ಉತ್ತೇಜನ ಹೊಂದಲು ಪ್ರಾರಂಭವಾದದ್ದು ಹಿಂದುಸ್ತಾನದ ಸುದೈವವೇ ಸರಿ. ಅದರಲ್ಲಿ ಕಲೆಯ ಸುದೈವವಂತೂ ಮೀತಿಮೀರಿ ಹೋಯಿತು.

ಹಿಂದೂಜನರಲ್ಲಿ ಸಂಗೀತಶಾಸ್ತ್ರವು ಪಾಣಿನಿಯ ಕಾಲಕ್ಕಿಂತ ಮೊದಲು ಅಂದರೆ ಕ್ರಿಸ್ತಶಕಕ್ಕಿಂತ ಮೊದಲು ೩೫೦ ವರ್ಷಗಳಿಗಿಂತ ಪೂರ್ವದಲ್ಲಿ ಪೂರ್ಣವಾಗಿ ಅಭಿವೃದ್ಧಿಹೊಂದಿತ್ತೆಂದು ತಿಳಿದು ಬರುತ್ತದೆ.

ಆಗ ಸಪ್ತ ಸ್ವರಗಳು ರೂಢಿಯಲ್ಲಿದ್ದು ಅವು ಸ. ರಿ. ಗ. ಮ. ಪ. ಧ. ನಿ. ಎಂಬ ಸಂಜ್ಞೆಗಳಿಂದ ಅಂಕಿತವಾದ ಸಪ್ತಸ್ವರಗಳು ಇರಾಣದಿಂದ ಅರಬಸ್ತಾನಕ್ಕೆ ಹೋಗಿ ಅಲ್ಲಿಂದ ೧೧ನೇ ಶತಕದ ಆರಂಭದಲ್ಲಿ ಯುರೋಪ ಖಂಡವನ್ನು ಪ್ರವೇಶಿಸಿದವು.

"ಚೀನೀಜನರು ತಮ್ಮಲ್ಲಿದ್ದ ಪಂಚಸ್ವರಗಳಿಗೆ ಸಾರ್ವಭೌಮ ಮಂತ್ರಿ ಪ್ರಜಾ ರಾಜಕಾರಣ ಆಕಾಶ ದರ್ಪಣಗಳೆಂಬ ಹೆಸರನ್ನಿಟ್ಟಿದ್ದಾರೆ. ಗ್ರೀಸದೇಶದಲ್ಲಾದರೂ ಪ್ರತಿಯೊಂದು ಸ್ವರಕ್ಕೆ ಒಂದೊಂದು ಅಭಿಧಾನವಿದೆ. ಆದರೆ ನಮ್ಮಲ್ಲಿ ರೂಢವಾದ ರಾಗ ರಾಗಿಣಿಗಳು ಭಿನ್ನ ಭಿನ್ನವಾದ ಮನೋವೃತ್ತಿಗಳ ದರ್ಶಕಗಳಾಗಿವೆ. ಮತ್ತು ಅವುಗಳನ್ನು ನಮ್ಮಲ್ಲಿ ನಿಯಮಿತ ಕಾಲಕ್ಕೆ ಅನ್ನುವ ಸಾಂಪ್ರದಾಯವುಂಟು. ಅವೆಲ್ಲವೂ ಮಂಜುಳವಾಗಿರುವವು. ಅವುಗಳಲ್ಲಿ ಉದಯಕಾಲದ ರಾಗಗಳಂತೂ ಬಹು ಮನೋಹರವಾಗಿರುವದರಿಂದ ಪ್ರಾತಃಕಾಲದ ಶಾಂತಸಮಯದಲ್ಲಿ ಅತ್ಯಾನಂದವನ್ನುಂಟುಮಾಡುತ್ತವೆ. ಎಲ್ಲ ಸುಧಾರಿಸಿದ ರಾಷ್ಟ್ರಗಳಲ್ಲಿ ಸ್ವರಗಳ ಏಕೀಕರಣದಿಂದ ರಾಗಗಳನ್ನು ಕಲ್ಪಿಸಿದ್ದಾರೆ.

ಸಂಗೀತದ ಉತ್ಪತ್ತಿಯು ಶಿವ, ಪಾರ್ವತಿ, ನಂದಿ, ಹನುಮಂತ, ಅರ್ಜುನ, ಇವರಿಂದ ಆಯಿತೆಂದು ಕೆಲವರು ಅನ್ನುತ್ತಾರೆ. ಭರತನು ಸಂಗೀತದ ಪದ್ಧತಿಯನ್ನು ಸ್ವರ್ಗದಿಂದ ತಂದು ಪೃಥ್ವಿಯಲ್ಲಿ ಬೆಳಸಿದನೆಂದು ಹೇಳುತ್ತಾರೆ ಅದು ಹೇಗೇ ಇರಲಿ, ಸಂಗೀತದ ಉತ್ಪತ್ತಿಯು ಮಾತ್ರ ಶಿವ, ಪಾರ್ವತಿ, ನಂದಿ, ಹನುಮಂತ, ಅರ್ಜುನ, ಇವರಿಂದ ಆಯಿತೆಂದು ಸಂಗೀತ ಶಾಸ್ತ್ರದಿಂದ ತಿಳಿದುಬರುತ್ತದೆ.

ವೇದಕಾಲದಲ್ಲಿ ಸಂಗೀತವು ಉತ್ಕರ್ಷವನ್ನು ಹೊಂದಿತ್ತೆಂದು ಸಾಮವೇದದಿಂದ ತಿಳಿಯುತ್ತದೆ. ಆಗ ಷಡ್ಜ, ಋಷಭ, ಗಾಂಧಾರ, ಧೈವತ, ನಿಷಾದಗಳೆಂಬ ಪಂಚ ಸ್ವರಗಳು ಮಾತ್ರ ಇದ್ದವು. ಮುಂದೆ ಅವುಗಳಿಗೆ ಪಂಚಮ ಮಧ್ಯಮಗಳೆಂಬ ಎರಡು ಹೊಸ ಸ್ವರಗಳು ಕೂಡಿದುದರಿಂದ ಒಟ್ಟು ಸಪ್ತ ಸ್ವರಗಳಾಗಿವೆ.

ಇನ್ನು ಸಂಗೀತವೆಂದರೇನೆಂಬುದನ್ನು ವಿವೇಚಿಸುವಾ. ನಮ್ಮ ಶಾಸ್ತ್ರದಂತೆ ಹಾಡುವದು, ಬಾರಿಸುವದು, ಕುಣಿಯುವದು, ಇವು ಮೂರೂ ಮಾಡಿದಲ್ಲಿ ಸಂಗೀತವು. ಪರಮೇಶ್ವರನು ಗಾಯನಪ್ರಿಯನು ಇದ್ದಾನೆ. ಆದಕಾರಣ ತಾನೇ ಸ್ವತಃ ನೃತ್ಯಮಾಡುತ್ತಾನೆ. ಇಷ್ಟೇ ಅಲ್ಲ ನಾವು ಬೇಸರಪಟ್ಟಾಗ ಗಾಯನ ಕೇಳುವದು ಯೋಗ್ಯವೆಂದು ತಿಳಿಯುತ್ತೇವೆ. ಆದರೆ ಶಿವನು ಹೀಗಲ್ಲ. ಅವನು ಯಾವಾಗಲೂ

ಗಾಯನ ಕೇಳುವದಕ್ಕಾಗಿ ಗಾನನಿಪುಣರಾದ ಅಶ್ವತ ಕಂಬಳರನ್ನು ತನ್ನ ಕರ್ಣದಲ್ಲಿಯೇ ಧರಿಸಿದವನು. ಶಿವನು ಅನ್ನುವದೇನಂದರೆ, ಸಂಗೀತದಲ್ಲಿ ನನಗಿರುವ ಪ್ರೀತಿಯು ಘೃತ, ಕ್ಷೀರ, ಗುಗ್ಗುಳಾದಿಗಳಲ್ಲಿ ಇಲ್ಲವೆಂದು ಹೇಳಿದ್ದಾನೆ. ವೀಣಾವಾದನ ತಜ್ಞಳಾದ ಸರಸ್ವತೀ ದೇವಿಯ ಗಾನವನ್ನು ಬ್ರಹ್ಮದೇವನು ಕೇಳಿ ಆನಂದಪರವಶನಾಗಿ ಲಗ್ನ ಮಾಡಿಕೊಂಡನು. ರಂಭಾದ್ಯಪ್ಸರ ಸ್ತ್ರೀಯರ ನಾಟ್ಯಗಳನ್ನು ನಿರೀಕ್ಷಿಸುವದಕ್ಕೆ ಗಾನಚಿತ್ತನಾದ ದೇವೇಂದ್ರನಿಗೆ ಸಹಸ್ರ ನೇತ್ರಗಳೂ ಸಾಲವೆಂದು ಶಿವಸರ್ವಸ್ವವೇ ಮುಂತಾದ ಗ್ರಂಥಗಳಲ್ಲಿ ಉಕ್ತವಾಗಿರುವದು. ಆದಕಾರಣ ಸಂಗೀತಶಾಸ್ತ್ರವು ಹಿಂದುಗಳಿಗೆ ಆರ್ಷೇಯವಾಗಿ ಒಲಿದುಬಂದಿರುತ್ತದೆ. ಮತ್ತು ಬ್ರಹ್ಮರಾಕ್ಷಸವು ವಾಸವಾಗಿದ್ದ ಮನೆಯಲ್ಲಿ ೪೧ ದಿವಸಗಳ ವರೆಗೆ ಗಾನ ಮಾಡಿದರೆ ಬ್ರಹ್ಮರಾಕ್ಷಸವು ತೊಲಗುವದೆಂದು ವೇದಸಮ್ಮತವಿದೆ.

"ನಾಹಂ ವಸಾಮಿ ವೈಕುಂಠೇ ನ ಯೋಗಿಹೃದಯೇ ರವೌ।
ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ"। ಎಂದು ಋಷಿವರ್ಯನಾದ ನಾರದನನ್ನು ಕುರಿತು ಶ್ರೀಕೃಷ್ಣನು ಹೇಳಿದ್ದಾನೆ. ಭಗವಂತನಾದ ವಾಸುದೇವನ ವೇಣುಗಾನದಿಂದ ಗೋಪಿಕಾಸ್ತ್ರೀಯರೆಲ್ಲರೂ ಪರವಶರಾದುದೂ ತಿರ್ಯಗ್ಜಂತುಗಳು ಚಿತ್ತೈಕಾಗ್ರತೆಯುಳ್ಳವಾಗಿದ್ದುದೂ ಶ್ರೀಮದ್ಭಾಗವತದಿಂದ ತಿಳಿದುಬರುತ್ತದೆ.

ಯುರೋಪಖಂಡದಲ್ಲಿ ಗ್ರೀಸದೇಶದ ಗಾಯಕನೊಬ್ಬನು ತನ್ನ ಗಾಯನಶಕ್ತಿಯಿಂದ ಅಚೇತನ ವಸ್ತುಗಳನ್ನು ಆಕರ್ಷಿಸುತ್ತಿದ್ದನೆಂದು ತಿಳಿದುಬರುತ್ತದೆ.

ಬ್ರಹ್ಮಾದಿ ದೇವತೆಗಳೂ ನಾರದ ಭರತ ಮತಂಗಾದಿ ಮಹರ್ಷಿಗಳೂ ಸಂಗೀತ ಶಾಸ್ತ್ರಪ್ರವರ್ತಕರಾಗಿದ್ದುದರಿಂದ ಈ ಉಪವೇದಕ್ಕೆ ಪೂರ್ವಕಾಲದಲ್ಲಿ ಎಷ್ಟು ಗೌರವವಿದ್ದಿತೆಂಬುದು ಸ್ಪಷ್ಟವಾಗುತ್ತದೆ.

ವಾಚಕಮಹಾಶಯರೇ, ಪರಮಾತ್ಮನು ಎಂತು ಸರ್ವಕಾಲದಲ್ಲಿಯೂ ಸರ್ವ ಸ್ಥಳಗಳಲ್ಲಿಯೂ ವ್ಯಾಪಿಸಿರುವನೋ ಅಂತು ಗಾಯನ ವಿದ್ಯೆಯು ಸರ್ವತ್ರ ಅತ್ಯಂತ ಪ್ರಾಬಲ್ಯ ಸ್ಥಿತಿಯಲ್ಲಿರುವದು.



# ದೇಗುಲ ಮಠ.

(೧) ಒಂದಾನೊಂದಿನ-ಬಿನ್ನಹ-ವಿಕ್ಕೃತ
ಬಂದಾ ಗಂಗೆಯ ಬೀಳ್ಕೊಟ್ಟು
ನಿಂದಾ ಶ್ರೀಗುರು ನಿರ್ವಾಣೇಶನ
ಹಿಂದಿನ ಯೋಗದ ಸಿಲೆ ಗಟ್ಟು.

(೨) ಸುತ್ತಲು ಫಲ, ತರು ತೋಟಗಳಲ್ಲದೆ
ಹತ್ತಿರ ಆರ್ಕಾವತಿ ಇಹುದು
ನಿತ್ಯವು ತತ್ವ ಶ್ರವಣವ ಗೈಯ್ಯುವ
ಭಕ್ತರವೊತ್ತವು ಕೂಡಿಹುದು.

(೩) ಆದಿಯ ಸಂಸ್ಕೃತಿ ವಿದ್ಯೆಯ ಹರಡಲು
ಬೋಧಕ ಶಾಲೆಯ ಕಟ್ಟಿಹುದು.
ವೇದದಿ ಗುರುಪುನೆ ಧರ್ಮದ ಗುರಿಯನು
ಸಾಧಿಸಿ ತೋರುವ ನಿಲಯವಿದು

(೪) ಸೇರುತ ವಿದ್ಯಾತರುಣರ ಕೂಟವು
ಶಾರದೆ ವೈಸಿರಿ ಕೂಗುವುದು.
ದಾರಿಗರಿಗೆ ದಾಸೋಹದ ಸಿರಿಯನು
ಬೀರುತ ದಯನೆಲೆ ತೋರುವುದು.

—ಎಸ್. ಕರಿಯಪ್ಪ ಮಹದೇವರಹಳ್ಳಿ,
ಶಿವಾನುಭವಸಂಘ ಕಾನಕಾನಹಳ್ಳಿ.

# ಮಾನವ ಧರ್ಮ.

[ಧಾರವಾಡ ನವಕಲ್ಯಾಣಮಠದ ಶ್ರೀ ಕುಮಾರ ಸ್ವಾಮಿಗಳವರು ಬಿ. ಎ. ಅವರು ೩೦-೧೦-೪೬ ನೆಯ ಬುಧವಾರ ಶ್ರೀ ನವಕಲ್ಯಾಣ ಮಠದಲ್ಲಿ ಮಾಡಿದ ಭಾಷಣದ ಸಾರಾಂಶ.]

(ಸಂಗ್ರಾಹಕರು:— ವೀ. ರು. ಕೊಪ್ಪಳ ಎಂ. ಎ ಬಿ. ಟಿ, ಧಾರವಾಡ.)

ಮಾನವ ಧರ್ಮವು ಸಾಮಾನ್ಯವಾಗಿ ಮಾನವ ಮಾತ್ರರಿಗೆಲ್ಲ ಅನ್ವಯಿಸುವದಾಗಿದೆ. ಮಾನವ ಜನಾಂಗವು ತಲೆದೋರಿ ಅವರಲ್ಲಿ ಬುದ್ಧಿ ಭಾವನೆಗಳು ಅಂಕುರಿಸಿ ಬೆಳೆಯುತ್ತ ಬಂದಂತೆ ಈ ಮಾನವ ಧರ್ಮವು ಎಡೆಬಿಡದೆ ವಿಕಾಸ ಪಡೆಯುತ್ತ ಸಾಗಿರುವದು. ಇದು ಇಂಥದೊಂದು ದೇಶ, ಇಂಥದೊಂದು ಕಾಲ, ಇಂಥದೊಂದು ಪರಿಸ್ಥಿತಿ ಇವುಗಳಿಗಾಗಿ ಮಾತ್ರ ಸಂಬಂಧ ಪಟ್ಟುದಲ್ಲ. ಇಲ್ಲವೆ ಇಂಥ ಒಬ್ಬ ಸಂಸ್ಥಾಪಕನಿಂದ ಬೆಳಕಿಗೆ ಬಂದುದೂ ಅಲ್ಲ. ಹಾಗಾದರೆ ಪ್ರಪಂಚದಲ್ಲಿ ಈಗಿದ್ದ ಧರ್ಮಗಳ ಗತಿಯೇನು? ಅವು ಮಾನವ ಮಾತ್ರರಿಗಾಗಿ ನಿರ್ಮಿತವಾಗಿಲ್ಲವೇ? ಆಯಾ ಧರ್ಮ ಸಂಸ್ಥಾಪಕರ ಉದ್ದೇಶವಾದರೂ ಯಾವುದು? ಎಂಬಿವೇ ಮೊದಲಾದ ಪ್ರಶ್ನೆಗಳಿಗೆ ಸಮಾಧಾನವೇನು? ಪ್ರತಿಯೊಂದು ಧರ್ಮ ಸಂಸ್ಥಾಪನೆಗೆ ದೇಶ ಕಾಲ ಪರಿಸ್ಥಿತಿಗಳು ಅವಕಾಶವನ್ನು ಕಲ್ಪಿಸಿ ಕೊಟ್ಟವೆಂಬುದೂ ಮತ್ತು ಆ ಮೂಲಕವಾಗಿಯೇ ಅವು ಬೆಳೆಯುತ್ತ ಬಂದುವೆಂಬುದೂ ಐತಿಹಾಸಿಕ ಸತ್ಯವು. ಆ ಸಂಸ್ಥಾಪಕರ ಉದ್ದೇಶವು ಉದಾತ್ತವಾಗಿತ್ತು. ಜನಸಾಮಾನ್ಯರಿಗಾಗಿ ಕಲ್ಯಾಣೈಕ ಬುದ್ಧಿಯು ಅವರಲ್ಲಿ ಒಡೆದು ಕಾಣುತ್ತಿತ್ತು. ಆದರೆ ಜನತೆಗಾಗಿ ಅವರು ಕಂಡು ಹಿಡಿದ ಆರಾಧ್ಯ ದೇವತೆಯ ಕಲ್ಪನೆಯಿಂದ ಕಾಲವು ಗತಿಸಿದಂತೆ ಸಂಸ್ಥಾಪಕರ ಕಲ್ಯಾಣ ಬುದ್ಧಿಯ ಉದಾತ್ತ ಭಾವನೆಗಳ ಅರಿವಿಲ್ಲದೆ ವ್ಯವಹರಿಸಿದ ಜನ ಜಂಗುಳಿಯಲ್ಲಿ ಜಾತೀಯತೆಯು ಒಳಸೇರಿ ಅಪರಿಮಿತವಾದ ಅನಾಹುತಿಯು ತಲೆದೋರಿತೆಂಬುದನ್ನು ಮರೆಯುವಂತಿಲ್ಲ. ಆಯಾ ಸಂಸ್ಥಾಪಕರು ಪ್ರಚುರಗೊಳಿಸಿದ ಧಾರ್ಮಿಕ ಭಾವನೆಯಲ್ಲಿ ಹುದುಗಿದ್ದ ದೇವತ್ವದ ಕಲ್ಪನೆಯಲ್ಲಿ ಮೇಲು ಕೀಳಿನ ದೃಷ್ಟಿಯು

ಮೊಳೆತು ಸಂಕುಚಿತ ಭಾವವು ಬಲಿಯಿತು. ಈ ಸಂಕುಚಿತ ಸ್ವರೂಪವೇ ಜಾತೀಯತೆಗೆ ಕಾರಣವಾಗಿ ಕಾಲಾಂತರದಲ್ಲಿ ಮತ ಪಂಥ ಪಂಗಡಗಳ ಮಾತು ಬೆಳೆಯಿತು. ಜಾತಿ ಜಾತಿಗಳ ಜಗಳಗಳು ಅಸೂಯೆ ಮತ್ಸರಗಳು ಆಳತೆಗೆಟ್ಟವು. ಸದ್ಯದಲ್ಲಿ ಉದಾತ್ತವೆನಿಸುವ ಯಾವ ಧರ್ಮವನ್ನು ತೆಗೆದುಕೊಂಡರೂ ಅದು ಇಂಥ ಮತ ಪಂಥ ಪಾಡುಗಳ ಸಂಕುಚಿತ ದೃಷ್ಟಿಯನ್ನು ಅಂಟುರೋಗದಿಂದ ಬಿಡುಗಡೆಯನ್ನು ಪಡೆದಿರುವದಿಲ್ಲ. ಈ ಮತ ದೃಷ್ಟಿಯಿಂದ ದೋಷಯುಕ್ತವಾಗಿ ಮಸುಳಿಸಿದ ಮಾನವ ಬುದ್ಧಿಯು ತಿಳಿಯಿಂದ ಬೆಳಗಿ ಅವನಲ್ಲಿ ನಿರ್ಮಲಮತಿಯು ಮೊಳೆತು ಅದರಿಂದ ಹೊರ ಹೊಮ್ಮುವ ಮಾನವ ಸಂಸ್ಕೃತಿಯು ಬಳ್ಳಿಯಾಗಿ ಮುದುರಿದಾಗ ಧರ್ಮದ ಸತ್ಯ ಸ್ವರೂಪವು ವ್ಯಕ್ತವಾಗುವದು. ಇಂಥ ಧರ್ಮವು ಮಾನವ ಮಾತ್ರರಿಗೆಲ್ಲ ಸಂಬಂಧ ಪಡುವದರಿಂದ ಇದು ಮಾನವ ಧರ್ಮವೆನಿಸಿಕೊಳ್ಳುವದು.

ಧರ್ಮವಿವೇಚನೆಯನ್ನು ಮಾಡುವಾಗ ಅವರಲ್ಲಿಯ ಮತ ದೃಷ್ಟಿ ಮತ್ತು ಮತಿ ದೃಷ್ಟಿ ಇವುಗಳಿಂದ ಅದರ ಪರಿಶೀಲನೆ ಮಾಡಬಹುದು. ಮತ ದೃಷ್ಟಿಯಿಂದ ಬೆರೆತು ರೂಢವಾಗಿರುವ ಧರ್ಮಗಳೆಲ್ಲ ಸಾಮಾನ್ಯವಾಗಿ ಪೌರಾಣಿಕ ಧರ್ಮಗಳಲ್ಲಿಯೂ ನಿರ್ಮಲವಾದ ಮತ ದೃಷ್ಟಿಯಿಂದ ಬಲಿತು ರೂಪುಗೊಳ್ಳುವ ಧರ್ಮವೆಲ್ಲ ಪ್ರಾಗತಿಕ ಧರ್ಮವಾಗಿಯೂ ಪರಿಣಮಿಸುವವು. ಮತ್ತು ದೃಷ್ಟಿಗಾಗಿ ಪ್ರಾಗತಿಕ ಧರ್ಮದಲ್ಲಿ ವೈವಿಧ್ಯವಿಲ್ಲ. ಮಾನವ ಜನಾಂಗವೆಂಬುದು ಅಖಂಡವಾಗಿರುವದೆಂಬ ಭಾವನೆ ಇರುವದರಿಂದ ಅದು ಅನುಸರಿಸಬೇಕಾದ ಧರ್ಮದಲ್ಲಿ ಕೂಡ ವಿವಿಧತೆಗೆ ಅವಕಾಶವುಂಟಾಗದು. ಪೌರಾಣಿಕ ಧರ್ಮದಲ್ಲಿ ಜಾತೀಯತೆಯ ಕುರುಡನಂಬುಗೆ, ಅರ್ಥವಾಗದ ಅದ್ಭುತಗಳ ಅಚ್ಚರಿ, ಶುಷ್ಕವಾದ ಆಚಾರ ಪದ್ಧತಿಗಳ ಪರಂಪರೆ, ಇದ್ದುದೆಲ್ಲ ಸರಿಯಾಗಿದೆ ಸಾಧುವಾಗಿದೆ ಎಂಬ ಮೂಢ ವಿಚಾರ, ಧರ್ಮಬಂಧುಗಳಲ್ಲದವರಿಗೆ ತನ್ನಲ್ಲಿ ಇಂಬೀಯಲರಿಯದ ಅಜ್ಞತೆ, ಇಂಬಿತ್ತರೂ ಹುಟ್ಟಿನಿಂದ ಬಂದವರಲ್ಲಿ ಹೊಂದುಗೆಯಿಂದ ಒಂದಾದವರಲ್ಲಿ ಮೇಲು ಕೀಳುಗಳನ್ನು ಕಾಣುವ ಅವಿವೇಕತೆ, ಇವೆಲ್ಲ ಮನೆ ಮಾಡಿಕೊಂಡಿರುವವು. ಇದರಿಂದಾಗಿ ಇಂಥ ಧರ್ಮಾನುಯಾಯಿಗಳಿಗೆ ಪ್ರಗತಿಪರ ವಿಚಾರಗಳೇ ನಿಲುಕವು. ಪ್ರಾಗತಿಕ ಧರ್ಮದ ಕಾರ್ಯವು ಮಾತ್ರ ಇದರಿಂದ ಭಿನ್ನವಾದುದಾಗಿರುವದು. ಅಲ್ಲಿ

ಇದ್ದ ಸಂಗತಿಗಳ ಯಥಾರ್ಥಜ್ಞಾನವೇ ಮತಿ ದೃಷ್ಟಿಗೆ ಲಕ್ಷ್ಯವಾಗಿರುವದರಿಂದ ಇದ್ದುದನ್ನು ಇಲ್ಲವೆಂದು ಹೇಳುವ ಇಲ್ಲವೆ ಇಲ್ಲದುದನ್ನು ಇದೆ ಎಂದು ತಿಳಿಸುವ ಮಾತಿಲ್ಲ. ಅನವೇಕ್ಷಣ ಅತ್ಯವೇಕ್ಷಣಗಳಿಗೆ ಪ್ರಾಗತಿಕ ಧರ್ಮದಲ್ಲಿ ಎಳ್ಳನಿತು ಇಂಬಿಲ್ಲ. ಸತ್ಯಾನ್ವೇಷಣವೂ ಸಮ್ಯಕ್ ಜ್ಞಾನವೂ ಪ್ರಾಗತಿಕ ಧರ್ಮ ದೃಷ್ಟಿಯಲ್ಲಿ ಪ್ರಾಮುಖ್ಯವಾದ ವಿಷಯಗಳಾಗಿರುವದರಿಂದ ಅಲ್ಲಿ ಭಿನ್ನ ದೃಷ್ಟಿಯೂ ಇಲ್ಲ, ಮೇಲು ಕೀಳಿನ ಮಾತಿಲ್ಲ. ದ್ವೇಷಾಸೂಯೆಗಳಿಗವಕಾಶವಿಲ್ಲ. ಸತ್ಯ ಪ್ರೇಮ ದಯಾ ಸಮತೆ ಮೊದಲಾದ ಕಲ್ಯಾಣಗುಣಗಳಿಗೆ ಆಗರವಾಗಿ ಪ್ರಾಗತಿಕ ಧರ್ಮವು ಕಂಗೊಳಿಸುವುದು. ಇಂಥ ಪ್ರಾಗತಿಕ ಧರ್ಮವೇ ಮಾನವ ಧರ್ಮವು.

ಈ ಮಾನವ ಧರ್ಮದ ತತ್ವಗಳನ್ನು ಅರಿತುಕೊಳ್ಳಲು ಕಷ್ಟಪಡಬೇಕಾದುದಿಲ್ಲ. ಮಾನವ ಧರ್ಮವು ಸುತ್ತುಮುತ್ತಿನ ಸಮೀಪದ ವಸ್ತು ಒಡವೆಗಳ ರಹಸ್ಯವನ್ನರಿತುಕೊಳ್ಳುವದರಿಂದಲೇ ಅದು ಮೊದಲಾಗುವದರಿಂದ ಅದಕ್ಕಾಗಿ ದೀರ್ಘಸಾಹಸಪಡಲೂ ಬೇಕಾಗಿಲ್ಲ. ಸುತ್ತುಮುತ್ತಿನ ಸಮೀಪದ ವಸ್ತು ಒಡವೆಗಳಲ್ಲಿ ಕೇವಲ ತಮ್ಮ ತಮ್ಮ ಭೂಮಿ ಸೀಮೆ ಬಂಧುಬಳಗ ಹೆಂಡರು ಮಕ್ಕಳು ಮಾತ್ರ ಸಮಾವೇಶವಾಗುವದಿಲ್ಲ. ಇವು ತನ್ನಿಂದ ಭಿನ್ನವಾದವುಗಳು. ಇದಕ್ಕಾಗಿ ಸಮೀಪದ ಕೆಲವು ವಸ್ತುಗಳೂ ಉಂಟು. ತನಗೆ ತನ್ನ ದೇಹವೇ ಶ್ರೇಷ್ಠವಾದುದು. ತನ್ನಂಗಕ್ಕಿಂತ ಹಿತವಾವುದೀ ಜಗದಿ? ಈ ದೇಹಕ್ಕೆ ಸಂಬಂಧಪಟ್ಟ ಧರ್ಮ ಪರಿಪಾಲನೆಯೂ ಉಂಟು. ಅದುವೆ ದೇಹಧರ್ಮ. ಅದನ್ನರಿತುಕೊಂಡು ಅಂತು ಅನುವರ್ತತೆಯನ್ನಿರಿಸಿಕೊಳ್ಳುವದು ಮಾನವನ ಆದ್ಯ ಕರ್ತವ್ಯವಾಗಿಹುದು. ಆದರೆ ಪೌರಾಣಿಕ ಧರ್ಮವು ವಿಶೇಷವಾಗಿ ಭಾರತದಲ್ಲಿಯ ಪೌರಾಣಿಕ ಧರ್ಮವು ಹೇಳುತ್ತಿರುವುದೇನನ್ನು? "ಹಿಗ್ಗುವಿಯೇಕೋ ಈ ದೇಹಕ್ಕೆ ಹಿಗ್ಗುವಿ ಏಕೋ."

ಮಾನವ ದೇಹವು ನಶ್ವರವಾದುದು. ಅದಕ್ಕಾಗಿ ಇನಿತೊಂದು ಹಿಗ್ಗು, ಇನಿತೊಂದು ಹೆಮ್ಮೆ ಬೇಡ ಎಂದು ಹೇಳಿರುವದೇನೋ ನಿಜ. ಆದರೆ ನಶ್ವರವೆಂದು ಅದನ್ನು ನಾಶಗೊಳಿಸುವದೇ? ಜೀವಸಂಬೋಧನಾ ಸ್ಥಲದಲ್ಲಿ ಜೀವನಿಗೆ ಅನಾಸಕ್ತಿ ಯೋಗವುಂಟಾಗಲು ಹೇಳುವ ಮಾತುಗಳಿವು ಎಂದು ಎಣಿಸೋಣ. ಆದರೆ ದೇಹಧರ್ಮವನ್ನು ಪಾಲಿಸ

ಕೂಡದೆಂದು ಹೇಳುವ ಮಾತುಗಳಾಗವು. ಇವು 'ಶರೀರಮಾದ್ಯಂಖಲು ಧರ್ಮಸಾಧನಂ' ಎಂದೂ ಹೇಳಿರುವರಲ್ಲ! ಕೂಡಲಸಂಗನ ಒಲಿಸಬಂದ ಪ್ರಸಾದ ಕಾಯುವ ಕೆಡಿಸಲಾಗದು ಎಂದೂ ಹಾಡಿರುವರಲ್ಲ! ಭೌತಿಕ ದೇಹದ ಮಹತಿಯನ್ನು ಅರಿತುಕೊಳ್ಳದೆ ಧರ್ಮವಂತರೆನ್ನಿಸಿಕೊಳ್ಳುವವರು ಧರ್ಮವನ್ನು ಅವು ಎಂತು ಆಚರಿಸಬಲ್ಲರು? ದೃಢಕಾಯರಾಗದೆ ಧರ್ಮವನ್ನು ನಡೆಯಿಸಲಾಗುವದೇ? ಅದಕ್ಕಾಗಿ ದೇಹದ ಪಾಲನೆ ಪೋಷಣೆಗಳು ಅವಶ್ಯವಾಗಿ ಬೇಕು. ಅನ್ನವನ್ನು ಅಳತೆಮೀರಿ ತಿಂದು ತೇಗಿದರೂ ಅಷ್ಟೇ, ಅನ್ನವಿಲ್ಲದೆ ಬಳಲಿಬೆಂದು ಬೇಗುದಿಗೊಂಡರು ಅಷ್ಟೇ! ಎಂದು ಹೇಳುವದು ಶರೀರ ಧರ್ಮವನ್ನರಿತು ಹೇಳುವ ಮಾತಲ್ಲ. ಸಾವಿರಾರು ವರುಷಗಳಿಂದ ಹಿಂದೂ ಧರ್ಮವು ಹೇಳುತ್ತಬಂದ ವಿರತಿ ಭಾವದಿಂದ ಅದಾವ ಗೌರವದ ಕಾರ್ಯವಾಗಿದೆ? ತ್ಯಾಗದ ಅತಿರೇಕವು ರಾಷ್ಟ್ರವನ್ನು ಯಾವ ಮಟ್ಟಕ್ಕೆ ನಿಲುಕಿಸಿದೆ? ಅಲ್ಪ ಸಂತೋಷದಿಂದ ಅಳವಟ್ಟದು ತಿರುಪೆಯ ವೃತ್ತಿ ಬಡತನ ದುಃಖ ದಾರಿದ್ರ್ಯ ಉದಾತ್ತ ದೈವಭಾವನೆಯೂ ಅಂಗವಿಸಲಿಲ್ಲ. ಸತ್ತು ಸ್ವರ್ಗವನ್ನು ಕಾಣಲಿಲ್ಲ, ಇದ್ದು ಸುಖವನ್ನು ಉಣಲಿಲ್ಲ ಎಂಬಂತಾಗಿದೆ.

ಅನ್ನದೇವರ ಮುಂದೆ ಇನ್ನು ದೇವರು ಉಂಟೆ? ಅನ್ನಕ್ಕಾಗಿ ಕಳವಳ ಕೋಲಾಹಲ ಜಗತ್ತಿಗಲ್ಲ ಕಾಲಕಾಲಕ್ಕೆ ಉಂಟಾದ ಕ್ರಾಂತಿಗಳ ಬುಡದಲ್ಲಿ. ಅದು ಅಮೇರಿಕೆಯ ಸ್ವಾತಂತ್ರ್ಯದ ಕ್ರಾಂತಿಯೇ ಇರಲಿ, ಫ್ರಾನ್ಸದ ಪ್ರಜಾಪ್ರಭುತ್ವದ ಕ್ರಾಂತಿಯೇ ಇರಲಿ, ಇಲ್ಲವೆ ರಶಿಯದ ಕೂಲಿಕಾರರ ಕ್ರಾಂತಿಯೇ ಇರಲಿ, ಅದರ ಬುಡದಲ್ಲಿ ಅಡಗಿದ ಗೂಢವನ್ನು ಹುಡುಕಬೇಕು. ಅದೆಲ್ಲ ಅನ್ನಕ್ಕಾಗಿ, ಅರಿವೆಗಾಗಿ! ರಾಷ್ಟ್ರದ ಆರ್ಥಿಕ ಸ್ಥಿತಿಯು ಕೆಟ್ಟು ಹೊಟ್ಟೆಗೆ ಹಿಟ್ಟು, ಮೈಗೆ ಬಟ್ಟೆ ದೊರೆಯದಂಥ ಪರಿಸ್ಥಿತಿಯೊದಗಲು ಕ್ರಾಂತಿಯ ಕಹಳೆಯೊದಗಲೇಬೇಕು. ಎಲ್ಲರೂ ಮಾಡುವದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ! ಅನ್ನ ಅರಿವೆಗಳಿಗೆ ಬಡಿದಾಟವಾಗುವದು ಸ್ವಾಭಾವಿಕವಾದುದು. ಹಸಿದ ಹೊಟ್ಟೆಗೆ ಬೇಕಾದುದು ಹಿಟ್ಟು, ಧರ್ಮವಲ್ಲ. ಪ್ರಕೃತಿಯ ಕೊರೆತಕ್ಕೆ ಸಿಕ್ಕು ಗಾಸಿಗೊಳ್ಳುವ ದೇಹಕ್ಕೆ ಬೇಕಾದುದು ಬಟ್ಟೆ, ಧರ್ಮವಲ್ಲ. ತಿಂದುಂಡು ತೇಗುವ ಅಧಿಕಾರ ನಮಗೆ, ತಿರಿದು ಎಂಜಲುಣ್ಣುವ ಅಧಿ

ಕಾರ ನಿಮಗೆ, ಎಂದು ಹೇಳುವದು ಗಂಡಸಿನಮಾತಲ್ಲ. ಕೇಳುವದು ಗಂಡುಗರಿಯ ಮಾತಂತೂ ಮೊದಲೇ ಅಲ್ಲ.

ಇಪ್ಪತ್ತೈದು ಲೀಲೆಗಳನಾಡಿದ ಶಿವನು ಭಿಕ್ಷಾಟನಲೀಲೆಯನ್ನು ಆಡಿದನೆಂದು ಪೌರಾಣಿಕ ಧರ್ಮದ ಹೇಳಿಕೆ. ದೇವನೇ ಭಿಕ್ಷೆ ಬೇಡಿದ ಮೇಲೆ ದೇವಭಕ್ತರಾದ ನಾವು ಏಕೆ ಬೇಡಬಾರದು ಎಂಬ ಭಾವವು ಜನಾಂಗಕ್ಕೆ ಅಂಟಿಕೊಳ್ಳುವದು ಸಹಜವಾಯಿತು. ತಿಳಿಯುವ ವೃತ್ತಿಯುಳ್ಳವನು ದೇವನೇ? ಅಲ್ಲ. ತಿರುಕನೇನು ದೇವನಾಗಬಲ್ಲನೆ? ದೇವನೂ ಸಹ ತಿರಿದನೆಂಬುದು ತಿರುಕೆಯ ಕೆಲಸಕ್ಕೆ ಅನುಕೂಲಿಸುವಂತೆ ಮಾಡಿದ ಒಂದು ಕಲ್ಪನೆ. ಇಂಥ ಕಲ್ಪನೆಯ ಕೆಲಸಿನಿಂದ ಕಾರ್ಯದ ನೆನಪಡಗಿ ತಿರುಕರ ಪಿಡುಗು ಇನ್ನು ಹೆಚ್ಚಾಯಿತು. ಅದರಂತೆಯೇ ದೇವನು ಅಲ್ಲಿಹನು ಇಲ್ಲಿಹನು ಅದರಲ್ಲಿ ಉಂಟು ಇದರಲ್ಲಿ ಉಂಟು ಎಂಬುದೂ ಬರಿಯ ಕಲ್ಪನೆಯೋ? ಅದು ಬರಿಯ ಭ್ರಾಂತಿಯೋ? ಅವನು ಗುಡ್ಡದಲ್ಲಿಲ್ಲ, ಗವಿಯಲ್ಲಿಲ್ಲ, ಗಡ್ಡದಲ್ಲಿಲ್ಲ, ಚಂಡಿಕೆಯಲ್ಲಿಲ್ಲ, ದಾಡಿದಲ್ಲಿಲ್ಲ, ಕಲ್ಲಿನಲ್ಲಿಲ್ಲ, ಕಟ್ಟಿಗೆಯಲ್ಲಿಲ್ಲ, ಬೆಂಕಿಯಲ್ಲಿಲ್ಲ, ಮಣ್ಣಿನಲ್ಲಿಲ್ಲ, ಮಠದಲ್ಲಿಲ್ಲ, ಸಗಣಿಯಲ್ಲಿಲ್ಲ, ಬುಟ್ಟಿಯಲ್ಲಿಲ್ಲ, ಕ್ರಾಸಿನಲ್ಲಿಲ್ಲ, ಕ್ರೆಸೆಂಟಿನಲ್ಲಿಲ್ಲ, ಇವಾವುದರಲ್ಲಿಯೂ ದೇವನಿಲ್ಲ! ಧರ್ಮವಿಲ್ಲ! ಕಲ್ಪನೆಯ ಕನಸಿನಲ್ಲಿ ದೇವನಿರದೆ ಕಾರ್ಯದ ನೆನಸಿನಲ್ಲಿ ಅವನನ್ನು ಕಾಣಬೇಕು.

ಮನುಷ್ಯನಾದವನಿಗೆ ಅವಶ್ಯವಾದ ಅನ್ನ ಅರಿವೆಗಳು ದೊರಿತ ಹೊರತು ಇನ್ನೇನು ಬೇಕೆನಿಸುವದಿಲ್ಲ. ಇವು ಸಾಕಷ್ಟು ಸಿಕ್ಕ ಬಳಿಕ ಅವನಲ್ಲಿ ಉಚ್ಚ ವಿಚಾರಗಳ ಅಂಕುರವು ಮೂಡುವದಿಲ್ಲವೆಂಬುದಿಲ್ಲ. ಅನ್ನ ಅರಿವೆಗಳ ಹೊರತು ಅವನಿಗೆ ಆಶ್ರಯ ಔಷಧಗಳ ಸೌಕರ್ಯ ಬೇಕು. ಜೀವನಕ್ಕೆ ಅವಶ್ಯವಾಗಿ ಬೇಕಾಗಬಹುದಾದ ಈ ಒಡವೆಗಳ ಅನುಕೂಲತೆಯು ಉಂಟಾದ ಬಳಿಕ ಅರಿವಿನ ಕಡೆಗೆ ಅವನ ದೃಷ್ಟಿಯು ಏಕೆ ಹೊರಳಲಿಕ್ಕಿಲ್ಲ? ಹೊರಳುವದು. ಆಗ ಅನ್ನ ಅರಿವೆ, ಆಶ್ರಯ, ಔಷಧ, ಅರಿವು ಇವೇ ಶಿವಪಂಚಾಯತನವಾಗುವವನಿಗೆ. ಕಲ್ಯಾಣ ಬುದ್ಧಿಯಿಲ್ಲದೆ ಶಿವಪಂಚಾಯತನದಲ್ಲಿರಿಸಿದ ಪೂಜ್ಯಭಾವವು ಪೂಜೆಯಲ್ಲಿ ಪರಿಣಮಿಸದೆ ಅದು ಬರಿಯ ಪೂಜೆಯಾಗುವದು. ಕಳ್ಳಪೇಟೆಯಲ್ಲಿ ಲಕ್ಷ ಧನವ ಗಳಿಸಿ ನೂರು ಕೊಡುವದು ದಾನವಲ್ಲ,

ಧರ್ಮವೂ ಅಲ್ಲ ಜನತೆಯೇ ದೈವವು ಜನತೆಯ ಸೇವೆಯೇ ದೇವ ಪೂಜೆಯು. ಅದಕ್ಕೆ ಅವಶ್ಯವಾಗಿರುವ ಐದು ವಸ್ತ್ರಗಳನ್ನು ಒದಗಿಸಿ ಕೊಡುವದೇ ಶಿವಪಂಚಾಯತನ ಪೂಜೆಯು. ಆದುದರಿಂದ ದೇಹ ಧರ್ಮವನ್ನು ಪಾಲಿಸುವದೂ ಅದನ್ನು ಪಾಲಿಸಲಿಕ್ಕೆ ಅವಕಾಶವನ್ನು ಕಲ್ಪಿಸಿ ಕೊಡುವದೂ ಮಾನವ ಧರ್ಮದ ಮುಖ್ಯ ಲಕ್ಷಣವಾಗಿರುವದು.

ಮಾನವ ದೇಹದ ಮಹತಿಯನ್ನರಿತ ಬಳಿಕ ಅದನ್ನು ವ್ಯರ್ಥವಾಗಿ ಕಂದಿಸಿ ಕುಂದಿಸಿ ಬಂಧನಕ್ಕೆ ಒಳಗಾಗಬಾರದು. ಸ್ಥೂಲ ದೇಹವಿರು ವವರೆಗೆ ಈ ಬಾಹ್ಯ ದೃಷ್ಟಿಯೂ ಅವಶ್ಯವೆನಿಸುವುದರಿಂದ ಕರ್ತಾರನ ಕಮ್ಮಟವೆನಿಸುವ ಈ ಕರ್ಮ ಭೂಮಿಯನ್ನು ಕಡೆಗಣಿಸಿ ನೋಡಬೇಕಾಗಿಲ್ಲ. ಇಹಲೋಕಕ್ಕಿಂತ ಮಿಗಿಲಾದ ಸ್ವರ್ಗ, ಕೈಲಾಸ ಲೋಕಗಳೆಂಬವುಂಟು. ಅವುಗಳಲ್ಲಿಯ ಜೀವನವು ಶ್ರೇಷ್ಠವಾದುದು, ಸುಖಮಯವಾದುದು. ಈ ಭೂಲೋಕದಲ್ಲಿಯ ಬಾಳುವೆಯು ದುಃಖಮಯವಾದುದು, ಎಂದು ಕಣ್ಣಿಗೆ ಕಾಣದ ಅನುಭವಕ್ಕೆ ನಿಲುಕದ ಕಲ್ಪನೆಯ ಸಟೆಯಾದ ರಾಜ್ಯವೊಂದನ್ನು ಹೊಗಳಿ ಮಾನವ ಜೀವನಕ್ಕೆ ಎಲ್ಲ ರೀತಿಯಿಂದಲೂ ಅನುಕೂಲಿಸುವ ದಿಟವಾದ ಈ ಲೋಕವನ್ನು ತೆಗಳಿ ನುಡಿಯುವದು ನಮ್ಮ ಮೇಲಾದ ಪೌರಾಣಿಕ ಧರ್ಮದ ಪರಿಣಾಮದಿಂದ ಶಾಸ್ತ್ರ ದೃಷ್ಟಿಯಿಂದ ಅನುಭವ ದೃಷ್ಟಿಯಿಂದ ಅರೆದು ಒರೆದು ನೋಡಿದರೆ ಈ ನಿಸರ್ಗವು ಈ ಪ್ರಕೃತಿಯು ಅತಿ ನಿಯಮ ಬದ್ಧವಾಗಿ ಸಾಗಿರುವುದೆಂಬುದು ವ್ಯಕ್ತವಾಗುವದು. ಸ್ಥೂಲ ತನುವಿನಿಂದಿರಲು ಈ ಪೃಥ್ವಿಯೇ ಯೋಗ್ಯವಾದ ಸ್ಥಾನವೆನಿಸಿಹುದು. ಚಂದ್ರ ಮಂಗಳ ಲೋಕಗಳಿಗೆ ದಂಡಯಾತ್ರೆ ಗೆಯ್ದು ಅಲ್ಲಿಯ ಆವಾಸದ ಸವಿಸುಖವನ್ನು ಬಯಸುವ, ಬಯಸಿ ಹೊಂದಬೇಕೆನ್ನುವ ಸಾಹಸದ ಕಾರ್ಯಗಳಿಗೂ ಅಣಿಯಾಗಿದೆ ಎನ್ನೋಣ. ಆದರೆ ಅಲ್ಲಿಗೆ ಮುಟ್ಟುವ ಪೂರ್ವದಲ್ಲಿಯೇ ಯಾವ ಸ್ಥಿತಿ ಯೊದಗುವದು ಹೇಳುವರಾರು? ಒಂದು ದಿನಕ್ಕೆ ಅರ್ಧ ಅವಧಿಯಲ್ಲಿ ಆರುತಾಸಿನ ಉಗ್ರ ಸೆಕೆಯೂ ಆರುತಾಸಿನ ಶೀಘ್ರ ಚಳಿಯೂ ಇರುವದೆಂದು ಊಹಿಸಲಾದ ಚಂದ್ರಲೋಕದಲ್ಲಿ ಸೇರಿ ಸವಿಯುವ ಸುಖವಾದರೂ ಅದು ಎಂಥದು? ದೃಷ್ಟಿಯಲ್ಲಿ ತೋರುವ ಭಯಪ್ರದವಾದ ವ್ಯತ್ಯಾಸಗಳಿಂದ ಅಂಜಿಕೊಂಡು ಕೂಡ್ರುವದು ಭಾರತೀಯ ಜೀವರುಗಳಿಗೆ ಸಹಜವಾಗಿದೆ. ಪ್ರಕೃತಿಯೊಡನೆ ಹೋರಾಡುವದೆಂದರೆ

ಅವರಿಗೆ ಅರಿಯದ ವಿಷಯವು. ಅದರಲ್ಲಿ ತೋರುವ ವ್ಯತ್ಯಾಸಗಳಿಗೆ ಭಯಪಟ್ಟು ಅದರ ಶಾಂತತೆಗಾಗಿ ಬೇಡಿಕೊಂಡುದೂ ಪ್ರಾರ್ಥಿಸಿಕೊಂಡುದೂ ಅಷ್ಟಿಷ್ಟಲ್ಲ. ಈ ಪ್ರಾರ್ಥನೆಗಳ ಫಲವ ನರೂ ಯಾವುದು? ಪಾಶ್ಚಿಮಾತ್ಯರು ಪ್ರಕೃತಿಯೊಡನೆ ಹೋರಾಡಿ ಅದರಲ್ಲಿಯ ಅಮೋಘವಾದ ಅನರ್ಘವಾದ ತತ್ವಗಳನ್ನು ಕಂಡುಹಿಡಿದು ಆನಂದಗೊಳ್ಳುತ್ತಿರುವಂತೆ ಪ್ರಾರ್ಥನೆಗಳಿಂದ ಆನಂದವೇನಾದರೂ ಆಳವಟ್ಟಿದೆಯೇ? ಇಲ್ಲ. ಹೋರಾಟವೇ ಹರುಷ ವೆಂಬುವ ತತ್ವವು ತಿಳಿದಿಲ್ಲ. ಕಾಲ್ಪನಿಕ ರಾಜ್ಯ ಸುಖ ಭೋಗವೇ ಲಕ್ಷ್ಯ ವಾಗಿರುವ ಪೌರ್ವಾತ್ಯರಿಗೆ ಹೋರಾಟದ ಹರುಷಸುಖವು ಒಗ್ಗುವದೆಂತು? ಸ್ವರ್ಗದ ಕಾಲ್ಪನಿಕ ಜ್ಞಾನದ ಸವಿ ನನಸಿಗಿಂತ ನಿಸರ್ಗದಲ್ಲಿಯಡಗಿದ ಅಮೌಲ್ಯ ರತ್ನಗಳ ಶೋಧವು ಕಠಿಯಾದುದಾದರೂ ಅದು ನಮಗೆ ಬೇಕು. ಇದರಿಂದ ಮಾನವ ಲೋಕದ ಮಹತಿಯು ವಿದಿತ ವಾಗಬೇಕು. ಇಂಥ ಮರ್ತ್ಯಲೋಕದ ಮಹಿಮೆಯನ್ನು ಅರಿತುಕೊಳ್ಳುವದೂ ಮಾನವ ಧರ್ಮದ ಲಕ್ಷಣವಾಗಿರುವದು.

ಪ್ರಪಂಚದಲ್ಲಿ ಎದುರುಗೊಳ್ಳುವ ಸುಖ, ದುಃಖ, ಸತ್ಯ, ಅಸತ್ಯ, ನ್ಯಾಯ, ಅನ್ಯಾಯಗಳ ದ್ವಂದ್ವದಲ್ಲಿ ಒಂದು ಇನ್ನೊಂದರ ಅಭಾವ ವೆಂದು ಹೇಳಿ ದ್ವಂದ್ವದ ದಂದುಗವನ್ನು ಪರಿಹರಿಸುವ ಪುರುಷ ಪ್ರಯತ್ನವನ್ನು ಪೌರಾಣಿಕ ಧರ್ಮವು ಒಪ್ಪಿಕೊಳ್ಳುವದೇ ಇಲ್ಲ. ಎಲ್ಲವೂ ದೈವಾಧೀನ. ಬರವೇ ಲಿಂಗಾನಂದ ಎಂದು ಅನ್ನುವ ಭಕ್ತರ ನುಡಿಯು ಈ ಪುರುಷ ಪ್ರಯತ್ನದ ಅಭಾವವನ್ನೇ ವ್ಯಕ್ತಗೊಳಿಸು ವದು. ಬುದ್ಧಿ ಕರ್ಮಾನುಸಾರಿಣಿ ಎಂದು ಹೇಳುವ ಪೌರಾಣಿಕ ಧರ್ಮದ ಮಾತು ಸಾಕು. ಕರ್ಮವು ಬುದ್ಧಿಯನ್ನು ಅನುಸರಿಸುವದು ಎಂಬ ತಿಳಿ ತಿಳಿವು ನಮಗೆ ಬೇಕು. ಅಲ್ಲದೆ ಕಾರ್ಯವನೆಸಗಲು ಮನುಷ್ಯನಿಗೆ ಅವನ ಬುದ್ಧಿಯೇ ಪ್ರೇರಿಸುವಂತೆ ಸಲ್ಲುವ ಕಾರ್ಯ ಮಾಡಿಸಹಚ್ಚುವದೂ ಅವನ ಬುದ್ಧಿಯೇ ಕರ್ಮವನ್ನೆಸಗುವ ಕರ್ತಾರನ ಬುದ್ಧಿಗೆ ಬೆಲೆಯುಂಟು. ಸೊನೆ ಗಾರನ ಕೈಕತ್ತಿಯಾದರೇನು ಪರುಷ ಮುಟ್ಟಲು ಹೊನ್ನಾಗದೇ? ಮಾನವ ಬುದ್ಧಿಯು ಪರುಷದಂತೆ ಸಣ್ಣ ಜೀವಾಣುವಿನಿಂದ (Protopeasm) ಮಹಾತ್ಮನೆನಿಸಿದ ಮಾನವನ ವರೆಗೆ ದೇಹವನ್ನು ಧರಿಸಿ ಬರಲು ಧರಿಸಿಬಂದು ಹೋರಾಡಲು, ಹೋರಾಡಿ ಹರುಷಗೊಳ್ಳಹತ್ತಲು ಮಾನವ ಬುದ್ಧಿ, ಅವನ ಸಂಕಲ್ಪ ಶಕ್ತಿ, ಅವನ ಇಚ್ಛಾಬಲಗಳೇ

ಕಾರಣವಾಗಿವೆ. ಆದುದರಿಂದ ಬುದ್ಧಿಯು ಬಲವುಳ್ಳವನು ದ್ವಂದ್ವದ ದಂದುಗವನ್ನು ನಿವಾರಿಸಿಕೊಳ್ಳಲು ಶಕ್ತನಾಗದಿರನು. ಭೌತಿಕ ಸೃಷ್ಟಿಯಲ್ಲಿ ಕ್ರಿಯೆಪ್ರತಿಕ್ರಿಯೆಗಳಂತೆ ಭಾವನಾ ಸೃಷ್ಟಿಯಲ್ಲಿ ನ್ಯಾಯ-ಅನ್ಯಾಯ, ಸತ್ಯ-ಅಸತ್ಯ, ಸುಖ ದುಃಖಾದಿಗಳು ಸಮತೂಕದ ಪ್ರತಿಯೋಗಿಗಳಾಗಿರುವವು. ಆದುದರಿಂದ ಅನ್ಯಾಯ, ಅಸತ್ಯ ದುಃಖಾದಿಗಳ ಬಲವನ್ನು ಕುಗ್ಗಿಸಿ, ನ್ಯಾಯ, ಸತ್ಯ ಸುಖಾದಿಗಳ ಬಲವನ್ನು ಹಿಗ್ಗಿಸಬೇಕು, ಬುದ್ಧಿವಂತನಾದವನು ತನ್ನ ಬುದ್ಧಿಯ ಸಾಮರ್ಥ್ಯವನ್ನು ಕಾಣಬೇಕು. ಕರಿ ಘನ ಅಂಕುಶ ಕಿರಿದೆನ್ನಬಹುದೇ? ತಮಂಧ ಘನ, ಜ್ಯೋತಿ ಕಿರಿದೆನ್ನಬಹುದೇ? ಮರಹು ಘನ, ನೆನೆವ ಮನ ಕಿರಿದೆನ್ನಬಹುದೇ? ಬಾರದು! ಎಂಬಂತೆ ಅನ್ಯಾಯಾದಿಗಳು ಎಷ್ಟು ಘನವಾಗಿ ಕಂಡರೂ ನ್ಯಾಯಾದಿಗಳೆದುರು ಕಿರಿದಾಗಿಯೇ ಕಾಂಬವು. ಹಿರಿದಪ್ಪ ಅನ್ಯಾಯಾದಿಗಳನ್ನು ಕಿರಿದೆನಿಪ್ಪ ನ್ಯಾಯಾದಿಗಳ ಅಂಕಿತಕ್ಕೆ ಒಳಗುಮಾಡಬೇಕು. ಇದುವೆ ಧರ್ಮ ಇದುವೆ ಮಾನವ ಧರ್ಮ. ಪಶುಪತಿ ಧರ್ಮವೆಂದರೂ ಇದೇ? ಅನ್ಯಾಯ ಮೊದಲಾದವು ಪಶುವೃತ್ತಿಯ ಲಕ್ಷಣವಾಗಿಹವು. ಇವು ಅಳಿಯುವದಿಲ್ಲ. ಆದರೆ ಬುದ್ಧಿಯ ಬಲದಿಂದ ಪತಿಯ ಲಕ್ಷಣವಾದ ನ್ಯಾಯ ಮೊದಲಾದವುಗಳ ಅಂಕಿತದಲ್ಲುಳಿಯುವವು. ಹೀಗೆ ಅವು ಅಂಕಿತದಲ್ಲುಳಿಯಲು ಹೋರಾಡಬೇಕು. ಅದುವೆ ಹರುಷದಾಗರವಾಗಿಹುದು. ದೈವವಾದ ಅದೃಷ್ಟದ ನಂಬುಗೆಗಳು ಭಾರತ ದೇಶದಲ್ಲಿ ಹೇಡಿಗಳ ಬಲಹೀನರ ತಂಡವನ್ನೇ ನಿರ್ಮಿಸಿದವು. ಆತ್ಮವಿಶ್ವಾಸ ಸ್ವಾಭಿಮಾನವನ್ನೇ ಕಳೆದುಬಿಟ್ಟವು. ನಿಶ್ಚಯ ಧೋರಣೆ ನಿರ್ಣಯಾತ್ಮಕ ಬುದ್ಧಿಗಳನ್ನೇ ಹಾಳುಮಾಡಿದವು. ಮಾನವನ ಧರ್ಮವಾವುದು ಎಂಬ ವಿಚಾರ ಶಕ್ತಿಯನ್ನೇ ಕುಗ್ಗಿಸಿದುದು. ಆದುದರಿಂದ ಕಲ್ಪನೆಯಲ್ಲಿ ಮೂಡಿ ಮರವಾಗಿ ಬೆಳೆದ ಈ ದೈವವಾದ ಅದೃಷ್ಟಗಳ ನಂಬುಗೆ ಸಾಕು. ಪುರುಷ ಪ್ರಯತ್ನದ ಹಂಬಲು ಬೇಕು. ಅರ್ಥಾರ್ಥ ಮಾನವ ಧರ್ಮ ಪರಿಪಾಲನೆಗೆ ಸಿದ್ಧರಾಗಬೇಕು.

ಅದೃಷ್ಟವಾದದ ಆಶ್ರಯದಲ್ಲಿ ಬೆಳೆದ ನಮ್ಮ ಜನರಿಗೆ ಪ್ರಪಂಚದಲ್ಲಿ ಜರಗುವ ಘಟನೆಗಳ ಕಾರ್ಯಕಾರಣ ಸಂಬಂಧದ ಅರಿವೂ ಇಲ್ಲದಾಗಿದೆ. ಯಾವ ಘಟನೆಯೇ ಇರಲಿ, ಚಿಕ್ಕದಿರಲಿ. ದೊಡ್ಡದಿರಲಿ ಅದಕ್ಕೊಂದು ಕಾರಣವಿರಲೇಬೇಕು. ಕಾರಣವಿಲ್ಲದೆ ಕಾರ್ಯವಾಗದು. ಶೋಧಕ ಬುದ್ಧಿಗೆ ಆ ಕಾರಣವು ಈಗಲೇ ಕಾಣಬಹುದು. ಇಲ್ಲವೆ ಕಾಲಾಂತ

ರದಲ್ಲಿ ಕಾಣಬಹುದು. ಆದರೆ ಅದೃಷ್ಟ ವಾದದಿಂದ ಅದನ್ನು ಸಿದ್ಧಿ ಸಲೆತ್ನಿಸುವದು ಪುರುಷಾರ್ಥ ಲಕ್ಷಣವಲ್ಲ. ಕಾರ್ಯಕ್ಕೆ ಕಾರಣವನ್ನು ಕಂಡುಹಿಡಿದು ಬುದ್ಧಿ ಸಾಮರ್ಥ್ಯದಲ್ಲಿ ನಂಬುಗೆಯನ್ನು ಬೆಳಸಿಕೊಳ್ಳುವದೂ ಮಾನವ ಧರ್ಮವೇ ಆಗಿರುವದು. ಮಾನವತೆಯ ಅರಿವು ಬೆಳೆದು ಅದರ ಘನತೆಯು ಪ್ರಕಟವಾಗಬೇಕಾದರೆ ಮಾನವ ಧರ್ಮಪರಿಪಾಲನೆಯು ಅವಶ್ಯವಾಗಿ ಸಾಗಬೇಕು.

ಒಟ್ಟಾರೆ ಪೌರಾಣಿಕ ಧರ್ಮವು ಪುಣ್ಯಾಸೇವೆಗಳ ಮೇಲ್ಮೆಯನ್ನು ಎತ್ತಿಹಿಡಿದು ಪುಣ್ಯದ ಫಲವು ಎಂದೆಂದಿಗೂ ದೊರೆಯುವಂತೆ ಮಾಡಿಕೊಳ್ಳಬೇಕೆಂದು ಬೋಧಿಸುವದಾದರೆ ಮಾನವ ಧರ್ಮವು ಪುಣ್ಯಪಾಪಗಳು ತವಿಸ್ಪೃಷ್ಟಕರ್ತನ ಬುದ್ಧಿಯನ್ನವಲಂಬಿಸಿ ರೂಪುಗೊಳ್ಳುವವು ಎಂದು ತಿಳಿಸಿ ಸಮರ್ಥರಾದ ಮಾನವರ ನಿರ್ಮಾಣಗೊಳಿಸುವದು ಪೌರಾಣಿಕ ಧರ್ಮವು. ಅವತಾರಿಕರ ಹೆಚ್ಚಳವನ್ನು ಹೇಳಿ ಮಾನವನು ಮಾನವನೇ ದೇವನಾಗಲಾರನು ಎಂದು ಸಮರ್ಥಿಸಿದರೆ ಮಾನವ ಧರ್ಮವು ಮಾನವನ ಮಹತ್ತರವಾದ ವ್ಯಕ್ತಿಯಾಗಬೇಕು. ತನ್ನ ಅಸ್ತಿತ್ವನ್ನರಿತು ಅನ್ಯರು ಅದನ್ನರಿಯುವಂತೆ ಮಾಡಬೇಕು, ಎಂದು ಹೇಳಿ ದೇವಮಾನವರಲ್ಲಿ ಹೊಂದುಗೆಯನ್ನು ಸಾರುತ್ತದೆ. ಪುರಾಣಿಕ ಧರ್ಮವು ಮಾನವನು ಸಾಮಾನ್ಯವಾಗಿ ಜನಿಸಿ ಕ್ಷುದ್ರ ಜೀವಿಯಾಗಿ ಬಾಳಿ ಒಂದುದಿನ ಅಳಿದು ಹೋಗುವನು ಎಂಬ ಕ್ಷಣಿಕತ್ವದ ಮಾತನ್ನು ಒತ್ತೊತ್ತಿ ಹೇಳಿದರೆ ಮಾನವ ಧರ್ಮವು ಮಾನವನು ಸಾಮಾನ್ಯನಲ್ಲ, ಅತಿಮಾನವನಾಗುವ ಸಾಮರ್ಥ್ಯವೂ ಅವನಲ್ಲಿದೆ. ಆದುದರಿಂದ ಮಾನವನು ಅತಿ ಮಾನವನಾಗಬೇಕು ಎಂಬುದನ್ನು ಎತ್ತಿ ಎತ್ತಿ ಹೇಳುತ್ತದೆ. ಪೌರಾಣಿಕ ಧರ್ಮವು ಕಾರಣವನ್ನು ಕಂಡು ಹಿಡಿಯಲಾರದೆ ಘಟನೆಗಳಿಗೆ ದೈವವಾದದ ಮಾತನ್ನಂಟಿಸಿ ಪುರುಷ ಪ್ರಯತ್ನವನ್ನೇ ಅಲ್ಲಗಳೆದು ಕೈಲಾಗದವರ ನೆರವಿಯನ್ನು ಬೆಳಸುವದಾದರೆ ಮಾನವ ಧರ್ಮವು ಕಾರ್ಯಕ್ಕೊಂದು ಕಾರಣ ಉಂಟು, ಅದನ್ನು ಅರಿತುಕೊಳ್ಳಬೇಕು. ಅದರಲ್ಲಿ ಪುರುಷಾರ್ಥ, ಅದಕ್ಕಾಗಿ ಪುರುಷ ಪ್ರಯತ್ನ, ಪುರುಷಪ್ರಯತ್ನವಿದ್ದಲ್ಲಿ ಹರುಷ, ಅದುವೆ ಪುರುಷ, ಇಂತಹ ಪುರುಷ ಮಣಿಯ ನೆರವಿನಿಂದ ಜೀವನದ ಸಾರ್ಥಕ್ಯವನ್ನು ಮಾಡಿಕೊಳ್ಳಬೇಕು ಎಂದು ತಿಳಿಸುವದು. ಇಂತಹ ಮಾನವ ಧರ್ಮದ ತಿರುಳು ಜೀವನದ ಹುರುಳಾಗಿಹುದು:

# ಅಷ್ಟಾವರಣ.



ನಿಚ್ಚ ನಿಚ್ಚ ವಷ್ಟಾವರಣ ।
ನಚ್ಚಿ ಇಷ್ಟೆಯಿಂದುಪಚರಿಸೋ ॥ಪ॥
ಸಿರಿ ಸಂಪತ್ಸುಖ ಬಯಸುವರು ।
ಧರಿಸಿರಿ ಹಸನಾಗಿ ಭಸಿತವನು
ಪರಶಿವನಾಮವ ಪಾಡುತಲಿ
ಪರಮಾದರದಿಂ ದಿನ ದಿನವು ॥೧॥
ಧರ್ಮಾದಿ ಪೇಳಿರುವೆಲ್ಲಾ ಸ ।
ತ್ಕರ್ಮಕೆ ಬೇಕಾಗಿಹ ಭಸಿತ ।
ಚರ್ಮರೋಗಸೀತಾದಿಯು ದು
ಷ್ಕರ್ಮಜ ಬಾಧೆಯು ಪಿಂಗಿಪುದು ॥೨॥
ಮಾಡಿದ ಪಾಪವ ಪಲ್ಲಟಿಸಿ
ಪೀಡೆಪಿಶಾಚಿಯು ಪರಿಹರಿಸಿ,
ಗಾಢ ಸುಮಂಗಲವೀಯುವುದು
ಬೇಡಿದಿಷ್ಟಾರ್ಥವ ನೀಡುವುದು ॥೩॥
ಶಿವನ್ಯೈ ಬೆಳಗಿನ ವರ ಭಸಿತ
ಶಿವತೇಜವನೆ ಪ್ರಕಾಶಿಪುದು
ಭವಗೆಡಿಸುವುದೀ ಚಿದ್ಭಸ್ಮ
ಶಿವಪದವೀವುದು ಇದು ಸಹಜ ॥೪॥
ವೀರಶೈವ ಸ್ತ್ರೀ ಪುರುಷರು ಮೋ
ಹ್ನೋರರು ಕೂಡನುದಿನ ಭಸಿತ
ಹಾರೈಸಿ ಧರಿಸಿಕೊಂಡೆಲ್ಲರ್
ಸಾರ ಕರ್ಮ ಮಾಳ್ಪುದು ವಿಹಿತ ॥೫॥
ಛಿದ್ರರಹಿತ ರುದ್ರಾಕ್ಷಿಗಳ
ರುದ್ರನ ನೇತ್ರಗಳೆಂದರಿದು
ಕ್ಷುದ್ರ ಭಾವನೆಯನಳಿದುಳಿದ
ಭದ್ರ ಮನದಿ ದಿನ ಧರಿಸುವುದು ॥೬॥
ವರ ರುದ್ರಾಕ್ಷಿಯನಂಗದೊಳು

ಇರುಳು ಹಗಲು ತೆರಪಿಲ್ಲದತಿ
ಧರಿಸಿಕೊಂಡದರಿಂದೆಲ್ಲ
ಜ್ವರ ತಲೆ ನೋವುಗಳಳಿಯುವವು ॥೭॥
ನಿಗಮಾಗಮೋಕ್ತಿಗಳೆಲ್ಲ
ಬಗೆ ಬಗೆ ರೀತಿಲಿ ಬಹು ವಿಧದಿಂ
ಪೊಗಳ್ವವು ರುದ್ರಾಕ್ಷಿ ಧರಿಸಿದನ
ಜಗದೀಶ್ವರ ರುದ್ರನವನೆಂದು ॥೮॥
ಇದನರಿದೆಡಬಿಡದೆಚ್ಚರದಿಂ
ಸದಮಲ ಮನಭಕುತಿಗಳಿಂದ
ಮುದದಿಂದಂಗದಿ ರುದ್ರಾಕ್ಷಿ
ಸದುಭಕುತ ಭಕುತೆಯರ್ಧರಿಸುವುದು ॥೯॥
ಏಳು ಕೋಟಿ ಮಂತ್ರದೊಳೆಲ್ಲ
ಭಾಳಾಕ್ಷಶಿವನ ಪೆಸರಾದ
ಮೂಲ ಸಹಿತ ಪಂಚಾಕ್ಷರಿಯು
ಮೇಲೆಂದರಿದದ ಜಪಿಸುವುದು ॥೧೦॥
ಗುರೂಪದೇಶದಿ ಶಿವಮಂತ್ರ
ಪರಮ ಭಕ್ತಮಾಹೇಶ್ವರರು
ವರ ವೀರಶೈವ ಸತಿಯರ ಕೂ
ಡರಿದು ಗೋಪ್ಯದಿಂ ಜಪಿಸುವುದು ॥೧೧॥
ಇಷ್ಟಾರ್ಥವನೀಯುವ ಸಕಲಾ
ನಿಷ್ಟವ ಪರಿಹರಿಸುವ ತಮ್ಮ
ಇಷ್ಟಲಿಂಗವನು ಪ್ರತಿದಿನವು
ಶಿಷ್ಟ ಮನದಿ ಪೂಜಿಸುದುಚಿತ ॥ ೧೨ ॥
ವರ ವೀರಶೈವ ಸ್ತ್ರೀಪುರುಷರ್
ಎರಗದೆ ಗುಡಿ ಲಿಂಗಕೆ ಸಚ್ಚಿ
ದ್ಗುರುವರನಿಂ ಪಡೆದಿರುವಿಷ್ಟ
ಕರದ ಲಿಂಗವನೆ ಯುಜಿಸುವುದು ॥ ೧೩ ॥
ಲಿಂಗದ ಮುಖ ಪರಜಂಗಮವೆಂ
ಬಿಂಗಿತವನು ತಿಳಿದನುದಿನವು

ಪಿಂಗದೆ ಸೇವೆಯನೆಸಗುತಲಿ
ತುಂಗ ಸಂತೃಪ್ತಿಯ ಪಡಿಸುವುದು ॥ ೧೪ ॥
ಪರಮ ಭಸಿತ ರುದ್ರಾಕ್ಷಿಯು ಮೇ
ಣ್ಪರಶಿವ ಮಂತ್ರವು ಸಾಧನವು
ಗುರುವು ಲಿಂಗ ಜಂಗಮ ಮೂರು
ಪರತರವಾದಧಿದೈವಗಳು ॥ ೧೫ ॥
ಹರ ಗುರುಚರಚರಣೋದಕವು
ಕರ ಸುಖಮಯ ಸುಪ್ರಸಾದವು
ವರ ಫಲರೂಪಗಳೆಂದರಿದು
ಪರಮ ಹರುಷದಿಂ ಸಲಿಸುವುದು ॥ ೧೬ ॥
ಸಾಧನ ಮೂರರುಪಾಸನೆಯಿಂ
ಸಾಧಿಸಿ ಮೂರಧಿದೈವಗಳ
ಸಾಧಕ ಲಿಂಗಾಂಗಿಗಳ ಭಜಿಸಿ
ಬಾಧೆಯ ಕಾಲನ ಮೀರುವುದು ॥ ೧೭ ॥
ವೀರಶೈವ ಸ್ತ್ರೀಪುರುಷರು ಸ
ತ್ಪಾರಮಾರ್ಥ ಲೌಕಿಕವೆರಡ
ಧೀರತನದಿಯಾಚರಿಸುವಧಿ
ಕಾರತೆ ಶ್ರುತಿಮತದಿಂದಹುದು ॥ ೧೮ ॥
ಶಿಷ್ಟರೊಪ್ಪುವ ಸನ್ನುಡಿ ನಡೆಯು
ಕಷ್ಟದಿ ಸಾಧಿಸುತೆಡಬಿಡದೆ
ಸೃಷ್ಟಿಗೊಡೆಯನೊಲಿಮೆಯ ಪಡೆದು
ಶಿಷ್ಟರೆನಿಸಿ ಬಾಳ್ವುದು ಲೇಸು ॥ ೧೯ ॥
ಶ್ರೀಗುರುಪ್ರೇರಿತ ಬುದ್ಧಿಯಲಿ
ಆಗಾಗುದಿಸಿದ ವಿಷಯಗಳ
ಬೇಗ ಯೋಜಿಸಿದರೀ ರೀತಿ
ಶ್ರೀಗುರು ಸದಾಶಿವಾಚಾರ್ಯರ್ ॥ ೨೦ ॥

ಶ್ರೀಸದಾಶಿವಾಚಾರ್ಯಸ್ವಾಮಿಗಳು
ಸಖರಾಯಪಟ್ಟಣ

ವದಿಲ್ಲ. ಬಸವೇಶ್ವರನು ಮಂತ್ರಿ ಪದದಲ್ಲಿದ್ದರೂ ಬಿಜ್ಜಳರಾಜನು ಅವನಿಗೆ ಬೆಂಬಲಕೊಟ್ಟದ್ದು ಈ ಚರಿತ್ರೆಗಳಲ್ಲಿ ಕಂಡುಬರುವದಿಲ್ಲ. ಇದರ ಬದಲು ಬಿಜ್ಜಳನು ಅವನಿಗೆ ಹೆಜ್ಜೆ ಹೆಜ್ಜೆಗೂ ಪ್ರತಿರೋಧಿಸುತ್ತಾ ಬಂದಿದ್ದಾನೆ. ಅಶೋಕರಾಜನಿಂದ ಬೌದ್ಧ ಧರ್ಮವು, ಕಾನಸ್ಟಂಟಾಯಿನ ಚಕ್ರವರ್ತಿಯಿಂದ ಕ್ರಿಸ್ತೀ ಧರ್ಮವು, ಮತ್ತು ಖಲೀಪರಿಂದ ಇಸ್ಲಾಮ ಧರ್ಮವು ಪ್ರಸಾರ ಹೇಗೆ ಹೊಂದಿದವೋ ಹಾಗೆ ವೀರಶೈವ ಧರ್ಮವು ಯಾವ ರಾಜಕೀಯ ಸತ್ತಾಧಿಕಾರಿಗಳಿಂದಲೂ ಬಲವನ್ನು ಸಂಪಾದಿಸಿಕೊಂಡು ದೇಶದಲ್ಲಿ ಪ್ರಸಾರ ಹೊಂದಿರುವದಿಲ್ಲ. ಇದರ ಬದಲು ಇಂಥ ರಾಜಕೀಯ ಮತ್ತು ಧಾರ್ಮಿಕ ಸತ್ತಾಧಿಕಾರಿಗಳು ಶಿವಶರಣರ ಹಿಂಸೆಯನ್ನು ಮಾಡಿದ್ದು ಅವರ ಚರಿತ್ರೆಗಳಲ್ಲಿ ಕಂಡುಬರುತ್ತಿದೆ. ಇದನ್ನು ನಾವು ಮುಂದೆ ವಿವರಿಸುವೆವು.

ವೀರಶೈವ ಧರ್ಮವು ಪ್ರಸಾರ ಹೊಂದಿದ್ದು ಅದರಲ್ಲಿರುವ ಸರ್ವಸಮ್ಮತವಾದ ತತ್ವಗಳ ಮೂಲಕವೇ ಇರುತ್ತಿದೆ. ಈ ತತ್ವಗಳನ್ನು ಶಿವಶರಣರು ತಾವು ಅಕ್ಷರಶಃ ಪಾಲಿಸುತ್ತ ಅವುಗಳನ್ನು ಅವರು ಜನತೆಯಲ್ಲಿ ವಚನಗಳ ಮೂಲಕ ಪ್ರಸಾರ ಮಾಡಿದ್ದಾರೆ. ಅವರ ಈ ಕಾರ್ಯವು ಬಸವೇಶ್ವರನಗಿಂತ ೧೦೦-೧೫೦ ವರ್ಷಗಳ ಪೂರ್ವದಲ್ಲಿಯೇ ಪ್ರಾರಂಭವಾಗಿ ಅದು ಹೆಚ್ಚು ಕಡಿಮೆ ಪ್ರಮಾಣದಿಂದ ಮುಸಲ್ಮಾನರು ಕರ್ನಾಟಕವನ್ನು ಅಭಿಯೋಗಿಸುವ ವರೆಗೂ ನಡಿಯುತ್ತ ಬಂದಿರುತ್ತದೆ. ಈ ಸಂಗತಿಯು ಶಿವಶರಣರ ಕಾಲ ಮತ್ತು ಅವರ ಚರಿತ್ರೆಗಳಿಂದ ಕಂಡು ಬರುತ್ತದೆ. ಶಿವಶರಣರಲ್ಲಿ ಯಾರು ಬಸವೇಶ್ವರನಕ್ಕಿಂತ ಮೊದಲು ಇದ್ದರು ಎಂಬುದನ್ನು ನಾವು ಮುಂದೆ ವಿವರಿಸುತ್ತೇವೆ.

### ಶಿವಶರಣರ ಕಾಲದಲ್ಲಿ ವೀರಶೈವರ ಅಲ್ಪ ಸಂಖ್ಯೆ.

ಶಿವಶರಣರು ತಮ್ಮ ಧರ್ಮ ಪ್ರಸಾರ ಕಾರ್ಯವನ್ನು ಕೈಕೊಂಡಾಗ್ಗೆ ವೀರಶೈವರ ಜನಸಂಖ್ಯೆಯು ನಾಡಿನಲ್ಲಿ ಬಹು ವಿರಳವಾಗಿತ್ತೆಂದು ಅವರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಪುಲಿಗೆರೆ ಅಥವಾ ಲಕ್ಷ್ಮೇಶ್ವರವನ್ನು ಆದಯ್ಯನು ಪ್ರವೇಶಿಸಿದಾಗ್ಗೆ ವೀರಶೈವರ ವಸತಿಯೇ ಅಲ್ಲಿರಲಿಲ್ಲ. ಅಲ್ಲಿ ಎಲ್ಲೆಲ್ಲಿಯೂ ಜೈತ್ಯಾಲಯಗಳೇ ಅವನ ಕಣ್ಣಿಗೆ ಬಿದ್ದವು. ವೀರಶೈವರ ವಸತಿಯು ಕಲಬುರ್ಗಿ ಜಿಲ್ಲೆಯಲ್ಲಿ ಈಗ ದಟ್ಟವಾಗಿ

ಇರುತ್ತದೆ. ಆದರೆ ಅದರ ಮಧ್ಯ ಸ್ಥಳವಾದ ಮೂರುಡಿಗೆಯಲ್ಲಿ ವೀರ ಶೈವರಾರೂ ಇರಲಿಲ್ಲ. ಇದೇ ಸ್ಥಿತಿಯು ಏಕಾಂತದ ರಾಮಯ್ಯನ ಸ್ಥಳ ವಾದ ಅಬ್ಬಲೂರು (ಧಾರವಾಡ ಜಿಲ್ಲೆ) ಕೋವೂರ ಬ್ರಹ್ಮಯ್ಯನ ಸ್ಥಳ ವಾದ ಕೋಹಳ್ಳಿ (ವಿಜಾಪುರ ಜಿಲ್ಲೆ) ಏಲೇಶ ಕೇತಯ್ಯನ ಸ್ಥಳವಾದ ಏಲೇರಿ (ಕಲಬುರ್ಗಿಜಿಲ್ಲೆ) ಇಲ್ಲಿಯೂ ಇದ್ದಿತು. ಇವೆಲ್ಲವೂ ಹಿಂದಿನ ಕಾಲದಲ್ಲಿ ಮುಖ್ಯ ಗ್ರಾಮಗಳು. ಇಂಥ ಗ್ರಾಮಗಳಲ್ಲಿ ವೀರಶೈವರ ಸಂಖ್ಯೆಯು ಅತ್ಯಲ್ಪವಾಗಿದ್ದರ ಮೇಲಿಂದ ಗ್ರಾಮಾಂತರಗಳಲ್ಲಿಯೂ ಕೂಡ ಇದೇ ಸ್ಥಿತಿಯು ಇದ್ದಿರಬೇಕೆಂಬ ಅನುಮಾನವು ಉಂಟಾ ಗುತ್ತದೆ.

ಆದರೆ ಈ ಗ್ರಾಮಗಳು ಇದ್ದ ಭಾಗಗಳಲ್ಲಿ ವೀರಶೈವರ ಸಂಖ್ಯೆಯು ಈಗ ಬಹು ದಟ್ಟವಾಗಿರುತ್ತದೆ. ಹೀಗೆ ಅವರ ಸಂಖ್ಯೆಯು ಬೆಳೆಯು ಲಿಕ್ಕೆ ಕಾರಣಗಳಾವವೆಂಬುದನ್ನು ನಾವು ಕಂಡು ಹಿಡಿಯುವದು ಬಹಳ ಮಹತ್ವದ್ದಿರುತ್ತದೆ. ಆದರೆ ಈ ವಿಷಯದಲ್ಲಿ ಕೆಲವು ಕಾರಣಗಳು ಅನೇಕರಿಂದ ತೋರಿಸಲ್ಪಡುತ್ತಿದ್ದು ಅವುಗಳು ಸರಿಯಾದುವಲ್ಲವೆಂದು ನಿರ್ದೇಶ ಮಾಡುವದು ಮೊದಲು ನಮಗೆ ಅವಶ್ಯ ತೋರುತ್ತದೆ.

### ವೀರಶೈವರಲ್ಲಿ ಜಾತ್ಯಾನುಸಾರ ಧರ್ಮಾಂತರಗಳಾಗಿಲ್ಲ.

ಈ ಕಾಲದಲ್ಲಿ ಜಾತಿಗೊಬ್ಬ ಶರಣನಾಗಿ ಅವನು ತನ್ನ ಜಾತಿಯು ವರನ್ನೆಲ್ಲ ಲಿಂಗಧಾರಿಗಳನ್ನಾಗಿ ಮಾಡಿದನೆಂದು ಕೆಲವರು ಊಹಿಸು ತ್ತಾರೆ. ಆದರೆ ಶಿವಶರಣರ ಚರಿತ್ರೆಗಳನ್ನು ಪರಿಶೀಲಿಸಿದಲ್ಲಿ ಅವರು ಇಂಥ ಜಾತಿ ವಿಶಿಷ್ಟ ಭಾವನೆಯನ್ನು ತಾಳಿದ್ದು ಕಂಡುಬರುವದಿಲ್ಲ. ಅವರು ಜಾತಿ ಅಥವಾ ಪಂಗಡಗಳನ್ನು ಎಷ್ಟುಮಾತ್ರವೂ ಲಕ್ಷಿಸದೆ ಹೊಲೆಯು ಮೊದಲ್ಗೊಂಡು ಬ್ರಾಹ್ಮಣ ವರ್ಗದವರೆಲ್ಲರಿಗೂ ಸಮನಾಗಿ ಬೋಧಿಸಿ ರುತ್ತಾರೆ. ಇದು ಅವರು ರಚಿಸಿದ ವಚನಗಳಿಂದ ಸ್ಪಷ್ಟವಾಗುತ್ತದೆ. ಒಂದುವೇಳೆ ಅವರು ಹೀಗೆ ವರ್ತಿಸದೆ ತಮ್ಮ ಜಾತಿಯವರಿಗಷ್ಟೇ ಬೋಧಿಸಿದ್ದರೆ, ವೀರಶೈವ ಸಮಾಜದಲ್ಲಿ ಜಾತಿಗೊಬ್ಬಬ್ಬ ಸ್ವತಂತ್ರ ಗುರು ಅಥವಾ ಮಠಾಧಿಕಾರಿಯಾಗುತ್ತಿದ್ದನು. ಆದರೆ ಹೀಗೆ ಇರುವದು ಕಂಡು ಬರದೆ, ಮಠಾಧಿಕಾರಿಗಳಿಗೆಲ್ಲ ಅನೇಕ ಜಾತಿಯ ಶಿಷ್ಯ ಮನೆತನಗಳಿರು ವದನ್ನು ನಾವು ಈಗ ನೋಡುತ್ತೇವೆ. ಇದರಿಂದ ಹಿಂದಿದ ಕಾಲದಲ್ಲಿ ಶಿವ

ಶರಣರು ಮತ್ತು ಮಠಾಧಿಕಾರಿಗಳು ತಾವು ಹೊಂದಿನ ಸಂಗಡ ಅಥವಾ ಜಾತಿ ಈ ಭಾವನೆಯನ್ನಿಟ್ಟುಕೊಂಡು ಧರ್ಮಪ್ರಸಾರ ಮಾಡಿಲ್ಲೆಂದು ತೋರುತ್ತದೆ.

## ಶಿವಶರಣರು ಸ್ವೈರ ವೃತ್ತಿಗೆ ಇಂಬುಗೊಟ್ಟು ಧರ್ಮಾಂತರಗೊಳಿಸಿಲ್ಲ.

ಬೇರೆ ಕೆಲವರು ಹಿಂದಿನಕಾಲದಲ್ಲಿ ಶಿವಶರಣರು ಅಜ್ಞಾನಿಗಳಿಗೆ ಅನೇಕ ರೀತಿಯಿಂದ ಮೋಹವನ್ನು ಉಂಟುಮಾಡಿ ಅವರ ಸ್ವೈರ ವೃತ್ತಿಗೂ ದುರಾಶೆಗಳಿಗೂ ಇಂಬುಕೊಟ್ಟು ಅಥವಾ ಅವರ ಮೇಲೆ ಬಲಾತ್ಕಾರ ಮಾಡಿ ಅವರನ್ನು ಧರ್ಮಾಂತರಗೊಳಿಸಿರಬೇಕೆಂದು ಭಾವಿಸಿದ್ದಾರೆ. ಈ ರೀತಿ ಈಗಿನ ಕೆಲವು ಪ್ರಮುಖ ಧರ್ಮಗಳ ಪ್ರಚಾರಕರು ವರ್ತಿಸಿರುವದು ಕಂಡುಬರುತ್ತದೆ. ಆದರೆ ಯಾವ ಶಿವಶರಣರ ಚರಿತ್ರೆಗಳಲ್ಲಿಯೂ ಈ ರೀತಿಯು ಕಂಡುಬರುವದಿಲ್ಲ. ಅವರು ಅನೀತಿಯನ್ನೂ ವ್ಯಸನಗಳನ್ನೂ ಕಡುತರವಾದ ಶಬ್ದಗಳಿಂದ ಯಾವಾಗಲೂ ಟೀಕಿಸುವದುಂಟು. ಇಂಥವರು ಇಂಥ ಹೇಯವಾದ ಮಾರ್ಗವನ್ನು ಅವಲಂಬಿಸಿ ಇತರರನ್ನು ಧರ್ಮಾಂತರಗೊಳಿಸುವದು ಸಂಭವನೀಯವಲ್ಲ.

## ಶಿವಶರಣರ ಉಚ್ಚತರದ ಧರ್ಮಬೋಧೆಯ ಮೂಲಕ ಧರ್ಮಾಂತರಗಳು.

ಈ ಕಾಲದಲ್ಲಿ ಗುರುಗಳು ಶಿಷ್ಯರಿಗೆ ಹೇಗೆ ಬೋಧೆಮಾಡುತ್ತಿದ್ದರೆಂಬುದು ಸುಜ್ಞಾನಿದೇವನ ಚರಿತ್ರೆಯಿಂದ ಬಹು ಸರಸಾಗಿ ವ್ಯಕ್ತವಾಗುತ್ತದೆ. ಸುಜ್ಞಾನಿದೇವನು ತನ್ನನ್ನು ಸುಲಿಯಲಿಕ್ಕೆ ಬಂದಂಥ ಕ್ರೂರನಾದ ಬೇಡನಿಗೆ ಸದಾಚಾರವನ್ನು ಮೊದಲು ಬೋಧಿಸಿ ಆಮೇಲೆ ಅವನಿಗೆ ಲಿಂಗಧಾರಣೆಯನ್ನು ಮಾಡಿದ್ದಾನೆ. ಲಿಂಗಧಾರಣೆಯನ್ನು ಹೊಂದಿದ ಬಳಿಕ ಭಕ್ತನು ಲಿಂಗದ ನೆಲೆ ಕಲೆಗಳನ್ನು ಅರಿತುಕೊಳ್ಳಬೇಕು. ಇಂಥ ಜನರ ಸಂಖ್ಯೆಯು ಗ್ರಾಮಾಂತರಗಳಲ್ಲಿ ಹೆಚ್ಚುತ್ತಹೋದ ಹಾಗೆ ವೀರಶೈವ ಧರ್ಮವು ನಾಡಿನಲ್ಲಿ ಪ್ರಸಾರವಾಗುತ್ತ ನಡೆಯಿತು. ಈ ವಿಷಯವಾಗಿ ಭಾನುದೇವ, ತೆಲುಗೇಶ ಮಸಣಯ್ಯ, ಕದಿರಿರೆಮ್ಮಯ್ಯ ಇವರೇ ಮೊದಲಾದ ಶಿವಶರಣರ ಚರಿತ್ರೆಗಳನ್ನು ವಾಚಕರು ನೋಡಬೇಕು. ಈ ಚರಿತ್ರೆ

ಗಳಿಂದ ಹಿಂದಿನಕಾಲದಲ್ಲಿ ಲಿಂಗಜ್ಞಾನವನ್ನು ಹೊಂದಲು ಜನರಲ್ಲಿದ್ದ ಉತ್ಸುಕತೆ ಮತ್ತು ಅದಕ್ಕನುಸಾರವಾಗಿ ನಡೆಯಬೇಕೆಂಬ ಅವರ ಆಕಾಂಕ್ಷೆ ಇವು ಎಷ್ಟು ಗಾಢವಾಗಿದ್ದವೆಂಬುದು ವ್ಯಕ್ತವಾಗುತ್ತದೆ ಈ ಪ್ರಕಾರ ಶಿವಶರಣರು ಧರ್ಮಜ್ಞಾನವನ್ನು ಪ್ರಸಾರ ಮಾಡುತ್ತ ಬಂದುದರಿಂದಲೇ ವೀರಶೈವ ಸಮಾಜವು ಬೆಳೆದಿರುತ್ತದೆ.

## ಗುರುಗಳಿಂದ ಲಿಂಗಜ್ಞಾನವು. ಅವರಿಂದ ಧರ್ಮಪ್ರಸಾರವು.

ವೀರಶೈವವು ವಿಶೇಷಾಚರಣೆಗಳುಳ್ಳ ಧರ್ಮವಾಗಿರುತ್ತದೆ. ಲಿಂಗಧಾರಿಯು ಅವುಗಳ ಮರ್ಮವನ್ನು ಬಲ್ಲವರಿಂದ ಅರಿತುಕೊಂಡು ಆಚರಿಸಬೇಕು. ಇಂಥ ಲಿಂಗಾನುಭವ ಅಥವಾ ಆತ್ಮಾನುಭವವನ್ನು ಅವನು ಈ ವಿಷಯವನ್ನು ಬಲ್ಲ ಗುರುವಿನಿಂದಲೇ ಹೊಂದಬೇಕು. ಆದ್ದರಿಂದ ಅವನೂ ಅವನ ಕುಟುಂಬದವರೂ ಒಬ್ಬ ಗುರುವಿನನ್ನು ಆಶ್ರಯಿಸಬೇಕು. ಆದ್ದರಿಂದ ವೀರಶೈವ ಸಮಾಜದಲ್ಲಿ ಪ್ರತಿಯೊಂದು ಮನೆತನಕ್ಕೆ ಕೆಲವೊಬ್ಬ ಗುರುವು ಉಂಟಾಗಿರುತ್ತಾನೆ. ಇಂಥ ಗುರುಗಳು ಗ್ರಾಮಗಳಲ್ಲಿ ಮಠಗಳನ್ನು ಸ್ಥಾಪಿಸಿ ಆ ಗ್ರಾಮಗಳಲ್ಲಿರುವವರಿಗೆ ಧರ್ಮೋಪದೇಶವನ್ನು ಮಾಡುತ್ತ ಲಿಂಗಧಾರಣೆಯನ್ನು ಅಲ್ಲಿಯವರಿಗೆ ಮಾಡಿರುತ್ತಾರೆ. ಈ ಗುರುಗಳು ತಮ್ಮ ಗ್ರಾಮಗಳಲ್ಲಷ್ಟೇ ಅಲ್ಲ, ಇತರ ಗ್ರಾಮಗಳಲ್ಲಿಯೂ ಕೂಡ ವೀರಶೈವ ಮತಬೋಧೆಯನ್ನು ಮಾಡಿ ಅಲ್ಲಿಯೂ ಮಠಗಳನ್ನು ಸ್ಥಾಪಿಸಿರುತ್ತಾರೆ. ಈ ರೀತಿಯಾಗಿ ವೀರಶೈವ ಧರ್ಮವು ಶಿವಶರಣರ ಕಾಲದಲ್ಲಿ ದೇಶದಲ್ಲೆಲ್ಲ ಪ್ರಸಾರ ಹೊಂದಿರುತ್ತದೆ. ಈ ಪ್ರಸಾರ ಕಾರ್ಯವು ಬಹು ದಿವಸಗಳ ವರೆಗೆ ಅಂದರೆ ಬಸವೇಶ್ವರನ ತರುವಾಯ ಸುಮಾರು ೧೦೦-೧೫೦ ವರ್ಷಗಳ ವರೆಗೂ ನಡೆದಿರಬಹುದೆಂದು ತೋರುತ್ತದೆ.

## ವೀರಶೈವ ಮಿಶನರಿಗಳು ಅಥವಾ ಬೋಧಕರು.

ಶಿವಶರಣರು ಈ ರೀತಿಯನ್ನು ಕೈಕೊಂಡಿದ್ದರಿಂದ ಈ ಕಾಲದಲ್ಲಿ ಬಹು ಜನ ಬೋಧಕರು ನಾಡಿನಲ್ಲಿ ಉಂಟಾದರು. ಅವರು ಅನೇಕ ವಚನಗಳನ್ನೂ ಪದ ಪದ್ಯಗಳನ್ನೂ ಪುರಾಣಗಳನ್ನೂ ರಚಿಸುವವರಾದರು. ಅವರೆಲ್ಲರೂ ಅವುಗಳನ್ನು ಜನರಿಗೆ ಓದಿ ಹೇಳಿ ಬೋಧಿಸುವರು. ಈ

ಶ್ರೇಷ್ಠ ಕಾರ್ಯವನ್ನು ಅನೇಕ ಸ್ತ್ರೀಯರೂ, ಮಠಾಧಿಕಾರಿಗಳು, ಭಕ್ತರೂ, ಅಸ್ಪೃಶ್ಯರೂ, ಬ್ರಾಹ್ಮಣರೂ, ಹೀಗೆ ಎಲ್ಲ ತರಗತಿಯ ಜನರು ಈ ಕಾಲ ದಲ್ಲಿ ಮಾಡಿದ್ದಾರೆ. ಇದರಲ್ಲಿ ಅವರು ಕೈಕೊಂಡ ಪದ್ಧತಿಗಳನ್ನು ಈಗಿನ ಮಿಶನರಿಗಳು ಸಹ ಅನುಕರಣ ಮಾಡುವಂತೆ ಇವೆ. ಆದರೆ ಇದ ರಲ್ಲಿ ಶಿವಶರಣ ಧ್ಯೇಯವು ಜನರ ಧರ್ಮಾಂತರ ಮಾಡುವದು ಮಾತ್ರ ಇರದೆ ಅವರಲ್ಲಿ ಧರ್ಮ ಜಾಗ್ರತೆಯನ್ನುಂಟುಮಾಡುವದೇ ಮುಖ್ಯ ವಾಗಿತ್ತೆಂಬುದನ್ನು ನಾವು ಲಕ್ಷಿಸತಕ್ಕದ್ದು.

## ವಚನ ಶಾಸ್ತ್ರದಿಂದ ಧರ್ಮಬೋಧೆ.

ವೀರದೇವಮ್ಮನೆಂಬ ಶಿವಶರಣೆಯು ವಚನ ಶಾಸ್ತ್ರದಲ್ಲಿ ಪಾರಂಗ ತಳು. ಅವಳು ವಚನಗಳನ್ನು ದಿನಾಲು ಮೂರು ಹೊತ್ತು ಸ್ತ್ರೀಯ ರಲ್ಲಿ ಓದುವ ಪರಿಪಾಠವನ್ನಿಟ್ಟುಕೊಂಡಿದ್ದಳು. ಅವಳು ಅವುಗಳನ್ನು ರಾಜನ ಮುಂದೆಯೂ ದೇವಾಲಯಗಳಲ್ಲಿಯೂ ಎಲ್ಲರೂ ಕೇಳುವಂತೆ ಉಗ್ಗಡಿಸುವಳು. ಇದರಿಂದ ಅವಳಿಗೆ "ಉಗ್ಗಡಿಸುವ ಕನ್ನೆ ವೀರಾದೇವಿ" ಎಂಬ ಹೆಸರು ಪ್ರಾಪ್ತವಾಗಿತ್ತು. ಶಿವಮಾಯಿದೇವಿಯು ಶಿವಶರಣರ ಪುಣ್ಯ ಕಥೆಗಳನ್ನು ಹೇಳಿ ಬೋಧಿಸುವಳು. ಏಲೇಶ ಕೇತಯ್ಯನು ವಚನಕಾರನು. ಒಂದು ದಿವಸ ವಿರೋಧಿಗಳು ಅವನನ್ನು ಕೊಂದು ಹಾಕಬೇಕೆಂದು ಅವನ ಮನೆಯನ್ನು ಮುತ್ತಿದರು. ಆದರೆ ಅವನು ಅದಕ್ಕೆ ಅಂಜದೆ ಅವರನ್ನು ಮನೆಯಲ್ಲಿ ಬರಮಾಡಿಕೊಂಡು ಅವರಿಗೆ ಅಂಗ ಲಿಂಗ ಸಂಬಂಧ, ಷಟ್‌ಸ್ಥಲಾಚರಣೆ, ಇವುಗಳನ್ನು ಬೋಧಿಸಲು ಅವರ ರೋಷವು ಅಡಗಿತು. ಆಗ ಅವರು ಅವನಿಂದ ವೀರಶೈವ ಧರ್ಮವನ್ನು ಸ್ವೀಕರಿಸಿದರು. ಹೀಗೆ ಶಿವಶರಣರು ವೀರಶೈವ ಧರ್ಮ ವನ್ನು ಬೋಧಿಸುತ್ತ ಧರ್ಮಜಾಗ್ರತಿಯನ್ನು ಮಾಡಿದ್ದಾರೆ.

## ಕಾಯಕಗಳಿಂದ ಧರ್ಮ ಬೋಧೆ.

ಕೆಲವು ಶಿವಶರಣರು ಜನರು ತಾವಾಗಿಯೇ ತಮ್ಮಲ್ಲಿಗೆ ಬರು ವಂತೆ ಮಾಡಿ ಅವರಿಗೆ ಧರ್ಮಬೋಧೆಯನ್ನು ಮಾಡಿದ್ದಾರೆ. ಇದ ಕ್ಕೋಸ್ಕರ ಅವರು ತಕ್ಕ ಕಾಯಕಗಳನ್ನು ಕೈಕೊಂಡಿದ್ದಾರೆ. ವೈದ್ಯ ಸಂಗಣ್ಣನು ವೈದ್ಯಕೀ ವೃತ್ತಿಯವನು. ಆದ್ದರಿಂದ ಬಹುಜನರು ಅವನಿ

ದ್ದಲ್ಲಿಗೆ ಬರುವರು. ಆಗ ಅವನು ಅವರಿಗೆ ಷಟ್‌ಸ್ಥಲದ ಮರ್ಮ ಗಳನ್ನು ಬೋಧಿಸುವನು. ನಗೆಮಾರಿತಂದೆಯು ನಗಿಸುವ ಕಾಯಕ ವನ್ನು ಕೈಕೊಂಡಿದ್ದನು. ಇದರಿಂದ ಜನರು ಅವನಿದ್ದಲ್ಲಿಗೆ ಬಂದು ಅವನ ಹಾಸ್ಯಗಳನ್ನು ಕೇಳಿ ಆನಂದಿಸುವಾಗ್ಗೆ ಅವನು ಅವರಿಗೆ ಧರ್ಮ ಬೋಧೆಯನ್ನು ಮಾಡುವನು. ಹೆಂಡದ-ಮಾರಯ್ಯನು ಕಲ್ಯಾಣದಲ್ಲಿ ಅರವಟಿಗೆಯನ್ನಿಟ್ಟಿದ್ದನು. ಅವನು ದಾರಿಕಾರರಿಗೆ ನೀರನ್ನೆರೆಯುವ ಕಾಯ ಕವನ್ನು ಕೈಕೊಂಡು ಅಲ್ಲಿ ನೆರೆದ ಜನರಿಗೆ ಶಿವಾನುಭವವನ್ನು ಬೋಧಿ ಸುವನು. ಅವನಲ್ಲಿಗೆ ಭವಿಜನರೂ ಬರಹತ್ತಿದರು. ಅವರಿಗೂ ಅವನು ಬೋಧಿಸುವನು. ಮುಂದೆ ಸರಾಯಿ ಹೆಂಡ ಕುಡಿಯುವವರೂ ಬರ ಹತ್ತಿದರು. ಆಗ ಅವನು ಅವರಿಗೆ ಪ್ರಿಯವಾದ ಈಚಲ, ತೆಂಗು, ತಾಡವಾಲಿ, ಭಗಿನಿ ಇಂಥ ಗಿಡಗಳಿಂದಾದ ಮಾದಕ ಪದಾರ್ಥಗಳನ್ನು ಇಟ್ಟು ಕುಡಿಯಲಿಕ್ಕೆ ಕೊಡುವನು. ಅವರು ಅಲ್ಲಿ ನೆರೆದಾಗ್ಗೆ ಅವನು ಅವರಿಗೆ ಶಿವಾನುಭವವನ್ನು ಬೋಧಿಸುತ್ತ, ಇಂಥ ಪದಾರ್ಥಗಳನ್ನು ಸೇವಿ ಸದೆ ಲಿಂಗಾಂಗ ಸಾಮರಸ್ಯದ ರೀತಿಯನ್ನು ತಿಳಿದುಕೊಂಡು ನಿತ್ಯಾನಂದ ದಲ್ಲಿರಬೇಕೆಂದು ಅವರಿಗೆ ಬೋಧಿಸುವನು. ಈ ಶಿವಶರಣರು ಉಚ್ಚ ಶಿವಾನುಭವಿಗಳೂ ವಚನಕಾರರೂ ಇದ್ದಾರೆ. ಹೀಗೆ ಅನೇಕ ವಿಧವಾಗಿ ಶರಣರು ಜನರಲ್ಲಿ ಬೆರೆದು ಧರ್ಮಬೋಧೆ ಮಾಡಿದ್ದಾರೆ.

## ಭೃತ್ಯಾಚಾರದಿಂದ ಧರ್ಮಬೋಧೆ.

ಕೆಲವು ಶಿವಶರಣರು ಎಲ್ಲರೊಡನೆ ಭೃತ್ಯಾಚಾರದಿಂದ ನಡೆಯುತ್ತ ಅವರ ಮನಸ್ಸು ಶಿವಾನುಭವಕ್ಕೆ ಒಲಿಯುವಂತೆ ಮಾಡಿದ್ದಾರೆ. ಚಾಂ ಗುಬಲ್ಲಯ್ಯನು ಭಕ್ತರ ಮನೆಗೆ ದಿನಾಲು ಮುಂಜಾವಿನಲ್ಲಿ ಹೋಗಿ "ಚಾಂಗು ಭಲಾ" ಎಂಬ ಶಬ್ದಗಳಿಂದ ಅವರನ್ನು ಎಚ್ಚರಿಸಿ ಅವರನ್ನು ಲಿಂಗಾರ್ಚನೆಗೆ ತೊಡಗಿಸುವನು. ತೊಂಗಿನ ಮಹಾದೇವಿಯು ಇದೇ ರೀತಿಯ ಕಾಯಕವನ್ನು ಮಾಡುವಳು. ಅವಳು ಮನೆಯ ಜನರನ್ನು ಎಬ್ಬಿಸಿ ಅವರು ಗೃಹ ಕೃತ್ಯಕ್ಕೆ ತೊಡಗುವ ವರೆಗೆ ವಿನಯದಿಂದಲೂ, ಭಕ್ತಿ ಯಿಂದಲೂ, ಮನೆಯಲ್ಲಿ ನಿಂತು ಬಿಡುವಳು. ಆ ಮೇಲೆ ಅವಳು ಬೇರೊಂದು ಮನೆಗೆ ಹೋಗುವಳು. ಮುಸುಡಿಯ ಚೌಡಯ್ಯನು ಜನರನ್ನು ಕಂಡಾಗ್ಗೆ ಅವರಿಗೆ "ಶರಣು" "ಶರಣು" ಎಂದೆನ್ನುತ್ತ ಶರಣು ಭಾವದಿಂದ

ಅವರೊಡನೆ ಸೇವಕನಂತೆ ವರ್ತಿಸುವನು. ಈ ತೆರದ ವರ್ತನೆಯಿಂದ ಅವನು ಜನರ ಮನಸ್ಸಿನ ಮೇಲೆ ಪರಿಣಾಮ ಮಾಡುವನು. ಶಿವ ಭೃತ್ಯಮಲ್ಲಯ್ಯನೆಂಬ ಶಿವಶರಣನ ರೀತಿಯಾದರೂ ಹೀಗೆಯೇ ಇದೆ. ಈ ಪ್ರಕಾರ ಬಸವೇಶ್ವರನ ಕಾಲದಲ್ಲಿ ಅನೇಕ ಶಿವಶರಣರು ಭೃತ್ಯಾ ಚಾರಿಗಳಾಗಿ ನಡೆಯುತ್ತ ಜನರನ್ನು ಪಾರಮಾರ್ಥಕ್ಕೆ ಎಳೆದಿದ್ದಾರೆ.

## ಗಾಯನ, ನಾಟ್ಯ, ನೃತ್ಯ, ಕೀರ್ತನೆಗಳಿಂದ ಧರ್ಮಬೋಧೆ.

ಕೆಲವು ಶಿವಶರಣರು ಗಾಯನ ಕಲೆಯಲ್ಲಿ ನಿಷ್ಣಾತರಾಗಿ ಅದರ ಮೂಲಕ ಶಿವಾನುಭವವನ್ನು ಬೋಧಿಸಿದ್ದಾರೆ. ಇಂಡಿಯ ಶಾಂತ ಯ್ಯನು ಗಾಯಕನಾಗಿ ಕೀರ್ತನೆಗಳನ್ನು ಮಾಡುವನು. ಅವನು ಹೊಸ ತರದ ಸ್ತೋತ್ರಗಳನ್ನು ದಿನಾಲು ರಚಿಸಿ ಪರಮಾತ್ಮನನ್ನು ಭಜಿಸು ವನು. ಅಲ್ಲದೆ ಶಿವಭಕ್ತರಿಗೆ ಪಾಠವನ್ನೂ ಹೇಳುವನು. ನಿಂಬಾಣದ ಗಣೇಶ್ವರನು ಪದ ಪದ್ಯಗಳನ್ನು ರಚಿಸಿ ಅವುಗಳ ಮೂಲಕ ಶಿವಾನು ಭವದ ತತ್ವಗಳನ್ನು ಜನರಿಗೆ ಬೋಧಿಸಿದ್ದಾನೆ. ರಾಗ ರಸಾಂಕನು ಗಾಯಕನಾಗಿ ಮೇಲೆ ಹೇಳಿದ ರೀತಿಯಂತೆಯೇ ಆಚರಿಸಿದ್ದಾನೆ. ಸಿದ್ಧ ದೇವಮ್ಮನು ನಾಟ್ಯ ಕಲೆಯಲ್ಲಿ ಪ್ರವೀಣಳು. ಅವಳು ಅದರ ಮೂಲ ಕವಾಗಿ ಶಿವಶರಣರ ಚರಿತ್ರೆಗಳನ್ನು ಜನರ ಇದಿರಿಗೆ ಆಡಿತೋರಿಸು ವಳು. ಬಹುರೂಪಿ ಚೌಡಯ್ಯನು ಅನೇಕ ತರದ ವೇಷಗಳನ್ನು ಧರಿಸಿ ಶಿವಶರಣರ ಚರಿತ್ರೆಗಳನ್ನು ಆಡಿತೋರಿಸುವನು. ಅವನು ವಚನಕಾ ರನೂ ಇದ್ದಾನೆ. ಅಲ್ಲಯ್ಯನು ಸಂಗೀತದಲ್ಲಿ ಬಲ್ಲಿದನು. ಅವನು ಭಕ್ತರ ಮದುವೆ ಹಬ್ಬಗಳಲ್ಲಿ ಹೋಗಿ ಜನರ ಮುಂದೆ ಭಕ್ತಿ ಪೂರಿತ ಹಾಡುಗಳನ್ನು ಹಾಡುವನು. ಭದ್ರಗಾಯಕನು ಗಾಯನಕಲೆಯನ್ನು ಕಲಿತು ಪದಗಳ ಮೂಲಕ ಶಿವಶರಣರ ಮಹಿಮೆಗಳನ್ನೂ ಲಿಂಗ ಭಕ್ತಿಯ ಮಹತ್ವವನ್ನೂ ಜನರಿಗೆ ತಿಳಿಸಿ ಹೇಳುವನು. ಕೇಶಿರಾಜನು ವಿದ್ವಾಂಸನು ಮತ್ತು ಕವಿಯು. ಅವನು ದಿನಾಲು ಕಂದ, ತ್ರಿಪದಿ, ರಗಳೆ, ವಚನ, ಪದಪದ್ಯ, ದಂಡಕ ಅಷ್ಟಕಗಳನ್ನು ಹೊಸದಾಗಿ ರಚಿ ಸುತ್ತ ಜನರಿಗೆ ಬೋಧೆ ಮಾಡುವನು. ಕಲಕೇತ ಬೊಮ್ಮಯ್ಯನು ವಚನಕಾರನಿದ್ದಾನೆ. ಅವನು ತನ್ನ ಜಾತಿ ಧರ್ಮಕ್ಕನುಸಾರವಾಗಿ ಅನೇಕ ತರದ ಉಡುಪುಗಳನ್ನು ಧರಿಸಿಕೊಂಡು ಕುಣಿಯುತ್ತ ಶರ

ಣರ ಕೀರ್ತಿಯನ್ನು ಉಗ್ಗಡಿಸುತ್ತ ಪರವಾದಿಗಳ ತತ್ವಗಳನ್ನು ಖಂಡಿಸುತ್ತ ಶಿವಾನುಭವದ ಬೋಧೆಮಾಡುವನು. ಗಟ್ಟಿವಾಳಯ್ಯನು ನರ್ತನ ಮಾಡುವ ಕಾಯಕವನ್ನು ಮಾಡುತ್ತ ಮದ್ದಳೆಯನ್ನು ನಡಿಸುತ್ತ ಶಿವಾನುಭವದ ತತ್ವಗಳನ್ನು ಹಾಡುವನು. ಕಂಕರೀ ಕಕ್ಕಯ್ಯನು ಕಂಕರಿಯನ್ನು ನುಡಿಸುತ್ತ ದೇವರ ಭಜನೆ ಮಾಡುವನು. ಹೀಗೆ ಅನೇಕ ಶಿವಶರಣರು ಗಾಯನ, ನಾಟ್ಯ, ನೃತ್ಯ ಮೊದಲಾದ ಕಲೆಗಳನ್ನು ಕಲಿತುಕೊಂಡು ಅವುಗಳ ಮೂಲಕ ಶಿವಾನುಭವದ ತತ್ವಗಳನ್ನು ಜನರಲ್ಲಿ ಬೋಧಿಸಿದ್ದಾರೆ.

## ಸ್ತ್ರೀಯರ ಧರ್ಮ ಪ್ರಸಾರಕಾರ್ಯಗಳು.

ಈ ಕಾಲದಲ್ಲಿ ಸ್ತ್ರೀಯರೂ ಕೂಡ ಬೋಧಿಸುವ ಕಾರ್ಯವನ್ನು ಕೈಕೊಂಡು ಬಹು ಜನರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟಿದ್ದಾರೆ. ವರದಾನಿ ಗುಡ್ಡಮ್ಮೆಯು ಶಿವಶರಣೆಯು. ಅವಳು ಈ ಕಾರ್ಯವನ್ನು ಘನತರವಾದ ರೀತಿಯಿಂದ ಮಾಡಿದ್ದಾಳೆ. ಅವಳು ಮೊದಲು ಆದವಾನಿಯಲ್ಲಿ, ಆ ಮೇಲೆ ಅಲಂಪುರದಲ್ಲಿ ಪರವಾದಿಗಳನ್ನು ಗೆದ್ದು ಈ ಗ್ರಾಮಗಳಲ್ಲಿ, ಆ ಮೇಲೆ ಮೈಸೂರು ಸೀಮೆಗೆ ಹೋಗಿ ಕಪಿಲಾ ಕಾವೇರಿ ಸಂಗಮಸ್ಥಳದಲ್ಲಿ, ತಮಿಳು ದೇಶದಲ್ಲಿ ಕಾಂಚೀಪುರದಲ್ಲಿ, ಆ ಮೇಲೆ ತನ್ನ ಗ್ರಾಮಕ್ಕೆ ಬರುವ ಮಾರ್ಗದಲ್ಲಿ ಬಾಗೇವಾಡಿ, ಮನಗೋಳಿಯಲಿ ಹೀಗೆ ಅನೇಕ ಕಡೆಗೆ ಸಂಚರಿಸಿ ಬಹು ಜನರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟಿದ್ದಾಳೆ. ವೈಜವ್ವೆ ತಿಲಕವ್ವೆಯರು ಜೈನ ಧರ್ಮೀಯರಾದ ತಮ್ಮ ಪತಿಗಳಿಂದ ಮೊದಲು ಯಾತನೆಗಳನ್ನು ಅನುಭವಿಸಿದರೂ ಅವರು ಕಡೆಗೆ ತಮ್ಮ ಪತಿಗಳು ವೀರಶೈವರಾಗುವಂತೆ ಮಾಡಿದರು. ಗೊಗ್ಗವ್ವೆಯು ಚಾರಮರಾಯನಿಗೆ ಲಿಂಗತತ್ವಗಳನ್ನು ಬೋಧಿಸಿದ್ದಾಳೆ. ವಿಮಳಾದೇವಿಯು ಶಿವಾನುಭವಿಯಾಗಿ ಸ್ತ್ರೀಯರಿಗೆ ಬೋಧಿಸಿ ಅವರಿಗೆ ವೀರಶೈವದೀಕ್ಷೆಯನ್ನು ಕೊಡುವದನ್ನೇ ತನ್ನ ಕಾಯಕವನ್ನಾಗಿ ಇಟ್ಟುಕೊಂಡಿದ್ದಳು. ವೀರಶೈವ ಧರ್ಮ ಪ್ರಸಾರಕಾರ್ಯದಲ್ಲಿ ಸ್ತ್ರೀಯರು ಹಿಂದಿನಕಾಲದಲ್ಲಿ ಬಹು ಮಹತ್ವದ ಅಂಗವನ್ನು ವಹಿಸಿದ್ದಾರೆಂಬುದು ಈ ಚರಿತ್ರೆಗಳಿಂದ ತಿಳಿದು ಬರುತ್ತದೆ.

## ಕೆಳಗೆ ಕಾಣಿಸಿದ ಗ್ರಂಥಗಳು ಹಿತಚಿಂತಕ ಪ್ರಿಂಟಿಂಗ ಪ್ರೆಸ್ ವಿಜಾಪುರ, ಇಲ್ಲಿ ದೊರೆಯುತ್ತವೆ.

| | ಬೆಲೆ. |
|---|---|
| ೧. ಹೊಸ ಪದ್ಧತಿಯ ಬಸವೇಶ್ವರ ವಚನಗಳು. | ೨—೦—೦ |
| ೨. ಮಹಾದೇವಿಯಕ್ಕನ ವಚನಗಳು. | ೦—೧೨—೦ |
| ೩. ಘನಲಿಂಗನ ವಚನಗಳು. | ೦—೧೨—೦ |
| ೪. ಭಕ್ತಿಯ ವಚನಗಳು. | ೦—೧೦—೦ |
| ಶಿವಶರಣರ ಚರಿತ್ರೆ. ಭಾಗ ೧ | ೧—೧೨—೦ |
| ೬. ಆದಯ್ಯನ ವಚನಗಳು. | ೦—೮—೦ |
| ಮಡಿವಾಳ ಮಾಚಿದೇವನ ವಚನಗಳು. | ೦—೧೨—೦ |

ಗ್ರಂಥಗಳ ಲಿಷ್ಟಿಗೆ ಬರೆಯಿರಿ.—

---

**ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.**

**ವಾರ್ಷಿಕ ಚಂದಾ ಅಂಚೆವೆಚ್ಚಸಹಿತ ರೂ. ४—೧೨—೦ ವ್ಹಿ. ಪಿ. ಖರ್ಚು ೦—४—೦**

# BOOK-POST.

R. N B. 2554

*From,*
Shivanubhava
Office
Bijapur.

ಶ್ರೀ. [illegible]

ಚನಮಲ್ಲಪ್ಪ ಸಿದ್ದಪ್ಪ ಬಡೇಖಿ
ಪೋ. ಬನಹಟ್ಟಿ
ಸ್ಟೇ. ಕುಡಚಿ
(M. S. M. Ry.)









ವರ್ಷ ೨೧ ] ಫೇಬ್ರುವರಿ ೧೯೪೭ [ ಸಂಚಿಕೆ ೫

## ವಿಷಯಾನುಕ್ರಮಣಿಕೆ.


೧. ವಚನಶಾಸ್ತ್ರದ ದಿವ್ಯಸಂದೇಶ— ಶ್ರೀ. ಅನ್ನದಾನೀಶ್ವರ ವಿರಕ್ತಮಠ ರಾಣೆಬೆನ್ನೂರ. ೮೯

೨. ಲಿಂಗಾಂಗಿಯೆಂದರೆ ಯಾರು?— ಶ್ರೀ. ಅನ್ನದಾನೀಶ್ವರ ವಿರಕ್ತಮಠ ರಾಣೇಬೆನ್ನೂರ. ೯೨

೩. ವೀರಶೈವ ತತ್ವ— ಆ. ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ ಬೆಂಗಳೂರ. ೯೫

೪. ಬಸವಣ್ಣನವರ ಒಂದು ವಚನದ ಅರ್ಥವಿವರಣೆ— ಶ್ರೀ. ಗು. ಬ. ಮಠ. ೧೦೨

೫ ಶಿವಶರಣರ ಚರಿತ್ರೆಗಳು ಭಾಗ-೨— ಪ್ರಸ್ತಾವನೆ. ೭೩—೮೮
—ರಾ॥ ಬ॥ ಫ. ಗು. ಹಳಕಟ್ಟಿ ವಿಜಾಪುರ.

# ಶಿವಾನುಭವ

ವರ್ಷ ೨೧ | ಫೇಬ್ರುವರಿ ೧೯೪೭ | ಸಂಚಿಕೆ ೫


## ವಚನ ಶಾಸ್ತ್ರದ ದಿವ್ಯಸಂದೇಶ.


(ಲೇಖಕಃ — ಶ್ರೀ. ಅನ್ನದಾನೀಶ್ವರ ವಿರಕ್ತಮಠ. ಮು. ರಾಣೇಬಿನ್ನೂರ.)


ವಚನ ಶಾಸ್ತ್ರದ ದಿವ್ಯಸಂದೇಶವು ಜಗತ್ತಿನ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ನೈತಿಕ ಮತ್ತು ಶೈಕ್ಷಣಿಕ ರಂಗಭೂಮಿಗಳಲ್ಲಿಯೇ ಶ್ರೇಷ್ಠವಾದ ಅಮರ ಸಂದೇಶವಾಗಿದೆ.

ಆ ವಿಶ್ವವ್ಯಾಪಕ ಸಂದೇಶವು ಲಿಂಗಾಂಗಿ ಸಮಾಜದ ಅಮರ ಮುಂದಾಳುಗಳಾಗಿರುವ ಬಸವ, ಚನ್ನಬಸವ, ಪ್ರಭುದೇವ, ಸಿದ್ಧರಾಮೇಶ್ವರ, ಅಕ್ಕಮಹಾದೇವಿ ಮೊದಲಾದ ಶರಣ ಶರಣೆಯರಿಂದ ಅನುಭವ ಮಂಟಪದಲ್ಲಿಯೂ, ಬೇರೆ ಬೇರೆ ಸಂದರ್ಭಗಳಲ್ಲಿಯೂ ಸಾಧನೆಯ ಮೂಲಕ ಬೋಧಿಸಲ್ಪಟ್ಟಿದ್ದಾಗಿದೆ. ಆ ಸಂದೇಶವು ಕನ್ನಡನಾಡಿನಲ್ಲಿ ಕನ್ನಡದಲ್ಲಿ ಕೊಡಲ್ಪಟ್ಟಿದ್ದರೂ ಹಿಂದುಸ್ತಾನಕ್ಕೆ, ಇಡೀ ಜಗತ್ತಿಗೆ, ಅನ್ವಯಿಸುತ್ತದೆ.

ಶ್ರದ್ಧೆ, ಶಿಸ್ತು, ಗೌರವ ಬುದ್ಧಿ, ಸಹೋದರ ಭಾವ, ಸ್ವಾತಂತ್ರ್ಯ, ಸಮಾನತೆ, ಅಹಿಂಸೆ, ಲೋಕಸತ್ತಾತ್ಮಕ ತತ್ವಗಳೇ ಮೊದಲಾದ ಜಗದೋದ್ಧಾರಕ ತತ್ವಗಳಿಂದ ವೀರಶೈವ ಸಂಸ್ಕೃತಿಯು. ಶೋಭಾಯಮಾನವಾಗಿರುವದು. ಆ ಸಂಸ್ಕೃತಿಯು ಮಾಧುರ್ಯ ಮತ್ತು ಪ್ರಕಾಶದ ಪ್ರೇಮ ಕಿರಣಗಳನ್ನೇ ಹರಡಿರುವದು. ಆದ ಕಾರಣ ವೀರಶೈವ ಸಂಸ್ಕೃತಿಯು ವ್ಯಾವಹಾರಿಕವೂ ಆದರ್ಶವೂ ಆಗಿದೆ.

ಇಂಥ ಸಂಸ್ಕೃತಿಯನ್ನು ಜೀವನದಲ್ಲಿಳಿಸಿ, ಉಳಿಸಿ, ಬೆಳಗಿಸಿದ ಶ್ರೇಯಸ್ಸು ವಚನ ಸಾಹಿತ್ಯಕ್ಕಿದೆ. ಅಂದಮೇಲೆ ವಚನ ಸಾಹಿತ್ಯವು ಜಗತ್ತಿನ ಸಕಲ ಸಾಹಿತ್ಯಗಳ ಕೈದೀಪವಾಗಿದೆಯೆಂದೇ ಸಾಹಿತ್ಯಾಚಾರ್ಯರಾದ ಶ್ರೀ. ಡಿ. ವಿ. ಗುಂಡಪ್ಪನವರೇ ಮೊದಲಾದವರು ಹೇಳುತ್ತಿರುವದು ಯೋಗ್ಯವಾದ ಮಾತಾಗಿದೆ.

## ಶಿವಶರಣರ ಆಧ್ಯಾತ್ಮಿಕ ಆಕರ್ಷಣಶಕ್ತಿ.

ಶರಣ-ಶರಣೆಯರ ಆಧ್ಯಾತ್ಮಿಕ ಆಕರ್ಷಣ ಶಕ್ತಿಯು ಅತ್ಯಂತ ಪ್ರಬಲವಾದದ್ದು. ಅವರು ತಮ್ಮ ಷಟ್‌ಸ್ಥಲ ಧ್ವಜದ ಕೆಳಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮೊದಲಾದ ಎಲ್ಲ ವರ್ಣಗಳ ಜನರನ್ನೂ ಆಕರ್ಷಿಸಿದ್ದಾರೆ. ರಾಜರು, ರಾಣಿಯರು, ಪಂಡಿತರು, ಪಾಮರರು, ಹಳ್ಳಿಯ ಜನರು, ಪಟ್ಟಣಿಗರು, ಮೊದಲಾದ ಎಲ್ಲ ಜನರನ್ನೂ ಅವರು ಆಕರ್ಷಿಸಿದ್ದಾರೆ. ಈ ಎಲ್ಲ ಜನರು ಸ್ವಸಂತೋಷದಿಂದ ಹೃದಯಪರಿವರ್ತನೆಯ ಮೂಲಕ ಶರಣರ ಭಕ್ತರಾಗಿ ಸ್ವಯಂ ಶರಣರಾದರು.

## ವಚನಶಾಸ್ತ್ರವು ಅಮರವು.

ವಚನಶಾಸ್ತ್ರವು ಅಮರವಾದ ಅಪ್ರತಿಮವಾದ ತತ್ವಜ್ಞಾನ. ಅದು ಸಾಹಿತ್ಯ ಸಂಸ್ಕೃತಿಗಳಿಂದ ಕೂಡಿರುವದರಿಂದ ಅದಕ್ಕೆ ಆಚಂದ್ರಾರ್ಕವಾದ ಕೀರ್ತಿಯಿದೆ. ವಚನಶಾಸ್ತ್ರವು ಆತ್ಮನ ಅಮರಗೀತೆಯಾಗಿದೆ. ವಿವಿಧತೆಯಲ್ಲಿ ಏಕರೂಪತೆ, ವಿಷಮತೆಯಲ್ಲಿ ಸಾಮರಸ್ಯ, ಆರ್ಥಿಕ ಮತ್ತು ಜನಾಂಗ ಸಾಮ್ರಾಜ್ಯವಾದಿತ್ವಗಳಲ್ಲಿ ಆಧ್ಯಾತ್ಮಿಕ ಸಮತಾವಾದ, ಇದನ್ನು ಹೇಗೆ ಸಾಧಿಸಬೇಕೆಂಬ ಪಾಠವನ್ನೇ ಅದು ಬೋಧಿಸುತ್ತದೆ.

ಸ್ವಾರಸ್ಯವಾದ ಜ್ಞಾನ, ಆಳವಾದ ಅನುಭವ, ಪ್ರಗತಿಪರ ವಿಚಾರಗಳನ್ನು ವಚನಶಾಸ್ತ್ರದಲ್ಲಿ ನಾವು ಕಾಣುತ್ತೇವೆ. ವಚನಶಾಸ್ತ್ರವು ಲಿಂಗಾಂಗಿಗಳ ಧರ್ಮವಾಗಿದ್ದರೂ ಮಾನವಜನಾಂಗದ ಸಾಮಾನ್ಯ ಧರ್ಮವಾಗಲು ಅದು ಅಂತರಿಕ್ಷ ಶಕ್ತಿಯುಳ್ಳದ್ದಾಗಿದೆ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ವಚನಶಾಸ್ತ್ರವು ಭೂತ-ಭವಿಷ್ಯತ್ಕಾಲಗಳನ್ನು ಕೂಡಿಸುವ ಸೇತುವೆಯಾಗಿ ಪರಿಣಮಿಸಬಹುದೆಂದು ನಾವು ವಿಶ್ವಾಸಪೂರ್ವಕವಾಗಿ ಹೇಳಬಹುದು.

## ದಿವ್ಯಸಂದೇಶ.

ಶಿವಶರಣರ ಸಂದೇಶವನ್ನು ಈಗಿನ ಭಾಷೆಯಲ್ಲಿ ಹೇಳುವದಾದರೆ ನಾವು ಹೀಗೆ ಜನತೆಗೆ ಹೇಳಬಹುದು. ಅದು ಹೇಗೆಂದರೆ:—

"ಭೌತಿಕ ಪ್ರಗತಿಯ ಜೊತೆಗೆ ಆಧ್ಯಾತ್ಮಿಕ ಪ್ರಗತಿಯನ್ನು ಮಾಡಿಕೊಳ್ಳಿರಿ. ಅಂಗಲಿಂಗಸಾಮರಸ್ಯವೆಂದರೆ ಇದೇ ಇದೆ. ಸಾಮ್ರಾಜ್ಯಗಳು ಆಳುತ್ತವೆ, ಅಳಿಯುತ್ತವೆ. ಆ ಎಲ್ಲ ಸಾಮ್ರಾಜ್ಯಗಳಿಗಿಂತಲೂ ಶರಣ-ಶರಣೆಯರು ಘನತೆಯುಳ್ಳವರೆಂಬದನ್ನು ಮರೆಯಬೇಡಿರಿ. ಎಷ್ಟು ಎಷ್ಟು ಶಿವಶರಣರ ಆಧ್ಯಾತ್ಮಿಕ ಸಂಪತ್ತನ್ನು ನೀವು ಗಳಿಸುವಿರೋ ಅಷ್ಟು ಅಷ್ಟು ಭೌತಿಕಸಂಪತ್ತನ್ನು ಸಮಾನವಾಗಿ ಹಂಚುವ ಮನೋವೃತ್ತಿಯನ್ನು ನೀವು ಪಡೆಯುವಿರಿ. ವಿಜ್ಞಾನದಿಂದ ಭೌತಿಕ ಸಂಪತ್ತು ಹೆಚ್ಚುತ್ತಿದ್ದರೂ, ರಾಷ್ಟ್ರ ರಾಷ್ಟ್ರಗಳು ಸಮೀಪವಾಗಿದ್ದರೂ ಇಡೀ ಜಗತ್ತು ಸುಖವಾಗಿ ಬಾಳಲಿ ಎಂಬ ಮನೋವೃತ್ತಿಯು ಮಾತ್ರ ಜಗತ್ತಿನಲ್ಲಿ ಇನ್ನೂ ಹೆಚ್ಚಲಿಲ್ಲ. ಆದರೆ ಈ ಮನೋವೃತ್ತಿಯು ವಚನಸಾಹಿತ್ಯದ ತತ್ವಜ್ಞಾನದಿಂದ ಹೆಚ್ಚಾಗುವದು. ಭೌತಿಕ ಸಂಪತ್ತಿನ ಸರಿಯಾದ ಹಂಚುವಿಕೆಯೇ ದಾಸೋಹಭಾವದ ಕಾಯಕ ತತ್ವವು. ದೇಹ, ಮನ, ಜೀವಾತ್ಮಗಳನ್ನು ಇದರಿಂದ ಉದಾತ್ತ ಮಾಡಿಕೊಳ್ಳಿರಿ. ಈ ಪ್ರಪಂಚದಲ್ಲಿದ್ದ ಅಂಗೇಂದ್ರಿಯಗಳನ್ನು ಲಿಂಗೇಂದ್ರಿಗಳನ್ನಾಗಿ ಪರಿವರ್ತಿಸಿಕೊಳ್ಳಿರಿ. ಹೃದಯಪರಿವರ್ತನೆ ಅಥವಾ ಪಲ್ಲಟವು ಲಿಂಗಧ್ಯಾನದಿಂದಲೇ ಸಾಧ್ಯವು. ನಿಜಶರಣನೇ ನಿಜಲಿಂಗವು. ಅಂಥ ಶರಣನ ಧ್ಯಾನವೇ ಮಹಾ ತಾರಕಮಂತ್ರವು. ಇಟಲೀದೇಶದಲ್ಲಿದ್ದ ಅಸಾಸಿಯ ಸಾಧುವಾದ ಫ್ರಾನ್ಸಿಸ್ಸನು ಏಸೂಕ್ರಿಸ್ತನ ಧ್ಯಾನಮಾಡಿ ಕ್ರಿಸ್ತನಾದಂತೆ ಲಿಂಗದ ಧ್ಯಾನಮಾಡಿ ಶರಣರಾಗಿರಿ. ಅತಿ-ಮಾನವ ಅಥವಾ ಪೂರ್ಣ ಮಾನವರಾಗುವ ಗುಟ್ಟು ಇಲ್ಲಿದೆ. ಹೇಡಿತನದ ಸನ್ಯಾಸಿಗಳಾಗಬೇಡಿರಿ. ವೀರತನದ ಆಧ್ಯಾತ್ಮಿಕ ಸಂಸಾರಿಗಳಾಗಿರಿ. ಲಿಂಗಧ್ವಜದ ಕೆಳಗೆ ನಿಂತು ಅಂಗವನ್ನು ಬಲಿಷ್ಠಮಾಡಿಕೊಳ್ಳಿರಿ. ಅಂದರೆ ಆ ಶಕ್ತಿಯು ಜಗದೋದ್ಧಾರಕ ಶಕ್ತಿಯಾಗುವದು. ಜೀವನದಲ್ಲಿ ಸ್ವಾರಸ್ಯವಿದೆ. ಜೀವನಕ್ಕೆ ಅರ್ಥವಿದೆ. ಆ ಅರ್ಥವನ್ನು ಅರಿತು ಆಚರಿಸುವ ಯತ್ನವೇ ಲಿಂಗ ಅಂಗಗಳ ಸಾಮರಸ್ಯವು."

## ನಮ್ಮ ಕರ್ತವ್ಯ.

ಲಿಂಗಾಂಗಿಗಳಾದ ಈಗಿನ ನಾವು ವಚನಶಾಸ್ತ್ರದ ಈ ದಿವ್ಯಸಂದೇಶವನ್ನು ಹರಡದೆ-ಜಗತ್ತಿನಲ್ಲಿ ಪರಿಣಾಮಕಾರಿಯಾಗಿ ಹರಡದೆ-ಅಪರಾಧಿಗಳಾಗಿದ್ದೇವೆ. ಆ ಮಹಾಸಂದೇಶವನ್ನು ಬೀರುವ ನಮ್ಮ ಸಮಾಜದ ವ್ಯಕ್ತಿಗಳಿಗೆ ನಾವು ಸಾಕಷ್ಟು ಉತ್ತೇಜನ ಕೊಡುತ್ತಿಲ್ಲ. ಇದೆಂಥ ಹೊಣೆಗಾರಿಕೆ ಇಲ್ಲದ ದುಷ್ಪ್ರವೃತ್ತಿಯು!

ಇಂಗ್ಲಂಡ, ಅಮೇರಿಕಾ, ಜರ್ಮನಿ ಮೊದಲಾದ ದೇಶಗಳಲ್ಲಿ ತುಲನಾತ್ಮಕ ಅಭ್ಯಾಸ ಮಾಡಿ ಧರ್ಮಗ್ರಂಥಗಳನ್ನು ಬರೆಯುತ್ತಿದ್ದಾರೆ, ಬರೆದಿದ್ದಾರೆ. ಜಗತ್ತಿನ ವಿಭೂತಿಗಳ ಹೆಸರನ್ನೂ ಅವರು ಗೊತ್ತುಪಡಿಸಿದ್ದಾರೆ. ಆದರೆ ಅಲ್ಲಿ ನಮ್ಮ ಶರಣ-ಶರಣೆಯರ ಹೆಸರುಗಳು ಬಂದಿವೆಯೋ? ಇಲ್ಲ. ಪರದೇಶಗಳಲ್ಲಿ ವೇದಾಂತಪ್ರಸಾರವಾಗಿರುವಾಗ ವ್ಯಾವಹಾರಿಕ ವೇದಾಂತವಾದ ಲಿಂಗಾಂಗಸಾಮರಸ್ಯ ತತ್ವಜ್ಞಾನದ ಸಂಸ್ಕೃತಿಯು ಏಕೆ ಎಲ್ಲ ಕಡೆಗೂ ಹಬ್ಬಬಾರದು? ಭಗವದ್ಗೀತೆಯಲ್ಲಿ ಆಸಕ್ತಿಯುಳ್ಳವರು ಹೇಗೆ ದುಡಿಯುತ್ತಿದ್ದಾರೆಯೋ ಹಾಗೆಯೇ ವಚನಸಾಹಿತ್ಯದಲ್ಲಿ ಆಸಕ್ತಿಯುಳ್ಳವರು ದುಡಿಯಬೇಕು. ಶ್ರೀಮಾನ್ ಹಳಕಟ್ಟಿಯವರು ಈಗ ದುಡಿಯುತ್ತಿದ್ದಾರೆ. ಅವರಿಗೆ ಸರ್ವರೂ ಬೆಂಬಲ ಕೊಡಲಿಕ್ಕೆ ಬೇಕು. ಏಳಿರಿ! ಎದ್ದೇಳಿರಿ!! ಧ್ಯೇಯಸಿದ್ಧಿಯಾಗುವವರೆಗೂ ವಿರಮಿಸಬೇಡಿರಿ!!!

---

## ಲಿಂಗಾಂಗಿ ಯೆಂದರೆ ಯಾರು?

(ಲೇಖಕರುಃ—ಶ್ರೀ. ಅನ್ನದಾನೀಶ್ವರ ವಿರಕ್ತಮಠ. ಮು. ರಾಣೇಬಿನ್ನೂರ)

ಲಿಂಗವೆಂದರೆ ಪರಮಾತ್ಮ. ಈ ಲಿಂಗವು ಯಾವನ ಅಂಗವಾಗಿರುವದೋ ಅವನು ಲಿಂಗಾಂಗಿ. ಅಂದರೆ ಪಂಚ ಕರ್ಮೇಂದ್ರಿಯಗಳನ್ನು ಲಿಂಗಕ್ರಿಯೆಗಳನ್ನಾಗಿ ಮಾಡಬೇಕು. ಪಂಚ ಜ್ಞಾನೇಂದ್ರಿಯಗಳು ಲಿಂಗಜ್ಞಾನದ ಕ್ರಿಯೆಗಳನ್ನು ಮಾಡುತ್ತಿರಬೇಕು. ಹೃದಯವು ಲಿಂಗಭಾವವುಳ್ಳದ್ದಾಗಿರಬೇಕು. ಮನಸ್ಸು ಲಿಂಗ ಜ್ಞಾನದಿಂದ ತುಂಬಿರಬೇಕು.

ಜೀವಭಾವವು ಹೋಗಿ ಶಿವಭಾವವಾಗಿರಬೇಕು. ಈ ಪ್ರಕಾರ ತನು, ಮನ, ಜೀವಗಳು ಲಿಂಗಮಯವಾಗಿ ಕಾರ್ಯಮಾಡುತ್ತಿರಬೇಕು. ಅಂದರೆ ಅವನೇ ಲಿಂಗಾಂಗಿ.

ದೇಹವು ಲಿಂಗವಾಗುವದೆಂದರೇನು? ನಾಶವಾಗಬೇಕೋ? ಅಲ್ಲ. ದೇಹದ ಸಪ್ತಧಾತುಗಳು ಲಿಂಗ ಧ್ಯಾನದಿಂದ ಪರಿಶುದ್ಧವಾಗುತ್ತವೆ. ಸಪ್ತಧಾತುಗಳು ಶುದ್ಧವಾದರೆ ಶೂರ ಸಾತ್ವಿಕ ಕಾರ್ಯಗಳೇ, ಅಂದರೆ ಲಿಂಗಕ್ರಿಯೆಗಳೇ, ದೇಹದಿಂದ ಮಾಡಲ್ಪಡುತ್ತವೆ. ದೇಹವು ಆಗ ಹೇಯವಾಗದೇ ಲಿಂಗದ ಪ್ರಸಾದವಾಗುತ್ತದೆ. ದೇಹದ ಭೋಗವು ಲಿಂಗದ ಪ್ರಸಾದವಾಗುತ್ತದೆ. ದೇಹನ್ನ ಚೆನ್ನಾಗಿ ಬೆಳೆಯಿಸುವದು ಕೂಡಾ ಲಿಂಗದ ಪ್ರಸಾದವಾಗುತ್ತದೆ. ದೇಹವನ್ನು ಸವೆಯಿಸುವ ಪ್ರಶ್ನೆಯೇ ಬರುವದಿಲ್ಲ. ದೇಹವು ಸದೃಢವಾಗಿಯೂ, ಕಾಂತಿಮಯವಾಗಿಯೂ, ಮನೋಹರ ವ್ಯಕ್ತಿತ್ವವುಳ್ಳದ್ದಾಗಿಯೂ ಆಗುವದು. ಹಿಂದಿನ ಶಿವಶರಣರೂ ಶಿವಶರಣೆಯರೂ ಯಾರೂ ದುರ್ಬಲರಿದ್ದಿಲ್ಲ. ಅವರ ಮನೋಹರ ವ್ಯಕ್ತಿತ್ವದ ಗುಟ್ಟು ಇಲ್ಲಿದೆ. ಮಹಾತ್ಮರ ಮನೋಹರ ವ್ಯಕ್ತಿತ್ವದ ಗುಟ್ಟಾದರೂ ಇದೇ ಸರಿ.

ಮನವು ಲಿಂಗವಾಗುವದೆಂದರೇನು? ಮನದಲ್ಲಿ ಸುಜ್ಞಾನ ತುಂಬಿ ಹೊರಸೂಸಬೇಕು. ಮನವು ಲಿಂಗವಾಗಬೇಕೆಂದರೂ ಇದೇ ಅರ್ಥ. ಮನದ ಚಂಚಲತನ, ಚಿಂತೆಗಳು ಹೋಗಿ, ಶಾಂತಿ, ಮನೋದಾರ್ಢ್ಯಗಳು ಬರಬೇಕು. ಶಕ್ತಿಯುಳ್ಳ, ಶಾಂತಿಯುಳ್ಳ ಮನದ ಸುಜ್ಞಾನದ ಬೆಳಕು ಮುಖದ ಮೇಲೆ ಪ್ರಕಾಶಿಸದೆ ಇರುವದಿಲ್ಲ. ಪ್ರಕಾಶಿಸಿಯೇ ಪ್ರಕಾಶಿಸುವದು. ಇದು ಮನೋಹರ ವ್ಯಕ್ತಿತ್ವದ ಗುಟ್ಟು.

ಜೀವ ಲಿಂಗವಾಗುವದೆಂದರೇನು ? ಜೀವನು ಸಂಸಾರದ ಆಶಾಪಾಶದಿಂದಲೂ, ಎಲ್ಲವೂ ನನಗೇ ಇರಲಿ ಎಂಬ ಸಂಗ್ರಹ ಪ್ರವೃತ್ತಿಯಿಂದಲೂ ಕೂಡಿ ಅನ್ಯರೊಡನೆ ಸೌಹಾರ್ದ್ರಭಾವದಿಂದ ನಡೆಯುವದಿಲ್ಲ. ಆದಕಾರಣ ಆಗಾಗ್ಗೆ ಯುದ್ಧಗಳಾಗುತ್ತವೆ. ಜೀವನು "ಸರ್ವಂ ಶಿವಮಯಂ ಜಗತ್" "ಸರ್ವೇಜನಾಃ ಸುಖಿನೋಭವಂತು" ಎಂಬ ಭಾವದಲ್ಲಿ ಬೆರೆಯುವದೇ ಶಿವ-ಜೀವರೈಕ್ಯ ಅಥವಾ ಲಿಂಗಾಂಗ ಸಾಮರಸ್ಯವು. ಇಂಥ ವಿಶ್ವವ್ಯಾಪಕ ಭಾವವು ವಿಶ್ವಾತ್ಮನಾದ ಲಿಂಗದಿಂದಲೇ ಬರಬ

ಲ್ಲಾದು. ಲಿಂಗ ಧ್ಯಾನದಿಂದ ಲಿಂಗವೇ ಆಗುವದೆಂದರೆ ಇದೇ. ಮನುಷ್ಯನು ಯಾವದನ್ನು ಧ್ಯಾನಿಸುವನೋ ಅದೇ ಆಗುವನು.

ಹೀಗೆ ದೇಹ, ಮನ, ಜೀವಗಳನ್ನು ನಾಶಮಾಡಲು ಹೋಗುವ ಪ್ರಶ್ನೆಯೇ ಲಿಂಗಾಗಿಯ ಸಹಜ ಧರ್ಮದಲ್ಲಿ ಬರುವದಿಲ್ಲ. ವ್ರತ, ನಿಯಮ, ಉಪವಾಸ, ತಪ, ಯಜ್ಞ, ತೀರ್ಥಯಾತ್ರೆ ಈ ಎಲ್ಲ ತೊಳಲಿಕೆಯು ಬಳಲುವಿಕೆಯು ಈ ಸಹಜ ಲಿಂಗಜ್ಞಾನವಿಲ್ಲದ್ದರಿಂದಲೇ ಸರಿ.

"ಮನುಷ್ಯನು ಸ್ವಾಭಾವಿಕವಾಗಿ ಲಿಂಗವೇ ಆಗಿರುವನು. ಹೀಗಿದ್ದು ಮತ್ತೆ ಲಿಂಗವಾಗುವ ಯತ್ನವೇಕೆ?" ಎಂದು ಕೇಳಿದರೆ ಇದೇ ದುರ್ಬಳ ವೇದಾಂತದ ಅನಿಷ್ಟ ಫಲ, ಎಂದು ಹೇಳಬೇಕಾಗುತ್ತದೆ. ಮನುಷ್ಯನೆಂದರೆ ಅಂಗ, ಲಿಂಗಗಳ ಸುಂದರ ಸಮನ್ವಯವು. ಹುಟ್ಟಿದಾಗ ಮನುಷ್ಯನು ಇದ್ದಂತೆ ಸಹಜವಾಗಿ ಸಾಯುವ ತನಕ ಇರಲು ಶಕ್ಯವಿದ್ದರೆ ಲಿಂಗವಾಗುವ ಯತ್ನ ಬೇಕಾಗಿದ್ದಿಲ್ಲ. ಆದರೆ ಈಗಿನ ಮಾನವ ಸಮಾಜದಲ್ಲಿ ಎಂದಿನಂತೆ ಕೃತ್ರಿಮತೆಯು ತುಂಬಿರುವದು. ಸಹಜತೆಯು ಇಲ್ಲ. ಇಂದಿನ ನಾಗರಿಕತೆ ಅಥವಾ ಸುಧಾರಣೆ ಅಥವಾ ಸಂಸ್ಕೃತಿಯಲ್ಲಿ ಸಂಪೂರ್ಣ ಸಹಜತೆಯನ್ನು ತರುವದು ಶಕ್ಯವೇ ಇಲ್ಲ. ಮನುಷ್ಯನ ಸಹಜ ಪ್ರವೃತ್ತಿಗಳನ್ನು ನಾಶಗೊಳಿಸಿದರೆ ಸಹಜತೆಯು ಬರಬಹುದೇ? ಅದು ಶಕ್ಯವೇ? ಇಲ್ಲ. ಸಹಜ ಪ್ರವೃತ್ತಿಗಳನ್ನು ನಾಶಗೊಳಿಸುವದು ಶಕ್ಯವೇ ಇಲ್ಲ. ಅವುಗಳನ್ನು ಹತ್ತಿಕ್ಕಿದರೆ ಪೂರ್ಣ ವಿಕಾಸವಾಗದೇ ಅನರ್ಥಗಳಾಗುತ್ತವೆ. ಅಂದಮೇಲೆ ಸಹಜ ಪ್ರವೃತ್ತಿಗಳ ಉದಾತ್ತೀಕರಣವೇ ಮೇಲಾದ ಉಪಾಯ. ಕಾಮ, ಕ್ರೋಧಾದಿಗಳ ಸದುಪಯೋಗ ಮಾಡಿಕೊಂಡರೆ ಅವೇ ಲಿಂಗದ ಶಕ್ತಿಗಳಾಗುತ್ತವೆಂದೇ ಜಗದ್ಗುರು ಚೆನ್ನಬಸವಣ್ಣವರು ತಮ್ಮ ವಚನಗಳಲ್ಲಿ ಹೇಳಿರುವರು.

ಈ ಸಹಜ ಪ್ರವೃತ್ತಿಗಳ ಉದಾತ್ತೀಕರಣದ ಕಾರ್ಯವು ಗೊಬ್ಬರವನ್ನು ವ್ಯರ್ಥ ಚೆಲ್ಲದೆ ಅಥವಾ ನಾಶಮಾಡದೆ ಬೆಳೆಗೆ ಹಾಕಿಕೊಂಡು ಒಳ್ಳೇ ಬೆಳೆಯನ್ನು ಬೆಳೆದು ಕೊಂಡಂಥ ಒಕ್ಕಲಿಗನ ಕಾರ್ಯವಿದ್ದಂತೆ ಇದೆ. ಶ್ರೀ ಘನಮಠೇಶರ ಕೃಷಿಜ್ಞಾನ ಪ್ರದೀಪಿಕೆಯಲ್ಲಿ ಇದೇ ತತ್ತ್ವವಿದೆ. ಪ್ರಭುಲಿಂಗ ಲೀಲೆಯ ಗೊಗ್ಗಯ್ಯನ ಪ್ರಕರಣದಲ್ಲಿಯೂ ಇದೇ ತತ್ತ್ವವಿದೆ. ಶರಣರ ತತ್ತ್ವವೇ ಇದು. ಅಂಗವು ಲಿಂಗವಾಗುವದೆಂದರೆ ಇದೇ ಅರ್ಥ.

ಕೃತ್ರಿಮ ನಾಗರಿಕತೆಯಿಂದ ಕೂಡಿದ ಆಧುನಿಕ ಶಿಕ್ಷಣತಜ್ಞರು, ಬಸವಾದಿ ಶರಣರು ೮೦೦ ವರ್ಷಗಳ ಹಿಂದೆಯೇ ಕಂಡುಹಿಡಿದ ಈ ಸಹಜ ಪ್ರವೃತ್ತಿಗಳ ಉದಾತ್ತೀಕರಣದ ತತ್ವವನ್ನು ಈಗ ತಾವೇ ಶೋಧ ಮಾಡಿದ್ದೇವೆಂದು ತಿಳಿದು ಆ ಪ್ರಕಾರ ಬರೆದಿರುವರು. ಅವರಿಗೆ ಶರಣರ ಲಿಂಗಾಂಗ ಸಾಮರಸ್ಯಜ್ಞಾನ ಗೊತ್ತಿದ್ದರೆ ಹಾಗೆ ತಾವೇ ಮೂಲ ಶೋಧಕರೆಂದು ಬರೆದು ಕೊಳ್ಳುತ್ತಿದ್ದಿಲ್ಲ. ಜಗತ್ತಿನಲ್ಲಿ ಈ ಶಕ್ತಿ ವಿಶಿಷ್ಟ ತತ್ವಜ್ಞಾನವನ್ನು ಹರಡುವದು ಅತ್ಯವಶ್ಯವಿದೆ.

ಶರಣರು ಪ್ರವೃತ್ತಿಗಳಂತೆ, ದೇಹವನ್ನೂ ಜೀವವನ್ನೂ ಉದಾತ್ತಗೊಳಿಸಲು ಬರುವದೆಂದು ಸಾರಿ ಸಾಧಿಸಿ ತೋರಿ ಜಗದುದ್ಧಾರ ಮಾಡಿಹೋಗಿರುವರು. ಆ ದೂರ ದೃಷ್ಟಿಯುಳ್ಳ ಜಗದ್ವ್ಯಾಪಕ ಶರಣರ ಶಕ್ತಿದಾಯಕ ತತ್ವಜ್ಞಾನ, ಸಾಹಿತ್ಯ, ಸಂಸ್ಕೃತಿಗಳ ಸಲುವಾಗಿ ಜನವನ್ನೇ ಮುಡಿಪಾಗಿಟ್ಟವರೇ ನಿಜವಾದ ಮಾಹೇಶ್ವರರು. ಜನ್ಮದಿಂದ, ಜಾತಿಯಿಂದ ಯಾರೂ ಮಹೇಶ್ವರರಾಗುವದಿಲ್ಲ. ಇತ್ತ ಕಡೆಗೆ ಎಲ್ಲ ಲಿಂಗಾಂಗಿಗಳೂ ಲಕ್ಷ ಕೊಡುವದು ಅವಶ್ಯವಿದೆ.

---

# ವೀರಶೈವ ತತ್ವ.

(ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ-ಬೆಂಗಳೂರು.)

---

[ತಾ॥ ೨೨ ಮತ್ತು ೨೩ನೆಯ ದಿಶೆಂಬರ ೧೯೪೬ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಧರ್ಮಸ್ಥಳದಲ್ಲಿ ನೆರೆದಿದ್ದ "ಸರ್ವಧರ್ಮ ಸಮ್ಮೇಳನದಲ್ಲಿ ಬೆಂಗಳೂರು ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನ ಅಧ್ಯಾಪಕರಾದ ಆಸ್ಥಾನ ವಿದ್ವಾನ್ ವೇ ಎಂ. ಜಿ. ನಂಜುಂಡಾರಾಧ್ಯರು ಒಂದು ಮಹತ್ವದ ಭಾಷಣವನ್ನು ಮಾಡಿದರು. ಅದರಲ್ಲಿ ಅವರು ಮುಖ್ಯ ಧರ್ಮಗಳ ಉದ್ದೇಶ, ಅವುಗಳ ಪ್ರಗತಿ, ಮತಾಚಾರ್ಯರ ಕಾರ್ಯಗಳು, ಇವುಗಳನ್ನು ವಿವರಿಸುತ್ತ ವೀರಶೈವ ಮತಾಚಾರ್ಯರ ತತ್ವ ವೈಶಿಷ್ಟ್ಯಗಳನ್ನು ವಿವರಿಸಿದ್ದಾರೆ. ಅವರ ಭಾಷಣದ ಆರಂಭದ ಭಾಗ

ವನ್ನು ಸ್ಥಳಸಂಕೋಚದ ಮೂಲಕ ಪತ್ರಿಕೆಯಲ್ಲಿ ಕೊಡಲು ಆಗದ್ದಕ್ಕೋಸ್ಕರ ನಾವು ವಿಷಾದಿಸುತ್ತೇವೆ. ಆದರೆ ವೀರಶೈವವನ್ನು ಕುರಿತು ಅವರು ಮಾಡಿದ ಭಾಷಣವು ಮಹತ್ವದ್ದಿರುವದರಿಂದ ಅದನ್ನು ಮಾತ್ರ ನಾವು ಇಲ್ಲಿ ಪ್ರಸಿದ್ಧಿಸಿದ್ದೇವೆ.— ಸಂಪಾದಕ.)

## ವೀರಶೈವ ಮತಾಚಾರ್ಯರು, ಅವರ ತತ್ವದ ವೈಶಿಷ್ಟ್ಯ.

ಹಿಂದುಸ್ತಾನದಲ್ಲಿ ಆಗಿಹೋದ ಆಚಾರ್ಯರ ಶ್ರೇಣಿಯಲ್ಲಿ ಪೂಜ್ಯತೆ ಪಡೆದು ಮತ್ತಷ್ಟು ವಿಶಾಲಮನೋಧರ್ಮವನ್ನು ನಿಖಿಲ ಜನತೆಗೂ ಬೋಧಿಸಿ ಅಮರರಾದ ವೀರಶೈವ ಮತಾಚಾರ್ಯರ ದಿವ್ಯ ತತ್ವಾಮೃತದ ವಿಷಯದಲ್ಲಿ ಒಂದೆರಡು ಮಾತುಗಳನ್ನು ಹೇಳುವುದು ಉಚಿತವಾಗಿದೆ.

ಇವರು ಉಪದೇಶಿಸಿದ ಆತ್ಮತತ್ತ್ವ, ಸಮಾಜತತ್ತ್ವಗಳು ಜಗತ್ತಿಗೆ ಅಮರಶಾಂತಿಪ್ರದಾತೃಗಳಾದವು. ಸಮಾಜದಲ್ಲಿ ಕಲೆಹಾಕಿದ್ದ ಅನೇಕ ಸಮಸ್ಯೆಗಳು ವೀರಶೈವ ತತ್ತ್ವಪ್ರಚಾರದಿಂದ ಅಳಿದು ಜನತೆಯಲ್ಲಿ ಸಮಾನತೆ ನೆಲೆಸುವಂತಾಯಿತು.

ಕಾಲಮಾನದ ದೃಷ್ಟಿಯಿಂದ ವೀರಶೈವ ಧರ್ಮವು ವೇದಗಳಷ್ಟೇ ಹಳೆಯದು. ಇತರ ವೈದಿಕ ಧರ್ಮಗಳಿಗೆ ಆಧಾರವಾದ ವೇದ ಋಕ್ಕುಗಳೇ ಈ ಮತೀಯರಿಗೂ ಗ್ರಾಹ್ಯವಾಗಿವೆ. ಅತಿ ಪ್ರಾಚೀನ ಮತಗಳೆನಿಸಿದ ಶೈವ – ವೈಷ್ಣವ ಪ್ರಭೇದಗಳಲ್ಲಿ ಶೈವವು ಪ್ರಾಚೀನವೆಂದು ಶೋಧಕರು ಒಪ್ಪಿದ್ದಾರೆ. ಅಂದಂದಿಗೆ ವೈದಿಕ ವಿಶಾಲ ತತ್ವಗಳಿಗೆ ಮುಸುಕಿದ ಕಳಂಕವನ್ನು ಅಳಿಸಿ ಋಜುಮಾರ್ಗಪ್ರದರ್ಶನಕ್ಕಾಗಿಯೇ ರೇಣುಕಾದಿ ವೀರಶೈವ ಆಚಾರ್ಯರು ತೊಡಗಿದ್ದಾರೆ. ಧರ್ಮ—ತತ್ತ್ವ, ನಡೆ—ನುಡಿ, ನೀತಿ—ನಯ, ಮೇಲು—ಕೀಳು, ಹೆಣ್ಣು—ಗಂಡು, ವೃತ್ತಿಶಿಕ್ಷಣಗಳ ವಿಷಯದಲ್ಲಿ ತಲೆ ಹಾಕಿದ್ದ ಅನೇಕ ದೋಷಗಳು ವೀರಶೈವ ತತ್ವಪ್ರಚಾರದಿಂದ ತೊಲಗಿದವು. ಮುಂದೆ ಅವತರಿಸಿದ ಬಸವಯುಗದಲ್ಲಂತೂ ವೀರಶೈವ ಮತವು ಕೇವಲ ಶಾಸ್ತ್ರಪ್ರಧಾನವಾದ ಮತವಲ್ಲದೆ ಅನುಭವ ಮತ್ತು ಆಚರಣೆಯೇ ಪ್ರಧಾನವಾದ ಸಮಾಜವೆನಿಸಿತು. ಇದರಿಂದ ಆತ್ಮದ ಕಲ್ಯಾಣವು ಮತ್ತು ಜಗತ್ ಕಲ್ಯಾಣವು ಒಮ್ಮೆಗೆ ಸ್ಥಾಪಿತವಾಗಿ ಜಗತ್ತಿಗೆ ಶಾಂತಿಯುಂಟಾಯಿತು.

## ವೀರಶೈವ ಸಿದ್ಧಾಂತ.

ಈ ಮತದ ಸಿದ್ಧಾಂತಕ್ಕೆ ಶಕ್ತಿವಿಶಿಷ್ಟಾದ್ವೈತ, ವಿಶೇಷ ದ್ವೈತ, ಶಿವಾದ್ವೈತ, ಭೇದಾಭೇದಸಿದ್ಧಾಂತ, ಷಟ್‌ಸ್ಥಲಸಿದ್ಧಾಂತ ಅಥವಾ ಸಮನ್ವಯ ಸಿದ್ಧಾಂತ ಎಂಬ ಅನೇಕ ಹೆಸರುಗಳು ಬಳಕೆಯಲ್ಲಿವೆ. ಇಲ್ಲಿ ಕೇವಲ ದ್ವೈತವನ್ನಾಗಲಿ ಕೇವಲ ಅದ್ವೈತವನ್ನಾಗಲಿ ಅಂಗೀಕರಿಸದೆ ಶಿವನಲ್ಲಿ ಸ್ವಾಭಾವಿಕವಾಗಿರುವ ಶಕ್ತಿಯನ್ನು ಮುಂದುಮಾಡಿ ಅದ್ವೈತವನ್ನು ಸಾಧಿಸಿದ್ದಾರೆ.

ಶಿವ-ಜೀವರಲ್ಲಿ ಅಡಗಿರುವ ಸೂಕ್ಷ್ಮ--ಸ್ಥೂಲ-ಚಿತ್--ಅಚಿತ್ ಶಕ್ತಿಗಳನ್ನು ನಿರೂಪಿಸುವುದೇ ಶಕ್ತಿವಿಶಿಷ್ಟಾದ್ವೈತದ ವೈಶಿಷ್ಟ್ಯ. ಇಲ್ಲಿ ಸ್ಥೂಲ ಚಿತ್ ಅಚಿತ್‌ಶಕ್ತಿಗಳಿಂದ ಆದಿಷ್ಟನಾದ ಜೀವನು ತನ್ನಲ್ಲಿರುವ ಕಿಂಚಿಜ್ಞತ್ವಾದಿಗಳನ್ನು ಶಿವಾನುಸಂಧಾನದಿಂದ ಕಳೆದು ಸರ್ವಜ್ಞತ್ವಾದಿ ಸಿದ್ಧಿಗಳನ್ನು ಗಳಿಸಿ ಶಿವನಲ್ಲಿ 'ಉರಿಯುಂಡ ಕರ್ಪೂರದಂತೆ ಬೆರೆದು ಬೇರಿಲ್ಲ' ದಂತಾಗುವುದೇ ಈ ಸಿದ್ಧಾಂತದ ಗುರಿ. ಇದರ ಸಾಧನೆಗಾಗಿ ನಿರ್ಮಿತವಾಗಿರುವ ಷಟ್‌ಸ್ಥಲ ಸೋಪಾನ, ಅದಕ್ಕೆ ರಕ್ಷಕವಾಗಿರುವ 'ಅಷ್ಟಾವರಣೆ'ಗಳು, ಅದರ ಸಾಧನೆಗಾಗಿ ಏರ್ಪಟ್ಟಿರುವ 'ಪಂಚಾಚಾರ' ಗಳೆಂಬ ಸಮಾಜಶಾಸ್ತ್ರದ ಆಚಾರಗಳು ಶಿವಾದಿ ಪೃಥಿವ್ಯಂತವಾದ ಮೂವತ್ತಾರು ತತ್ವಗಳು ಇದನ್ನು ಕಾರ್ಯರೂಪಕ್ಕೇರುವುದಕ್ಕೆ ಸಾಧಕವಾಗಿವೆ.

## ದೇವರ ಕಲ್ಪನೆ.

ಅವ್ಯಕ್ತರೂಪನಾದ ಪರಮಾತ್ಮನನ್ನು ಆರಾಧನೆಗೆ ಯೋಗ್ಯನಾಗಿ ಮಾಡಲು ಭಾರತೀಯ ಆಧ್ಯಾತ್ಮಿಕ ಶಾಸ್ತ್ರದಲ್ಲಿ ನಿಗೂಢ ತತ್ವರಹಸ್ಯಗಳು ಉಕ್ತವಾಗಿದ್ದರೂ ಅನೇಕರು ಸ್ಥೂಲದೃಷ್ಟಿಯಿಂದ ದೇವನಿಗೆ ಕರಚರಣಾದಿ ಅವಯವಾದಿಗಳನ್ನು ಕಲ್ಪಿಸಿ ದೇವರ ವಿಷಯದಲ್ಲಿ ಮಾನವನಿಗೆ ಅಜ್ಞಾನವನ್ನೇ ಬೆಳೆಸಿದ್ದಾರೆ. ಆದರೆ ವೀರಶೈವ ಶಾಸ್ತ್ರಕಾರರು ಈ ದೋಷಕ್ಕೆ ತುತ್ತಾಗದೆ ಉಪನಿಷದುಕ್ತವಾದ ನಿರ್ಗುಣಾದಿ ಗುಣಮಂಡಿತನಾದ ಪರಶಿವನಿಗೆ ಸಗುಣಾದ್ಯಾಕಾರವನ್ನು ಕಲ್ಪಿಸಿರುವುದು ತಾತ್ವಿಕ ವೈಶಿಷ್ಟ್ಯದಿಂದ ಕೂಡಿದೆ.

ವೀರಶೈವರು ಪರಮಾತ್ಮನ ಚಿಹ್ನೆಯೆಂದು ಭಾವಿಸುವ ಇಷ್ಟಲಿಂಗವು ಮಾನವನ ಹೃದಯದಲ್ಲಿ ಅವ್ಯಾಹತವಾಗಿ ಹೊರಡುವ ನಾದರೂಪ ಪ್ರಾಣಲಿಂಗದ ಪ್ರತೀಕವು.

ಇದು ಗುರುವಿನ ಕರುಣೆಯಿಂದ ಶಿಷ್ಯನ ಮಸ್ತಕದಲ್ಲಿನ ಚಿತ್ಕಲೆಯಿಂದ ಆವಾಹಿತವಾಗಿ ಶಿಷ್ಯನ ಹಸ್ತದಲ್ಲಿನ ಷಡಧ್ವಶುದ್ಧವಾದ ಇಷ್ಟಲಿಂಗದಲ್ಲಿ ಆವಾಹಿಸುವುದರಿಂದ ಇದು ಸ್ಥಾವರಲಿಂಗವಲ್ಲ. ಇದಕ್ಕೆ ಯಾವ ಪ್ರಾಣಿಗಳ ಆಕಾರವನ್ನು ಕೊಡದಿರುವುದರಿಂದ ಇದು ಮೂರ್ತಿಯೂ ಅಲ್ಲ. ಇನ್ನು ಹೃದ್ಗತನಾದ ಅವ್ಯಕ್ತ ಕೇವಲ ಪರಮಾತ್ಮನನ್ನು ಸ್ಮೃತಿಪಥಕ್ಕೆ ತಂದುಕೊಡುವ ಚಿನ್ಹೆಮಾತ್ರ. ಆದ್ದರಿಂದಲೆ ಇದಕ್ಕೆ "ಲಿಂಗ"ವೆಂಬ ಅನ್ವರ್ಥಕವಾದ ಹೆಸರು ಏರ್ಪಟ್ಟಿದೆ.

ಈ ಚಿನ್ಹವು ಅಂಗುಷ್ಠಮಾತ್ರ ಪರಿಮಾಣವೇರ್ಪಟ್ಟು "ಇಷ್ಟಲಿಂಗ" ರೂಪವನ್ನು ತಾಳಿದೆ. ಈ ರೂಪಕ್ಕೆ ಬರಲು ಅದಕ್ಕೆ ಧರಿಸುವ ಕಾಂತಿ ಎಂಬ ರಾಸಾಯನಿಕ ದ್ರವ್ಯವು ವೈಜ್ಞಾನಿಕ ತತ್ತ್ವಗಳ ಹಿನ್ನೆಲೆಯ ಮೇಲೆ ನಿಂತಿದೆಯೆಂಬುದು ವಿಚಾರಸಹವಾದ ನಿದರ್ಶನವಾಗಿದೆ. ಇಂತಹ ಮಹತ್ವ ಪೂರ್ಣವಾದ ಸಿದ್ಧಾಂತವನ್ನು ಅನುಸರಿಸಿದ ವೀರಶೈವನು ಸರಿಯಾಗಿ ಅನುಷ್ಠಾನಪರನಾದಲ್ಲಿ ಆತನಿಗೆ ಲಭಿಸದ ಸಿದ್ಧಿ ಯಾವುದು? ಇಹ-ಪರ ಸುಖಗಳೆರಡೂ ಕರಗತವಾಗುವುವೆಂಬುದನ್ನು ಶರಣರು ಅರಿತು ಆಚರಿಸಿ, ಸಾರಿದ್ದಾರೆ. ಈ ಸಮನ್ವಯಯೋಗವೇ ದ್ವೈತಾದ್ವೈತಗಳಿಗಿಂತಲೂ ಉತ್ಕೃಷ್ಟವಾದುದೆಂಬುದನ್ನು ಸುಪ್ರಸಿದ್ಧ ದಾರ್ಶನಿಕನಾದ ಮ್ಯಾಕ್‌ನಿಕಲ್ ಎಂಬುವರು.

ಆ ಪರಮ ಶಾಂತಿಯು ಶಾಂಕರಾದ್ವೈತದಲ್ಲಿಯೂ ಸಿಗಲರಿಯದು. 'ಜೀವ ಬೇರೆ ಶಿವ ಬೇರೆ' ಎಂದು ಸಮಾಧಾನಪಡುವ ದ್ವೈತದಲ್ಲಿಯೂ ದೊರೆಯದು. ಈ ಎರಡರಾಚೆಗಿರುವ ಮತ್ತು ಈ ಎರಡನ್ನೂ ಸಮನ್ವಯಿಸುವ ಆಧ್ಯಾತ್ಮಿಕ ಅನುಭವದಲ್ಲಿ ಪರಮಶಾಂತಿಯ ಪರಂಧಾಮವಿರುವುದು (ವಚನಶಾಸ್ತ್ರರಹಸ್ಯ ಪುಟ ೩೪೨) ಎಂದು ಬಹಳ ಸುಂದರವಾಗಿ ಹೇಳಿದ್ದಾರೆ.

## ಶಿವದೀಕ್ಷೆ ಸಮಾನತೆ.

ಪರಮಪವಿತ್ರವಾದ ಅಗ್ನಿದಗ್ಧವಾದ ಕಾಷ್ಠಗಳಲ್ಲಿ ಭೇದವಿಲ್ಲದಿರುವಂತೆ ಅವರವರ ಹಿಂದಿನ ಜಾತಿಭೇದಗಳು ಇರುವುದಿಲ್ಲ. 'ಶಿವಶರಣನಾದಬಳಿಕ ಜಾತಿಸೂತಕವನರಸುವರೆ' ಎಂದು ವಚನಕಾರರು ಸಾರಿದ್ದಾರೆ. ಸ್ತ್ರೀಪುರುಷರಲ್ಲಿ ಮೇಲು ಕೀಳು ಭಾವನೆಗಳು ಮೂಡಿ

ಗಾರ್ಹಸ್ಥ್ಯವು ವಿಷಮವಾಗದಂತೆ ಈರ್ವರಿಗೂ ಸಮವಾದ ಅಧ್ಯಾತ್ಮ ತತ್ವ ಅಳವಡುವುದಕ್ಕೆ ಈ ಧರ್ಮದಲ್ಲಿನ ಸ್ತ್ರೀಯರಿಗೂ ದೀಕ್ಷಾಸಂಸ್ಕಾರ ವಿದೆ. ವಾಗರ್ಥಗಳಂತೆ ಶಿವನಲ್ಲಿ ಅರ್ಧಾಂಗಿಯೆನಿಸಿರುವ ಸರ್ವಮಂಗಳೆ ಹೆಣ್ಣು. ಅವಳು ಪುರುಷನ ದೃಷ್ಟಿಯಲ್ಲಿ ಮಾಯೆ, ಮಾರಿ ಅಲ್ಲ. ಶಿವಶರಣರಿಗೆ ಪರಸತಿಯರು ಮಹಾದೇವಿಯರು. "ವೈದಿಕ ಯುಗ ದಲ್ಲಿ ಸ್ತ್ರೀಗೆ ಸಂಸ್ಕಾರವಿತ್ತು. ಪುರಾಕಲ್ಪೇತು ನಾರೀಣಾಂ ಮೌಂಜೀ ಬಂಧನಮಿಷ್ಯತೆ" ಮುಂತಾದ ವಾಕ್ಯಗಳಲ್ಲಿ ಅವರಿಗೆ ಉಪನಯನ ಸಂಸ್ಕಾರವಿದ್ದುದು ಕಂಡುಬರುತ್ತದೆ. ಗಾರ್ಗಿಮೈತ್ರೇಯಿ ಮುಂತಾದ ಸ್ತ್ರೀಯರೂ ಬ್ರಹ್ಮಜಿಜ್ಞಾಸೆಯಲ್ಲಿ ಭಾಗಿಗಳಾಗುತ್ತಿದ್ದರು. ಆದರೆ ಅವರ ದುರದೃಷ್ಟವಶದಿಂದ ಈಚಿಗೆ ಸ್ತ್ರೀಯು "ಶೂದ್ರನಿಗೆ ಸಮನಾದಳು. ಅವಳಿಗೆ ವೇದಾಧ್ಯಯನ ದೂರವಾಯಿತು ಮಾನವನ ಅರ್ಧಾಂಗಿ ಯೆನಿಸಿದ್ದ ಸ್ತ್ರೀ ಸ್ವಾತಂತ್ರ್ಯ ಕಳೆದುಕೊಂಡ ದಾಸಿಯಾದಳು. ಆದರೆ ವೀರಶೈವ ಮತದಲ್ಲಿ ಮತ್ತೆ ಅವಳಿಗೆ ಎಲ್ಲ ಉಚಿತ ಅಧಿಕಾರಗಳೂ ಕೊಡಲ್ಪಟ್ಟವು

ಇದರ ಫಲವಾಗಿ ಕಲ್ಯಾಣದ ಶಿವಾನುಭವ ಮಂಟಪದಲ್ಲಿ ಮಹಾ ದೇವಿಯಕ್ಕನಂತಹ ಅನೇಕ ಶಿವಶರಣೆಯರು ವೇದಾಂತ ಜಿಜ್ಞಾಸೆ ನಡೆಯಿಸಿದರು. ಅವರಲ್ಲಿ ಅನೇಕರು ವಚನಕಾರರೂ ಕವಯಿತ್ರಿಯರೂ ಆದರು. ಇವರಲ್ಲಿ ಮಹಾದೇವಿಯ ಅನುಭವ ಇಡೀ ಶರಣವೃಂದಕ್ಕೆ ಮೂರ್ಧನ್ಯವಾಯಿತು. ಶಿವಶರಣರು ಆಕೆಯ ಅನುಭವಕ್ಕೆ ಅಗ್ರಸ್ಥಾನ ಕೊಟ್ಟು ಮುಕ್ತಕಂಠದಿಂದ ಹೊಗಳಿದ್ದಾರೆ.

"ಅಜಕೋಟಿ ವರ್ಷದವರೆಲ್ಲರೂ ಹಿರಿಯರೇ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೇ? ನಡುಮುರಿದು, ಗುಡಗೂರಿ, ತಲೆನಡುಗಿ, ನೆರೆ ತೆರೆ ಹೆಚ್ಚಿ, ಮತಿಗೆಟ್ಟು ಬಂದ ನಾಡ ಹೋಗಿ ಬಂಭತ್ತ ನಾಡುವ ಅಜ್ಞಾನಿಗಳೆಲ್ಲರು ಹಿರಿಯರೇ? ಅನುವರಿದು, ಘನವ ತಿಳಿದು, ಹಿರಿದು ಕಿರಿದೆಂಬ ಭೇದವ ಮರೆದು, ಕೂಡಲಚನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕಂಗಾಯಿತ್ತು."

(ಚನ್ನಬಸವೇಶ್ವರನ ವಚನ)

"ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ, ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುಧೇವರ ಹತ್ತು ವಚನ, ಪ್ರಭು

ದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ, ಅಜಗಣ್ಣನ ಐದು ವಚನಕ್ಕೆ ಕೂಡಲಚನ್ನಸಂಗಯ್ಯನಲ್ಲಿ ಮಹಾದೇವಿಯಕ್ಕಗಳ ಒಂದು ವಚನ ಕಾಣಾ ಸಿದ್ಧರಾಮಯ್ಯ.''

(ಚನ್ನಬಸವೇಶ್ವರನ ವಚನ)

ಇನ್ನು ವೃತ್ತಿಶಿಕ್ಷಣದ ವಿಷಯದಲ್ಲಿ ವೈದಿಕ ಯುಗದಲ್ಲಿ ಭೇದ ಭಾವಗಳಿರಲಿಲ್ಲ. ಹೀಗಿದ್ದರೂ ಇತ್ತೀಚೆಗೆ ವೃತ್ತಿಗಳಲ್ಲಿ ಉಚ್ಚ. ನೀಚ ಭೇದಗಳು ಬೇರೂರಿ ಜನತೆ ಕೆಲಸಮಾಡಲು ನಾಚತೊಡಗಿದರು. ಇದರ ಫಲವಾಗಿ ಸಮಾಜದಲ್ಲಿ ಕೈಗಾರಿಕೆ, ಗೃಹವಿದ್ಯೆ ಹಾಗು ಕಲೆಗಳು ನಶಿಸಿದವು. ರಾಷ್ಟ್ರದ ಸಂಪತ್ತು ಕುಗ್ಗಿತು. ದಾರಿದ್ರ್ಯಕ್ಕೆ ಕಲ್ಪತರುವೆನಿಸಿದ ಆಲಸ್ಯವು ಜನತೆಯಲ್ಲಿ ಬೇರೂರಿತು. ಆದರೆ ಶರಣರ ಸಾಮ್ರಾಜ್ಯದಲ್ಲಿ ವೃತ್ತಿ ಶಿಕ್ಷಣಕ್ಕೆ ಧಾರ್ಮಿಕ ಮೆರಗು ಕೊಡಲ್ಪಟ್ಟಿತು. ಅವರವರು ತಮ್ಮ ತಮ್ಮ ವೃತ್ತಿಯಲ್ಲಿಯೇ ಶಿವನನ್ನು ಕಂಡರು.

## ಕದಿರೆರೆಮ್ಮವ್ವೆಯ ವಚನ.

"ನಾ ತಿರುಹುತಿಹ ರಾಟೆಯ ಕುಲಜಾತಿಯ ಕೇಳಿರಣ್ಣ. ಅಡಿಯಣ ಹಲಿಗೆ ಬ್ರಹ್ಮ, ತೋರಣ ವಿಷ್ಣು, ನಿಂದ ಬೊಂಬೆ ಮಹಾರುದ್ರ, ರುದ್ರನ ಬೆಂಬಳಿಯುವೆರಡು ಸೂತ್ರದ ಕರ್ಣ. ಅರಿವೆಂಬ ಕದುರು, ಭಕ್ತಿಯೆಂಬ ಕಯ್ಯಲ್ಲಿ ತಿರುಹಲಾಗಿ ಸುತ್ತಿತ್ತು ನೂಲು. ಕದುರು ತುಂಬಿತ್ತು. ರಾಟೆಯ ತಿರುಹಲಾರೆ. ಎನ್ನ ಗಂಡ ಹುಟ್ಟಿಹ. ಇನ್ನೇವೆ ಕದಿರೆ ರೆಮ್ಮವ್ವೆಯೊಡೆಯ ಗುಮ್ಮೇಶ್ವರಾ?

ಹೀಗೆ ಕದಿರೆ ರೆಮ್ಮವ್ವೆ ರಾಟಿಯಲ್ಲಿ ಶಿವನನ್ನು ಕಾಣುತ್ತಾಳೆ. ಕಾಯಕವೇ ಕೈಲಾಸವೆನಿಸಿತು.

ಕಾಯಕದಲ್ಲಿ ನಿರತನಾದರೆ ಗುರುದರುಶನವಾದರೂ ಮರೆಯಬೇಕು. ಲಿಂಗಪೂಜೆಯಾದರೂ ಮರೆಯಬೇಕು. ಜಂಗಮುಮುಂದಿದ್ದರೆಯೂ ಹಂಗು ಹರಿಯಬೇಕು. 'ಕಾಯಕವೇ ಕೈಲಾಸ'ವಾದ ಕಾರಣ ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು.

(ಮೋಳಿಗೆಯ ಮಾರಯ್ಯ)

## ಸಾಮ್ಯವಾದ.

ಗುರು ಹರ ಎದುರಿಗೆ ಬಂದರೂ ಕಾಯಕ ಬಿಟ್ಟು ಏಳಬಾರದೆಂಬುದನ್ನು ಆಚರಣೆಗೆ ತಂದರು. ಇದರಿಂದ ಭಿನ್ನ ಭಿನ್ನ ಕಾಯಕ ಮಾಡುತ್ತಿದ್ದ ರೈತ, ಕುರುಬ, ಕುಂಬಾರ, ಅಗಸ, ನಾಯಿಂದ, ಬಡಗಿ, ಕಲ್ಲುಕುಟಿಗ, ನೇಕಾರ, ಸೌದೆ ಹೊಡೆಯುವವ, ಹಕ್ಕುಲಾಯಿಸುವವ, ನೂಲುವ, ಮಾದಾರ, ಡೋಹರ, ಮತ್ತು ವೇದಾಧ್ಯಾಯನ ಮಾಡುವವರೇ ಮುಂತಾದವರೆಲ್ಲಾ ಶಿವದೀಕ್ಷೆ ಪಡೆದು ಶಿವಾನುಭವ ಗೋಷ್ಠಿಯಲ್ಲಿ ಅನುಭವಮಂಟಪದಲ್ಲಿ ಸೇರಿ ಅನುಭವ ಸಂವಾದನೆ ಮಾಡಿದರು. ದಿವ್ಯಜ್ಞಾನಿಗಳಾಗಿ ಮತ್ತೊಮ್ಮೆ ಉಪನಿಷತ್ ಯುಗವನ್ನು ಸ್ಥಾಪಿಸಿದರು. ಋಕ್ಕುಗಳಿಗೆ ಸಮವೆನಿಸಿದ ಅನುಭವ ವಚನಗಳನ್ನು ನುಡಿದು ಶಾಸ್ತ್ರಕ್ಕೆ ಸೇರಿಸಿದರು. ಗುರುಧರ್ಮೋಪದೇಶಿಕನಾಗಿ ದೀಕ್ಷೆ-ಶಿಕ್ಷೆಗಳಿಗೆ ಅಧಿಪತಿ, ಜಂಗಮನು ವಿರಕ್ತ ಮೂರ್ತಿ, ಗುರು—ಲಿಂಗ ಜಂಗಮರು ಒಂದೇ ಮೂರ್ತಿಯ ವ್ಯಕ್ತಿಗಳು. ಇವರು ಕ್ರಮವಾಗಿ ಗುರುವಿಗೆ-ತನು (ಶಾರೀರಿಕ ಕಾಯಕದಿಂದ ಸೇವೆ ಮಾಡಬೇಕು.) ಲಿಂಗಕ್ಕೆ—ಮನ (ಮನಃಪೂರ್ವಕವಾಗಿ ಪೂಜೆ ಅನುಸಂಧಾನ ಮಾಡಬೇಕು.) ಜಂಗಮಕ್ಕೆ-ಧನ(ಯಥಾಶಕ್ತಿ ಧನ ಧಾನ್ಯಾದಿಗಳನ್ನು ನಿರ್ವಂಚನೆಯಾಗಿ ಅರ್ಪಿಸಬೇಕು.) ನೋಡಿ, ಜಂಗಮ ವೀರ ವಿರಕ್ತಮೂರ್ತಿ, ಆತನಿಗೆ ಧನ-ಧಾನ್ಯ ಅರ್ಪಿಸಬೇಕಂತೆ! ಸಂಪದ್ವಿನಿಮಯ ಸಿದ್ಧಾಂತ ಇಲ್ಲಿ ಎಷ್ಟು ರಮಣೀಯವಾಗಿ ಚಿತ್ರಿತವಾಗಿದೆ! ವಿರಕ್ತನಾದವನಿಗೆ ಧನ ಕೊಟ್ಟರೆ ಅದು ಮತ್ತೆ ಸಮಾಜಕ್ಕೆ ವಿನಿಯೋಗವಾಗಲೇಬೇಕು. ವಿದ್ಯಾರ್ಥಿ ನಿಲಯಗಳು, ವಿದ್ಯೆ, ಕಲೆಗಳ ಪ್ರೋತ್ಸಾಹ, ದೀನಾನಾಥ ಸಂರಕ್ಷಣೆಗಳಿಗೆ ಅದು ವಿನಿಯೋಗವಾಗುವುದು. ಅದಕ್ಕೆ ಧಾರ್ಮಿಕ ಮುದ್ರೆ ಬಿದ್ದಿರುವುದೂ ಒಂದು ಮಹತ್ವದ ವಿಷಯ. ಇದರಿಂದ ಸಮಾಜ ನೀತಿಗೆ ಸರಿಯಾದ ನೆಲೆಗಟ್ಟಾಯಿತು. ಇಂದು "ಸಮಾಜವಾದ"ವನ್ನು ಸಾರುವ ರಾಷ್ಟ್ರಗಳಲ್ಲಿ ಆ ತತ್ವಕ್ಕೆ ಧರ್ಮದ ಹೊಗರಿಲ್ಲದ್ದರಿಂದ, ಅದರಲ್ಲಿ ಅಂದಂದಿಗೆ ಅನೇಕ ದೋಷಗಳೂ ಆಗುವ ಅವಕಾಶವದೆ.

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿ

ಯಲು ಬೇಡ, ಇದೇ ಅಂತರಂಗ ಶುದ್ಧಿ, ಇದೇ ನಮ್ಮ ಕೂಡಲ ಸಂಗನ ಒಲಿಸುವ ಪರಿ.

(ಬಸವೇಶ್ವರ)

ಎಂಬ ನೀತಿ ಸಮಾಜವನ್ನು ಸನ್ಮಾರ್ಗದಲ್ಲಿ ಬಂಧಿಸಿತು. "ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ." "ಅಯ್ಯಾ ಎಂದಡೆ ಸ್ವರ್ಗ, ಎಲವೋ ಎಂದಡೆ ನರಕ" ಎಂಬುವು ವಿನಯವಿತ್ತವು. ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು" ಎಂಬುದು ಧರ್ಮದ ನಿಜವಾದ ಅರ್ಥವನ್ನು ಸಾರಿತು. "ಅಭ್ಯುದಯ ನಿಶ್ಶ್ರೇಯಸ್ಸು"ಗಳ ಕೀಲಿ ಕೈಯನ್ನು ಈ ಮಾತು ಸಾರಿದೆ.

ಹೀಗೆ ಸಮಾಜದ ನಾನಾಮುಖವಾದ ಓರೆಕೋರೆಗಳನ್ನು ಶಿವಾನುಭವಿಗಳ ದಿವ್ಯಾನುಭವ ಸಿದ್ಧಾಂತಗಳು ದೀರ್ಘ ಜೀವನಾನುಭವದ ಸಂಪಾದನೆಗಳು ಓತಪ್ರೋತವಾಗಿ ಹಾಸು ಹೊಕ್ಕಾಗಿ ಬೆರೆದು ವೀರ ಶೈವ ಮತವು ಪರ್ಯಾಯವಾಗಿ ವೈದಿಕ ಮತದ ಧ್ಯೇಯಗಳೆಲ್ಲವನ್ನು ಕಾರ್ಯರೂಪಕ್ಕೆ ತರುವುದರ ಮೂಲಕ ಪರಮ ವೈದಿಕ ಮತವೇ ಎನ್ನಿಸಿಕೊಂಡಿದೆ. ಅದಕ್ಕಿಂತ ಮಿಗಿಲಾಗಿ ಅದು "ವಿಶ್ವಧರ್ಮ"ವಾಗಲು ಎಲ್ಲ ವಿಧವಾದ ಅರ್ಹತೆಯನ್ನು ಪಡೆದಿದೆಯೆನ್ನಲು ಸಂದೇಹವಿಲ್ಲ.

---

# ಶ್ರೀ ಬಸವಣ್ಣನವರ ಒಂದು ವಚನದ ಅರ್ಥವಿವರಣೆ.

(ಲೇಖಕ: ಶ್ರೀಯುತ ಗುರುಲಿಂಗಯ್ಯ ಬಸಯ್ಯ ಮಠ.)

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯ ಬೇಡ, ಅನ್ಯರಿಗೆ ಅಸೂಯೆ ಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಇದೇ ಅಂತರಂಗದ ಶುದ್ಧಿ; ಇದೇ ಬಹಿರಂಗದ ಶುದ್ಧಿ; ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ"

ಪಂಚ ಮಹಾಭೂತಗಳಿಂದ ಒಡಗೂಡಿದ ಈ ದೇಹವು ನಿನ್ನದಲ್ಲ. ಇದು ನಿನ್ನ ಪೂರ್ವದ ಪುಣ್ಯಕ್ಕೆ ಮೆಚ್ಚಿ, ಈಶ್ವರನು ಮಾಡಿದ ಆಶೀರ್ವಾದ. ಈಶ್ವರನ ಈ ಆಶೀರ್ವಾದಕ್ಕೆ ಪಾತ್ರನಾದ ನಿನ್ನಲ್ಲಿ

ಅವನೂ ವಾಸವಾಗಿದ್ದಾನೆ. ತನ್ನನ್ನು ತಿಳಿಯಲು ಶ್ರೇಷ್ಠ ಜ್ಞಾನವನ್ನೊದಗಿಸಿಕೊಡಬೇಕೆಂದು ಈ ಭೌತಿಕ ದೇಹವನ್ನು ಕೊಟ್ಟಿದ್ದಾನೆ. ಆದ್ದರಿಂದ ಈ ದೇಹವು ನಿನ್ನದಲ್ಲ. ಒಂದುವೇಳೆ ಈ ದೇಹವು ನನ್ನದೆಂಬ ಅಹಂಕಾರವುಳ್ಳವನಾದರೆ ಪರರ ಗೃಹವನ್ನು ಅಪಹರಿಸಿದಂತಾಗುತ್ತದೆ. ಬಾಡಿಗೆ ತೆಗೆದುಕೊಂಡ ಮನೆಯು ಹೇಗೆ ನಮ್ಮದಲ್ಲವೋ ಹಾಗೆ ಈಶ್ವರನ ಈ ಮನೆಯು ಜ್ಞಾನವಾಗುವ ವರೆಗೂ ಇದ್ದು, ಜ್ಞಾನವಾಗಿ ಈ ಮನೆಯು ಸಾಕಾಗಲು ಅಲ್ಲಿಯೇ ಬಿಟ್ಟು ಹೋಗಬೇಕು. ಬಿಡದಿದ್ದರೆ ನ್ಯಾಯಾಧೀಶನಾದ ಪರಮಾತ್ಮನು ಆ ಅಜ್ಞಾನಿಗೆ ಉಗ್ರಶಾಸನವನ್ನು ವಿಧಿಸುವನು. ಆದ್ದರಿಂಧ ಈ ಭೌತಿಕ ಮನೆಯು ನನ್ನದೆಂದು ನುಡಿಯಬೇಡ. ಈ ಭೌತಿಕ ದೇಹದಲ್ಲಿ ನಿನ್ನಲ್ಲಿ ಆ ದಯಾನಿಧಿಯೂ ಇದ್ದಾನೆ. ಆತನನ್ನು ಕೊಲ್ಲಬೇಡ. ಮೃತ್ಯುಂಜಯನಾದ ಆ ವಿಶ್ವವ್ಯಾಪಿಯು ಅವಿನಾಶಿಯು. ಅವನನ್ನು ಕೊಲ್ಲುವದು ಹೇಗೆ? ಆತನು ಪ್ರತಿಯೊಂದು ಜೀವಿಯ ಹೃದಯದಲ್ಲಿಯೂ ಇದ್ದಾನೆ. ಆತನನ್ನು ಮರೆತರೆ ಕೊಂದಂತೆಯೇ. ಯಾರಾದರೂ ಬ್ರಹ್ಮನನ್ನು ಕೊಂದವರಂಟೆ? ಆದರೂ ಬ್ರಹ್ಮಹತ್ಯ ದೋಷವು ಪ್ರಾಪ್ತವಾಗಿರುವದು. ಬ್ರಹ್ಮಹತ್ಯವೆಂದರೆ ಪರಬ್ರಹ್ಮನನ್ನು ಮರೆತು ಅನ್ಯರ ದೇಹವು ನನ್ನದೆಂಬ ವಿರುದ್ಧ ಭಾವವನ್ನು ತಾಳುವದು. ಇದೇ ಕಳಬೇಡ ಕೊಲಬೇಡ ಎಂಬುದರ ನಿಜವಾದ ಭಾವವು.

ಈ ಜಗತ್ತು ಕನಸಿನಂತೆ ಮಿಥ್ಯಾ ಭ್ರಾಂತಿಯನ್ನುಂಟು ಮಾಡುವದು. ಇದನ್ನು ನಂಬಬೇಡ. "ಜಾತಸ್ಯ ಮರಣಂ ಧ್ರುವಂ" ಎಂಬಂತೆ ಜನನವಿದ್ದಲ್ಲಿ ಮರಣವುಂಟು. ಅದರಂತೆ ಈ ಜಗತ್ತು ಹುಟ್ಟಿದೆ. ಮುಂದೆ ಒಮ್ಮೆ ನಾಶವಾಗುತ್ತದೆ. ನೀರಡಿಸಿದ ಚಿಗರೆಯು ಬಿಸಿಲ್ಗುದುರೆಯ ಬೆನ್ನಟ್ಟಿ ವ್ಯರ್ಥ ಕೆಟ್ಟು ಹೋದಂತೆ ಮೃಗಜಲದೋಪಾದಿಯ ಈ ಜಗತ್ತಿನ ಸುಖದುಃಖಗಳಿಗೆ ಮೆಚ್ಚಬೇಡ. ಇವೆಲ್ಲವು ಒಂದು ಕ್ಷಣದಲ್ಲಿ ಸುಖವನ್ನು ಕೊಟ್ಟು ಮತ್ತೊಂದು ಕ್ಷಣದಲ್ಲಿ ಅತ್ಯಂತ ದುಃಖವನ್ನು ಕೊಡುವವು. ಈ ಹುಸಿಯ ಜಗತ್ತಿನಲ್ಲಿ ಇದ್ದದ್ದೆಲ್ಲವು ಹುಸಿಯೇ. ಜಗತ್ತಿನ ಅಂತರ್ಭಾಗದಲ್ಲಿ ವ್ಯಾಪಿಸಿದ ಅನಂತ ಪರಬ್ರಹ್ಮನೋರ್ವನು ಸತ್ಯನು. ಶಾಶ್ವತನು. ಅವನನ್ನು ಹೇಳುವ ಓಂಕಾರ ಮಂತ್ರವೇ ಸತ್ಯವಾಣಿಯು. ಇದನ್ನೇ ಧ್ಯಾನಮಾಡಿ ಪರಬ್ರಹ್ಮನನ್ನು ಕೂಡು. ಇದರ

ಹೊರತಾಗಿ ನುಡಿದದ್ದೆಲ್ಲವೂ ಸುಳ್ಳು. ಕೀಡಿಯು ಕುರಡೀ ಕುಠಾರ ವನ್ನು ಏಕಚಿತ್ತದಿಂದ ಧ್ಯಾನಿಸಿ ಕುರಡೀ ಕುಠಾರವೇ ಆಗುವಂತೆ ಜೀವನು ಪರಬ್ರಹ್ಮ ಧ್ಯಾನವನ್ನು ಮಾಡಿ, ತಾನೂ ಪರಬ್ರಹ್ಮನೇ ಆಗುವನು. ಇದೇ ಹುಸಿಯ ನುಡಿಯಲು ಬೇಡ ಎಂಬುದರ ನಿಜ ವಾದ ಮರ್ಮವು.

ಬ್ರಹ್ಮನು ವಿಶ್ವವ್ಯಾಪಿಯಾಗಿದ್ದಾನೆ. ತೋರುವ ಪ್ರಾಣಿಗಳಲ್ಲೆಲ್ಲ ಬ್ರಹ್ಮನೇ ಇರುವದರಿಂದ ಯಾರನ್ನು ನೋಡಿ ಯಾರು ಅಸೂಯೆ ಪಡಬೇಕು? ಭಿನ್ನ ಭಿನ್ನ ವಸ್ತುಗಳಿದ್ದರೆ ಒಂದನ್ನೊಂದು ಮತ್ಸರ ಪಡುತ್ತಿದ್ದವು. ನಾನೂ, ನೀನೂ, ಜಗವೂ, ಎಲ್ಲವೂ ಒಂದೇ ಬ್ರಹ್ಮ ಸ್ವರೂಪವೆಂಬ ಯಥಾರ್ಥ ಜ್ಞಾನವಾದಾಗ ಸರ್ವ ಜೀವದಯಾಪರನೂ, ನಿತ್ಯತೃಪ್ತನೂ, ತನ್ನಂತೆ ಪರರನ್ನು ತಿಳಿಯುವವನೂ ಆಗುವದರಿಂದ ಆ ಮನುಷ್ಯನಲ್ಲಿ ಅಸೂಯೆಯು ಕಿಂಚಿನ್ಮಾತ್ರವೂ ತೋರಲಾರದು. ಇದೇ ಅನ್ಯರಿಗೆ ಅಸೂಯೆ ಪಡಬೇಡ ಎಂಬುದರ ನಿಜವಾದ ಅರ್ಥವು.

ಹೀಗೆ ಒಂದೇ ಒಂದಾದ ಬ್ರಹ್ಮದಲ್ಲಿ ಜಗವೆಲ್ಲವೂ ಅಡಗಿ, ತಾನೊರ್ವನೆ ಇರಲಾಗಿ ತನ್ನನ್ನು ತಾನು ಬಣ್ಣಿಸುವದಾದರೂ ಹೇಗೆ? ಇನ್ನೊಂದು ವಸ್ತುವಿದ್ದರೆ ತನ್ನ ವರ್ಣನೆಯನ್ನು ಅವನ ಮುಂದೆ ಹೇಳುವರು. ಆದರೆ ಅನ್ಯಕ್ಕೆ ತಿಲಮಾತ್ರವೂ ಸ್ಥಾನವಿಲ್ಲದಿರಲು ಬಣ್ಣಿ ಸುವ ಮಾತೆಲ್ಲಿ! ಇಲ್ಲವೆಂದೇ ತಾತ್ಪರ್ಯವು.

ಇದಿರೆಂದರೆ ಎದುರು. ಎದುರಿನಲ್ಲಿಯೂ, ಹಿಂದೆಯೂ, ಮುಂದೆ ಯೂ, ಮೇಲೆಯೂ, ಕೆಳಗೂ ಎಲ್ಲೆಡೆಯಲ್ಲಿಯೂ ಬ್ರಹ್ಮವೇ ಕಾಣು ತ್ತಿರಲು, ನಿಂದಿಸಬೇಡ. ಬ್ರಹ್ಮಧ್ಯಾನದಲ್ಲಿಯೇ ತಲ್ಲೀನನಾಗು. ಕೊನೆಗೆ ಸಮಾಧಿಯಲ್ಲಿ ಅವನನ್ನೇ ಕೂಡು. ಇದು ಅಂತರಂಗದ ನಿಜವಾದ ಶುದ್ಧಿಯು. ಅಂತರಂಗದಲ್ಲಿ ನಿಜವಾಗಿ ಶುದ್ಧಿಯಾದಾಗ ಬಹಿರಂಗಕ್ಕೆ ಸ್ಥಾನವೆಲ್ಲಿಯದು? ಅಂತರಂಗದ ಹೃದಯವು ಶುದ್ಧವಾಗಿ ಸ್ವಯಂ ಜ್ಯೋತಿಯು ಬೆಳಗಿ ಮಂಗಲವನ್ನೀಯಲು ಇದರಂಥ ಸುಲಭ ಮಾರ್ಗವು ಬೇರುಂಟೇ?

---

# ಶಿವಾನುಭವಕ್ಕೆ ಸಹಾಯ.

(೧) ಮೈಸೂರ ಪ್ರಾಂತ ಶಿವಮೊಗ್ಗಾ ಡಿಸ್ಟ್ರಿಕ್ಟದ ನಾರಶೆಟ್ಟಿ ಹಳ್ಳಿ ಗ್ರಾಮದಲ್ಲಿ ತಾ. ೭-೯-೪೬ನೆಯ ದಿವಸ ಶಿವಾನುಭವ ಶಾಸ್ತ್ರ ವಿಷಯವು ಹರಪನಹಳ್ಳಿ ತಾಲೂಕು ಪುಣಬಗಟ್ಟಿ ಮಠದ ಬಸಪ್ಪಯ್ಯ ಸ್ವಾಮಿಗಳವರ ಅಧ್ಯಕ್ಷತೆಯ ಕೆಳಗೆ ಜರಗಿದ ಕಾಲಕ್ಕೆ ಕೆಳಗಿನ ಮಹ ನೀಯರು ಶಿವಾನುಭವ ಪತ್ರಿಕೆಗೆ ಸಹಾಯ ಮಾಡಿರುತ್ತಾರೆ.

ಶ್ರೀಯುತರುಗಳಾದ ನಾರಶೆಟ್ಟಿಹಳ್ಳಿ ಮಠದ ಬಸಪ್ಪಯ್ಯ ನವರು ೧೦ ರೂ., ಅಣ್ಣಪ್ಪಳ ರಾಮಪ್ಪನವರು ೫ ರೂ., ಮುದ್ದ ನಾರಪ್ಪಳ ಕಾಳಿಂಗಪ್ಪನವರು ೧ ರೂ., ಹೊನ್ನೆಬಾಗಿ ಗಿರಿಯಪ್ಪನ ವರು ೧ ರೂ., ಮುದ್ದನಾರಪ್ಪಳ ಮಹದೇವಪ್ಪನವರು ೧ ರೂ., ಪೀತಿಗೆರೆ ವೀರಪ್ಪನವರು ೧ ರೂ., ಮಠದ ಶಿವಲಿಂಗಯ್ಯನವರು ೧ ರೂ., ದುರ್ಗದ ಕರಿಯಪ್ಪನವರು ೧ ರೂ., ಪಟೇಲ್ ರಂಗಪ್ಪನವರು ೨ ರೂ., ಮೋದಗೊಂಡನಹಳ್ಳಿ ಹನುಮಪ್ಪನವರು ೧ ರೂ., ಹೊನ್ನೆಬಾಗಿ ಹನು ಮಪ್ಪನವರು ೧ ರೂ., ಸುಣ್ಣಗೆರೆ ನಂಜಪ್ಪನವರು ೧ ರೂ., ಸುಣ್ಣ ಗೆರೆ ಮಹದೇವಪ್ಪನವರು ೧ ರೂ., ಹೆಬ್ಬಳಗೆರೆ ತಿಮ್ಮಪ್ಪನವರು ೧ ರೂ.

(೨) ಕೊಯಿಮುತ್ತೂರ ಜಿಲ್ಲಾ ಕೊಳ್ಳೇಗಾಲ ಶಿವಾನುಭವ ಸಂಘದವರು ಶಿವಾನುಭವ ಪತ್ರಿಕೆಗೋಸ್ಕರ ೫ ರೂ|| ಕಾಣಿಕೆ ಅರ್ಪಿ ಸಿದ್ದು ಶ್ರೀ. ಶಿವಪ್ಪಸ್ವಾಮಿಗಳವರು ಭಿಕ್ಷದಮಠ, ಕೊಳ್ಳೇಗಾಲ ಇವರು ನಮ್ಮ ಕಡೆಗೆ ಕಳಿಸಿರುತ್ತಾರೆ.

ಮೇಲಿನ ಎಲ್ಲ ಮಹನೀಯರಿಗೆ ನಾವು ಅತ್ಯಂತ ಕೃತಜ್ಞರಾಗಿ ರುತ್ತೇವೆ.

ಸಂಪಾದಕರು— **ಶಿವಾನುಭವ,**
**ವಿಜಾಪುರ.**

# ಶಿವಾನುಭವ ಹಳೇ ಪತ್ರಿಕೆಗಳು.

ಈ ಕೆಳಗೆ ಕಾಣಿಸಿದ ಶಿವಾನುಭವ ಹಳೇ ಪತ್ರಿಕೆಗಳು ಸಿಗುತ್ತಿದ್ದು, ಅವುಗಳನ್ನು ನಮ್ಮ ಚಂದಾದಾರರಾಗಲೀ ಅಥವಾ ಹೊಸಬರಾಗಲೀ ಬೇಡಿದಲ್ಲಿ ಕಳುಹಿಸಿಕೊಡುವೆವು. ಎಷ್ಟೋ ಜನರು ಹಳೇ ಸಂಚಿಕೆಗಳನ್ನು ಬೇಡುತ್ತಿರುತ್ತಾರೆ. ಅಂಥವರು ಈ ಕೆಳಗಿನವುಗಳಲ್ಲಿ ತಮಗೆ ಬೇಕಾದವುಗಳನ್ನು ತಿಳಿಸಬೇಕು. ಈ ಸಂಚಿಕೆಗಳು ಮಾರ್ಚ ಕೊನೆಯುವರೆಗೆ ಮಾತ್ರ ದೊರೆಯುತ್ತವೆ. ನಂತರ ಸಿಗುವದಿಲ್ಲ. ಆದ್ದರಿಂದ ಬೇಕಾದವರು ಈ ಅವಧಿಯೊಳಗಾಗಿ ಬರೆದು ತರಿಸಿಕೊಳ್ಳಬೇಕಾಗಿ ವಿನಂತಿ ಇದೆ.

ಪ್ರತಿಯೊಂದು ಸಂಚಿಕೆಗೆ ಬೆಲೆ ೮ ಆಣೆ ಇದೆ. ಒಂದೇ ಸಂಚಿಕೆ ಬೇಕಾದವರು ೯ ಆಣೆ ಟಿಕೀಟು ಕಳಿಸಿದಲ್ಲಿ ಅದನ್ನು ಬುಕ್‌ಪೋಸ್ಟ ಮಾಡುವೆವು. ೧ಕ್ಕಿಂತ ಹೆಚ್ಚು ಬೇಕಾದವರಿಗೆ ವ್ಹಿಪಿಯಿಂದ ಕಳುಹಿಸುವೆವು.

ಕೆಲವು ಸಂಚಿಕೆಗಳು ತೀರ ಸ್ವಲ್ಪ ಇರುತ್ತವೆ. ಅಂಥವುಗಳನ್ನು ಮೊದಲಿಗೆ ಆರ್ಡರ ಕೊಟ್ಟವರಿಗೆ ಮಾತ್ರ ಕಳುಹಿಸುವೆವು.

೧೪ನೇ ಸಂಪುಟ ೧೯೩೯ನೇ ಅಕ್ಟೋಬರ— ಸಂಚಿಕೆಗಳು— ೧, ೩, ೪, ೬, ೭—೮, ೯, ೧೦,

೧೫ನೇ ಸಂಪುಟ ೧೯೪೦ ಅಕ್ಟೋಬರ — ೧, ೨, ೮—೯, ೧೦—೧೧,

೧೬ನೇ ಸಂಪುಟ ೧೯೪೧ ಅಕ್ಟೋಬರ— ೨, ೬, ೧೨,

೧೭ನೇ ಸಂಪುಟ ೧೯೪೨ ಅಕ್ಟೋಬರ — ೩, ೮, ೧೧, ೧೨,

೧೮ನೇ ಸಂಪುಟ ೧೯೪೩ ಅಕ್ಟೋಬರ — ೫, ೬—೭, ೮, ೯, ೧೦, ೧೧, ೧೨,

೧೯ನೇ ಸಂಪುಟ ೧೯೪೪ನೇ ಅಕ್ಟೋಬರ — ೧, ೨, ೪, ೬ — ೭, ೮, ೯, ೧೦, ೧೧, ೧೨,

೨೦ನೇ ಸಂಪುಟ ೧೯೪೫ ಅಕ್ಟೋಬರ — ೧, ೨, ೩, ೪, ೫, ೬—೭, ೮, ೯, ೧೦—೧೧, ೧೨,

ಮ್ಯಾನೇಜರ,

**ಶಿವಾನುಭವ ಆಫೀಸು — ವಿಜಾಪುರ.**

ಶಿವಾನುಭವ ಗ್ರಂಥಮಾಲಾ ನಂ. ೬೩

ಅರುವತ್ತುಮೂರು

# ಶಿವಶರಣರ ಚರಿತ್ರೆಗಳು.

## ಭಾಗ ೨.

—•*—

ಸಂಪಾದಕರು.

**ರಾ॥ ಬ॥ ಫ. ಗು. ಹಳಕಟ್ಟಿ,**

ಬಿ. ಎ. ಎಲ್. ಎಲ್. ಬಿ. ವಿಜಾಪುರ.

---



೧೯೪೭.

# ಅನುಕ್ರಮಣಿಕೆ.


| | ಹೆಸರುಗಳು. | ಪುಟ. |
|---|---|---|
| ೧ | ಬೊಂತಾದೇವಿ | ೧ |
| ೨ | ಗೊಗ್ಗವ್ವೆ | ೫ |
| ೩ | ದಸರಯ್ಯ | ೧೦ |
| ೪ | ಹಾವಿನಹಾಳ ಕಲ್ಲಯ್ಯ | ೨೪ |
| ೫ | ಜಂಬೂರು ಮಹಾಕಾಳಯ್ಯ | ೩೧ |
| ೬ | ವೀರಮ್ಮ (ದಸರಯ್ಯನ ಪತ್ನಿ) | ೩೪ |
| ೭ | ನಾವದಿಗೆಯ ಗುಡ್ಡವ್ವೆ | ೩೫ |
| ೮ | ಅಮುಗಿದೇವ | ೩೭ |
| ೯ | ರಾಯಮ್ಮ (ರಾಯಸದ ಮಂಚಣ್ಣನ ಪತ್ನಿ) | ೪೪ |
| ೧೦ | ರಾಯಸದ ಮಂಚಣ್ಣ | ೪೬ |
| ೧೧ | ಆದಯ್ಯ | ೪೮ |
| ೧೨ | ನನ್ನಯ್ಯ | ೫೯ |
| ೧೩ | ಕಲಕೇತಬೊಮ್ಮಯ್ಯ | ೭೫ |
| ೧೪ | ಭದ್ರಗಾಯಕ | ೭೯ |
| ೧೫ | ಉಂಡುಉಪವಾಸಿ | ೮೩ |
| ೧೬ | ಬಳಸಿಬ್ರಹ್ಮಚಾರಿ | ೮೩ |
| ೧೭ | ಅಗ್ಗವಣಿಯ ಹೊನ್ನಯ್ಯ | ೮೭ |
| ೧೮ | ಓಲೆಯ ಶಾಂತಯ್ಯ | ೮೭ |
| ೧೯ | ಸತ್ಯಕ್ಕ | ೮೯ |
| ೨೦ | ಕೇಶಿರಾಜ | ೯೩ |
| ೨೧ | ಗುಪ್ತಮಂಚಣ್ಣ | ೧೦೨ |
| ೨೨ | ವರದಾನಿಗುಡ್ಡಮ್ಮ | ೧೧೧ |
| ೨೩ | ಪುಲಿಗೆರೆಯ ಸೋಮಯ್ಯ | ೧೨೯ |
| ೨೪ | ವೈದ್ಯನರಾಮಯ್ಯ | ೧೩೨ |
| ೨೫ | ಕೋಳೂರು ಕೊಡಗೂಸು | ೧೩೫ |
| ೨೬ | ಮಾದರ ಚನ್ನಯ್ಯ | ೧೩೯ |
| ೨೭ | ಮೆರೆಮಿಂಡದೇವ | ೧೪೯ |
| ೨೮ | ತಿಲಕವ್ವೆ | ೧೫೫ |
| ೨೯ | ಮೇದರಕೇತಯ್ಯ | ೧೫೮ |
| ೩೦ | ಅಮ್ಮವ್ವೆ ಅಥವಾ ಬಿಜ್ಜಮಹಾದೇವಿ | ೧೬೨ |
| ೩೧ | ಗಟ್ಟಿವಾಳಯ್ಯ | ೧೬೭ |
| ೩೨ | ಗೊಲ್ಲಾಳ | ೧೭೫ |
| ೩೩ | ಪಿಟ್ಟವ್ವೆ | ೧೮೦ |
| ೩೪ | ಒಕ್ಕಲುಮುದ್ದಯ್ಯ | ೧೮೩ |
| ೩೫ | ವೈಜವ್ವೆ | ೧೯೧ |
| ೩೬ | ಏಕಾಂತದರಾಮಯ್ಯ | ೧೯೮ |
| ೩೭ | ಗಜೇಶಮಸಣಯ್ಯ | ೨೦೦ |
| ೩೮ | ನುಲಿಯಚಂದಯ್ಯ | ೨೧೭ |
| ೩೯ | ಮೋಳಿಗೆಯ ಮಾರಯ್ಯ | ೨೨೫ |

೪೦ ಮಹಾದೇವಿಯಮ್ಮ (ಮೋಳಿಗೆಯ ಮಾರಯ್ಯನ ಹೆಂಡತಿ) ೨೩೦
೪೧ ಸೊಡ್ಡಳಬಾಚರಸ ೨೩೨
೪೨ ಶಿವನಾಗಮಯ್ಯ ೨೩೮
೪೩ ಕೋಹೂರು ಬ್ರಹ್ಮಯ್ಯ ೨೪೨
೪೪ ಮಾರುಡಿಗೆಯ ನಾಚಯ್ಯ ೨೫೨
೪೫ ಅಜಗಣ್ಣ ೨೫೭
೪೬ ಮುಕ್ತಾಯಕ್ಕ ೨೬೨
೪೭ ತಾಳೀಕೋಟೆಯ ಶಿವದೇವ ೨೬೬
೪೮ ಕಂಕರೀಕಕ್ಕಯ್ಯ ೨೬೯
೪೯ ಇಳಿಹಾಳಬೊಮ್ಮಯ್ಯ ೨೭೨
೫೦ ವೀರಸಂಗಯ್ಯ ೨೭೬
೫೧ ಮುಸುಡಿಯ ಚೌಡಯ್ಯ ೨೮೦
೫೨ ಬಿಬ್ಬಿಬಾಚಯ್ಯ ೨೮೭
೫೩ ಸಗರದಬೊಮ್ಮಯ್ಯ ೨೯೭
೫೪ ವೈದ್ಯಸಂಗಣ್ಣ ೩೦೦
೫೫ ಅನುಮಿಷ ೩೦೭
೫೬ ಶಿವಲೆಂಕಮಂಚಣ್ಣ ೩೧೭
೫೭ ಕದಿರರೆಮ್ಮಯ್ಯ-ಅಣ್ಣಲದೇವಿ ೩೨೨
೫೮ ನಿಜಲಿಂಗಚಿಕ್ಕಯ್ಯ ೩೨೫
೫೯ ಶ್ರೀಪತಿಪಂಡಿತ ೩೩೪
೬೦ ವೇಮನಾರಾಧ್ಯ ೩೪೮
೬೧ ಚಾರಮರಾಯ ೩೫೨
೬೨ ತಂಗಟೂರು ಮಾರಯ್ಯ ೩೬೧
೬೩ ಭಾನುದೇವಯ್ಯ ೩೬೫

## ಮಠಾಧಿಕಾರಿಗಳ ಧರ್ಮಪ್ರಸಾರ ಕಾರ್ಯಗಳು.

ಶಿವಶರಣರಲ್ಲಿ ಅನೇಕರು ಮಠಾಧಿಕಾರಿಗಳು ಇರುವರು. ಅವರೂ ಧರ್ಮಪ್ರಸಾರಕಾರ್ಯವನ್ನು ಮಾಡಿದ್ದಾರೆ. ಉರಿಲಿಂಗದೇವ ಮತ್ತು ಅವನ ಶಿಷ್ಯನಾದ ಉರಿಲಿಂಗಪೆದ್ದಿ ಈ ಉಭಯತರು ಮಠಾಧಿಕಾರಿಗಳು. ಅವರು ಮಹಾರಾಷ್ಟ್ರದಲ್ಲಿ ಗೋದಾವರೀತೀರ ಪ್ರದೇಶದವರು. ಅವರು ಉಚ್ಚತರಗತಿಯ ವಚನಕಾರರು. ನಿರ್ಲಜ್ಜ ಶಾಂತಯ್ಯನು ಮೊದಲು ಭಕ್ತಾಚಾರದಲ್ಲಿದ್ದು ಮುಂದೆ ಮಠಾಧಿಕಾರಿಯಾದನು. ಅವನು ಷಟ್‌ಸ್ಥಲದ ತಿರುಳನ್ನು ಪ್ರಮಥರಿಗೆ ಬೋಧಿಸಿದ್ದಾನೆ. ಸಕಳೇಶ ಮಾದರಸನು ಮೊದಲು ರಾಜಪದವಿಯಲ್ಲಿದ್ದವನು. ಆದರೆ ಅವನು ಈ ಸ್ಥಾನವನ್ನು ತೊರೆದು ಕಲ್ಯಾಣಕ್ಕೆ ಬಂದು ಅಲ್ಲಿ ಮಠಾಧಿಕಾರಿಯಾದನು. (ಶಿವಶರಣರ ಚರಿತ್ರೆಗಳು ಭಾಗ ೧ ಪುಟ ೩೭ ನೋಡಿರಿ.) ಸುಜ್ಞಾನಿದೇವನು ಒಡಿಸಾಪ್ರಾಂತದವನು ಮತ್ತು ಶ್ರೀಪತಿಪಂಡಿತ ಮತ್ತು ಹೇಮನಾರಾಧ್ಯರು ಆಂಧ್ರದೇಶದವರು. ಈ ಮೂವರೂ ಮಠಾಧಿಪತಿಗಳಾಗಿ ಬಹುಜನರಿಗೆ ವೀರಶೈವ ಧರ್ಮೋಪದೇಶವನ್ನು ಮಾಡಿದ್ದಾರೆ. ಪ್ರಸಿದ್ಧ ಶಿವಶರಣರಾದ ತಾಳೀಕೊಟ್ಟೆಯ ಶಿವದೇವ ಮತ್ತು ಎಡೆಮಠದ ನಾಗಿದೇವ ಈ ಉಭಯತರು ಮಠಾಧಿಪತಿಗಳು. ಹೀಗೆ ಶಿವಶರಣರಲ್ಲಿ ಅನೇಕರು ಮಠಾಧಿಪತಿಗಳಿದ್ದು ಅವರು ಶಿವಾನುಭವವನ್ನು ಬೋಧಿಸುತ್ತ ವೀರಶೈವಧರ್ಮಪ್ರಸಾರ ಕಾರ್ಯವನ್ನು ಮಾಡಿದ್ದಾರೆ.

## ಜಂಗಮರು.

ಶಿವಶರಣರ ಕಾಲದಲ್ಲಿ ಅವರಕಿಂತ ಪೂರ್ವದಲ್ಲಿ ಜಂಗಮರು ಅಸ್ತಿತ್ವದಲ್ಲಿದ್ದು ಅವರಲ್ಲಿ ಬಹುಜನರು ಧರ್ಮಬೋಧೆ ಮಾಡುತ್ತ ಹಿಂದುಸ್ಥಾನದಲ್ಲೆಲ್ಲ ಸಂಚರಿಸುತ್ತಿದ್ದಹಾಗೆ ಶಿವಶರಣರ ಚರಿತ್ರೆಗಳಲ್ಲಿ ಉಲ್ಲೇಖಗಳಿರುತ್ತವೆ. ಅವರು ಒಂದೆಡೆಗೆ ಇರದೆ ಬೇರೆ ಬೇರೆ ದೇಶಗಳಲ್ಲಿ ಹೋಗಿ ಬೋಧೆಮಾಡುತ್ತಿದ್ದಹಾಗೆ ತೋರಿಬರುತ್ತದೆ. ಕಾಶ್ಮೀರದೇಶದ ಅರಸನಾದ ಮಹಾದೇವರಾಜನಲ್ಲಿ ಬಹುಜನ ಜಂಗಮರು ವಾಸವಾಗಿದ್ದು ಅವರು ಆಗಿಂದಾಗ್ಗೆ ಕರ್ನಾಟಕಕ್ಕೆ ಬಂದು ಸಂಚರಿಸುತ್ತಿದ್ದರಿಂದು ಮೋಳಿಗೆಯ ಮಾರಯ್ಯನ ಚರಿತ್ರೆಯಿಂದ ತಿಳಿದುಬರುತ್ತಿದೆ. ಕರ್ನಾಟಕಕ್ಕೂ ಕಾಶ್ಮೀರದೇಶಕ್ಕೂ ಸಾಂಸ್ಕೃತಿಕ ಸಂಬಂಧವಿ

ದ್ದುದು ಕರ್ನಾಟಕ ಇತಿಹಾಸದಿಂದ ತಿಳಿದುಬರುತ್ತದೆ. ವಿಜಾಪುರ ಪ್ರಾಂತದಲ್ಲಿದ್ದ ಕೋವೂರು ಬ್ರಹ್ಮಯ್ಯ, ಗೋಲಗಿರಿಯ ಗೊಲ್ಲಾಳ, ಇಲಿಹಾಳದಲ್ಲಿಯ ಬ್ರಹ್ಮಯ್ಯ ಈ ಮೂವರೂ, ಮೈಸೂರು ದೇಶದಲ್ಲಿದ್ದ ಬಿಜ್ಜಾವರದ ಬಿಜ್ಜಮಹಾದೇವಿಯೂ ಗೋದಾವರೀತೀರ ಪ್ರದೇಶದಲ್ಲಿದ್ದ ಪರಿವಳಿಗೆಯ ವೈಜಾಂಬೆಯೂ ಧಾರವಾಡ ಪ್ರಾಂತದಲ್ಲಿದ್ದ ಪುಲಿಗೆರಿಯ ಆದಯ್ಯನೂ ಇವರೆಲ್ಲರ ಚರಿತ್ರೆಗಳಲ್ಲಿ ಜಂಗಮರ ಅಥವಾ ಮಾಹೇಶ್ವರರ ಉಲ್ಲೇಖಗಳು ಬಂದಿರುತ್ತವೆ. ಈ ಉಲ್ಲೇಖಗಳಿಂದ ಜಂಗಮರು ಹಿಂದಿನಕಾಲದಲ್ಲಿ ಅಸ್ತಿತ್ವದಲ್ಲಿದ್ದು ಅವರು ಹಿಂದುಸ್ತಾನದಲ್ಲೆಲ್ಲ ಧರ್ಮಬೋಧೆಮಾಡುತ್ತ ಸಂಚರಿಸುತ್ತಿದ್ದರೆಂದು ತೋರುತ್ತಿದೆ.

ಮೇಲೆ ವಿವರಿಸಿದ ಶಿವಶರಣರಲ್ಲಿ ಪರಿವಳಿಗೆಯ ವೈಜವ್ವೆ ಮತ್ತು ಇಲಿಹಾಳ ಬೊಮ್ಮಯ್ಯ ಇವರು ಬಸವೇಶ್ವರನಕಿಂತಲೂ ಮೊದಲಿನ ವರು ಇದ್ದಾರೆ. ಮತ್ತು ಬಸವೇಶ್ವರನು ಜಂಗಮರನ್ನು ತನ್ನ ವಚನ ಗಳಲ್ಲಿ ಪದೇಪದೇ ಸ್ತುತಿಸುತ್ತಾನೆ. ಆದ್ದರಿಂದ ಜಂಗಮರು ಬಸವೇ ಶ್ವರನಕಿಂತಲೂ ಮೊದಲು ಇದ್ದರೆಂಬುದು ಸ್ಪಷ್ಟವಿದೆ.

## ಅನುಭಾವ ಅಥವಾ ಶಿವಾನುಭವದಿಂದ ಧಾರ್ಮಿಕ ಜಾಗ್ರತಿ.

ಆದರೆ ಇಂಥ ಬೋಧಕರ ಬೋಧೆಯು ಪರಿಣಾಮಗಳು ಸಾಮಾನ್ಯ ವಾಗಿ ಅಜ್ಞಾನಿಗಳ ಮನಸ್ಸಿನ ಮೇಲೆ ಕ್ಷಣಿಕವಾಗಿರುತ್ತವೆ. ಆದ್ದರಿಂದ ಅವುಗಳನ್ನು ದೃಢಪಡಿಸುವ ವಿಷಯವಾಗಿ ಎಲ್ಲ ಧರ್ಮಗಳಲ್ಲಿ ಕೆಲವೊಂದು ಯೋಜನೆಯು ಇರುತ್ತದೆ. ಉದಾಹರಣಾರ್ಥವಾಗಿ ಹಿಂದೂ ಜನರಲ್ಲಿ ದೇವಾಲಯಗಳು, ಕ್ರಿಸ್ತೀ ಜನರಲ್ಲಿ ಪ್ರಾರ್ಥನಾಲಯಗಳು (ಚರ್ಚಗಳು), ಜೈನರಲ್ಲಿ ಚೈತ್ಯಾಲಯಗಳು, ಬೌದ್ಧರಲ್ಲಿ ಬೌದ್ಧಾಲಯಗಳು ಮತ್ತು ವಿಹಾರಗಳು ಮತ್ತು ಮುಸಲ್ಮಾನರಲ್ಲಿ ಮಶೀದಿಗಳು ಇರುತ್ತವೆ. ಆದರೆ ಶಿವಶರಣರು ಇಂಥ ಆಲಯಗಳನ್ನು ಕಟ್ಟಸಲಿಕ್ಕೆ ಹೋಗಿಲ್ಲ. ಅವರು ಕೇವಲ ಶಾಬ್ದಿಕ ಬೋಧೆಗೆ ಮಹತ್ವಕೊಟ್ಟಿರುವದಿಲ್ಲ. ಆದರೆ ಅವರು ಅನುಭಾವಕ್ಕೆ ಮಹತ್ವಕೊಟ್ಟಿರುತ್ತಾರೆ. ಅನುಭಾವಕ್ಕೆ ವಚನ ಶಾಸ್ತ್ರದಲ್ಲಿ ವಿಶೇಷಾರ್ಥವಿರುತ್ತದೆ. ಅದು ಶಿವಶರಣರ ಉಕ್ತಿಗಳನ್ನು ಓದುವದು, ಅವುಗಳನ್ನು ತಿಳಿದವರೊಡನೆ ಚರ್ಚಿಸುವದು ಮತ್ತು ಅವು

ಗಳನ್ನು ಹೀಗೆ ಮನನಮಾಡಿಕೊಂಡು ಅವುಗಳಂತೆ ನಡಿಯುವದು ಎಂದು ಇರುತ್ತದೆ. (೧) ಇದರಿಂದ ಬೋಧೆಮಾಡಿದ್ದರ ಪರಿಣಾಮ ಗಳು ದೃಢಪಡುತ್ತವೆ. ಶಿವಶರಣರು ಈ ಸಂಗತಿಯನ್ನು ಲಕ್ಷಿಸಿ ಅನು ಭಾವ ಅಥವಾ ಶಿವಾನುಭವಕ್ಕೆ ಬಹಳ ಮಹತ್ವಕೊಟ್ಟಿರುತ್ತಾರೆ. ಈ ಕಾರ್ಯವನ್ನು ಮುಖ್ಯವಾಗಿ ಆಗಿನ ಮಠಗಳು ಬಹು ಬಲವಾಗಿ ಸಾಗಿ ಸಿರುತ್ತವೆ. ಆದ್ದರಿಂದ ಈ ಮಠಗಳಲ್ಲಿ ಷಟ್‌ಸ್ಥಲವಿಷಯಕವಾದ ಅಸಂಖ್ಯ ಗ್ರಂಥಗಳೂ ವಚನಗಳೂ ಉಂಟಾಗಿರುತ್ತವೆ. ಶಿವಾನುಭವದ ಮೂಲಕ ವೀರಶೈವ ಸಮಾಜದಲ್ಲಿ ಬೇರೆ ಸಮಾಜಗಳಲ್ಲಿದ್ದಂತೆ ದೇವಾಲಯಗ ಳಿಗೆ ಮಹತ್ವದ ಸ್ಥಾನವು ಪ್ರಾಪ್ತವಾಗದೆ, ಮಠಗಳಿಗೆ ಮಹತ್ವದ ಸ್ಥಾನವು ಪ್ರಾಪ್ತವಾಗಿದೆ. ಆದ್ದರಿಂದ ಈ ಮಠಗಳು ವೀರಶೈವರ ವಸತಿಯು ಇದ್ದ ಎಲ್ಲ ಗ್ರಾಮಗಳಲ್ಲಿ ಸ್ಥಾಪಿಸಲ್ಪಟ್ಟಿರುತ್ತವೆ. ಇವುಗಳಿಂದ ಈ ಕಾಲದಲ್ಲಿ ನಾಡಿನಲ್ಲಿ ಧಾರ್ಮಿಕ ಉಚ್ಚ ವಾತಾವರಣವು ನೆಲೆಗೊಳ್ಳಲು ಕಾರಣವಾಯಿತು.

ಈ ಧಾರ್ಮಿಕ ಚಳವಳಿಯು ಬಸವೇಶ್ವರನ ತರುವಾಯ ಸುಮಾರು ೧೦೦-೧೫೦ ವರುಷಗಳ ವರೆಗೆ ನಡಿಯಿತೆಂದು ತೋರುತ್ತದೆ. ಇದೇ ವಚನವಾಙ್ಮಯದ ಅಭ್ಯುದಯದ ಕಾಲವು. ಆದರೆ ಇದರ ಮುಂದೆ ಶಿವಶ ರಣರು ಪೊವಾಡ ಪುರುಷರಾದರು. ಆಗ ಅವರ ಬಗ್ಗೆ ಪುರಾಣಗಳು ರಚಿ ಸಲ್ಪಡಹತ್ತಿದವು. ಅಜ್ಞಾನ ಜನರಿಗೆ ಇವು ಪ್ರಿಯವಾಗಹತ್ತಿದವು. ಇದರಿಂದ ವಚನಶಾಸ್ತ್ರದ ವಿಚಾರಗಳು ಮೆಲ್ಲಗೆ ಅಡಗಹತ್ತಿದವು. ಬರಬರುತ್ತ ಅವು ರುಚಿಸದಂತಾದವು. ಇದರಿಂದ ವಚನಗಳನ್ನು ರಚಿಸುವ ಪದ್ಧತಿಯು ನಿಂತುಹೋಯಿತು. ಅವುಗಳ ಸ್ಥಳದಲ್ಲಿ ಪುರಾಣಗಳ ಸಂಖ್ಯೆಯು ಬೆಳೆ ಯಿತು. ಆದರೆ ಇವುಗಳಲ್ಲಿ ವಚನಶಾಸ್ತ್ರದಲ್ಲಿಯ ತತ್ವಗಳ ವಿವರಣೆಯು ಬಹಳ ಕಡಿಮೆ ಇರುತ್ತದೆ. ಕೆಲವುಗಳಲ್ಲಿ ಇದ್ದರೂ ಅದು ಅತ್ಯಲ್ಪವು. ಹೀಗೆ ಶಿವಶರಣರ ವಚನಶಾಸ್ತ್ರವು ಅನೇಕ ಶತಮಾನಗಳಿಂದ ಅಡಗಿ ಹೋದದ್ದರಿಂದ ಅದರ ಗ್ರಂಥಗಳು ಸಹ ನಮಗೆ ಈಗ ಉಪಲಬ್ಧವಿರು ವದಿಲ್ಲ. ಅವು ಅವ್ಯವಸ್ಥಿತವಾಗಿ ಅಲ್ಲಲ್ಲಿ ಮಾತ್ರ ದೊರೆಯುತ್ತವೆ.

---

(೧) ಹೊಸಪದ್ಧತಿಯ ಬಸವೇಶ್ವರನ ವಚನಗಳು ಪುಟ ೧೪ ನೋಡಿರಿ.

## ರಾಜರು ಮೊದಲ್ಗೊಂಡು ಎಲ್ಲತರಗತಿಯ ಜನರಲ್ಲಿ ವೀರಶೈವ ಧರ್ಮದ ಪ್ರಸಾರ.

ಶಿವಶರಣರು ಅನೇಕವಿಧವಾಗಿ ನಡಿಸಿದ ಧರ್ಮಪ್ರಸಾರ ಕಾರ್ಯಗಳ ಮೂಲಕ ನಾಡಿನಲ್ಲಿ ಎಲ್ಲ ತರಗತಿಯ ಜನರು ವೀರಶೈವ ಧರ್ಮವನ್ನು ಸ್ವೀಕರಿಸುವವರಾದರು. ಈ ಕಾಲವಲ್ಲಿ ರಾಜ್ಯಾಧಿಪತಿಗಳು ಮೊದಲ್ಗೊಂಡು ಅಸ್ಪೃಶ್ಯರ ವರೆಗೆ ಅಸಂಖ್ಯ ಜನರು ಇದರಲ್ಲಿ ಸೇರಿಕೊಂಡಿದ್ದು ಕಂಡುಬರುತ್ತದೆ. ಕೆಲವು ರಾಜರು ಶಿವಾನುಭವದ ತತ್ವಗಳಿಗೋಸ್ಕರ ಪ್ರೇಮವನ್ನು ವಹಿಸಿದವರಾಗಿ ತಮ್ಮ ಉಚ್ಚ ಸ್ಥಾನಗಳನ್ನು ತ್ಯಜಿಸಿಬಿಟ್ಟಿದ್ದಾರೆ. ಮಹಾದೇವರಾಜನು ಕಾಶ್ಮೀರದೇಶದರಸನು. ಅವನು ತನ್ನ ಸ್ಥಾನವನ್ನು ಬಿಟ್ಟುಕೊಟ್ಟು ಕಲ್ಯಾಣಕ್ಕೆ ಬಂದು ಅಲ್ಲಿ ಬಸವೇಶ್ವರನ ಶಿವಾನುಭವಮಂಟಪವನ್ನು ಸೇರುವವನಾದನು. ಅವನ ಹೆಂಡತಿಯಾದ ಮಹಾದೇವಿಯಮ್ಮನು ಕೂಡ ಅವನೊಂದಿಗೆ ಬರುವವಳಾದಳು. ಈ ಉಭಯ ಸತಿಪತಿಗಳು ಶ್ರೇಷ್ಠತರಗತಿಯ ವಚನಕಾರರಿದ್ದಾರೆ. ಬೊಂತಾದೇವಿಯು ಕಾಶ್ಮೀರದೇಶದಲ್ಲಿಯ ಇನ್ನೊಬ್ಬ ರಾಜಕುಮಾರಿಯು. ಅವಳೂ ಕೂಡ ತನ್ನ ಉಚ್ಚ ಸ್ಥಾನವನ್ನು ಬಿಟ್ಟುಕೊಟ್ಟು ಕಲ್ಯಾಣಕ್ಕೆ ಬರುವವಳಾದಳು. ಅವಳೂ ವಚನಕಾರಳು. ಅನುಮಿಷನು ಪಟ್ಟದಕಲ್ಲಿನಲ್ಲಿ ಆಳುತ್ತಿದ್ದ ರಾಜನಾಗಿದ್ದನು. ಅವನು ತನ್ನ ರಾಜ್ಯವನ್ನು ಬಿಟ್ಟುಕೊಟ್ಟು ಬಳ್ಳಿಗಾವಿಗೆ ಬಂದು ಅಲ್ಲಿ ಶಿವಯೋಗದಲ್ಲಿ ಮಗ್ನನಾದನು. ಸಕಳೇಶ ಮಾದರಸನು ಮೊದಲು ರಾಜ್ಯಾಧಿಪತಿಯು. ಇವನು ಸಹ ಆ ಸ್ಥಾನವನ್ನು ಬಿಟ್ಟುಕೊಟ್ಟು ಕಲ್ಯಾಣಪಟ್ಟಣಕ್ಕೆ ಬಂದು ವಾಸಿಸುವವನಾದನು. ಚಂದಿಮರಸನು ಕೆಂಭಾವಿಯಲ್ಲಿ ರಾಜ್ಯವಾಳುತ್ತಿದ್ದನು. ಅವನು ತನ್ನ ರಾಜ್ಯವನ್ನು ತೊರೆದು ಚಿಮ್ಮಲಿಗೆ (ಜಿಲ್ಲಾ ವಿಜಾಪುರ) ಯಲ್ಲಿ ಬಂದು ನಿಂತನು. ಚಾರಮರಾಯನು ಕೇರಳದೇಶದ ಅಧಿಪತಿಯು. ಅವನು ಸಹ ತನ್ನ ರಾಜ್ಯವನ್ನು ಪರಿತ್ಯಜಿಸಿ ಶಿವನೆಲ್ಲಿದಾನೆಂಬುದನ್ನು ಹುಡುಕಲು ದೇಶಗಳನ್ನು ಸಂಚರಿಸುತ್ತ ಕಡೆಗೆ ಗೊಗ್ಗವ್ವೆಯನ್ನು ಕಂಡು ಅವಳಿಂದ ಲಿಂಗತತ್ವವನ್ನು ಅರಿತುಕೊಂಡನು. ಈ ಗೊಗ್ಗವ್ವೆಯು ವಚನಕಾರಳು. ಶಿವಯೋಗಿ ಮಲ್ಲರಸನು ಮೊದಲು ಐಹೊಳೆ (ಜಿ. ವಿಜಾಪುರ) ಯಲ್ಲಿ ರಾಜನಾಗಿದ್ದನು. ಅವನು ಆ ಸ್ಥಾನವನ್ನು ತ್ಯಜಿಸಿ ಶ್ರೀಶೈಲದಲ್ಲಿ ಶಿವ

ಯೋಗದಲ್ಲಿ ನಿರತನಾದನು. ಗುಪ್ತಮಂಚಣ್ಣ, ತಂಗಟೂರು ಮಾರಯ್ಯ, ರಾಯಸದ ಮಂಚಣ್ಣ, ಸೊಡ್ಡಳ ಬಾಚರಸ ಇವರೆಲ್ಲರೂ ರಾಜ್ಯದಲ್ಲಿ ಸಣ್ಣ ದೊಡ್ಡ ಅಧಿಕಾರ ಸ್ಥಾನಗಳಲ್ಲಿದ್ದವರು. ಅವರೆಲ್ಲರೂ ವೀರಶೈವ ಧರ್ಮವನ್ನು ಪಾಲಿಸುವವರಾದರು. ಶಿವಶರಣರಲ್ಲಿ ಅಸ್ಪೃಶ್ಯ ಮೊದಲ್ಗೊಂಡು ಎಲ್ಲ ಸಮಾಜದವರೂ ಕೂಡ ಇರುತ್ತಾರೆ. ಹೀಗೆ ದೇಶದಲ್ಲಿಯ ಎಲ್ಲ ತರಗತಿಯ ಜನರು ಈ ಕಾಲದಲ್ಲಿ ವೀರಶೈವ ಧರ್ಮವನ್ನು ಸ್ವೀಕರಿಸಿದ್ದು ಕಂಡುಬರುತ್ತಿದೆ.

## ಧರ್ಮಪ್ರಸಾರ ಕಾರ್ಯದಲ್ಲಿ ಶಿವಶರಣರಿಗಾದ ಕಷ್ಟಗಳು.

ಶಿವಾನುಭವ ಪ್ರಸಾರಕಾರ್ಯದಲ್ಲಿ ಶಿವಶರಣರಿಗೆ ಯಾವ ತೊಂದರೆಗಳೂ ಸಂಭವಿಸದೆ ಅವರು ತಮ್ಮ ಕಾರ್ಯವನ್ನು ಬಹು ಹಗುರಾಗಿ ಸಾಗಿಸುತ್ತ ಬಂದರೆಂದು ಅನೇಕರು ಭಾವಿಸಿರಬಹುದು. ಆದರೆ ನಿಜಸ್ಥಿತಿಯು ಹೀಗಿರುವದಿಲ್ಲ. ಶಿವಶರಣರು ತಮ್ಮ ಶಿವಾನುಭವ ಕಾರ್ಯಗಳನ್ನು ಮುಂದುವರಿಸುವಲ್ಲಿ ಅವರಿಗೆ ಅನೇಕ ತರದ ಕಷ್ಟಗಳು ಬಂದಿರುತ್ತವೆ. ಇದನ್ನು ನಾವು ಅವರ ಚರಿತ್ರೆಗಳಲ್ಲಿ ಕಾಣುತ್ತೇವೆ. ಶಿವಶರಣರ ಪ್ರಯತ್ನಗಳಲ್ಲಿ ಆಗಿನ ಪ್ರಮುಖ ಸಮಾಜಗಳು ಅವರನ್ನು ಬಲವಾಗಿ ವಿರೋಧಿಸಿರುತ್ತವೆ. ಈ ಸಮಾಜದವರು ಅವರಿಗೆ ಅನೇಕ ತರದ ತೊಂದರೆಗಳನ್ನು ತಂದೊಡ್ಡಿದ್ದಲ್ಲದೆ ಅವರನ್ನು ಬಹಳ ಹಿಂಸಿಸಿದ್ದಾರೆ. ಇಷ್ಟೇ ಅಲ್ಲ, ಒಮ್ಮೊಮ್ಮೆ ಸಮಾಜ ಸಮಾಜಗಳ ಮಧ್ಯದಲ್ಲಿ ಅನೇಕ ಬಗೆಯ ಕೋಲಾಹಲಗಳೆದ್ದಿವೆ, ಹೊಡೆದಾಟಗಳಾಗಿವೆ, ಯುದ್ಧಗಳೂ ಕೂಡ ಸಂಭವಿಸಿವೆ. ಬಲಿಷ್ಠ ಸಮಾಜಗಳು ಆಗ ದುರ್ಬಲಸ್ಥಿತಿಯಲ್ಲಿದ್ದ ವೀರಶೈವ ಸಮಾಜಕ್ಕೆ, ಅದರಲ್ಲಿ ವಿಶೇಷವಾಗಿ ಸ್ತ್ರೀಯರಿಗೆ, ಅನೇಕ ತರದ ಪೀಡೆಗಳನ್ನು ಕೊಟ್ಟಿರುತ್ತವೆ. ಆದರೂ ಶಿವಾನುಭವವು ಬಹುಜನ ಸಮಾಜಕ್ಕೆ ಬಹು ಪ್ರಿಯವಾದುದಾದ್ದರಿಂದ ಅದು ನಾಡಿನಲ್ಲಿ ಪಸರಿಸುತ್ತಲೇ ಹೋಯಿತು. ಈ ಕಾರ್ಯದಲ್ಲಿ ಶಿವಶರಣರಿಗೆ ಉಂಟಾದ ಕಷ್ಟಗಳ ವಿವರಣೆಗಳನ್ನು ಕೆಳಗೆ ಕಾಣಿಸಿದ ಚರಿತ್ರೆಗಳಲ್ಲಿ ನಾವು ಕಾಣಬಹುದು.

ಏಲೇಶಕೇತಯ್ಯನು ವೀರಶೈವಾಚಾರದಲ್ಲಿ ನಿರತನಾಗಿ ಶೈವಸಾಂಪ್ರದಾಯಿಗಳ ಕೂಡ ಸಹ ಯಾವ ತೆರದ ಸಂಬಂಧವನ್ನಿಡುತ್ತಿದ್ದಿಲ್ಲ. ಇದ

ರಿಂದ ಅವನು ಅವರ ರೋಷಕ್ಕೆ ಗುರಿಯಾದನು. ಬಿತ್ತುವ ಬೀಜದ ಅವನ ಕಾಳುಗಳನ್ನು ಅವರು ಸುಟ್ಟುಬಿಟ್ಟರು. ಅವನ ದನಕರುಗಳನ್ನು ಓಡಿಸಿಬಿಟ್ಟರು. ಕಡೆಗೆ ಅವರು ಅವನನ್ನು ಕೊಂದುಹಾಕಬೇಕೆಂದು ಅವನ ಮನೆಯನ್ನು ಮುತ್ತಿದರು. ಆದರೆ ಕೇತಯ್ಯನು ಅವರನ್ನು ಮನೆಯಲ್ಲಿ ಬರಮಾಡಿಕೊಂಡು ತನ್ನ ಶಿವಾನುಭವದ ಬೋಧೆಯಿಂದ ಅವರನ್ನು ಶಾಂತಗೊಳಿಸಿದನು. ಗುಪ್ತಮಂಚಣ್ಣನು ಮೊದಲು ವೀರವೈಷ್ಣವನು, ಬಿಜ್ಜಳನ ನಿಯೋಗಿಯು. ಮುಂದೆ ಅವನು ಶಿವಾನುಭವದ ತತ್ವಗಳಿಗೆ ಒಲಿದವನಾದನು. ಆದರೂ ಅವನು ತನ್ನ ಜಾತಿ–ಬಾಂಧವರ ರೋಷಕ್ಕೆ ಅಂಜಿ ತನ್ನ ಶಿವಾನುಭವದ ಆಚರಣೆಗಳನ್ನು ಗುಪ್ತವಾಗಿ ಆಚರಿಸುತ್ತಿದ್ದನು. ಇದರಿಂದ ಹಿಂದಿನಕಾಲದಲ್ಲಿ ತಮ್ಮ ಮೊದಲಿನ ಧರ್ಮವನ್ನು ಪರಿತ್ಯಾಗಮಾಡಿ ತಮ್ಮ ಆಚರಣೆಗಳನ್ನು ಆಚರಿಸುವಲ್ಲಿ ವೀರಶೈವರಿಗೆ ಹೇಗೆ ಬಾಧೆಗಳುಂಟಾಗುತ್ತಿದ್ದವೆಂಬುದನ್ನು ನಾವು ಊಹಿಸಬಹುದು.

ಶಿವಾನುಭವವು ಜಾತಿಭೇದವನ್ನು ಎಣಿಸುವದಿಲ್ಲ. ಬ್ರಾಹ್ಮಣ ಅಸ್ಪೃಶ್ಯ ಯಾರಿದ್ದರೂ ಅವರೆಲ್ಲರೂ ಸಮಾನರೆಂದು ಅದು ಭಾವಿಸುವದಲ್ಲದೆ ಅವರಲ್ಲಿ ಪರಸ್ಪರ ಭೋಜನ ಮತ್ತು ಲಗ್ನ ವ್ಯವಹಾರಗಳಾದರೆ ಅದು ಅದನ್ನು ಸಮರ್ಥಿಸುತ್ತದೆ. ಶಿವಶರಣರು ಈ ತತ್ವಗಳನ್ನು ಪಾಲಿಸುವಲ್ಲಿ ಇತರ ಸಮಾಜದವರ ಕಡುತರವಾದ ಕ್ರೋಧಕ್ಕೆ ಗುರಿಯಾದರು. ಕೆಂಭಾವಿ ಭೋಗಣ್ಣನು ಮೊದಲು ಬ್ರಾಹ್ಮಣನು. ಅವನು ಒಬ್ಬ ಅಸ್ಪೃಶ್ಯನ ಪ್ರಸಾದವನ್ನು ಸ್ವೀಕರಿಸಿದ್ದರಿಂದ ಗ್ರಾಮದಲ್ಲಿದ್ದ ಬ್ರಾಹ್ಮಣರು ಅವನನ್ನು ಊರಬಿಟ್ಟು ಹೊರಗೆ ಹಾಕಿದರು. ನಾವದಿಗೆಯ ಗುಡ್ಡಮ್ಮೆಯು ಒಬ್ಬ ಅಸ್ಪೃಶ್ಯಳು. ಅವಳು ಬ್ರಾಹ್ಮಣರಿದ್ದ ಕೇರಿಯನ್ನು ಪ್ರವೇಶಿಸಲಾಗಿ, ಅವರು ಅವಳನ್ನು ಅಲ್ಲಿಂದ ಹೊರಗೆ ಹಾಕಿಬಿಟ್ಟರು. ಸೂರಂಬೆಯು ವೀರಶೈವರಲ್ಲಿ ಅತ್ಯಂತ ಪ್ರಸಿದ್ಧನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯನ ಶಿಷ್ಯಳು. ಅವಳು ಅಂತ್ಯಜರಿದ್ದರೂ ಕೂಡ ಅವರನ್ನು ಮನೆಯಲ್ಲಿ ಕರೆತಂದು ಸತ್ಕರಿಸಿ ಉಪಚರಿಸುವಳು. ಬ್ರಾಹ್ಮಣರು ಅವಳ ಈ ವರ್ತನೆಗೋಸ್ಕರ ಬಹಳ ಕೆರಳಿದವರಾಗಿ ಅವಳನ್ನು ಶಿಕ್ಷಿಸುವ ಬಗ್ಗೆ ಅರಸನಿಗೆ ಹೇಳಿಕೊಂಡರು. ಬಿಬ್ಬಿಬಾಚಯ್ಯನು ಇದರಂತೆಯೇ ವರ್ತಿಸಲು ವಿಪ್ರರು ಅವನು ಗ್ರಾಮವನ್ನು ಪ್ರವೇಶ

ಮಾಡುವಾಗ ಅವನನ್ನು ತಡೆಯುವವರಾದರು. ಬಸವೇಶ್ವರನು ಮಂತ್ರಿಯಾಗಿದ್ದರೂ ಕೂಡ ಅವನಿಗೂ ಸಹ ಇಂಥ ಪ್ರಸಂಗಗಳು ಮೇಲಿಂದ ಮೇಲೆ ಬರುತ್ತಿದ್ದವು. ಆದರೆ ಅವನು ಸಕಾಲದಲ್ಲಿ ಬಿಜ್ಜಳನಿಗೂ ಇತರ ಸಮಾಜದವರಿಗೂ ಶಿವಾನುಭವದ ಬೋಧೆಯನ್ನು ಬೋಧಿಸುತ್ತ ಅವರ ರೋಷವನ್ನು ಜಾಣತನದಿಂದ ದೂರಮಾಡುತ್ತ ಬಂದನು.

ಬ್ರಾಹ್ಮಣ ಧರ್ಮದ ಪ್ರಕಾರ ಸ್ತ್ರೀಯರು ಲಗ್ನವಾಗುವದು ಅವಶ್ಯವು. ಆದರೆ ಅನೇಕ ಸ್ತ್ರೀಯರು ಹಿಂದಿನಕಾಲದಲ್ಲಿ ಶಿವಾನುಭವಕ್ಕೆ ಒಲಿದವರಾಗಿ ಲಗ್ನವಾಗುವದನ್ನು ನಿರಾಕರಿಸಿದ್ದಾರೆ. ಆದ್ದರಿಂದ ಅವರು ತಮ್ಮ ಸಮಾಜದ ರೋಷಕ್ಕೆ ಗುರಿಯಾಗಿದ್ದಾರೆ. ಗೊಗ್ಗವ್ವೆಯು ಲಗ್ನವಾಗುವದನ್ನು ಒಪ್ಪಲಿಲ್ಲ. ಅದಕ್ಕೆ ಅವಳ ತಾಯಿತಂದೆಗಳು ಅವಳ ಮೇಲೆ ಬಲಾತ್ಕಾರ ಮಾಡಲು ಅವಳು ತನ್ನ ಮನೆಯನ್ನು ಬಿಟ್ಟು ಓಡಿಹೋಗಬೇಕಾಯಿತು. ಬೊಂತಾದೇವಿಯು ಲಗ್ನವಾಗುವದನ್ನು ನಿರಾಕರಿಸಲು ಅವಳು ತನ್ನ ನಾಡನ್ನು ಬಿಟ್ಟು ಕಲ್ಯಾಣಕ್ಕೆ ಹೊರಟು ಬರಬೇಕಾಯಿತು. ಅವಳು ಅಲ್ಲಿ ಕಡೆಯ ವರೆಗೆ ಅವಿವಾಹಿತಳಾಗಿಯೇ ಉಳಿದಳು. ಅಕ್ಕಮಹಾದೇವಿಯು ಹೀಗೆಯೇ ಆಚರಿಸಿದ್ದು ಪ್ರಸಿದ್ಧವಿದೆ.

ಶಿವಾನುಭವದ ಪ್ರಕಾರ ಪರಮಾತ್ಮನೊಬ್ಬನೇ ದೇವರೆಂದು ಭಾವಿಸಿ ಭಕ್ತರು ವರ್ತಿಸತಕ್ಕದ್ದು. ಇದರಿಂದ ಅವರಲ್ಲನೇಕರು ಇತರ ಸಮಾಜಗಳ ರೋಷಕ್ಕೆ ಗುರಿಯಾದರು. ಉರಿಲಿಂಗದೇವನು ಶಿವಶರಣರಲ್ಲಿ ಅತ್ಯಂತ ಪ್ರಸಿದ್ಧನು. ಅವನು ಒಂದು ನದೀತೀರದಲ್ಲಿ ಗುಡಿಸಲು ಹಾಕಿಕೊಂಡು ವಾಸಿಸುವಾಗ ಪರವಾದಿಗಳು ಅದಕ್ಕೆ ಬೆಂಕೀ ಹಚ್ಚಿದರು. ಕೋಲಂಬೆಯು ಚಿಕ್ಕವಯಸ್ಸಿನ ಬಾಲಿಕೆಯು. ಅವಳು ಬೇರೆ ಮಕ್ಕಳನ್ನು ಕೂಡಿಕೊಂಡು ಒಂದು ಹುಲ್ಲು ಗುಡಿಸಲನ್ನು ಮಾಡಿ ಅಲ್ಲಿ ಶಿವನೆಂದು ಒಂದು ಶಿಲೆಯನ್ನು ಸ್ಥಾಪಿಸಿ ಎಲ್ಲರೂ ಕೂಡಿಕೊಂಡು ದೇವಪೂಜೆಯ ಆಟವಾಡುವರು. ಆದರೆ ಒಂದು ದಿನ ಗ್ರಾಮದಲ್ಲಿಯ ಒಬ್ಬ ವೈಷ್ಣವನು ಆ ಗುಡಿಸಲಿಗೆ ಬೆಂಕಿಹಚ್ಚಿದನು!

ಇದೇ ಪ್ರಕಾರ ಜೈನರೂ ಕೂಡ ಶಿವಶರಣರನ್ನು ಕಾಡಿದ್ದಾರೆ. ತಿಲಕವ್ವೆಯ ತಾಯಿತಂದೆಗಳು ಜೈನರು. ಅವಳು ಶಿವಾನುಭವಕ್ಕೆ ಮೆಚ್ಚಿದವಳಾಗಲು ಅವಳ ಶಿವಾರ್ಚನೆಯನ್ನು ಅವರು ಪೂರ್ಣವಾಗಿ

ನಿಲ್ಲಿಸಿಬಿಟ್ಟರು ಮತ್ತು ಅವಳ ಮನಸ್ಸಿಗೆ ವಿರೋಧವಾಗಿ ಅವಳನ್ನು ಒಬ್ಬ ಜೈನನಿಗೆ ಕೊಟ್ಟು ಲಗ್ನಮಾಡಿದರು. ಹೀಗಿರಲು ಒಂದುದಿನ ಅವಳು ಶಿವಾಲಯವನ್ನು ಪ್ರವೇಶಿಸಲು ಅದನ್ನು ಅವಳ ಗಂಡನು ಕಂಡು ಅವಳನ್ನು ಕೊಂದುಹಾಕಲು ಮುಂದುವರಿದನು. ಸೋಹಳಿಯ ಸೋಮವ್ವೆಯು ಮೊದಲು ಒಂದು ಜೈನ ಮನೆತನದವಳು. ಅವಳು ಶಿವಾನುಭವಕ್ಕೆ ಒಲಿದವಳಾಗಲು ಅವಳ ಅತ್ತೆ ಮತ್ತು ಗಂಡ ಇವರು ಅವಳಿಗೆ ಶಿವಾರ್ಚನೆಯನ್ನು ಮಾಡಗೊಡಲಿಲ್ಲ. ಆದ್ದರಿಂದ ಅವಳು ಗುಪ್ತವಾಗಿ ಶಿವಾಲಯಕ್ಕೆ ಹೋಗಹತ್ತಿದಳು. ಇದು ಅವಳ ಗಂಡನಿಗೆ ಗೊತ್ತಾಗಲು ಅವಳನ್ನು ಅವನು ಖಡ್ಗದಿಂದ ಕೊಂದು ಹಾಕಲು ಮುಂದಾದನು. ವೈಜವ್ವೆಯು ಒಂದು ಜೈನಮನೆತನದವಳು. ಅವಳು ಶಿವಭಕ್ತಿಯುಳ್ಳವಳಾದಳು. ಆದರೆ ಅವಳ ಮನಸ್ಸಿನ ವಿರುದ್ಧವಾಗಿ ಅವಳ ತಾಯಿತಂದೆಗಳು ಅವಳನ್ನು ಒಬ್ಬ ಜೈನನಿಗೆ ಕೊಟ್ಟು ಲಗ್ನಮಾಡಿದರು. ಅವಳು ತನ್ನ ಗಂಡನ ಮನೆಯಲ್ಲಿರುವಾಗ ತಾನು ಸಿದ್ಧಪಡಿಸಿದ ಆಹಾರ ಪದಾರ್ಥಗಳನ್ನು ಒಬ್ಬ ಜಂಗಮನಿಗೆ ನೀಡಿ ಬಿಟ್ಟಳು. ಅವಳು ಹೀಗೆ ಮಾಡಿದ್ದನ್ನು ಅವಳ ಗಂಡನು ತಿಳಿದು ಅವಳನ್ನು ಹೊಡೆದುಬಡಿದು ಬಹಳ ಹಿಂಸಿಸಿದನು. ಅವಳನ್ನು ಮನೆಯಿಂದ ಹೊರಗೆ ಸಹ ಹಾಕಿದನೆಂತಲೂ ತಿಳಿಯುತ್ತಿದೆ. ಈ ಸಂಗತಿಗಳಿಂದ ಹಿಂದಿನಕಾಲದಲ್ಲಿ ಶಿವಾನುಭವದ ತತ್ವಗಳು ಸ್ತ್ರೀಯರ ಮನಸ್ಸಿನ ಮೇಲೆ ಬಹಳ ಪರಿಣಾಮವನ್ನುಂಟುಮಾಡಿದವೆಂಬುದು ಕಂಡುಬರುತ್ತದೆ. ಆದರೆ ಅವರು ವೀರಶೈವಾಚಾರದಂತೆ ನಡಿಯ ಹತ್ತಲು ಬೇರೆ ಧರ್ಮದವರಾದ ಅವರ ಮನೆಯವರು ಈ ಅಬಲೆಯರನ್ನು ಬಹಳ ಹಿಂಸಿಸಿದ್ದು ಕಂಡುಬರುತ್ತದೆ.

ಹೆಂಡದ ಮಾರಯ್ಯನು ಅರವಟಿಗೆಯನ್ನಿಟ್ಟು ಶಿವಾನುಭವದ ತನ್ನ ಆಚರಣೆಗಳಂತೆ ನಡಿಯುತ್ತಾ ಇದ್ದನು. ಆದರೆ ಬಿಜ್ಜಳನು ಅವನ ಆಚರಣೆಯ ರೀತಿಯನ್ನು ತಿಳಿಯದೆ ಅವನ ಕೈಗಳನ್ನು ಕಡಿಸಿ ಹಾಕಿಸಿದನು. ಪೆರ್ಮಾಡಿರಾಯನು ಕೇಶಿರಾಜನು ವಿದ್ವಾಂಸನೆಂದು ಅವನಿಗೆ ಮೊದಲು ಪ್ರಧಾನಿಯ ಕೆಲಸವನ್ನು ಕೊಟ್ಟನು. ಆದರೆ ಅರಸನು ಅವನ ವಿರೋಧಿಗಳ ಮಾತನ್ನು ಕೇಳಿ ಪ್ರಧಾನಿ ಪಟ್ಟದಿಂದ ಅವನನ್ನು ತಳ್ಳಿಹಾಕಿದನು. ಸಿದ್ಧರಾಮೇಶ್ವರನು ಗ್ರಾಮಾಧಿಪತಿಯು.

ಆದರೆ ಅಮುಗಿದೇವನು ತನ್ನ ಮಾತನ್ನು ಮೀರಿದನೆಂದು ಅವನನ್ನು
ಅವನು ಊರ ಬಿಡಿಸಿ ಹೊರಗೆ ಹಾಕಿಸಿದನು. ಒಂದು ದಿನ ಚೋಳ
ರಾಜನ ಅಧಿಕಾರಿಗಳು ಪಿಟ್ಟವ್ವೆಗೆ ಬಿಟ್ಟಿಯಾಗಿ ಮಣ್ಣು ಹೊರಲು ಹೇಳಿ
ದರು. ಆದರೆ ಅವಳು ಅದನ್ನು ನಿರಾಕರಿಸಲು ಅವರು ಅವಳ ಮೇಲೆ
ಬಲಾತ್ಕಾರ ಮಾಡಲು ಮುಂದಾದರು. ಒಕ್ಕಲು ಮುದ್ದಯ್ಯನು ತಾನು
ರಾಜನಿಗೆ ಕೊಡತಕ್ಕ ಭೂಮಿಯ ತೆರಿಗೆಯನ್ನು ಕೊಟ್ಟಿದ್ದನು. ಆದರೆ
ರಾಜನ ಕೆಳಗಿನ ಅಧಿಕಾರಿಗಳು ಹೆಚ್ಚಿಗೆ ತೆರಿಗೆ ಕೊಡೆಂದು ಅವನಿಗೆ
ಒತ್ತಾಯ ಮಾಡಲು ಅವನು ಅದನ್ನು ಧೈರ್ಯದಿಂದ ನಿರಾಕರಿಸಿದನು.
ಹೀಗೆ ರಾಜರೂ ರಾಜನ ಅಧಿಕಾರಿಗಳೂ ಶಿವಶರಣರನ್ನು ಕ್ಲೇಶಪಡಿ
ಸಿದ್ದು ಕಂಡು ಬರುತ್ತದೆ.

ಹೀಗೆ ಶಿವಶರಣರು ತಮ್ಮ ಆಚರಣೆಗಳನ್ನು ಪಾಲಿಸುವಾಗ್ಗೆ
ತಮ್ಮ ಆಪ್ತರಿಷ್ಟರು, ತಮ್ಮ ತಂದೆ ತಾಯಿಗಳು, ಬಾಂಧವರು, ರಾಜರು
ಇವರ ರೋಷಕ್ಕೆ ಪಾತ್ರರಾಗಿದ್ದಾರೆ. ಅವರಿಂದ ಹಿಂಸಿಸಲ್ಪಟ್ಟಿದ್ದಾರೆ.
ಊರವರು ಅವರನ್ನು ಊರಿನಿಂದ ಹೊರಗೆ ಹಾಕಿದ್ದಾರೆ. ಅವರನ್ನು
ಹೊಡೆದು ಬಡಿದು ಗಾಸಿಮಾಡಿದ್ದಾರೆ. ರಾಜರು ಅವರನ್ನು ಪೀಡಿಸಿ
ದ್ದಾರೆ. ಹೀಗೆ ಶಿವಶರಣರು ತಮ್ಮ ಧರ್ಮೋದ್ಧಾರ ಕಾರ್ಯಗಳಲ್ಲಿ
ಅನೇಕ ತರದ ಕಷ್ಟಗಳಿಗೆ ಗುರಿಯಾಗಿದ್ದಾರೆ. ಈ ಸ್ಥಿತಿಯು ಅವರಿಗೆ
ಉಂಟಾಗಿದ್ದರೂ ಅವರು ಇಂಥ ಕಷ್ಟಗಳನ್ನು ಸಹಿಸಿಕೊಂಡು ಯಾವದು
ಶಿವಾನುಭವದ ಪ್ರಕಾರ ಯೋಗ್ಯವಾದುದೋ ಅದನ್ನೇ ಅನುಸರಿಸುತ್ತ
ಬಂದರು.

ಶಿವಶರಣರು ತಮ್ಮ ಆಚರಣೆಗಳಂತೆ ನಡೆಯುವಲ್ಲಿ ಅವರು
ಯುದ್ಧಗಳನ್ನು ಮಾಡುವ ಪ್ರಸಂಗಗಳು ಸಹ ಬಂದಿವೆ. ಅಂಥ
ಪ್ರಸಂಗಗಳಲ್ಲಿ ಅವರು ಹಿಂದೆಗೆದಿಲ್ಲ. ಆಗ ಅವರು ದಂಡನ್ನು ಕೂಡಿಸಿ
ಶಸ್ತ್ರಾಸ್ತ್ರಗಳಿಂದ ಸುಸಜ್ಜಿತರಾಗಿ ತಮ್ಮ ವಿರೋಧಿಗಳ ಕೂಡ ಯುದ್ಧ
ಮಾಡಿದ್ದಾರೆ.

ಕೋಹೂರು ಬ್ರಹ್ಮಯ್ಯನು ಕೋವಳ್ಳಿ (ವಿಜಾಪುರ ಜಿಲ್ಲೆ) ಯಲ್ಲಿ
ರಾಜ್ಯವಾಳುತ್ತಿರಲು ಜೈನರು ಮೊದಲು ಅವನ ಮಗನನ್ನು ಕೊಂದು
ಹಾಕಿದರು. ಅವರು ರಾಜನಿಗೆ ಅನೇಕ ತೊಂದರೆಗಳನ್ನುಂಟುಮಾಡುತ್ತ

ಕಡೆಗೆ ಅವನನ್ನು ಕೊಂದು ಹಾಕಬೇಕೆಂದು ಅವನ ಅರಮನೆಯನ್ನು ಮುತ್ತಿದರು. ಆಗ ಬ್ರಹ್ಮಯ್ಯನು ಅವರೊಡನೆ ಯುದ್ಧಮಾಡಿ ಅವರನ್ನು ಹಿಂದಕ್ಕಟ್ಟಬೇಕಾಯಿತು. ವರದಾನಿ ಗುಡ್ಡವ್ವೆಯು ವಿಜಾಪುರಕ್ಕೆ ಸಮೀಪವಿರುವ ಗುಡ್ಡಾಪುರ ಎಂಬ ಗ್ರಾಮದವಳು. ಶ್ರೀಶೈಲಕ್ಕೆ ಸಮೀಪವಿರುವ ಅಲಂಪುರದಲ್ಲಿದ್ದ ಬಾಲಬ್ರಹ್ಮೇಶ ದೇವಾಲಯದಲ್ಲಿದ್ದ ಶಿವ ಲಿಂಗವನ್ನು ಪರವಾದಿಗಳು ಕಿತ್ತಿಹಾಕಲು ಅವಳು ಒಂದು ಸೈನ್ಯವನ್ನು ಕೂಡಿಸಿ ಅವರೊಡನೆ ಯುದ್ಧಮಾಡಿ ಶಿವಲಿಂಗವನ್ನು ಆ ದೇವಾಲಯ ದಲ್ಲಿ ಪುನಃ ಪ್ರತಿಷ್ಠಾಪಿಸಿದಳು. ಕಲಬುರ್ಗಿ ಜಿಲ್ಲೆಯಲ್ಲಿರುವ ಮಾರು ಡಿಗೆಯಲ್ಲಿ ಜೈನರಿಗೂ ಶಿವಭಕ್ತರಿಗೂ ಘೋರವಾದ ಯುದ್ಧವು ಸಂಭ ವಿಸಲು ಅದರಲ್ಲಿ ವೀರಶೈವರು ಜಯಶಾಲಿಗಳಾದರು. ಇದರ ಪರಿ ಣಾಮವಾಗಿ ಈ ಭಾಗದಲ್ಲೆಲ್ಲ ಜಿನಾಲಯಗಳಿದ್ದ ಸ್ಥಳಗಳಲ್ಲಿ ಶಿವಾಲ ಯಗಳು ಸ್ಥಾಪಿತವಾದವು. ಸಗರವೆಂಬ ಗ್ರಾಮವು ಇದೇ ಭಾಗದಲ್ಲಿದೆ. ಅಲ್ಲಿಯ ಶಿವಶರಣನಾದ ಬ್ರಹ್ಮಯ್ಯನು ಜೈನರೊಡನೆ ಕಾದಾಡುವ ಪ್ರಸಂಗವು ಅವನಿಗುಂಟಾಯಿತು. ಬೀದರ ಗ್ರಾಮದಲ್ಲಿದ್ದ ವೀರಸಂಗ ಯ್ಯನೆಂಬ ಶಿವಶರಣನು ಕೋವೂರಲ್ಲಿದ್ದ ಭಾಸ್ಕರನ ಕೂಡ ಯುದ್ಧ ವನ್ನು ಮಾಡಬೇಕಾಯಿತು.

ಏಕಾಂತದ ರಾಮಯ್ಯನು ಕಲಬುರ್ಗಿ ಜಿಲ್ಲೆಯಲ್ಲಿರುವ ಆಳಂದೆ ಎಂಬ ಗ್ರಾಮದವನು. ಅವನು ಧಾರವಾಡ ಜಿಲ್ಲೆಯಲ್ಲಿರುವ ಅಬ್ಬ ಲೂರಿಗೆ ಹೋದಾಗ್ಗೆ ಅವನು ಅಲ್ಲಿ ಜೈನರೊಡನೆ ಕಾದಾಡುವ ಪ್ರಸಂಗವು ಬಂದೊದಗಿತು. ಶಿವಶರಣನಾದ ಆದಯ್ಯನು ಲಕ್ಷ್ಮೇಶ್ವರದಲ್ಲಿ ವಾಸ ವಾಗಿದ್ದನು. ಅವನಿಗೆ ಜೈನರೊಡನೆ ಕಾದಾಡುವ ಪ್ರಸಂಗವು ಉಂಟಾ ಯಿತು. ಹೀಗೆ ಉತ್ತರ ಕರ್ನಾಟಕದ ಅನೇಕ ಭಾಗಗಳಲ್ಲಿ ಶಿವಶ ರಣರು ಪರವಾದಿಗಳ ಕೂಡ ಯುದ್ಧಗಳನ್ನು ಮಾಡಿ ತಮ್ಮ ರಕ್ತವನ್ನು ಸೂರೆ ಮಾಡಿದ್ದಾರೆ.

ಈತರದ ರಕ್ತಪಾತಗಳು ಕ್ರಾಂತಿಯ ಆರಂಭಕಾಲದಲ್ಲಿ ಯಾವಾ ಗಲೂ ಆಗುವದುಂಟು. ಹಿತಸಂಬಂಧಿಗಳ ಹಿತಕ್ಕೆ ಬಾಧೆಯುಂಟಾದ ಕೂಡಲೆ ಹೀಗೆ ವಿರೋಧಗಳು ಉತ್ಪನ್ನವಾಗುತ್ತವೆ. ಆದರೆ ನಾಡಿ ನಲ್ಲಿ ಪ್ರಸಾರವಾದ ತತ್ವಗಳು ಬಹು ಜನಸಮಾಜಕ್ಕೆ ಹಿತಕರ ಮತ್ತು ಸಮ್ಮತವಾದ ಪಕ್ಷದಲ್ಲಿ ಇಂಥ ರಕ್ತಪಾತಗಳು ಮುಂದೆ ತೀವ್ರವಾಗಿ

ಅಡಗಿಹೋಗುತ್ತವೆ ಮತ್ತು ಹೊಸತರದ ಸಮಾಜವ್ಯವಸ್ಥೆಯು ತಲೆ ದೋರುತ್ತದೆ. ಇದೇ ಸ್ಥಿತಿಯು ಶಿವಶರಣರ ಕಾಲದಲ್ಲಿ ಕರ್ನಾಟಕ ದಲ್ಲಿ ಉಂಟಾದುದು ತೋರಿಬರುತ್ತದೆ. ಆದರೆ ಮುಂದೆ ಹೀಗೆ ಕಷ್ಟ ಪಟ್ಟವರೆಲ್ಲರು ಪೂಜ್ಯ ಪುರುಷರಾದರು. ಅವರ ಹೆಸರಿನ ದೇವಾ ಲಯಗಳು ಸ್ಥಾಪಿಸಲ್ಪಡಹತ್ತಿದವು. ಅವರ ಜಾತ್ರೆಗಳಾಗಹತ್ತಿದವು. ಈ ದೇವಾಲಯಗಳಿಗೆ ಭಾವಿಕರೂ ರಾಜರೂ ಉಂಬಳಿಗಳನ್ನು ಸಹ ಹಾಕಿಕೊಡಹತ್ತಿದರು! ಹೀಗೆ ಉಂಬಳಿ ಹಾಕಿಕೊಟ್ಟದ್ದರ ಬಗ್ಗೆ ಉಲ್ಲೇ ಖಗಳಿದ್ದ ಶಿಲಾಶಾಸನಗಳನ್ನು ನಾವು ಇಲ್ಲಿ ಬಹು ಸಂಕ್ಷಿಪ್ತವಾಗಿ ಉಲ್ಲೇಖಿಸುತ್ತೇವೆ.

ಆಮುಗಿದೇವನು ಭೀಮಾತೀರದಲ್ಲಿರುವ ಪುಳುಜ ಎಂಬ ಗ್ರಾಮ ದಲ್ಲಿ ವಾಸಿಸುತ್ತಿರುವಾಗ ದೇವಗಿರಿಯ ಯಾದವ ವಂಶದ ಪ್ರಸಿದ್ಧ ರಾಜನಾದ ಸಿಂಘಣನು ಅವನ ಕೀರ್ತಿಯನ್ನು ಕೇಳಿದನು. ಆಗ ಅವನು ಅವನನ್ನು ಕಂಡು ಅವನ ಇಷ್ಟದೇವತೆಯಾದ ಸಿದ್ಧಸೋಮ ನಾಥ ದೇವಾಲಯಕ್ಕೂ ಅವನಿಗೂ ಒಂದು ಗ್ರಾಮವನ್ನು ಉಂಬಳಿ ಹಾಕಿಕೊಟ್ಟನು. ಹಾಗೆಯೇ ಅವನ ಸೇನಾನಾಯಕರು ಈ ಶಿವಶರ ಣನಿಗೆ ಅನೇಕ ದಾನಗಳನ್ನು ಕೊಟ್ಟಿದ್ದಾರೆ. ಇದು ೧೧೪೯ ನೇ ಇಸ್ವಿಯ ಲ್ಲಿಯ ಅಲ್ಲಿಯ ಶಿಲಾಶಾಸನದಲ್ಲಿ ಉಲ್ಲೇಖವಾಗಿದೆ. ದೇವಗಿರಿ ಯಾದವ ರಾಜನಾದ ಮಹಾದೇವರಾಜನ ಮಾಂಡಲಿಕನಾದ ಸಾಯಿದೇವನೆಂಬ ವನು ವಿಜಾಪುರ ಜಿಲ್ಲೆಯ ಉತ್ತರ ಭಾಗವನ್ನು ಆಳುತ್ತಿದ್ದನು. ಅವನು ವರದಾನಿಗುಡ್ಡಮ್ಮೆಯ ವಿಷಯವಾಗಿ ಅತ್ಯಂತ ಭಕ್ತಿಭಾವವನ್ನು ತಾಳಿ ಅವಳ ಸ್ಮರಣಾರ್ಥವಾಗಿ ಮಾತಾಖ್ಯಪುರವೆಂಬ ಗ್ರಾಮವನ್ನು ಭೀಮಾ ತೀರದಲ್ಲಿ ಹೊಸದಾಗಿ ಸ್ಥಾಪಿಸಿ ಅಲ್ಲಿ ಅವಳ ದೇವಾಲಯವನ್ನು ಕಟ್ಟಿ ಸಿದನು. ಇದು ೧೨೬೮ ರಲ್ಲಿ. ಸಂಭವಿಸಿತು ಏಕಾಂತದ ರಾಮಯ್ಯನು ಅಬ್ಬಲೂರಿನಲ್ಲಿ ಇರುತ್ತಿದ್ದನು. ಅಲ್ಲಿ ಇರುವಾಗ್ಗೆ ಚಾಳುಕ್ಯ ರಾಜ ನಾದ ೪ನೇ ಸೋಮೇಶ್ವರನೂ, ಕದಂಬರಾಜನಾದ ಕಾಮದೇವನೂ ಅವನ ತರುವಾಯದ ಬೇರೆ ಕದಂಬರಾಜರೂ ಮಾಂಡಲಿಕನಾದ ಕೇಶಿ ರಾಜನೂ ಅವನಿಗೂ ಅವನು ಸ್ಥಾಪಿಸಿದ ದೇವಾಲಯಕ್ಕೂ ಅನೇಕ ಉಂಬಳಿಗಳನ್ನು ಹಾಕಿಕೊಟ್ಟರು. ಶ್ರೀಪತಿ ಪಂಡಿತಾರಾಧ್ಯನು ಶೂದ್ರ ರೊಡನೆ ಭೋಜನ ಮಾಡಿದ್ದರಿಂದ ಅವನಿಗೆ ಆರಂಭದಲ್ಲಿ ಬ್ರಾಹ್ಮಣ

ರಿಂದ ಬಹಳ ಹಿಂಸೆಗಳಾದವು. ಆದರೆ ಮುಂದೆ ಅನೇಕ ಗ್ರಂಥಕಾರರು ಅವನನ್ನು ಬಹಳ ಸ್ತುತಿಸಿರುವರಲ್ಲದೆ ಅನೇಕ ಮಾಂಡಲಿಕರೂ ರಾಜರೂ ಅವನಿಗೆ ಅನೇಕ ಶಾಸನಗಳನ್ನು ಹಾಕಿಕೊಟ್ಟಿದ್ದಾರೆ. ಹೀಗೆ ಶಿವಶರಣರು ಕರ್ನಾಟಕ ಮತ್ತು ಆಂಧ್ರ ದೇಶಗಳ ಧಾರ್ಮಿಕ ಇತಿಹಾಸದಲ್ಲಿ ಶ್ರೇಷ್ಠ ಸ್ಥಾನವನ್ನು ಹೊಂದಿರುತ್ತಾರೆ.

## ಶಿವಶರಣರ ಚಳವಳಿಯ ಪ್ರಾರಂಭ ಕಾಲ.

ಶಿವಶರಣರ ಈ ಚಳವಳಿಯು ಎಂದಿನಿಂದ ಪ್ರಾರಂಭವಾಯಿತೆಂಬುದನ್ನು ಸಂಶೋಧಿಸುವದು ಬಹಳ ಮಹತ್ವದ ವಿಷಯವಾಗಿದೆ. ಆದರೆ ಅವರ ಚರಿತ್ರೆಗಳನ್ನೆಲ್ಲ ಸಂಗ್ರಹಿಸಿ ಅವುಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದಲ್ಲದೆ ಈ ಸಂಗತಿಯನ್ನು ನಿಶ್ಚಿತವಾಗಿ ಕಂಡುಹಿಡಿಯುವದು ಕಠಿಣವಾದುದು. ಹಾಗೆಯೇ ವೀರಶೈವ ಧರ್ಮದ ಸ್ವರೂಪ ಯಾವ ಯಾವ ಕಾಲದಲ್ಲಿ ಹೇಗಿತ್ತೆಂಬುದನ್ನು ತಿಳಿಯುವದಾದರೂ ಅಷ್ಟೇ ಮಹತ್ವದ್ದು. ಆದರೆ ಇದು ಕರ್ನಾಟಕ, ಆಂಧ್ರ, ಸಂಸ್ಕೃತ, ದ್ರಾವಿಡ ಭಾಷೆಗಳಲ್ಲಿರುವ ಶೈವ, ವೀರಶೈವ ವಾಙ್ಮಯವನ್ನು ಆಳವಾಗಿ ಅಭ್ಯಾಸ ಮಾಡದ ಹೊರತು ಗೊತ್ತಾಗಲಾರದು. ಹೀಗೆ ನಿಶ್ಚಯಿಸುವ ಕಾಲವು ಇನ್ನು ಬಂದಿಲ್ಲೆಂದು ನಮ್ಮ ತಿಳಿವಳಿಕೆ ಇದೆ. ಆದರೂ ಈ ವಿಷಯವನ್ನು ನಾವು ವಿಸ್ತೃತವಾಗಿ ಇಲ್ಲಿ ವಿವೇಚಿಸದೆ, ಈ ವರೆಗೆ ನಾವು ಪ್ರಸಿದ್ಧ ಮಾಡಿದ ಶಿವಶರಣರ ಚರಿತ್ರೆಗಳ ಸಹಾಯದಿಂದ ಅವರ ಚಳವಳಿಯ ಕಾಲವನ್ನು ಕುರಿತು ಸ್ಥೂಲವಾಗಿ ಇಲ್ಲಿ ನಿರ್ದೇಶಿಸಲೆಣಿಸಿದ್ದೇವೆ.

ಕೆಲವರು ಶಿವಶರಣರ ಚಳವಳಿಯು ಬಸವೇಶ್ವರನ ಕಾಲದಲ್ಲಿಯೇ ಪ್ರಾರಂಭವಾಯಿತೆಂದು ತಿಳಿದಿರುತ್ತಾರೆ. ಆದರೆ ಈ ವಿಧಾನವು ಯಥಾರ್ಥವಲ್ಲೆಂದು ನಮಗೆ ತೋರುತ್ತದೆ. ಶಿವಶರಣರ ಚಳವಳಿಯು ಅವನಕಿಂತಲೂ ಮೊದಲೇ ಪ್ರಾರಂಭವಾಗಿತ್ತೆಂದು ತೋರುತ್ತದೆ. ಯಾಕಂದರೆ ಅನೇಕ ಶಿವಶರಣರು ಮತ್ತು ವಚನಕಾರರು ಅವನಕಿಂತಲೂ ಮೊದಲಿನವರಿರುತ್ತಾರೆ.

ಕೇಶಿರಾಜ, ಇಳಿಹಾಳ ಬೊಮ್ಮಯ್ಯ, ಬಾಹೂರು ಬೊಮ್ಮಯ್ಯ, ರಾಗದ ಸಂಕಣ್ಣ, ಇವರು ಪೆರ್ಮಾಡಿರಾಯನ ಕಾಲದವರು. ಚಾಲು

ಸ್ಯರಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ ವಿಕ್ರಮಾದಿತ್ಯನಿಗೆ ಪೆರ್ಮಾಡಿ ಎಂಬ ಹೆಸರಿತ್ತು. ಈ ರಾಜನು ೧೦೭೬ ರಿಂದ ೧೧೨೬ ರ ವರೆಗೆ ಅಂದರೆ ಬಸವೇಶ್ವರನಕಿಂತಲೂ ಮೊದಲು ರಾಜ್ಯವಾಳಿದನು. ಆದ್ದರಿಂದ ಈ ನಾಲ್ವರೂ ಶಿವಶರಣರು ಅವನಕಿಂತಲೂ ಹಿಂದಿನವರಾಗುತ್ತಾರೆ. ಇವರಲ್ಲಿ ಬಾಹೂರು ಬೊಮ್ಮಯ್ಯನು ವಚನಕಾರನಿದ್ದಾನೆ.

ಕರಿಕಾಲ ಚೋಳನು ೧೦೭೦ ರಿಂದ ೧೧೨೦ ರ ವರೆಗೆ ಕಾಂಚೀ ಪಟ್ಟಣದಲ್ಲಿ ರಾಜ್ಯವಾಳಿದನು. ಇವನಿಗೆ ಕೇರಳದ ಚಾರಮರಾಯನು ಸಮಕಾಲೀನನು. ಈ ಚಾರಮರಾಯನಿಗೆ ಗೊಗ್ಗವ್ವೆ ಮತ್ತು ಭದ್ರಗಾಯಕ ಇವರ ಚರಿತ್ರೆಗಳು ಸಂಬಂಧಪಡುತ್ತವೆ. ಕರಿಕಾಲಚೋಳನಿಗೆ ಮೆರೆಮಿಂಡದೇವ, ಮಾದರ ಚನ್ನಯ್ಯ ಮತ್ತು ಪಿಟ್ಟವ್ವೆ ಇವರು ಸಂಬಂಧಪಡುತ್ತಾರೆ. ಆದ್ದರಿಂದ ಈ ಆರೂ ಜನ ಶಿವಶರಣರು ಬಸವೇಶ್ವರನಕಿಂತಲೂ ಮೊದಲಿನವರಾಗುತ್ತಾರೆ. ಇವರಲ್ಲಿ ಗೊಗ್ಗವ್ವೆ, ಮೆರೆಮಿಂಡದೇವ ಮತ್ತು ಮಾದರ ಚನ್ನಯ್ಯ ಇವರು ವಚನಕಾರರಿದ್ದಾರೆ.

ಕರ್ನಾಟಕ ದೇಶದಲ್ಲಿ ಪುಲಿಗೆರೆಯ ಸೋಮಯ್ಯ, ಕೆಂಭಾವಿಯ ಭೋಗಣ್ಣ, ಚಂದಿಮರಸು, ನಿಜಗುಣ ಇವರೂ ಆಂಧ್ರ ದೇಶದಲ್ಲಿಯ ಶ್ರೀಪತಿ ಪಂಡಿತಾರಾಧ್ಯನೂ ಬಸವೇಶ್ವರನಕಿಂತ ಮೊದಲಿನವರು. ಈ ವಿಷಯದ ಬಗ್ಗೆ ಅವರ ಚರಿತ್ರೆಗಳನ್ನು ನೋಡಬೇಕು. ಇವರಲ್ಲಿ ನಿಜಗುಣನೂ ಚಂದಿಮರಸನೂ ಶ್ರೇಷ್ಠತರದ ವಚನಕಾರರಿದ್ದಾರೆ.

ಕೆಲವು ಶಿವಶರಣರು ಬಸವೇಶ್ವರನ ಕಾಲದಲ್ಲಿದ್ದರೂ ಅವರು ಅವನಿಗಿಂತಲೂ ಹಿರಿಯರಾಗಿ ವೀರಶೈವ ಧರ್ಮವನ್ನು ಸ್ವತಂತ್ರವಾಗಿ ವಿಸ್ತಾರಪಡಿಸಿದ್ದಾರೆ. ಅವರು ಬಸವೇಶ್ವನಿಗಾಗಲಿ ಇಲ್ಲವೆ ಅವನ ಶಿವಾನುಭವ ಮಂಟಪಕ್ಕಾಗಲಿ ಸಂಬಂಧಪಟ್ಟವರಲ್ಲ. ರೇವಣಸಿದ್ಧೇಶ್ವರನ ಹೇಳಿಕೆಗನುಸಾರವಾಗಿ ಅವನ ಮಗನಾದ ರುದ್ರಮುನಿಯು ದೀಕ್ಷೆ ಕೊಟ್ಟ ಹಾವಿನಹಾಳ ಕಲ್ಲಯ್ಯನು ಬಸವೇಶ್ವರನಕಿಂತಲೂ ಹಿರಿಯನಾಗುತ್ತಾನೆ. ಅಲ್ಲಮ ಪ್ರಭುವಿನ ಗುರುವಾದ ಅನುಮಿಷನು, ಅಜಗಣ್ಣನ, ಅವನ ತಂಗಿ ಮುಕ್ತಾಯಿಯು, ಮೊದಲು ಚೋಳ ರಾಜ್ಯದಲ್ಲಿದ್ದು ಹಿಂದುಗಡೆ ಕರ್ನಾಟಕಕ್ಕೆ ಬಂದ ಎಡೆಮಠದ ನಾಗಿದೇವ, ಅವನ ಹೆಂಡತಿಯಾದ ಮಸಣಮ್ಮ, ಮಲ್ಲಿಕಾರ್ಜುನ ಪಂಡಿತಾರಾಧ್ಯನ ಶಿಷ್ಯಳಾದ ಸೂರಂಬೆಯು, ಶಿವಯೋಗಿ ಮಲ್ಲರಸನು, ಗೋರಕ್ಷನು ಮತ್ತು

ಏಕಾಂತದ ರಾಮಯ್ಯನು ಇವರೆಲ್ಲರೂ ಬಸವೇಶ್ವರನಕಿಂತಲೂ ಕೆಲ ಕಾಲ ಹಿರಿಯರಾಗುತ್ತಾರೆ. ಇವರೆಲ್ಲರೂ ಸ್ವತಂತ್ರ ರೀತಿಯಿಂದ ಶಿವಾನುಭವದ ತತ್ವಗಳನ್ನು ದೇಶದಲ್ಲಿ ಪ್ರಸಾರ ಮಾಡಿದ್ದಾರೆ. ಇವರಲ್ಲಿ ಹಾವಿನಹಾಳ ಕಲ್ಲಯ್ಯ, ಅಜಗಣ್ಣ, ಮುಕ್ತಾಯಿ, ಮಸಣಮ್ಮ, ಗೋರಕ್ಷ ಮತ್ತು ಏಕಾಂತದ ರಾಮಯ್ಯ ಇವರೆಲ್ಲರು ವಚನಕಾರರೆಂಬುದನ್ನು ನಾವು ಲಕ್ಷಿಸತಕ್ಕದ್ದು.

ಹೀಗೆ ನಾವು ಪ್ರಸಿದ್ಧಿಸಿರುವ ಶಿವಶರಣರ ಚರಿತ್ರೆಗಳಲ್ಲಿ ೨೫ ಜನರ ಚರಿತ್ರೆಗಳು ಬಸವೇಶ್ವರನಕಿಂತಲೂ ಮೊದಲಿನವು ಇರುತ್ತವೆ. ಇವರಲ್ಲಿ ಮೂರು ಜನ ಶಿವಶರಣರನ್ನು ಬಸವೇಶ್ವರನು ಬಹು ಭಕ್ತಿಯಿಂದ ತನ್ನ ವಚನಗಳಲ್ಲಿ ಸ್ಮರಿಸಿದ್ದಾನೆ. ಅವರು ಯಾರೆಂದರೆಃ— ಮಾದರ ಚನ್ನಯ್ಯ, ಕೆಂಭಾವಿ ಭೋಗಣ್ಣ ಮತ್ತು ಚಾರಮರಾಯ. ಇವರಲ್ಲಿ ಮಾದರ ಚನ್ನಯ್ಯನು ವಚನಕಾರನಿದ್ದಾನೆ. ಈ ಎಲ್ಲ ಸಂಗತಿಗಳಿಂದ ವಚನ ವಾಙ್ಮಯದ ಪ್ರಾದುರ್ಭಾವವು ಮತ್ತು ಶಿವಶರಣರ ಚಳವಳಿಗಳು ಬಸವೇಶ್ವರನಕಿಂತಲೂ ಮೊದಲು ಉಂಟಾಗಿದ್ದವೆಂಬದು ಗೊತ್ತಾಗುತ್ತದೆ. ಆದರೆ ಅವು ಎಂದು ಪ್ರಾರಂಭವಾದವೆಂಬುದನ್ನು ತಿಳಿಯಲು ನಮಗೆ ಸಾಕಷ್ಟು ಆಧಾರಗಳು ದೊರೆತಿಲ್ಲ.

## ಉಪಸಂಹಾರ.

ಒಂದು ಕಾಲದಲ್ಲಿ ಬಸವೇಶ್ವರನು ಜನರ ಸ್ವೈರವೃತ್ತಿಗೆ ಇಂಬು ಗೊಟ್ಟು ವೀರಶೈವ ಧರ್ಮವನ್ನು ಪ್ರಸಾರಮಾಡಿದನೆಂಬ ತಿಳಿವಳಿಕೆ ಇತ್ತು. ಆದರೆ ವಚನ ವಾಙ್ಮಯದಲ್ಲಿ ಇಂಥ ಅನೀತಿ ಅನಾಚಾರಗಳಿಗೆ ಎಷ್ಟು ಮಾತ್ರವೂ ಇಂಬು ಇರುವದಿಲ್ಲ. ಯಾವ ಶಿವಶರಣರ ವಚನಗಳನ್ನು-ತೆಗೆದುಕೊಂಡರೂ ಅವುಗಳಲ್ಲಿ ಶ್ರೇಷ್ಠತರದ ಧಾರ್ಮಿಕ ತತ್ವಗಳ ವಿವೇಚನೆಯು ಇರುವದೇ ಹೊರ್ತು ಅನಾಚಾರದ ಸೋಂಕು ಸಹ ಇರುವದಿಲ್ಲ. ಶಿವಶರಣರ ಚರಿತ್ರೆಗಳಲ್ಲಿಯೂ ಕೂಡ ಇದೇ ಸಂಗತಿಯು ಕಂಡು ಬರುತ್ತವೆ. ಈ ಪ್ರಕಾರ ಶಿವಶರಣರು ನಾಡಿನಲ್ಲಿ ಉಚ್ಚತರದ ಧಾರ್ಮಿಕ ಕ್ರಾಂತಿಯನ್ನು ಮಾಡಿದ್ದಾರೆ. ಈ ಮಹಾತ್ಮರ ಪ್ರಯತ್ನದ ಫಲವಾಗಿ ವೀರಶೈವ-ಮತವು ದಟ್ಟವಾಗಿ ಎಲ್ಲ ಕಡೆಗೂ ಪಸರಿಸಿರುತ್ತದೆ.

ಈ ಮಹತ್ವದ ಕಾರ್ಯವನ್ನು ಮಾಡಿದವರು ಕೇವಲ ಸಾಮಾನ್ಯ ಜನರು. ಅಂದರೆ ಬಡವರು, ಕೈಗಾರಿಕೆಯವರು, ಒಕ್ಕಲಿಗರು ಇಂಥ ವರೇ ಇದ್ದಾರೆ. ಅವರ ಈ ಚಳವಳಿಯು ಪರಿಣಾಮವಾಗಿ ಕನ್ನಡ ಭಾಷೆಯಲ್ಲಿ ಒಂದು ಉಚ್ಚ ವಾಙ್ಮಯವು ಉಂಟಾಯಿತು. ಅದರ ಪ್ರಭಾವವು ಸುತ್ತಲಿನ ದೇಶಗಳಲ್ಲಿ ಸಹ ವ್ಯಾಪಿಸಿತು. ಇದರಿಂದ ತೆಲುಗು, ದ್ರಾವಿಡ, ಸಂಸ್ಕೃತ ಬಾಷೆಗಳಲ್ಲಿ ಅನೇಕ ವೀರಶೈವ ಗ್ರಂಥಗಳುಂಟಾದವು. ಇಷ್ಟೇ ಅಲ್ಲ, ಮಲಯಾಳ, ಗುಜರಾಥ, ಓಡಿಸಾ, ಕಾಶ್ಮೀರ ಇಂಥ ದೂರ ದೂರದ ದೇಶಗಳಲ್ಲಿಯು ವಿದ್ಯಾವಂತರು, ಮುಖ್ಯವಾಗಿ ಶೈವರು, ಶಿವಶರಣರ ತತ್ವಗಳನ್ನು ತಿಳಿಯಲು ಕರ್ನಾಟಕಕ್ಕೆ ಬರುವವರಾದರು. ಈ ಸಂಗತಿಗಳು ನಾವು ಈ ವರೆಗೆ ಪ್ರಸಿದ್ಧ ಮಾಡಿದ ಶಿವಶರಣರ ಚರಿತ್ರೆಗಳಿಂದ ತಿಳಿದು ಬರುತ್ತಿದೆ. ಇದರಿಂದ ಈ ಕಾಲದಲ್ಲಿ ಕರ್ನಾಟಕದ ಸಾಮಾಜಿಕ ಮತ್ತು ಧಾರ್ಮಿಕ ಜೀವನದಲ್ಲಿ ಒಂದು ಅದ್ಭುತ ಕ್ರಾಂತಿಯುಂಟಾಯಿತು. ಉರಿಲಿಂಗಪೆದ್ದಿ, ನನ್ನಯ್ಯ, ನಿಜಲಿಂಗ ಚಿಕ್ಕಯ್ಯ ಇವರು ಮೊದಲು ಕೊಲೆ ಸುಲಿಗೆಗಳನ್ನು ಮಾಡುತ್ತ ಹಾದಿ ಬಡಿಯುವವರಾಗಿದ್ದರು. ಇಂಥವರು ಶಿವಾನುಭವದ ಮೂಲಕ ತಮ್ಮ ಕ್ರೂರ ಕರ್ಮಗಳನ್ನು ಬಿಟ್ಟುಬಿಡುವವರಾದರು. ದುರಾಚಾರಿಗಳು ಸದ್ವರ್ತನೆಯಿಂದ ನಡೆಯುವವರಾದರು. ಉಚ್ಚ ವರ್ಣದವರು ಕೆಳಗಿನ ವರ್ಣದವರೊಡನೆ ಸಮಾನತೆಯಿಂದ ನಡೆಯಹತ್ತಿದರು. ಸ್ತ್ರೀಯರು ಶಿವಾನುಭವದ ಸಲುವಾಗಿ ಪ್ರೀತಿಯನ್ನು ವಹಿಸಿ ತಮಗುಂಟಾದ ಕಠಿಣಕಾಲದಲ್ಲಿ ಸಾವನ್ನು ಸಹ ಎದುರಿಸಲು ಧೈರ್ಯಮಾಡುವವರಾದರು. ಬಾಲಕರೂ ಎಳೆ ವಯಸ್ಸಿನವರೂ ಕೂಡ ಕಷ್ಟವನ್ನು ಸಹಿಸಲು ಮುಂದಾದರು. ರಾಜರು ರಾಜ್ಯದ ಹಂಬಲವನ್ನು ತೊರೆದರು. ಹೀಗೆ ಈ ಕಾಲದಲ್ಲಿ ಒಂದು ಅದ್ಭುತ ಸಾಮರ್ಥ್ಯವು ಸಮಾಜದಲ್ಲಿ ಉಂಟಾಯಿತು. ಇದು ಶಿವಾನುಭವದ ಪರಿಣಾಮವಾಗಿದೆ.

ನಾವು ಈ ವರೆಗೆ ೧೧೪ ಜನ ಶಿವಶರಣರ ಚರಿತ್ರೆಗಳನ್ನು ಸಂಶೋಧಿಸಿ ಎರಡು ಭಾಗಗಳಲ್ಲಿ ಅವುಗಳನ್ನು ಪ್ರಸಿದ್ಧಿಸಿದ್ದೇವೆ. ಇವರಲ್ಲದೆ ಇನ್ನೂ ಅನೇಕ ಶಿವಶರಣರು ನಾಡಿನಲ್ಲಿ ಉದ್ಭವಿಸಿದ್ದಾರೆ. ಅವರೂ ಅನೇಕ ಮಹತ್ತರವಾದ ಕಾರ್ಯಗಳನ್ನು ಮಾಡಿದ್ದಾರೆ. ಅವರ ಚರಿತ್ರೆಗಳನ್ನು ನಾವು ಕ್ರಮೇಣ ಮುಂದಿನ ಭಾಗಗಳಲ್ಲಿ ಪ್ರಸಿದ್ಧಿಸುತ್ತ ಹೋಗುವೆವು.

ಈ ಗ್ರಂಥದ ಪ್ರಸ್ತಾವನೆಯು ಅನಿರೀಕ್ಷಿತವಾಗಿ ಬಹಳ ಬೆಳೆದು ಬಂದಿತು. ಶಿವಶರಣರು ಮಾಡಿದ ಕಾರ್ಯಗಳ ಮಹತ್ವವನ್ನು ವಾಚಕರು ಅರಿಯುವದು ಅವಶ್ಯವೆಂದು ನಮಗೆ ತೋರಿದ್ದರಿಂದ ನಾವು ಇಷ್ಟು ದೀರ್ಘವಾದ ಪ್ರಸ್ತಾವನೆಯನ್ನು ಬರೆಯಬೇಕಾಯಿತು. ಇದಕ್ಕೋಸ್ಕರ ನಾವು ವಾಚಕರ ಕ್ಷಮಾಪಣೆಯನ್ನು ಬೇಡಿಕೊಳ್ಳುತ್ತೇವೆ.

ನಾವು ಈ ಚರಿತ್ರೆಗಳನ್ನೆಲ್ಲ ಶಿವಾನುಭವಪತ್ರಿಕೆಯ ದ್ವಾರಾ ಪ್ರಕಟ ಮಾಡುತ್ತ ಬಂದಿದ್ದೇವೆ. ಇವುಗಳಲ್ಲಿ ಯಾವವೂ ಒಂದೇಕಾಲಕ್ಕೆ ಬರೆಯಲ್ಪಟ್ಟಿರುವದಿಲ್ಲ. ಇದರಿಂದ ಕೆಲವು ದೋಷಗಳು ಈ ಗ್ರಂಥದಲ್ಲಿ ಉಂಟಾಗಿರುತ್ತವೆ. ಅಲ್ಲಲ್ಲಿ ಅವ್ಯವಸ್ಥಿತ ವಾಕ್ಯರಚನೆಗಳೂ ಭಾಷಾದೋಷಗಳೂ ಉಂಟಾಗಿರುತ್ತವೆ. ಕೆಲವು ಸಮಯಗಳಲ್ಲಿ ಅವಸರದಿಂದ ಪ್ರೂಫು ತಿದ್ದಬೇಕಾದ್ದರಿಂದ ಪ್ರಿಂಟಿನ ದೋಷಗಳೂ ಆಗಿರುತ್ತವೆ. ಇದಕ್ಕೋಸ್ಕರ ನಾವು ವಾಚಕರ ಕ್ಷಮೆಯನ್ನು ಬೇಡಿಕೊಳ್ಳುತ್ತೇವೆ. ಈ ದೋಷಗಳು ಮುಂದಣ ಮುದ್ರಣಕಾಲದಲ್ಲಿ ಸರಿಪಡಿಸಲ್ಪಡುವವು.

ಈ ಗ್ರಂಥದ ಮುದ್ರಣಕಾಲದಲ್ಲಿ ಯಾವಾಗಲೂ ಕಾಗದದ ಕೊರತೆ ಇದ್ದದರಿಂದಲೂ ಸ್ವಲ್ಪ ಪ್ರತಿಗಳನ್ನು ನಾವು ಮುದ್ರಿಸಬೇಕಾದ್ದರಿಂದಲೂ ಗ್ರಂಥದ ಬೆಲೆಯನ್ನು ಹೆಚ್ಚಿಸಬೇಕಾಗಿ ಬಂದಿದೆ. ಆದರೆ ಈ ಸ್ಥಿತಿಯು ಗ್ರಂಥದ ಮುಂದಿನ ಮುದ್ರಣಕಾಲದಲ್ಲಿ ಉಳಿಯಲಿಕ್ಕಿಲ್ಲೆಂದು ನಾವು ಭಾವಿಸಿದ್ದೇವೆ.

ಫ. ಗು. ಹಳಕಟ್ಟಿ,
ಸಂಪಾದಕ.

# ಪರಿಶಿಷ್ಟ ೧.

( ಅಕ್ಷರಾನುಕ್ರಮವಾಗಿ ಅನುಕ್ರಮಣಿಕೆ. )

( * ಈ ಚಿನ್ಹವಿದ್ದ ಶಿವಶರಣರು ವಚನಕಾರರೂ ಗ್ರಂಥಕಾರರೂ ಇದ್ದಾರೆ. )


| | ಹೆಸರುಗಳು. | ಪುಟ. | | ಹೆಸರುಗಳು. | ಪುಟ. |
|---|---|---|---|---|---|
| | ಅಗ್ಗವಣಿಯಹೊನ್ನಯ್ಯ | ೮೭ | * | ಗಟ್ಟಿವಾಳಯ್ಯ | ೧೬೭ |
| | ಅಜಗಣ್ಣ | ೨೫೭ | * | ಗುಪ್ತ ಮಂಚಣ್ಣ | ೧೦೨ |
| | ಅಣ್ಣಲದೇವಿ | ೩೨೨ | * | ಗೊಗ್ಗವ್ವೆ | ೫ |
| | ಅನುವಿಷ | ೩೦೭ | * | ಗೊಲ್ಲಾಳ | ೧೭೫ |
| | ಅಮ್ಮವ್ವೆ | ೧೬೨ | * | ಚನ್ನಯ್ಯ | ೧೩೯ |
| | ಅಮುಗಿದೇವ | ೩೭ | | ಚಾರಮರಾಯ | ೩೫೨ |
| | ಆದಯ್ಯ | ೪೮ | * | ಚಿಕ್ಕಯ್ಯ | ೩೨೫ |
| | ಇಳಿಹಾಳ ಬೊಮ್ಮಯ್ಯ | ೨೭೨ | | ಜಂಬೂರು ಮಹಾಕಾಳಯ್ಯ | ೩೧ |
| | ಉಂಡುಉಪವಾಸಿ | ೮೩ | | ತಂಗಟೂರು ಮಾರಯ್ಯ | ೩೬೧ |
| | ಏಕಾಂತದ ರಾಮಯ್ಯ | ೧೯೮ | | ತಾಳೀಕೋಟೆಯ ಶಿವದೇವ | ೨೬೬ |
| | ಒಕ್ಕಲು ಮುದ್ದಯ್ಯ | ೧೮೩ | | ತಿಲಕವ್ವೆ | ೧೫೫ |
| | ಓಲೆಯ ಶಾಂತಯ್ಯ | ೮೭ | * | ದಸರಯ್ಯ | ೧೦ |
| | ಕದಿರಿ ರೆಮ್ಮಯ್ಯ | ೩೨೨ | | ನನ್ನಯ್ಯ | ೫೯ |
| | ಕಲಕೇತ ಬೊಮ್ಮಯ್ಯ | ೭೫ | | ನಾವದಿಗೆಯ ಗುಡ್ಡಮ್ಮ | ೩೫ |
| | ಕಂಗರೀ ಕಕ್ಕಯ್ಯ | ೨೬೯ | * | ನಿಜಲಿಂಗ ಚಿಕ್ಕಯ್ಯ | ೩೨೫ |
| * | ಕೇಶಿರಾಜ | ೯೩ | * | ನುಲಿಯ ಚಂದಯ್ಯ | ೨೧೭ |
| | ಕೋಹೂರು ಬ್ರಹ್ಮಯ್ಯ | ೨೪೨ | | | |
| | ಕೊಳೂರು ಕೊಡಗೂಸು | ೧೩೫ | | | |
| * | ಗಣೇಶ ಮಸಣಯ್ಯ | ೨೧೦ | | | |

(ಗ್ರಂಥದ ಒಟ್ಟು ಪುಟ ಸಂಖ್ಯೆ— ೪೫೮.)


**ಪಿಟ್ಟವ್ವೆ** ೧೮೦
ಪುಲಿಗೆರೆಯ ಸೋಮಯ್ಯ ೧೨೯
ಬಳಸಿ ಬ್ರಹ್ಮಚಾರಿ ೮೩
**ಬಿಜ್ಜಮಹಾದೇವಿ** ೧೬೨
ಬಿಬ್ಬಿ ಬಾಚಯ್ಯ ೨೮೭
**ಬೊಂತಾದೇವಿ** ೧
ಭದ್ರಗಾಯಕ ೭೯
ಭಾನುದೇವಯ್ಯ ೩೬೫
* **ಮಹಾದೇವಿಯಮ್ಮ** ೨೩೦
(ಮೋಳಿಗೆ ಮಾರಯ್ಯನ ಪತ್ನಿ)
* ಮಾದಾರ ಚನ್ನಯ್ಯ ೧೩೯
ಮಾರುಡಿಗೆಯ ನಾಚಯ್ಯ ೨೫೨
**ಮುಕ್ತಾಯಕ್ಕ** ೨೬೨
ಮುಸುಡಿಯ ಚೌಡಯ್ಯ ೨೮೦
ಮೆರೆಮಿಂಡದೇವ ೧೪೯
ಮೇದಾರ ಕೇತಯ್ಯ ೧೫೮
* ಮೈದುನ ರಾಮಯ್ಯ ೧೩೨
* ಮೋಳಿಗೆಯ ಮಾರಯ್ಯ ೨೨೫
* **ರಾಯಮ್ಮ** ೪೪
* ರಾಯಸದ ಮಂಚಣ್ಣ ೪೬
**ವರದಾನಿ ಗುಡ್ಡಮ್ಮ** ೧೧೧
* **ವೀರಮ್ಮ** ೩೪
ವೀರಸಂಗಯ್ಯ ೨೭೬
* ವೇಮನಾರಾಧ್ಯ ೩೪೮
**ವೈಜವ್ವೆ** ೧೯೧
* ವೈದ್ಯ ಸಂಗಣ್ಣ ೩೦೦
* ಶಿವನಾಗಮಯ್ಯ ೨೩೮
* ಶಿವಲೆಂಕ ಮಂಚಣ್ಣ ೩೧೭
* ಶ್ರೀಪತಿ ಪಂಡಿತ ೩೩೪
* ಸಗರದ ಬೊಮ್ಮಯ್ಯ ೨೯೭
* **ಸತ್ಯಕ್ಕ** ೮೯
ಸುಜ್ಞಾನಿದೇವ ೫೯
* ಸೊಡ್ಡಳ ಬಾಚರಸ ೨೩೨
* ಹಾವಿನಹಾಳ ಕಲ್ಲಯ್ಯ ೨೪

**ಕೆಳಗೆ ಕಾಣಿಸಿದ ಗ್ರಂಥಗಳು ಹಿತಚಿಂತಕ ಪ್ರಿಂಟಿಂಗ ಪ್ರೆಸ್ ವಿಜಾಪುರ, ಇಲ್ಲಿ ದೊರೆಯುತ್ತವೆ.**

| | | ಬೆಲೆ. |
|---|---|---|
| ೧. | ಹೊಸ ಪದ್ಧತಿಯ ಬಸವೇಶ್ವರ ವಚನಗಳು. | ೨—೦—೦ |
| ೨. | ಮಹಾದೇವಿಯಕ್ಕನ ವಚನಗಳು. | ೦-೧೨—೦ |
| ೩. | ಘನಲಿಂಗನ ವಚನಗಳು. | ೦-೧೨—೦ |
| ೪. | ಭಕ್ತಿಯ ವಚನಗಳು. | ೦-೧೦—೦ |
| ೫. | ಶಿವಶರಣರ ಚರಿತ್ರೆ. ಭಾಗ ೧ | ೧-೧೨—೦ |
| ೬. | ಆದಯ್ಯನ ವಚನಗಳು. | ೦—೮—೦ |
| ೭. | ಮಡಿವಾಳ ಮಾಚಿದೇವನ ವಚನಗಳು. | ೦-೧೨—೦ |

ಗ್ರಂಥಗಳ ಲಿಷ್ಟಿಗೆ ಬರೆಯಿರಿ.—

---

**ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.**

**ವಾರ್ಷಿಕ ವರ್ಗಣಿ ಅಂಚೆವೆಚ್ಚಸಹಿತ ರೂ. ೪—೧೨—೦ ವ್ಹಿ. ಪಿ. ಖರ್ಚು ೦—೪—೦**

# BOOK-POST.

R. N B. 2554

*From,*
Shivanubhava
Office
Bijapur

ಚನಮಲ್ಲಪ್ಪ ಸಿದ್ದಪ್ಪ ಬಡೇಖಿ
ಪೋ. ಬನಹಟ್ಟಿ
ಸ್ಟೇ. ಕುಡಚಿ
(M. S. M. Ry.)




ಈ ಪತ್ರಿಕೆಯನ್ನು ಇದರ ಸಂ
ಹಳಕಟ್ಟಿ ಬಿ. ಎ. ಎಲ್. ಎಲ್. ಬಿ
ಮನೆ ನಂ. ೧೩೬೮ ರಲ್ಲಿರುವ ಶಿವ
ನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದ








೨೧ ] ಮಾರ್ಚ ೧೯೪೭ [ ಸಂಚಿಕೆ ೭

## ವಿಷಯಾನುಕ್ರಮಣಿಕೆ.


೧. ಸುಂದರ ಜೀವನ ಕ್ರಮ— ಶ್ರೀ. ಅನ್ನದಾನೇಶ್ವರ ವಿರಕ್ತಮಠ ಮು. ರಾಣೇಬೆನ್ನೂರ ೧೦೫

೨. ಶಿವಶರಣ ಗೊಗ್ಗಪ್ಪನವರು- ಶ್ರೀಯುತ ಕೆ. ಜಿ. ರುದ್ರಸ್ವಾಮಿ ಕಿರುಗಾವಲು ೧೦೯

೩. ಬಿಜ್ಜಮಹಾದೇವಿ— ಶ್ರೀಮತಿ ಮುಕ್ತಾಯಕ್ಕ ಲಪ್ಪನವರ ಮು. ಬಾಗಲಕೋಟ ೧೧೧

ವೀರಶೈವ [illegible] ಪ್ರ. ಸ. ಗದಗ— ಶ್ರೀ ಅನ್ನದಾನೇಶ್ವರ ವಿರಕ್ತಮಠ ೧೧೬

ಮುಂದುವರಿದ ಶಿವಾನುಭವ- ಶ್ರೀ. ಶಾಂತವೀರ ಮುಮ್ಮಿಗಟ್ಟಿ ಧಾರವಾಡ ೧೨೦

ಕೊಂತಮಠದ ಗುರುಗಳು— ಕಾವ್ಯತೀರ್ಥ, ವಿದ್ವಾನ್, ಶಾಂತವೀರದೇವರು, ಐಹೊಳೆ ೧೨೪

೭. ಶಿವಶರಣರ ಚರಿತ್ರೆಗಳು ಭಾಗ-೩. ೧—೧೨
— ರಾ॥ ಬಂ॥ ಫ. ಗು. ಹಳಕಟ್ಟಿ, ವಿಜಾಪುರ.

# ಶಿವಾನುಭವ

| ವರ್ಷ ೨೧ | ಮಾರ್ಚ ೧೯೪೭ | ಸಂಚಿಕೆ ೬ |
| --- | --- | --- |

## ಸುಂದರ ಜೀವನ ಕ್ರಮ.

(ಲೇಖಕರು:— ಶ್ರೀ. ಅನ್ನದಾನೇಶ್ವರ ವಿರಕ್ತಮಠ,
ಮು. ರಾಣೇಬಿನ್ನೂರ.)

ಜೀವನವೆಂದರೇನು? ವೇದಾಂತಿಗಳು ಹೇಳುವಂತೆ ಈ ಜಗದ ಜೀವನವು ಸಂತೆಯಲ್ಲ. ಒಂದುದಿನದ ಜಾತ್ರೆಯಲ್ಲ. ಸ್ವಪ್ನವೂ ಅಲ್ಲ. ಮಿಥ್ಯವೂ ಅಲ್ಲ. ನಿರಾಶಾವಾದದ ದುಃಖಮಯ ಮುಳ್ಳಿನ ಹಾಸಿಗೆಯಲ್ಲ.

'ಲಾಂಗಫೆಲೋ' ಎಂಬ ಕವಿಯು ಹೇಳಿದಂತೆ ಜೀವನವು ಸತ್ಯವಾಗಿದೆ. ಆಶಾವಾದದಿಂದ ತುಂಬಿದ ಆನಂದದ ಮಹಾಮನೆಯಾಗಿದೆ. ಉಳಿವೆಯ ಮಹಾಮನೆಯಿಂದ ಜಗದ್ಗುರು ಚೆನ್ನಬಸವಣ್ಣನವರು ಇದೇ ರೀತಿಯಲ್ಲಿ ತಮ್ಮ ಕೊನೆಯ ಸಂದೇಶವನ್ನು ಜಗತ್ತಿಗೆ ನೀಡಿದ್ದಾರೆ. ಜಗದ್ಗುರು ಅಕ್ಕಮಹಾದೇವಿಯವರು ಹೇಳಿದಂತೆ ಜೀವನವು ಜೀವ ಜಾಲವಾಗಿರದೆ ಶಿವಲೀಲೆಯಾಗಿದೆ. 'ದೃಷ್ಟಿಯಂತೆ ಸೃಷ್ಟಿ, ಲಿಂಗದೃಷ್ಟಿಯಿಂದ ಲಿಂಗಸೃಷ್ಟಿ' ಎಂದು ಪೂರ್ಣ ಸಮಾಜಸಂಸ್ಥಾಪಕ ಜಗದಣ್ಣ ಬಸವಣ್ಣನು ಹೇಳಿದ ರಹಸ್ಯವಾದರೂ ಇದೇ! ಲೀಲಾಜಾಲವಾಗಿ, ಸಹಜವಾಗಿ, ಲಿಂಗದೃಷ್ಟಿಯಿಂದ, ಜೀವನ ಸಾಗಿಸಿಕೊಂಡು ಹೋಗುವವರಿಗೆ ಜೀವನವು ಪ್ರಗತಿಮಯವಾಗಿಯೂ ಕಲ್ಯಾಣಮಯವಾಗಿಯೂ ಇದೆಯೆಂದೇ ಶಿವಶರಣರು ೧೨ನೇ ಶತಮಾನದಲ್ಲಿ ನುಡಿದು ನಡೆದು ಹೋಗಿರುವರು.

**ಜೀವನ ರಹಸ್ಯವಾವುದು?** ಜೀವನವು ಪ್ರಗತಿಪರವೂ ಕಲ್ಯಾಣ ಮಯವೂ ಇರುವದೆಂದ ಮೇಲೆ ಜೀವನದ ರಹಸ್ಯವು ಅತಿ ಉದಾತ್ತವಾದುದೂ, ಆದರ್ಶವೂ, ವ್ಯಾವಹಾರಿಕವೂ ಇರಲೇಬೇಕು.

"Eat, drink and be merry"—ಇದೇ ಪಾಶ್ಚಾತ್ಯರ ಜೀವನ ರಹಸ್ಯವೆನಿಸಿಕೊಂಡಿದೆ. ಈ ರಹಸ್ಯವು ಆತ್ಮವಿಲ್ಲದ ದೇಹದಂತೆ; ಚುಕ್ಕಾಣಿಯಿಲ್ಲದ ಹಡಗದಂತೆ, ದೀಪಸ್ತಂಭವಿಲ್ಲದ ಬಂದರದಂತೆ, ಚೈತನ್ಯರಹಿತ ಯಂತ್ರದಂತೆ, ಜಡವೂ, ಅಜ್ಞಾನಮಯವೂ, ಮಾರಕವೂ, ಪ್ರಗತಿ-ಶಾಂತಿಗಳ ವೈರಿಯೂ ಆಗಿದೆ. ಈ ರಹಸ್ಯದಿಂದ ಪ್ರೇರಿತವಾದ ಬಾಳು ಏಕಪಕ್ಷೀಯವೂ ಯುದ್ಧಗಳಿಗೆ ಕಾರಣೀಭೂತವಾದುದೂ ಆಗಿದೆ.

"ಆರು ನೀನೆಂದು ವಿಚಾರಿಸು". ಅರ್ಥಾತ್ ಆತ್ಮಜ್ಞಾನವೇ ಪೌರ್ವಾತ್ಯರ ಜೀವನರಹಸ್ಯವಾಗಿದೆ. ಈ ರಹಸ್ಯವು ಆದರ್ಶಮಯವಾಗಿದ್ದರೂ ವ್ಯಾವಹಾರಕವಿಲ್ಲ. ಇದೂ ಏಕಪಕ್ಷೀಯುವೇ ಆಗಿದೆ. ಇದು ದೇಹವಿಲ್ಲದ ಆತ್ಮದಂತೆ ಅಂತರಪಿಶಾಚಿ.

ಜಗದಣ್ಣ ಬಸವಣ್ಣನ ಪಾರಿಭಾಷಿಕ ಶಬ್ದದಲ್ಲಿ ಹೇಳಬೇಕೆಂದರೆ, ಲಿಂಗಾಂಗ ಸಾಮರಸ್ಯವೇ ಜೀವನ ರಹಸ್ಯವಾಗಿದೆ. **ವಚನ ಶಾಸ್ತ್ರದ ನಿಜವಾದ ರಹಸ್ಯವು ಇದು!** ಈ ರಹಸ್ಯವನ್ನು ಕಡೆಗಣಿಸಿ ಎಂಥ ಹೆಬ್ಬೊತ್ತಿಗೆಯನ್ನು ಬರೆದರೂ ಅದು ವಚನ ಶಾಸ್ತ್ರ ರಹಸ್ಯವಲ್ಲ.

"ಆರು ನೀನೆಂದು ವಿಚಾರಿಸು." ಅಥಾತ್ ಆತ್ಮಜ್ಞಾನವು "ಲಿಂಗ" ಎಂಬ ಶಬ್ದದಲ್ಲಿ ಅಡಕವಾಗಿದೆ. "Eat, drink and be merry ಅರ್ಥಾತ್ ಭೌತಿಕ ಸುಖದ ವಿಜ್ಞಾನವು ( Science ) "ಅಂಗ ಎಂಬ ಶಬ್ದದಲ್ಲಿ ಅಡಕವಾಗಿದೆ. ಆತ್ಮಜ್ಞಾನ ( ಲಿಂಗ ), ವಿಜ್ಞಾನ (ಲಿಂಗ)-ಇವೆರಡರ ಸುಂದರ ಸಮನ್ವಯ ಸಾಮರಸ್ಯವೇ ಬಸವಣ್ಣನ ಲಿಂಗಾಂಗ ಸಾಮರಸ್ಯ! ಇದು ಜಗತ್ತಿನ ಜೀವನ ರಹಸ್ಯವಾಗದೇನು ಮಾಡೀತು? ಆಗಿಯೇ ಆಗುತ್ತದೆ. ಪಾಶ್ಚಾತ್ಯ-ಪೌರ್ವಾತ್ಯ ಸಂಸ್ಕೃತಿಗಳ ಸಂಗಮವೇ ಲಿಂಗಾಂಗಸಾಮರಸ್ಯವು. ಆ ಸಂಗಮನಾಥನೇ ಬಸವಣ್ಣನ ಇಷ್ಟ ದೈವವು, ಇಷ್ಟ ಲಿಂಗವು. ಕಾರಣ ಬಸವಣ್ಣನು ಜಗದಣ್ಣನು.

**ಎಲ್ಲಿದೆ ಜೀವನ ಸೌಂದರ್ಯ? ಮೇಲೆ ಹೇಳಿದಂತೆ ಅಧ್ಯಾತ್ಮ** ( Spiritualism ) ಮತ್ತು (Science) **ಭೌತಿಕ ವಿಜ್ಞಾನ, ಇವೆರಡರ** ಸಾಮರಸ್ಯದಿಂದ ಅರ್ಥಾತ್ ಲಿಂಗಾಂಗ ಸಾಮರಸ್ಯದಿಂದ, ಆದರ್ಶವೂ ವ್ಯಾವಹಾರಿಕವೂ ಆದ ಜೀವನ ಸಾಗಿಸುವ ಜೀವನ ನದಿಯ **ಗತಿಯ**ಲ್ಲಿಯೇ ಜೀವನ ಸೌಂದರ್ಯವಿದೆ.

" Truth is beauty " ಎಂದು ಪೌರ್ವಾತ್ಯರು **ಹೇಳಿದರೆ,** "Beauty is truth" ಎಂದು ಪಾಶ್ಚಾತ್ಯರು ಹೇಳಿದರು. ನಮಗೆ ನೀವಿಬ್ಬರೂ ಬೇಕು. ಸತ್ಯ-ಸೌಂದರ್ಯಗಳ ಸಾಮರಸ್ಯವೇ ಜಗತ್ತಿನ ಧ್ಯೇಯ. ಪ್ರಪಂಚವನ್ನು ಶಿವಮಯ ಅರ್ಥಾತ್ ಕಲ್ಯಾಣಮಯವಾಗಿ ಮಾಡುವದೇ ಶಿವಶರಣರ ಗುರಿ " ಹೀಗೆ ಜಗದಣ್ಣ ಬಸವಣ್ಣನು ನುಡಿದು ಸುಂದರ ಜೀವನ ಕ್ರಮವನ್ನು ತನ್ನ ಅಮರವಾಣಿಯಾದ ವಚನಗಳಲ್ಲಿ ಜಗದೋದ್ಧಾರಾರ್ಥವಾಗಿಯೂ ಆತ್ಮೋದ್ಧಾರಾರ್ಥವಾಗಿಯೂ ಹಾಕಿಕೊಟ್ಟಿದ್ದಾನೆ.

**ಸುಂದರ ಜೀವನ ಕ್ರಮವುಃ**— ಕ್ರಮಬದ್ಧವಾಗಿ, ಸುವ್ಯವಸ್ಥಿತವಾಗಿ, ಸಾಮೂಹಿಕವಾಗಿ, ಸಾಗಿದರೆ ಜೀವನವು ಸುಂದರವಾಗುವದು. ಆ ಸುಂದರ ಜೀವನದ ಕ್ರಮವು ಹೀಗಿದೆಃ—

(ಅ) ಲಿಂಗಾಂಗ ಸಾಮರಸ್ಯವು ಆದರ್ಶವೂ ವ್ಯಾವಹಾರಿಕವೂ ಆದ ಉದಾತ್ತ ಗುರಿಯು. ಈ ಗುರಿಯಿಲ್ಲದೆ ಸಾಗಿದವನ ಬಾಳು ಹಾಳು!

(ಆ) ಈ ಗುರಿಯನ್ನು ಸಾಧಿಸಲಿಕ್ಕೆ ಶಿಕ್ಷಣ ಬೇಕು. ಈ ಶಿಕ್ಷಣವನ್ನು ಅನುಭವ ಮಂಟಪವು ಕೊಡುವದು. ಸ್ವಾತಂತ್ರ್ಯ, ಸಮಾನತೆ, ಬಂಧುಭಾವಗಳೇ ಅನುಭವ ಮಂಟಪದ ತತ್ವಗಳು. ಸಾಮ್ಯವಾದೀ ಪ್ರಜಾಸತ್ತಾತ್ಮಕ ಸ್ವರಾಜ್ಯಸ್ಥಾಪನೆಗೆ ಬೇಕಾದ ಶಿಕ್ಷಣವೇ ಇಲ್ಲಿ ಸಿಗುವದು. ಮೇಲ್ಕಂಡ ಸ್ವರಾಜ್ಯವು (ಅ) ಇದರಲ್ಲಿ ಹೇಳಿದ ಗುರಿಯನ್ನು ಮುಟ್ಟಲಿಕ್ಕೆ ಸಾಧನವು. ಈ ಅನುಭವ ಮಂಟಪದಲ್ಲಿ ಪ್ರತಿಯೊಬ್ಬನು ದಿನಾಲು ನಿಯಮಿತ ಕಾಲ ಕಳೆಯಲೇಬೇಕು. ಇಲ್ಲಿ ವರ್ಣಾಶ್ರಮವಾಗಲಿ, ಜಾತಿಭೇದವಾಗಲಿ, ಇಲ್ಲ. ಭಕ್ತಮಹೇಶ ಎಂಬೆರಡು ಜಾತಿಗಳಿಲ್ಲ.

ಈ ಅನುಭವ ಮಂಟಪವು ಶಾರೀರಿಕ, ಮಾನಸಿಕ, ನೈತಿಕ, ಆಧ್ಯಾತ್ಮಿಕ ಶಿಕ್ಷಣವನ್ನು ಕೊಟ್ಟು ವ್ಯಕ್ತಿತ್ವ (Personality) ವಿಕಾಸ ಗೊಳಿಸುವದು. ( Sublimation of instincts ) —ಅಂದರೆ ಕಾಮ ಕ್ರೋಧಾದಿ ಸಹಜ ಪ್ರವೃತ್ತಿಗಳ ಉದಾತ್ತೀಕರಣವೇ ಇಲ್ಲಿ ಸಾಧಿಸಲ್ಪಡುವದು. (ಈ ಬಗ್ಗೆ ಜಗದ್ಗುರು ಚೆನ್ನಬಸವಣ್ಣನವರ ವಚನಗಳನ್ನು ಅವಲೋಕಿಸಬಹುದು.) ಸಾಮಾಜಿಕ ಸಭ್ಯತೆಯನ್ನು ಕಲಿಸಿ ಸಮಾಜದಲ್ಲಿ ಮಾಧುರ್ಯ ಮತ್ತು ಪ್ರಕಾಶದ ಪ್ರೇಮ ಕಿರಣಗಳನ್ನು ಹರಡುವದು. ಅನುಭವ ಮಂಟಪವು ತರ್ಕ ವಿತರ್ಕಗಳ ಗೊಂದಲವನ್ನು ತಪ್ಪಿಸಿ ಸರಿಯಾದ ನಿಶ್ಚಿತ ದಾರಿ ತೋರುವದು. ಸದಾಚರಣೆಯು ಅಳವಟ್ಟು, ನಿಜವಾದ ಭಾಷಣ ಕಲೆಯು ಕರಗತವಾಗಿ, ಉತ್ತಮ ವಿಚಾರಗಳೂ ರೂಢಿಗಳೂ ನೆಲೆಗೊಳ್ಳಲಿಕ್ಕೆ ಸಹಾಯವಾಗುವದು. (Confession) ಅಂದರೆ ತನ್ನ ತಪ್ಪು ಒಪ್ಪಿಕೊಂಡು (Self-effacement) ಅಂದರೆ ಜೀವನ ಜೀವತ್ವವನ್ನು ಗಂಧದಂತೆ ಲೋಕೋಪಯೋಗಿಯಾದ ರೀತಿಯಲ್ಲಿ ಸವೆಯಿಸುವ ಈ ಅನುಭವಮಂಟಪದಲ್ಲಿಯೇ ವೇದ್ಯವಾಗುವದಲ್ಲದೆ ಸಾಧ್ಯವಾಗುವದು. (ಚೆನ್ನಬಸವಣ್ಣನ ಷಟ್‌ಸ್ಥಲ ಸಿದ್ಧಾಂತವನ್ನು ಅವಲೋಕಿಸಬೇಕು.)

(ಇ) ಪ್ರತಿಯೊಬ್ಬನು ಕಾಯಕ ಅಂದರೆ ಲಿಂಗದೃಷ್ಟಿಯ ಉದ್ಯೋಗ ಮಾಡಲಿಕ್ಕೇಬೇಕು. ವೇಳೆಯ ಸದುಪಯೋಗವಾಗಿ ಸಂಪತ್ತು ಸಿಗುವದು. ಆ ಸಂಪತ್ತಿನ ಸದುಪಯೋಗವೂ ಈ ಕಾಯಕತತ್ವದಲ್ಲಿ ಪ್ರತಿಪಾದಿಸಲ್ಪಟ್ಟಿದೆ. "ಕಾಯಕದಲ್ಲಿ ನಿರತನಾದರೆ ಲಿಂಗಪೂಜೆಯ ಮರೆಯಬೇಕು. ಜಂಗಮ ಮುಂದಿದ್ದರೂ ಹಂಗು ಹರಿಯಬೇಕು. ಈ ತತ್ವವು ಉದ್ಯೋಗಾಭಿವೃದ್ಧಿಯನ್ನು ಕುರಿತು ಹೇಳಿದ್ದಾಗಿದೆ. ಆ ಉದ್ಯೋಗಾಭಿವೃದ್ಧಿಯು ನೈತಿಕ ಸಮಾಜಪೋಷಣೆಗಾಗಿಯೇ ಇರುವದು.

(ಈ) "ದಾಸೋಹಂಭಾವ"-ಅಂದರೆ ನಾನು ಜಗದ ಸೇವಕ ಎಂಬ ಭಾವ ಬೇಕು. ಇದರಿಂದ (Equal distribution) ಸರಿಯಾದ ಹಂಚುವಿಕೆಯು ಸಾಧ್ಯವಾಗುವದು.

(ಉ) ಪ್ರತಿಯೊಬ್ಬನು ದಿನಾಲು ಸರಿಯಾದ ವ್ಯಾಯಾಮ ಮಾಡಲಿಕ್ಕೇಬೇಕು. ವಜ್ರ ಶರೀರಿಯಾದರೆ ಅಡ್ಡಿಯಿಲ್ಲ. ಆದರೆ ಆ ವಜ್ರ

ಶರೀರಶಕ್ತಿಯು ಶಿವ(ಕಲ್ಯಾಣ) ಸಮಾಜ ರಕ್ಷಣೆಗಾಗಿಯೇ ಉಪಯೋಗವಾಗತಕ್ಕದ್ದು. ಪ್ರಭುಲಿಂಗಲೀಲೆಯಲ್ಲಿ ಅಲ್ಲಮ ಪ್ರಭುವು ಗೋರಕ್ಷನಾಥನಿಗೆ ಬೋಧಿಸಿದ ಇಂಗಿತವೇ ಇಲ್ಲಿದೆ!

(ಊ) ಹಿತವಾದ ಆಹಾರವನ್ನು ಮಿತವಾಗಿ ಸೇವಿಸಿ ಪ್ರಸಾದ ಸಿದ್ಧಿಯನ್ನು ಪಡೆಯಬೇಕು. ಅಂಗೇಂದ್ರಿಯಗಳನ್ನು ಲಿಂಗೇಂದ್ರಿಯಗಳನ್ನಾಗಿಮಾಡಬೇಕೆಂದು ವೀರ ಮಾಚಿದೇವನು ಹೇಳಿದ ಮಾತಿನ ಮರ್ಮವು ಇಲ್ಲಿದೆ.

(ಋ) ಮೂಢ ಭಕ್ತಿಬೇಡ. ಜ್ಞಾನ ಭಕ್ತಿಬೇಕು. ಅಂದರೆ ಜ್ಞಾನ ಪ್ರೇಮಗಳಿಂದ ಕರ್ತವ್ಯ ಮಾಡಬೇಕು.

(ೠ) ವಚನದಂಥ ಗ್ರಂಥಗಳನ್ನು ಓದಿ, ಸಜ್ಜನರ, ಜ್ಞಾನಿಗಳ ಅಂದರೆ ಶರಣರ ಸಹವಾಸದಲ್ಲಿರು.

ಇದೇ ಸುಂದರ ಜೀವನ ಕ್ರಮವು.

---

# ಶಿವಶರಣ ಗೊಗ್ಗಪ್ಪನವರು.

(ಲೇಖಕ— ಶ್ರೀಯುತ ಕೆ. ಜಿ. ರುದ್ರಸ್ವಾಮಿ ಶ್ರೀ ವೀರಶೈವ ಶಿವಾನಂದ ಸಂಘ ಕಿರುಗಾವಲು ಮಳವಳ್ಳಿ ತಾಲ್ಲೋಕು)

ನಮ್ಮ ನಾಡು ಶಿವಶರಣರ ಬೀಡು. ನಮ್ಮ ದೇಶ ಪವಿತ್ರ ಕ್ಷೇತ್ರ. ಇಂಥಾ ಮಹಾ ಕ್ಷೇತ್ರಗಳಲ್ಲಿ ಅನೇಕ ಶಿವಶರಣರು ಉದಯಿಸಿ ನಾಡಿಗೆ ಕೀರ್ತಿಯನ್ನು ತಂದಿದ್ದಾರೆ.

ಅಂತಹ ಶಿವಶರಣರಲ್ಲಿ ಗೊಗ್ಗಪ್ಪನವರೊಬ್ಬರು. (೧) ಇವರು ಮೈಸೂರು ದೇಶದ ಮಂಡ್ಯ ಜಿಲ್ಲಾ ಮೇಗಳಪುರ ಎಂಬ ಒಂದು ಸಣ್ಣ ಹಳ್ಳಿ

---

(೧) (ಟೀಪು:–ಈ ಶರಣರ ವಿಚಾರವು ಕುಂದೂರು ಗ್ರಾಮಕ್ಕೆ ನಮ್ಮ ಸ್ನೇಹಿತರೊಡಗೂಡಿ ಪ್ರವಾಸ ಹೋಗಿದ್ದಾಗ ಆ ಶರಣರನ್ನು ಕಣ್ಣಾರೆ ನೋಡಿದ ಒಬ್ಬ ಮಹಾಶಯರಿಂದ ಗೊಗ್ಗಪ್ಪ ಶರಣರ ಮೇಲಿನ ವಿಚಾರವು ತಿಳಿಯ ಬಂದವು.)

ಯಲ್ಲಿ ಒಂದು ಬಡ ಕುಟುಂಬದಲ್ಲಿ ಜನಿಸಿದರು. (ಕಾಲಃ-ಈಗ್ಗೆ ೭೦-೮೦ ವರುಷಗಳಹಿಂದೆ.) ಇವರ ತಂದೆಯುವರು ಒಬ್ಬ ಯಜಮಾನನ ಹತ್ತಿರ ಕುರಿಗಳನ್ನು ಮೇಯಿಸುವ ಕಾಯಕಕ್ಕೆ ಚಿಕ್ಕ ವಯಸ್ಸಿನಲ್ಲಿ ಹಾಕಿದರು. ಆಗಿನ ಕಾಲದಲ್ಲಿ ಕ್ರೂರ ಮೃಗಗಳ ಹಾವಳಿ ಇದ್ದಿತು. ಗೊಗ್ಗಪ್ಪನು ಮೇಯಿಸುತ್ತಿದ್ದ ಅನೇಕ ಕುರಿಗಳು ಆ ಮೃಗಗಳ ಪಾಲಾದುವು. ಇದರಿಂದ ಯಜಮಾನನಿಗೆ ನಷ್ಟ ಉಂಟಾಗಿ ಗೊಗ್ಗಪ್ಪನನ್ನು ಮನೆ ಬಿಟ್ಟು ಓಡಿಸಿದನು. ಬಾಲ್ಯದಲ್ಲೇ ಗೊಗ್ಗಪ್ಪನಿಗೆ ದೇವರಲ್ಲಿ ಅಸಾಧಾರಣ ಭಕ್ತಿಯು ಇದ್ದಿತು. ಯಜಮಾನನ ಮನೆ ಬಿಟ್ಟಮೇಲೆ ಅನೇಕ ಶಿವ ಶರಣರ ಪವಿತ್ರ ಕ್ಷೇತ್ರಗಳಲ್ಲಿ ಪ್ರವಾಸಮಾಡಿ ಶಿವದೀಕ್ಷೆಯನ್ನು ಹೊಂದಿದರು. ಪುನಃ ತಮ್ಮ ಪ್ರವಾಸವನ್ನು ಮುಂದುವರಿಸಿ ಮಳವಳ್ಳಿ ತಾಲ್ಲೋಕು ಕುಂದೂರು ಎಂಬ ಗ್ರಾಮಕ್ಕೆ ಬಂದರು. ಅಲ್ಲಿ ಅನೇಕ ವೀರಶೈವರು ಅವರನ್ನು ತಮ್ಮ ಮನೆಗಳಿಗೆ ಕರೆದುಕೊಂಡು ಹೋಗಿ ಅವರನ್ನು ಅತ್ಯಂತ ಭಕ್ತಿಯಿಂದ ಆರಾಧಿಸಲು ಮೊದಲು ಮಾಡಿದರು. ಅವರ ಶಿವಪೂಜಾ ನಿಷ್ಠೆಯನ್ನು ನೋಡಿ ಎಲ್ಲರೂ ಬೆರಗಾದರು. ಅದೇ ಗ್ರಾಮದಲ್ಲಿ ಅವರಿಗೊಂದು ಸಣ್ಣ ಗುಡಿಸಲೊಂದನ್ನು ಕಟ್ಟಿ ಅಲ್ಲಿಯೇ ವಾಸ ಮಾಡುವಂತೆ ಮಾಡಿದರು. ಅಲ್ಲಿಯೇ ಕೆಲವು ಕಾಲವಿದ್ದು ತಮ್ಮ ಸ್ವಸ್ಥಳಕ್ಕೆ ಹಿಂತಿರುಗಿದರು.

ಅವರು ಹಿಂತಿರುಗುವ ಸ್ವಲ್ಪ ದಿನಗಳ ಹಿಂದೆ ಒಂದು ಮಹತ್ವದ ದೃಷ್ಟಾಂತವು ನಡೆಯಿತು. ಯಾರೋ ಒಬ್ಬರು ಅವರನ್ನು ದೂಷಣೆ ಮಾಡಲು ಅವರ ದನಕರುಗಳೆಲ್ಲಾ ಆಹಾರ ನೀರನ್ನು ಬಿಟ್ಟವು. ತಾನು ಆ ಶರಣರ ದೂಷಣೆ ಮಾಡಿದ ನಿಮಿತ್ತ ಈ ರೀತಿಯಾಗಿರಬೇಕೆಂದು ತಿಳಿದು ತನ್ನ ತಪ್ಪನ್ನು ಕ್ಷಮಿಸಬೇಕೆಂದು ಆ ಶರಣರನ್ನು ಬೇಡಲು ಅವರ ತಪ್ಪನ್ನು ಕ್ಷಮಿಸಿದರು. ಆ ದನಕರುಗಳ ಕುತ್ತಿಗೆಗೆ "ಗೊಗ್ಗಪ್ಪ" ಎಂದು ಬರೆದಿರುವ ಓಲೆ ಗರಿಗಳನ್ನು ಕಟ್ಟಬೇಕೆಂದು ಹೇಳಿದರು. ಅವರು ಅದೇ ರೀತಿ ಮಾಡಲು ಅವುಗಳು ಎಂದಿನಂತೆ ಆಹಾರ ನೀರನ್ನು ತೆಗೆದುಕೊಳ್ಳುವುದಕ್ಕೆ ಪ್ರಾರಂಭ ಮಾಡಿದುವು.

ಗೊಗ್ಗಪ್ಪನವರು ಅವರ ಗ್ರಾಮಕ್ಕೆ ಹೊರಟು ಹೋದಮೇಲೆ ಕುಂದೂರು ಗ್ರಾಮಸ್ಥರು ಅವರು ವಾಸ ಮಾಡುತ್ತಿದ್ದ ಸ್ಥಳದಲ್ಲಿ ಒಂದು

ಮಂಟಪವನ್ನು ಕಟ್ಟಿಸಿ ಅಲ್ಲಿ ಅವರ ಪಾದರಕ್ಷೆಗಳನ್ನು ಇಟ್ಟು ಅದಕ್ಕೆ ಪೂಜೆಯನ್ನು ಮಾಡುತ್ತಾ ಬಂದರು. ಆ ಗ್ರಾಮದಲ್ಲಿ ಯಾವ ರೋಗಗಳು ತಲೆದೋರಿದರೂ ೮೮ ದಿವಸ ಪ್ರತಿ ನಿತ್ಯವೂ ಆತನ ಹೆಸರಿನಲ್ಲಿ ಭಜನೆ ನಡೆಸಿದ ತತ್‍ಕ್ಷಣವೇ ಮಾಯವಾಗುತ್ತವೆ. ಅಲ್ಲಿ ಯಾವ ಪ್ರಾಣಿಯು ಕಚ್ಚಿದರೂ ಯಾವ ತೊಂದರೆಯೂ ಉಂಟಾಗುವುದಿಲ್ಲ. ಯಾವ ತೊಂದರೆ ಬಂದರೂ ಗೊಗ್ಗಪ್ಪನವರ ಹೆಸರಿನಲ್ಲಿ ಕಾಣಿಕೆ ಕಟ್ಟಿಕೊಂಡರೆ ಸಾಕು, ಆ ತೊಂದರೆಗಳು ನಿವಾರಣೆಯಾಗುವವು. ಇಷ್ಟು ಮಹತ್ವವನ್ನು ತೋರಿಸಿದ ಆ ವ್ಯಕ್ತಿಯ ನಾಮ ಸ್ಮರಣೆಯು ಯಾವ ಕಾಲಕ್ಕೂ ಅಳಿದುಹೋಗುವ ಹಾಗಿಲ್ಲ. ಆ ಶರಣರು ಹುಟ್ಟಿದ ಸ್ಥಳದಲ್ಲಿ ಇಲ್ಲದಿರುವ ಮಹತ್ವ ಅವರು ನೆಲೆಸಿದ ಸ್ಥಳದಲ್ಲಿ ಆ ಮಹತ್ವವು ಇರುವುದು ಆಶ್ಚರ್ಯವೇ ಸರಿಯು.

---

# ಬಿಜ್ಜ ಮಹಾದೇವಿ.

ಲೇಃ— ಶ್ರೀಮತಿ ಮುಕ್ತಾಯಕ್ಕ ಹಾಲಪ್ಪನವರ-ಮು. ಬಾಗಲಕೋಟ.

---

"ನಮ್ಮ ನಾಡು ಭಕ್ತಿಯ ಬೀಡು, ಜ್ಞಾನದ ತಾಯ್ನಾಡು, ಅಧ್ಯಾತ್ಮದ ನೆಲೆವೀಡು, ಸಂಸ್ಕೃತಿಯ ಮಡು" ಎಂದು ಹೇಳಿದಲ್ಲಿ ಇದೊಂದು ಹೆಮ್ಮೆಯ ಮಾತೆನಿಸಲಿಕ್ಕಿಲ್ಲ. ಇದರ ನಿದರ್ಶನಕ್ಕೆ ಕರ್ನಾಟಕದ ನವೋದಯ (Renaissance) ದ ನಂತರ ವಿವಧ ರಂಗಗಳಲ್ಲಿ ತಲೆದೋರಿದ ಜನರ ನವಜೀವನವೇ ಸಾಕ್ಷಿಯಾಗಿದೆ. ಅಂದು ಪುರುಷರಂತೆ ಸ್ತ್ರೀಯರೂ ಲಿಂಗಧಾರಿಗಳಾಗಿ ಭಕ್ತಿಮಾರ್ಗವನ್ನು ಆಶ್ರಯಿಸಿ, ಶಿವ ಸಾಕ್ಷಾತ್ಕಾರವನ್ನೈದಿ ಜೀವನವನ್ನು ಸಾರ್ಥಕ್ಯಗೊಳಿಸಿದರು. ಭಕ್ತಿ ಜ್ಞಾನ ಸಾಧನದಿಂದ ಮಹಾದೇವಿಯಕ್ಕನು ಶಿವಾನುಭವ ಮಂಟಪದಲ್ಲಿ ಶ್ರೇಷ್ಠ ಸ್ಥಾನವನ್ನು ಪಡೆದಿದ್ದಳು. ಇನ್ನು, ವಚನಕಾರ್ತಿಯರಲ್ಲಿ ಪ್ರಸಿದ್ಧರಾದವರಲ್ಲಿ ಮುಕ್ತಾಯಕ್ಕ, ಸತ್ಯಕ್ಕಗಳನ್ನೂ ಶಿವಭಕ್ತೆಯರಲ್ಲಿ ಪಿಟ್ಟವ್ವೆ, ಪರಮೆನಾಚಿಯರನ್ನೂ ನಾವು ಉಲ್ಲೇಖಿಸಬಹುದು. ಪ್ರಸ್ತುತ ದಾಸ್ಯದಲ್ಲಿ ತೊಳಲಿ ಬಳಲುತ್ತಿರುವ ಮಹಿಳೆಯರಿಗೆ, ಹಿಂದಿನ 'ಸ್ತ್ರೀಜೀವನ'ದ ಅರಿವು ಉಂಟಾಗಿ ಪುನಃ ಇಂದಿನ ಕನ್ನಡತಿಯರ ಸರ್ವತೋಮುಖವಾದ ಅಭ್ಯುದಯದ

ಸಾಧನೆಗೆ ಸ್ಫೂರ್ತಿಯನ್ನು ನೀಡಬಹುದಾದ-ನೀಡಬಹುದೆಂಬ, ನಂಬುಗೆಯಿಂದ, ಮೌಗ್ಧ್ಯೆಯಾದರೂ ಶಿವನಿಗೋಸುಗ ಹೃದಯ ವಿದಗ್ಧೆಯಾದ 'ಬಿಜ್ಜಮಹಾದೇವಿ'ಯ ಚರಿತ್ರೆಯನ್ನು ಇಲ್ಲಿ ವಿವರಿಸುವೆ.

ಪಾಶ್ಚಾತ್ಯ ಸಂಸ್ಕೃತಿಗೆ ಮೋಹಪರವಶರಾಗಿ ಭಕ್ತಿಮಾರ್ಗಕ್ಕೆ ಮನ್ನಣೆಯನ್ನೀಯದ ಕನ್ನಡಿಗ--ಕನ್ನಡಿತಿಯರಿಗೆ, ಕೊಂಚವಾದರೂ ಈ 'ಬಿಜ್ಜಮಹಾದೇವಿ'ಯ ಭಕ್ತಿಯ ಆದರ್ಶವು ಆಸಕ್ತಿಯನ್ನುಂಟುಮಾಡಿದಲ್ಲಿ ನನ್ನ ಲೇಖನವು ಸಾಫಲ್ಯವಾಯಿತೆಂದು ಭಾವಿಸುವೆ.

ಯಾವಾಗಲೂ ಮಹೇಶನ ಧ್ಯಾನದಲ್ಲಿ ತಲ್ಲೀನಳಾಗಿ, ಗುಣಗಳೇ ಆಭರಣಗಳಾಗಿದ್ದ ಬಿಜ್ಜಮಹಾದೇವಿಯೆಂಬ ಓರ್ವ ಶಿವಭಕ್ತೆಯು ಕೀರ್ತಿಯನ್ನು ಹೊಂದಿದವಳಾಗಿ ಬಿಜ್ಜಾವರದಲ್ಲಿ ಶೋಭಿಸುತ್ತಿದ್ದಳು. ಒಂದಾನೊಂದು ದಿನ ಆ ಮುಗ್ಧಭಕ್ತೆಯು, ಈಶ್ವರನ ಅನಂತ ರೂಪಗಳನ್ನು ಮನಸ್ಸಿನಲ್ಲಿಯೇ ನೋಡುತ್ತಿರಲಾಗಿ, 'ಉಮಾಪತಿಗೆ ತಾಯಿ ಇಲ್ಲ' ವೆಂಬ ವಿಚಾರವು ಅವಳ ಮನಗಡಲನ್ನು ಕಲಕಿತು. ಆಗ ಅವಳು ನೆಟ್ಟದೃಷ್ಟಿಯಿಂದ ಕಪೋಲದಲ್ಲಿ ಕೈಯ್ಯನ್ನಿಟ್ಟುಕೊಂಡು ಬಾಡಿದ ಮುಖವುಳ್ಳವಳಾಗಿ ಅತಿ ವಿಷಾದದಿಂದ ಶಂಕರನಿಗಾಗಿ ವಿವಿಧ ತರ್ಕವಿತರ್ಕಗಳೊಂದಿಗೆ ಚಿಂತಿಸಹತ್ತಿದಳು. ಅವಳ ತರ್ಕವು ಇಂದಿನ ತರ್ಕಜ್ಞರಿಗೂ ಕೂಡ ದಿಗಿಲು ಹುಟ್ಟಿಸುವಂತಹದೂ ಅದ್ಭುತವಾದುದೂ ಇದೆ. ಹೇಗೆಂದರೆ:-- ಗಿರಿಜಾವಲ್ಲಭಗೆ, ಹೆಂಡಿರು, ಮಕ್ಕಳು, ಹಿತಚಿಂತಕರು, ಕಿಂಕರರು ಎಲ್ಲರೂ ಉಂಟು; ಆದರೆ ತಾನು ಮಾತ್ರ ತಾಯಿ ಇಲ್ಲದೆ ಹೇಗೆ ಹುಟ್ಟಿದನು? ಎಂಬುದೇ ಈ ಅದ್ಭುತವಾದ ಸಮಸ್ಯೆ.

ಅವಳು ಆಲೋಚಿಸಿದುದೇನೆಂದರೆ:--ನಿಜವಾಗಿ ವಿಚಾರಿಸಿ ನೋಡಿದಲ್ಲಿ ಇವನು ಹುಟ್ಟಿದ ಮರುಕ್ಷಣವೇ ತಾಯಿಯು ಮೃತಪಟ್ಟಿರಬೇಕು. ಇಲ್ಲವಾದರೆ ಈಶ್ವರನು ಪಿಶಾಚಿಗಳ ನಿವಾಸಸ್ಥಾನವಾದ ಸುಡುಗಾಡಿನಲ್ಲಿ ಭೂತಗಳ ಸಂಗಡ ಆಟವಾಡಿ 'ಭೂತಪತಿ' ಎಂಬ ಹೆಸರನ್ನು ಪಡೆಯುತ್ತಿದ್ದನೇ? ಇಲ್ಲ. ಇನ್ನು ಎಣ್ಣೆ, ಹಣಿಗೆಗಳನ್ನು ಕಾಣದೆ ಜಡೆಗಟ್ಟಿದ ಕೂದಲುಳ್ಳ ತಲೆಯೂ ವೇಳೆ, ಅಪವೇಳೆಯೆನ್ನದೆ ಅಲೆಯುವದರಿಂದ ಕೆಂಪಾದ ಕಣ್ಣುಗಳೂ, ಧೂಳಿಯಿಂದ ಆವರಿಸಲ್ಪಟ್ಟ ಅಂಗಾಂಗಗಳೂ ಸೊರಗಿದ ದೇಹವೂ ಇವೆಲ್ಲವು ಶಂಕರನಿಗೆ ತಾಯಿಯಿಲ್ಲವೆಂಬುದನ್ನು ಸ್ಪಷ್ಟಗೊಳಿಸುವದಿಲ್ಲವೇ?

ಒಂದು ವೇಳೆ ತಾಯಿ ಇದ್ದದ್ದಾದರೆ, ಹಾವಿನ ಆಭರಣಗಳನ್ನೂ ತಲೆಬುರುಡೆ(Skull)ಗಳ ಮಾಲೆಯನ್ನೂ ಧರಿಸಲು ಬಿಡುತ್ತಿದ್ದಳೇ? ಅಲ್ಲಲ್ಲಿ ಭಿಕ್ಷಾಟನ ಮಾಡಿ ಹೊಟ್ಟೆಹೊರೆದುಕೊಂಡರೆ ಸುಮ್ಮನಿರುತ್ತಿದ್ದಳೇ? ಅಲ್ಲದೆ ರಾಕ್ಷಸ, ಆನೆ, ಹುಲಿ, ಮೊದಲಾದವುಗಳ ಚರ್ಮವನ್ನು ಮೈಮೇಲೆ ಹೊದ್ದುಕೊಂಡರೆ, ಬಿಡಿಸಲಾರಳೇನು? ಮಗನು ಮೂರ್ಖನಾದರೆ, ತಾಯಿಯು ತಾಳಿಕೊಳ್ಳುವಳೇ? ಬಾಳುವೆಯ ಆಗು ಹೋಗುಗಳನ್ನೇನೂ ವಿಚಾರಿಸಲಾರದೆ ಯಾವಾಗಲೂ ತನ್ನ ಹೆಂಡತಿಯರಾದ ಗಂಗೆ-ನಾರಿಯರನ್ನು ಜಡೆ ಹಾಗೂ ತೊಡೆಗಳಲ್ಲಿ ಕುಳ್ಳಿರಿಸಿಕೊಂಡಿರುವದನ್ನು ಮುಕ್ಕಣ್ಣನ ಮಾತೆ ಹೇಗೆ ಸಹಿಸುತ್ತಿದ್ದಳು? ವೀರಾದಿ ವೀರನಾದ ಅರ್ಜುನನು ಬೇಡನಾಗಿದ್ದ ಭೂತೇಶನನ್ನು ಕಾಲಿನಿಂದ ಒವೆದನು. ಅತುಲ ಬಲಶಾಲಿಯಾದ ಸಾಂಖ್ಯನೆಂಬವನು ಪೂಜೆಗೆ ಪುಷ್ಪಗಳು ದೊರಕದಾಗಲು ದೊಡ್ಡ ದೊಡ್ಡ ಕಲ್ಲುಗಳಿಂದ ಹೊಡೆದನು; ಮತ್ತು ಪರಮ ಶಿವಭಕ್ತನಾದ ಬಾಣಾಸುರನು ಮಹೇಶನನ್ನೇ ಅರಮನೆಯ ದ್ವಾರಪಾಲಕನನ್ನಾಗಿ ನೇಮಿಸಿ, ದೂತನೆಂದು ಅವನಿಂದ ಅನೇಕಾನೇಕ ಕಠೋರ ಕೆಲಸಗಳನ್ನು ಮಾಡಿಸಿಕೊಂಡನಲ್ಲ! ಅಯ್ಯೋ ನಿಜವಾಗಿಯೂ ಇವನು ತಾಯಿಯಿಲ್ಲದ ಪರದೇಶಿ!!

ಈ ಬಗೆಯಾಗಿ ವಿಧವಿಧ ರೀತಿಯಲ್ಲಿ ಶೋಕಗೊಂಡು, ಕಳವಳಪಟ್ಟು, ತಾಯಿಯಿಲ್ಲದ ಪರದೇಶಿ ಮಗುವಿಗೆ ತಾನಾದರೂ ತಾಯಿಯಾಗಿ ರಕ್ಷಿಸುವೆನೆಂದು ಪ್ರೀತಿಯಿಂದಲೂ, ಭಕ್ತಿಯಿಂದಲೂ, ತನಗೆ ಬಾಲಕನನ್ನು ದಯಪಾಲಿಸುವಪಾಗಿ, ಇಷ್ಟಲಿಂಗದ ಅರ್ಚನೆಗೈಯ್ಯ ಹತ್ತಿದಳು.

ಮುಂದೆ ಭಕ್ತವತ್ಸಲನಾದ ಭಗವಂತನು ಭಕ್ತೆಯ ಭವನದಲ್ಲಿ ಬಾಲಕನಾಗಿ ಜನಿಸಿದನು. ಶಿಶುವಿನ ಮುದ್ದುಮೊಗವನ್ನು ನೋಡಿನೋಡಿ ಹರುಷವು ಹೊರಸೂಸಲು, ಅಪ್ಪಿಕೊಂಡು, ಮುದ್ದಿಡುತ್ತಿದ್ದಳು. ಮಲಗಿ ಅದೇ ಎಚ್ಚತ್ತು ಅರ್ಧಮುಚ್ಚಿದಂಥ ಕಣ್ಣುಗಳುಳ್ಳ ಬಾಲಕನ ಅಳುವ ಧ್ವನಿಯು ವೀಣೆಯ ಧ್ವನಿಯ ಹಾಗೆ ಇರಲು, ತಾವರೆವರ್ಣದ ಕೈ ಕಾಲುಗಳು ಅತ್ತಿತ್ತ ಚಲಿಸುತ್ತಿರುವ ಬಾಲಕನಿಗೆ ಕೂಡಲೇ ಮಹಾ ಮಾತೆಯಾದ ಮಹಾದೇವಿಯು ಅವನಿಗೆ ಮೊಲೆಯನ್ನು

ಉಣಿಸುತ್ತಿದ್ದಳು. ಆಳುವದು ಮತ್ತಿಷ್ಟು ಹೆಚ್ಚಾಗಲು ಹೊಸ ತೊಟ್ಟಿಲವನ್ನು ತರಿಸಿ, ಹಂಸತೂಲಿಕಾ ತಲ್ಪದಿಂದ ಸಿಂಗಾರ ಮಾಡಿ, ಬಗೆಬಗೆಯ ರೀತಿಯಿಂದ ಸಮಾಧಾನಗೊಳಿಸಿ ಮಂಜುಳವಾದ ಸ್ವರದಿಂದ ಹಾಡುತ್ತಿದ್ದಳು. ಮಹೇಶನನ್ನೇ ಮಗನನ್ನಾಗಿ ಮಾಡಿಕೊಂಡು ಮನೋಭಿಲಾಷೆಯನ್ನು ಈಡೇರಿಸಿಕೊಂಡ ಈ ಮಹಾದೇವಿಗೆ ಅತ್ತು ಕಾಡಿಸುವ ಕೂಸನ್ನು ಜೋಗುಳವಾಡಿ ಸಂತೋಷ ಪಡಿಸುವದು ಅಸಾಧ್ಯವೇ? ಮಹಾದೇವಿಯು ಜೋಗುಳವನ್ನು ಇದ್ದಕ್ಕಿದ್ದಹಾಗೆಯೇ ಇಲ್ಲಿ ಉಸಿರುವೆ:—

**ತ್ರಿಪುಡೆ: –**

ಪಾವನಾತ್ಮಕ ಪನ್ನಗೇಂದ್ರಕಲಾಪ ಜೋ ಜೋ ಚಂದ್ರಕ।
ಳಾವತಂಸಕ ಚಂಚದುಜ್ವಳರೂಪ ಜೋ ಜೋ ಮುದ್ದುಗ।
ಚಂಡತಾಂಡವ ಚಾಲಿತಾಬ್ಜಭವಾಂಡ ಜೋ ಜೋ ದಂಡಿತ।
ದಂಡಪಾಣಿ ಫಣೀಂದ್ರ ಕುಂಡಲಗಂಡ ಜೋ ಜೋ ಸನ್ನುತ ॥
ಪ್ರಣವಸಾರ ಸರೋಜರಾಜಮರಾಳ ಜೋ ಜೋ ಮಂಗಳ।
ಗುಣಸಮುದ್ರ ಮುನೀಂದ್ರ ಸನ್ನುತಿಲೋಲ ಜೋ ಜೋ ವತ್ಸಲ ॥
ದಕ್ಷಯಾಗ ಸಮಾಗತಾ ಮರಮರ್ದಿ ಜೋ ಜೋ ದಂತಿತ।
ರಕ್ಷು ರಾಕ್ಷಸಕೃತ್ತಿ ವಸ್ತ್ರ ಕಪರ್ದಿ ಜೋ ಜೋ ಶಂಕರಾ!!
ಅಂಬುಜಾಂಬಕ ಲೋಚನಾಂಬುಜ ಪಾದ ಜೋ ಜೋ ಪುಷ್ಪಕ
ಳಂಬ ದರ್ಪವಿಭಂಗ ಜಲ್ಪಿತದೇವ ಜೋ ಜೋ ತ್ರ್ಯಂಬಕ ॥

ತರುವಾಯ ಅಂಗಪ್ರತ್ಯಂಗಗಳಿಗೆ ಎಳ್ಳೆಣ್ಣೆಯನ್ನು ಪೂಸಿ, ನಸು ಬಿಸಿಯಾದ ನೀರಿನಿಂದ ಸ್ನಾನ ಮಾಡಿಸಿ, ಕಂಕುಳದಲ್ಲಿಟ್ಟುಕೊಂಡು, ಶ್ರೇಷ್ಠವಾದ ತನ್ನ ದುಕೂಲದಂಚಿನ ಸೀರೆಯ ಸೆರಗಿನಿಂದ, ಆ ನೀರೆಯು ತರಳನ ಶರೀರವನ್ನು ಒರೆಯಿಸಿ, ಕಣ್ಣು-ಕಿವಿಗಳನ್ನು ಸಾವಧಾನವಾಗಿ ಊದಿ, ಕಾಡಿಗೆಯ ರೇಖೆಯನ್ನೆಳೆದು, ಚೆನ್ನಾಗಿ ಹೊದಿಸಿ ರಕ್ಷಿಸುತ್ತಿದ್ದಳು.

ಕಾಲಕಾಲಕ್ಕೆ ಹೇಗೆ ಶಿವನು ನಂಬಿಯಣ್ಣನಿಗೆ ಗೆಳೆಯನಾಗಿ, ಕುಂಬಾರ ಗುಂಡಯ್ಯನಿಗೆ ನಟನಾಗಿ, ಚಂಡನೆಂಬ ಬಾಲಕನಿಗೆ ತಂದೆಯಾಗಿ, ಆದಯ್ಯನಿಗೆ ವೇಳಾಚರನಾಗಿ ಇನ್ನೂ ಅನೇಕಾನೇಕ ಭಕ್ತರ

ಭಕ್ತಿಗೊಲಿದು ಅವರ ಅಭೀಷ್ಟದಂತೆ ರೂಪಗಳನ್ನು ಧರಿಸಿದಂಥ ಜನನ ಮರಣರಹಿತನಾದ ವಿಶ್ವೇಶ್ವರನು ಇಲ್ಲಿ ಮಹಾದೇವಿಯ ಭಕ್ತಿಗೆ ಮೆಚ್ಚಿ, ಶಿಶುವಾಗಿ, ಅವಳು ಮಾಡುವಂಥ ಹಿತೋಪಚಾರಗಳನ್ನು ಅಂಗೀಕರಿಸುತ್ತ ನಾನಾತರದ ಆಟ ನೋಟಗಳಿಂದ 'ಬಿಜ್ಜಮಹಾದೇವಿ'ಯನ್ನು ಆನಂದಗೊಳಿಸುತ್ತಿದ್ದುದು ಏನಾಶ್ಚರ್ಯ !

ಈ ಬಗೆಯಾಗಿ ಭಕ್ತರ ಸಮೂಹವನ್ನು ಪರೀಕ್ಷಿಸಿ ಅವರ ಮಹಿಮೆಯನ್ನು ಕೊಂಡಾಡಿಸುತ್ತಿರುವ ಶಂಕರನು ಒಂದು ದಿನ ಮುಗ್ಧಭಕ್ತೆ ಬಿಜ್ಜಮಹಾದೇವಿಯ ಕೀರ್ತಿಜ್ಯೋತಿಯನ್ನು ಜಗತ್ತಿನಲ್ಲಿ ಬೆಳಗಿಸಲು ಒಯಸಿ ಒಂದುಪಾಯವನ್ನು ಬಗೆದು ಕಣ್ಣುಮುಚ್ಚಿ, ಮುಖವುಬಾಡಿ, ಕೈಕಾಲುಗಳು ತಣ್ಣಗಾದವನಂತೆ ನಟಿಸಿದನು. ಇದನ್ನು ನೋಡಿ ಮಹಾದೇವಿಯ ಹೃದಯವು ದುಃಖದಿಂದ ಭಾರವಾಯಿತು. ಅವಳು ಶಿಶುವನ್ನು ಎತ್ತಿಕೊಂಡು ಮೊಲೆಯುಣಿಸಲು ಯತ್ನಿಸಿದಳು; ಆದರೆ ಆ ಶಿಶುವು ಮೊಲೆಯನ್ನೂ ಸಹ ಹಿಡಿಯದೆ, ಅವಳ ಕೈಯಲ್ಲಿ ಒಂದೇ ಸವನೇ ಆಳಹತ್ತಿದನು. ಬಿರುಗಾಳಿ ಬೀಸಲು ಬಾಗಿಲು ತನ್ನಷ್ಟಕ್ಕೆ ತಾನೇ ತೆರೆಯುವಂತೆ ಅವಳ ಶೋಕಾನಿಲದಿಂದ ಹೃದ್ಬಾಗಿಲು ತೆರೆಯಿತು. ಈ ಪರಿ ತನ್ನ ಶಿಶುವಿಗೆ ಒದಗಿದ ದುರವಸ್ಥೆಯನ್ನು ಕಂಡು, ಗಾಬರಿಯಾಗಿ, ನಡುಗಿ ನೀರೊಡೆದು ನಿಟ್ಟುಸಿರು ಬಿಟ್ಟಳು. ತಾನೂ ಅವಿರತವಾಗಿ ಅಳುತ್ತ ಬಾಯಾರಿದವಳಾಗಿ 'ಅಯ್ಯೋ ಮಗನೇ, ನಾನು ನಿನ್ನನ್ನು ನಂಬಿಕೆಟ್ಟೆನು. ನಿನಗೆ ಈ ಬೇನೆ ಬಂದುದೇಕೆ? ' ಎಂದು ಪರಿಪರಿಯಾಗಿ ಹಲುಬಿದಳು.

ಅವಳು ದುಃಖಿಸಿದುದೇನೆಂದರೆ—ಮಗುವೇ, ನಿನ್ನ ಮುದ್ದು ಮುಖದಲ್ಲಿ ಮುಗುಳು ನಗೆ ಹೊರಡಲು ನಿನ್ನ ಚಿಗುರು ಹಲ್ಲುಗಳು ನಗೆಯೆಂಬ ಬಳ್ಳಿಯು ಬಿಟ್ಟಂಥ ಮೊಗ್ಗೆಗಳಂತೆ ತೋರುತ್ತಿದ್ದವು. ನೀನು ಕಣ್ಣುಗಳನ್ನರಳಿಸಿ ನೋಡುತ್ತ ಬಾಯ್ದೆರದು ಮೊಲೆಯುಣ್ಣುತ್ತಿದ್ದಿ. ಮಾತನಾಡುವ ಬಯಕೆಯಾದರೆ, ತೊದಲ್ನುಡಿಯಿಂದ ವಿನೋದಿಸುತ್ತಿದ್ದಿ. ಹರುಷವು ಹೆಚ್ಚಾಗಲು ನನ್ನ ಕೈ ಬೆರಳನ್ನು ಹಿಡಿದು ಏಳಲೆತ್ನಿಸುತ್ತಿದ್ದಿ. ಹೀಗೆ ಅಗಣಿತ ಭಾವ ಭಂಗಿಗಳನ್ನು ತೋರಿಸಿ ಶೋಭಿಸುತ್ತಲಿದ್ದ ಮಗುವೇ, ನಿನ್ನ ದೇಹಕ್ಕೆ ಬಂದಂಥ ಈ ಬಳಲಿಕೆಯನ್ನು ಹೇಗೆ ನೋಡಲಿ !

"ಅಯ್ಯೋ ನನ್ನ ಜೀವರತ್ನವು ಕಾಂತಿ ಹೀನವಾಯಿತೇ ! ರತ್ನ ಖಚಿತವಾದ ಹೊಳೆಯುವ ಕನ್ನಡಿಯು ಮಲಿನವಾಯಿತೇ !! ಮನೋಹರವಾದ ಹೂವಿನ ಮಾಲೆಯು ಬಾಡಿಹೋಯಿತೇ ! ! ಅಮೃತರಸದ ಒರತೆಯು ಒಣಗಿಹೋಯಿತಲ್ಲ ಎಂದು ದುಃಖಾತಿರೇಕದಿಂದ ಆ ಮಗುವನ್ನು ನೋಡಿ ಕಂಬನಿಗರೆದಳು. "ಸಂತೋಷದಿಂದಿದ್ದ ಬಾಲಕನಿಗೆ ಒಮ್ಮಿಂದೊಮ್ಮೆಲೇ ಈ ರೋಗವು ಬಂದಿತು; ಇನ್ನೇನು ಮಾಡಲಿ? ಇಂಥರೋಗಕ್ಕೆ ಔಷಧೋಪಚಾರ ಬಲ್ಲವರು ಯಾರೂ ಇಲ್ಲ!" ಎಂದು ಹಾದಿಗಾಣದವಳಾಗಿ ಚಿಂತೆಯಿಂದ ಕೊರಗಿದಳು. ಮತ್ತೆ ತನ್ನ ಜೀವಕ್ಕೆ ಸರಿಸಮಾನನಾದ ಮಗನಿಗೆ ಆದ ಈ ಘನಘೋರ ಬಳಲಿಕೆಯನ್ನು ನೋಡುವದಕ್ಕಿಂತಲೂ, ಮರಣವೇ ಉಚಿತವೆಂದು ಪ್ರಾಣ ಕಳೆದುಕೊಳ್ಳಲು ನಿಶ್ಚಯಿಸಿ, ಕೈಯಲ್ಲಿ ಖಡ್ಗವನ್ನು ಗಟ್ಟಿಯಾಗಿ ಹಿಡಿದು, ತನ್ನ ಕತ್ತನ್ನು ಕತ್ತರಿಸಿಕೊಳ್ಳುತ್ತಿರುವಾಗ, ಬಾಲಕನಾದ ಚಂದ್ರಚೂಡನು ಅವಳ ಭಕ್ತಿಗೆ ಮೆಚ್ಚಿ; 'ತಡೆ, ತಡೆ ಮಾತೆ!' ಎಂದು ಅವಳನ್ನು ನಿವಾರಿಸಿ, ಸುಶೋಭಿಸುವ ಬಾಲಚಂದ್ರಧರನೂ ರಾಶಿರಾಶಿಯಾದ ಜಡೆಯುಳ್ಳವನೂ, ಗಂಗಾನದಿಯನ್ನು ಹೊತ್ತಂಥವನೂ, ಫಾಲನೇತ್ರನೂ, ಉರಗಾಭರಣನೂ, ನೀಲಕಂಧರನೂ, ತ್ರಿಶೂಲಧಾರಿಯೂ, ಹುಲಿ, ಸಿಂಹಗಳಿಂದ ನಿರ್ಭೀತನೂ, ಚರಾಚರಗಳ ಸಂರಕ್ಷಣಕರ್ತನೂ, ಮನೋಹರವಾದ ಭಸ್ಮವನ್ನು ಬಳಿದುಕೊಂಡಂಥವನೂ ಆದ ಶಿವನು ಬಹುವಿಧವಾಗಿ ಬಳಲುತ್ತಿರುವ ಮಹಾದೇವಿಗೆ ತನ್ನ ನಿಷ್ಕಲಂಕ ನಿಜಸ್ವರೂಪದಿಂದ ಕಾಣಿಸಿಕೊಂಡನು.

ಕೆಲವುಕಾಲ ಗತಿಸಿದಮೇಲೆ, ಮಹಾದೇವಿಯ ಪಾಲನೆ ಪೋಷಣೆಗಳಿಂದ ಬೆಳೆದು ಬಲವಂತನಾದ ಭಗವಂತನು, ತರುಣಾವಸ್ಥೆಯನ್ನು ಹೊಂದಿ, ಎಲ್ಲದೇವತೆಗಳೊಂದಿಗೆ, ಅವಳಿಗೆ ಪ್ರತ್ಯಕ್ಷನಾಗಿ "ಸಕಲ ಜನರಿಂದ ಹೊಗಳಿಸಿಕೊಳ್ಳಲ್ಪಟ್ಟಂಥ ತಾಯಿಯೆ, ನಿಜವಾಗಿಯೂ ನಿನ್ನ ಹೆಸರಿಗೆ ಒಪ್ಪುವಂತೆ ನನಗೂ ಮತ್ತು ಈ ಎಲ್ಲ ದೇವತೆಗಳ ಸಮೂಹಕ್ಕೂ ಮಹಾಮಾತೆ ಎಂದು ನಮ್ರವಾಗಿ ಕೊಂಡಾಡುತ್ತ, ನಿನಗೆ ಇಷ್ಟವೆನಿಸಿದ ವರವನ್ನು ಕೇಳು." ಎನ್ನಲು ಅವಳು ಮಂದಸ್ಮಿತಳಾಗಿ ಪ್ರೀತಿಯಿಂದ "ನನಗೆ ಯಾವ ವರವೂ ಬೇಕಿಲ್ಲ; ನೀನು ಮಾತ್ರ ರೋಗರಹಿತನಾಗಿ ಸುಖದಿಂದ ಇರಲು ಭೂಮಿಯ ಮೇಲಿನ ಜನರಿಂದ

ಹೊಗಳಿಸಿಕೊಳ್ಳುವಂಥ ಅನಂತಕೋಟಿ ವರಗಳು ನನಗೆ ಬರುವವು." ಎಂದು ನುಡಿದಳು.

ಇದನ್ನು ಕೇಳಿ, ಆನಂದದಿಂದ ಎರಡೂ ಕೈಗಳನ್ನೂ ನೀಡಿ, ಅವಳನ್ನು ಆಲಿಂಗಿಸಿ, ಎಲೌ ಮಾತೆಯೇ, ಕೇಳು! ನನ್ನ ಈ ದೇಹವು ನಿನ್ನಂಥವಳಿಗೆ ಮಾರು ಹೋಗಿರಲಾಗಿ, ಬೇನೆಯಿಲ್ಲದೆ ಬಾಳುವದೇನು ಆಶ್ಚರ್ಯವೇ! " ಎಂದು ಮಹೇಶನು ಮಹಾದೇವಿಗೆ ಮುಕ್ತಿಯನ್ನಿತ್ತನು.

---

# ವೀರಶೈವ ಸಂಸ್ಕೃತಿ ಪ್ರಕಾಶಕ ಸಮಿತಿ, ಗದಗ.

(ಲೇಖಕರು: - ಶ್ರೀ. ಅನ್ನದಾನೀಶ್ವರ ವಿರಕ್ತಮಠ )

## ವೀರಶೈವನೆಂದರೆ ಯಾರು?

ಶಿವ ತತ್ವಗಳ ಸಲುವಾಗಿ, ಕಲ್ಯಾಣಕರವಾದ ತತ್ವಗಳ ಸಲುವಾಗಿ ಜೀವನವನ್ನು ಮಿಸಲಾಗಿಟ್ಟು, ಬಾಳಿನಲ್ಲಿ ಬೆಳಕನ್ನು ತುಂಬಿ ಆ ಬೆಳಕಿನಲ್ಲಿ ಬದುಕಿ ಪ್ರಪಂಚದ ವ್ಯವಹಾರಗಳನ್ನು ಕಲ್ಯಾಣಮಯವಾಗಿ ಮಾಡುವ ಶಿವಶರಣನೇ ನಿಜವಾದ ವೀರಶೈವನು. ಶಿವತತ್ವಗಳೆಂದರೆ ಜಗತ್ಕಲ್ಯಾಣಕರವಾದ ಸತ್ಯಮಯವಾದ ತತ್ವಗಳು. ಅಂಥ ತತ್ವಗಳಿಗೋಸುಗ ವೀರಸತ್ಯಾಗ್ರಹದಿಂದ ಹೋರಾಡಿ, ಕೊನೆಗೆ ಪ್ರಾಣಾರ್ಪಣೆಯನ್ನು ಕೂಡ ಮಾಡಲು ನಿಜ ವೀರಶೈವನು ಸಿದ್ಧ ಇರುವನು. ಅವನಲ್ಲಿ ಒಂದು ವಿಶಿಷ್ಟವಾದ ಶಕ್ತಿಯು ಪ್ರಕಟವಾಗಿ ಸಮಾಜವನ್ನೇ ಶಕ್ತಿಮಯವಾಗಿ ಮಾಡುವದು. ಇಂಥ ವೀರಶೈವನು ಜಗದೋದ್ಧಾರಕ್ಕೆ ಯಾವಾಗಲೂ ಬೇಕು.

ವೀರಶೈವವೆಂದರೆ ಒಂದು ಜಾತಿಯಲ್ಲ. ಒಂದು ತತ್ವವು ಶಕ್ತಿ ವಿಶಿಷ್ಟವಾದ ಮಂಗಳಮಯವಾದ ವಿಶ್ವಪ್ರೇಮದ ತತ್ವವು. ಈ ಸತ್ಯ ಸಿದ್ಧಾಂತವು ಪ್ರತಿಯೊಬ್ಬ ಮಾನವನ ಉದ್ಧಾರದ ಸಲುವಾಗಿ ಅತ್ಯವಶ್ಯವಾಗಿದೆ. ಮಾನವ ಸಮಾಜದ ಪ್ರಗತಿಗೆ ಈ ವೀರಶೈವ ತತ್ವ

ದಿಂದ ಸುಲಭಸಾಧ್ಯವಾಗುವದು. ಆದ್ದರಿಂದ ವೀರಶೈವವೆಂದ ಕೂಡಲೇ ಒಂದು ಜಾತಿ ಎಂದು ತಿಳಿದುಕೊಂಡು ಅದರ ಪ್ರಸಾರಕ್ಕೆ ವಿರೋಧ ಮಾಡುವದೆಂದರೆ ಅಜ್ಞಾನವೇ ಸರಿ.

## ವೀರಶೈವ ಸಂಸ್ಕೃತಿ.

ಮೇಲೆ ಹೇಳಿದ ವೀರಶೈವ ತತ್ವವನ್ನೊಳಗೊಂಡ ಆಚಾರ, ವಿಚಾರ, ಉಚ್ಚಾರಗಳ ಸಮೂಹವೇ ವೀರಶೈವ ಸಂಸ್ಕೃತಿಯು. ವೀರಶೈವ ಸಂಸ್ಕೃತಿಯಲ್ಲಿ ಜಾತಿಭೇದಗಳಿಲ್ಲ. ಸಂಕುಚಿತ ಭಾವನೆಗಳಿಲ್ಲ. ಸಂಕುಚಿತವಾದ ಜಾತಿಯ ಕಲ್ಪನೆಗಳನ್ನು ಗಾಳಿಗೆ ತೂರಿದ್ದೇ ವೀರಶೈವ ಸಂಸ್ಕೃತಿಯ ಹಿರಿಮೆಯು. ರಾಷ್ಟ್ರೋನ್ನತಿಗೂ ವಿಶ್ವ ಬಂಧುತ್ವಕ್ಕೂ ಪೋಷಕವಾದ ಸಂಸ್ಕೃತಿಯೇ ವೀರಶೈವ ಸಂಸ್ಕೃತಿಯು. ಬಸವ, ಚೆನ್ನಬಸವ, ಪ್ರಭುದೇವ, ಸಿದ್ಧರಾಮ, ಅಕ್ಕಮಹಾದೇವಿ ಮೊದಲಾದ ಶರಣ ಶರಣೆಯರಿಂದ ಜಾಜ್ವಲ್ಯವಾಗಿ ಪ್ರಕಾಶಿಸಲ್ಪಟ್ಟಿದೆ. ಶರಣ ಶರಣೆಯರು ವೀರಶೈವ ಸಂಸ್ಕೃತಿಯನ್ನು ಪ್ರಕಾಶಗೊಳಿಸಿ ಜಗತ್ಕಲ್ಯಾಣ ಮಾಡಿ, ಲಿಂಗೈಕ್ಯರಾಗಿ ಹೋಗಿರುವರು. ವೀರಶೈವ ಸಂಸ್ಕೃತಿಯು ಸಮಾನತೆ, ಸಹೋದರತೆ, ಸ್ವತಂತ್ರತೆ ಮೊದಲಾದ ಉನ್ನತ ವಿಚಾರಗಳಿಂದ ಪರಿಪೂರ್ಣವಾಗಿದೆ. ಶರಣ ಶರಣೆಯರ ಈ ಸಂಸ್ಕೃತಿಯು ಬಿದ್ದವರನ್ನು ಎತ್ತಿದೆ. ನಿರಾಶೆಯಿಂದ ಕೂಡಿದವರಿಗೆ ಆತ್ಮವಿಶ್ವಾಸವನ್ನು ತುಂಬಿದೆ. ಉತ್ಸಾಹ ಹೀನರಲ್ಲಿ ಚೈತನ್ಯವನ್ನು ತುಂಬಿದೆ. ಕರ್ತವ್ಯ ಶೂನ್ಯರಲ್ಲಿ ಶಿವ ತೇಜದ ಕ್ರಿಯೆಗಳನ್ನು ತುಂಬಿದೆ. ಬಡವರ ಬೆಂಬಲಿಗನಾಗಿ ನಿಂತಿದೆ. ಅದರಲ್ಲಿ ಅಂತಃಸತ್ವವಿದೆ. ಆದ್ದರಿಂದ ಈಗಲೂ ಅದು ಮಾನವರನ್ನು ಉದ್ಧರಿಸಬಲ್ಲುದು. ೧೫ನೆಯ ಶತಮಾನದ ವರೆಗೆ ಈ ವೀರಶೈವ ಸಂಸ್ಕೃತಿಯು ಚೈತನ್ಯಮಯ ಶಕ್ತಿಯಾಗಿ ವಿರಾಜಿಸಿ ಅನೇಕ ವಿಭೂತಿಗಳನ್ನು ಹುಟ್ಟಿಸಿ, ಅವರಿಂದ ಜಗತ್ಕಲ್ಯಾಣದ ಕ್ರಿಯೆಗಳನ್ನು ಮಾಡಿಸಿದೆ. ವಿಜಯನಗರದ ಸಾಮ್ರಾಜ್ಯದ ವೈಭವ ಸೂರ್ಯನು ಅಸ್ತಂಗತನಾದ ಮೇಲೆ ಈ ಸಂಸ್ಕೃತಿಯು ಮೋಡಗಳ ಮುಸುಕಿನಲ್ಲಿಯ ಸೂರ್ಯನಂತೆ ಉಳಿದುಕೊಂಡಿತು. ಅದರ ಪ್ರಕಾಶದಿಂದಲೇ ವೀರಶೈವ ಸಮಾಜವು ಬದುಕಿತು.

ಈ ಇಪ್ಪತ್ತನೆಯ ಶತಮಾನದಲ್ಲಿ ಅನೇಕ ವ್ಯಕ್ತಿಗಳು, ಸಂಸ್ಥೆಗಳು, ಸಭೆಗಳು ಹಾಗು ಹೀಗು ಸಂಸ್ಕೃತಿ ಪ್ರಕಾಶಕ ಕಾರ್ಯಗಳನ್ನು

ಮಾಡುತ್ತ ಬಂದರು. ಆದರೆ ಶ್ರೀಮಾನ್. ಹಳಕಟ್ಟಿಯವರಷ್ಟು ಸಂಸ್ಕೃತಿ ಪ್ರಕಾಶಕ ಕಾರ್ಯಗಳನ್ನು ಯಾರೂ ಮಾಡಲಿಲ್ಲ. ವಚನ ಭಾಂಡಾರದ ಮುದ್ರೆಯನ್ನೊಡೆದು ಆದರ ಸಂಸ್ಕೃತಿಯ ಪ್ರಕಾಶವನ್ನು ಎಲ್ಲ ಕಡೆಗೂ ಹರಡಿದ ಹಿರಿಯರೇ ಶ್ರೀಮಾನ್ ಹಳಕಟ್ಟಿಯವರು. ಅಂದಿನಿಂದ ವಿರಶೈವ ಸಮಾಜದಲ್ಲಿ ನವ ಜಾಗ್ರತಿ ಉತ್ಪನ್ನವಾಯಿತು. ತರುಣರಲ್ಲಿ ಸಾಕಷ್ಟು ಕ್ರಿಯಾ ಶಕ್ತಿಯು ಪ್ರಕಟವಾಗದಿದ್ದರೂ ಅವರ ಕಣ್ಣು ಮಾತ್ರ ತೆರೆದವು.

ತರುಣರಲ್ಲಿ ಪರಿಣಾಮಕಾರಿಯಾಗಿ ಕ್ರಿಯಾಶಕ್ತಿಯು ಪ್ರಕಟವಾಗುವಂತೆ ವೀರಶೈವ ಸಂಸ್ಕೃತಿಯನ್ನು ಪ್ರಕಾಶ ಗೊಳಿಸಿದ ಸಂಘವೆಂದರೆ ಗದುಗಿನ ವೀರಶೈವ ಸಂಸ್ಕೃತಿ ಪ್ರಕಾಶಕ ಸಮಿತಿಯು. ಈ ಸಮಿತಿಯು ಈಗಲೂ ಆ ಮಹಾಕಾರ್ಯವನ್ನು ಮಾಡುತ್ತಲಿರುವದು.

## ಸಮಿತಿಯ ಕಾರ್ಯಕಲಾಪಗಳು.

ಈ ಸಮಿತಿಯು ೧೯೪೦ನೆಯ ಇಸ್ವಿಯಲ್ಲಿ ಗದುಗಿನಲ್ಲಿ ಶ್ರೀ. ನಿ. ಪ್ರ. ಅನ್ನದಾನ ಸ್ವಾಮಿಗಳು ಹಾಲಕೆರೆ ಈ ಪೂಜ್ಯಪಾದರ ಹಡಗಲಿ ಮಠದಲ್ಲಿ ಸ್ಥಾಪಿಸಲ್ಪಟ್ಟಿತು. ಶ್ರೀ. ನಿ. ಪ್ರ. ಮಹಾದೇವ ಸ್ವಾಮಿಗಳು ಬೆಂಗಳೂರ, ಶ್ರೀ. ನಿ. ಪ್ರ. ಮಹಾಂತ ಸ್ವಾಮಿಗಳು ಇಳಕಲ್ಲ, ಈ ಮಹನೀಯರು ಸಮಿತಿಯ ಚಟುವಟಿಕೆಗಳಿಗೆ ಒಳ್ಳೇ ಉತ್ತೇಜನ ಕೊಟ್ಟರು. ಸಮಿತಿಯ ಸಲಹೆಗಾರ ಮಂಡಲಿಯಲ್ಲಿ ಕರ್ನಾಟಕದ ಸುಪ್ರಸಿದ್ಧ ಸಾಹಿತಿಗಳಿದ್ದಾರೆ. ಸಂಪಾದಕ ಮಂಡಲಿಯಲ್ಲಿ ಪಂಡಿತ ನಾಗಭೂಷಣ ಶಾಸ್ತ್ರಿಗಳು, ಕಲ್ಮಠ ಮಾಸ್ತರರು, ಓಲಿ ಮಾಸ್ತರರು ಮತ್ತು ಅಂಗಡಿ ಇನಸ್ಪೆಕ್ಟರರು ಇರುವರು. ಪಂಡಿತ ನಾಗಭೂಷಣ ಶಾಸ್ತ್ರಿಗಳು ಕಾರ್ಯಾಧ್ಯಕ್ಷರಾಗಿದ್ದು, ಸದಾ ಟೊಂಕ ಕಟ್ಟಿ ನಿಂತಿದ್ದಾರೆ.

ಗ್ರಂಥ ಪ್ರಕಟನೆ, ಗ್ರಂಥ ಪ್ರಸಾರ, ಕೇಂದ್ರಗಳ ಸ್ಥಾಪನೆ, ಪರೀಕ್ಷೆಗಳ ಏರ್ಪಾಟು, ಪಠ್ಯ ಪುಸ್ತಕಗಳ ಯೋಜನೆ ಮೊದಲಾದ ಕಾರ್ಯಗಳಿಂದ ಸಮಿತಿಯು ಐದಾರು ವರುಷಗಳಲ್ಲಿ ತರುಣರಲ್ಲಿ ಅಭೂತಪೂರ್ವ ಜಾಗ್ರತೆಯನ್ನುಂಟು ಮಾಡಿದೆ. ಈ ವರೆಗೆ ನಾಲ್ಕು ಸಾವಿರ ವಿದ್ಯಾರ್ಥಿಗಳು ಸಾಹಿತ್ಯ ಪರೀಕ್ಷೆಗಳಿಗೆ ಕೂತು ಪಾಸಾಗಿರುವರು. ಈ ವಿದ್ಯಾರ್ಥಿಗಳಲ್ಲಿ ಬ್ರಾಹ್ಮಣ, ಲಿಂಗವಂತ, ಜೈನ, ಕ್ರೈಸ್ತ, ಮುಸಲ್ಮಾನ ಮೊದಲಾದ ಎಲ್ಲ ಮತಗಳಿಗೂ ಸಂಬಂಧಪಟ್ಟವರಿದ್ದಾರೆ. ಕಾಶಿ,

ಕೊಲ್ಹಾಪುರ, ಪುಣೆ, ಹೈದರಾಬಾದ, ಸೊಲ್ಲಾಪುರ, ಬಳ್ಳಾರಿ, ಬೆಂಗಳೂರ, ದಾವಣಗೆರೆ, ಧಾರವಾಡ, ವಿಜಾಪುರ, ಬೆಳಗಾಂವಿ, ಅಥಣಿ, ಮೊದಲಾದ ಭಾಗಗಳಲ್ಲಿ ಐವತ್ತು ಪರೀಕ್ಷಾ ಕೇಂದ್ರಗಳಿವೆ. ಮುಖ್ಯ ಕೇಂದ್ರವು ಗದುಗಿನಲ್ಲಿದೆ. ಈ ಪ್ರಕಾರ ಸಮಿತಿಯು ಅಲ್ಪಕಾಲದಲ್ಲಿಯೇ ಕನ್ನಡಿಗರ ಆದರಕ್ಕೆ ಪಾತ್ರವಾಗಿದೆ.

## ಪರಿಣಾಮ.

ಸಮಿತಿಯ ಸಾಹಿತ್ಯ ಪರೀಕ್ಷೆಯ ಪರಿಣಾಮವಾಗಿ ತರುಣರಿಗೆ ವಚನಸಾಹಿತ್ಯದ ಪರಿಚಯವಾಗಿ ನಿಜ ತತ್ವಗಳ ಜ್ಞಾನವಾಗಹತ್ತಿದೆ. ಕನ್ನಡಸಾಹಿತ್ಯದಲ್ಲಿ ವಚನಸಾಹಿತ್ಯವು ಹಿರಿಯ ಸಾಹಿತ್ಯವೆಂಬ ತಿಳವಳಿಕೆ ಬಂದಿತು. ಸಂಸ್ಕೃತಿಯ ಮೇಲೆ ಅಭಿಮಾನ ಉತ್ಪನ್ನವಾಯಿತು. ವೀರಶೈವ ಸಮಾಜದಲ್ಲಿ ಯಾವ ಪಕ್ಷ ಪಂಗಡಗಳ ಗೊಡವೆಗೆ ಬೀಳದೆ ಸತ್ಯವನ್ನು ಸ್ವೀಕರಿಸುವ ಸುಬುದ್ಧಿಯು ಹುಟ್ಟಿತು. ವಚನ ವಾಙ್ಮಯದ ವಾತಾವರಣವು ತಯಾರಾಗ ಹತ್ತಿದೆ.

ಪೂರ್ವೋಕ್ತ ಜ್ಞಾನ, ಉತ್ಸಾಹ, ಅಭಿಮಾನ, ಸತ್ಯಶೋಧಕ ಬುದ್ಧಿ ಮೊದಲಾದ ತರುಣರಲ್ಲಿಯ ಉದಾತ್ತಗುಣಗಳನ್ನು ಸುಸಂಘಟಿಸಿ ಸಮಾಜೋದ್ಧಾರಕ್ಕೆ ಅಣಿಯಾಗುವಂತೆ ಮಾಡುವದೇ ಸಮಿತಿಯ ಮುಂದಿನ ಕಾರ್ಯವಾಗಿದೆ. ಅದಕ್ಕಾಗಿ ಸಕಲ ಕನ್ನಡಿಗರು ತನ-ಮನ-ಧನಗಳಿಂದ ಸಹಾಯ ನೀಡಬೇಕಾಗಿ ಕೋರಿಕೆ.

---

# ಮುಂದುವರಿದ ಶಿವಾನುಭವ.

(ಲೇಖಕಃ— ಶ್ರೀಯುತ ಶಾಂತವೀರ ಮುಮ್ಮಿಗಟ್ಟಿ, ಧಾರವಾಡ.)

ಇಪ್ಪತ್ತು ಇಪ್ಪತ್ತೊಂದು ವರ್ಷಗಳಿಂದ ಅಗಾಧವಾದ ಸೇವೆಯನ್ನು ಸಲ್ಲಿಸುತ್ತ ಬಂದಿರುವ ಈ ಶಿವಾನುಭವ ಪತ್ರಿಕೆಯು ಇನ್ನೂ ನಡೆಯುತ್ತಿದೆ. ಈ ಪತ್ರಿಕೆ ಕೇವಲ ವೀರಶೈವರ ಹೆಚ್ಚಳಕ್ಕಾಗಿಯೇ ಎಂಬುದನ್ನು ಮಾತ್ರಯಾರೂ ಮರೆಯಕೂಡದು. ದೃಢನಿಶ್ಚಯದಿಂದ ಸ್ವಂತ ಹಿತವನ್ನು ಲೆಕ್ಕಿಸದೆ ಸದಾ ಪರರ ಸೇವೆಗೈಯ್ಯುತ್ತಿರುವ ಈ ಪತ್ರಿಕೆ ಧನ್ಯ! ವೀರಶೈವ ಸಮಾಜವಿಲ್ಲದೆ ಈ ಪತ್ರಿಕೆಯಿಲ್ಲ. ಈ ಪತ್ರಿಕೆಯಿಲ್ಲದೆ ವೀರಶೈವ ಸಮಾಜವಿಲ್ಲ. ಈ ಪ್ರಕಾರದ ಸ್ಥಿತಿಯು ಈಗ ಪ್ರತಿಬಿಂಬಿಸ ಹತ್ತಿದೆ.

ಮುಂದುವರಿದ ಜನಾಂಗಗಳಲ್ಲಿ ವೀರಶೈವ ಜನಾಂಗವು ಒಂದಾಗಿದೆ ಎಂಬುದು ನಿದರ್ಶನೀಯವಾದದ್ದು. ಅದರ ನವೀನ ಚಟುವಟಿಕೆಗಳನ್ನು ನೋಡದವರು, ಕೇಳದವರು, ಓದದವರು, ಯಾರೂ ಇಲ್ಲವೆಂದು ಧಾರಾಳವಾಗಿ ಹೇಳಬಹುದು. ಅದನ್ನು ಪ್ರಚಾರ ಪಡಿಸುವವರಂತೂ ಕಡಿಮೆಯಿಲ್ಲ. ಪ್ರಾಚೀನ ವೀರಶೈವ ಧರ್ಮ ಹೇಗಿತ್ತು, ನವೀನ ಧರ್ಮ ಹೇಗಿದೆ ಎಂಬುದರ ತುಲನೆಯನ್ನು ಆಳವಾಗಿ ಮಾಡಿದ ಪತ್ರಿಕೆಯೆಂದರೆ ಇದೊಂದೇ. ಇಂಥ ಪತ್ರಿಕೆಯೂ, ನಿಪುಣರಾದ ಅದರ ಸಂಪಾದಕರೂ ದೊರಕಿದ್ದು ವೀರಶೈವರ ಅದೃಷ್ಟವೇ ಸೈ !

ಬಳ್ಳಿಗಳು ಪಸರಿಸಲಿಕ್ಕೆ ಬೇಕಾಗುವ ಅಗತ್ಯ ವಸ್ತುಗಳು ಆವುವೆಂಬುದು ಎಲ್ಲರಿಗೂ ಗೊತ್ತು. ಸಾಮಾನ್ಯವಾಗಿ ನೀರು, ಗಾಳಿ, ಸೂರ್ಯಪ್ರಕಾಶ, ಉತ್ತಮ ರೇವೆ ಇವು ಬೇಕಲ್ಲವೆ? ಅದರಂತೆ ಈ ಶಿವಾನುಭವ ಬಳ್ಳಿ ಹಬ್ಬಲು ಯಾವ ವಸ್ತುಗಳು ಸಿಕ್ಕಿವೆ ಗೊತ್ತೇ! ಆ ಎಲ್ಲವು ಈ ಪತ್ರಿಕೆಯ ಸಂಪಾದಕರನ್ನು ಒಳಗೊಂಡಿವೆ. ಅವರ ಪ್ರಭಾವವೇ ಸೂರ್ಯಪ್ರಕಾಶವಾಗಿ, ಅವರ ಉದಾತ್ತವಾದ, ರಸವತ್ತಾದ, ನೀಳವಾದ ವಿಚಾರಗಳೇ ನೀರಿನಂತಾಗಿ, ಸುತ್ತುಸುತ್ತ ದೇಶಗಳಿಂದ ಬರುವ, ಸದಾ ಧರ್ಮೋದ್ಧಾರಕ್ಕಾಗಿ ಹೆಣಗಾಡುವ, ಮಹನೀಯರ ಲೇಖನಗಳೇ ಕ್ಷಾರ ಮುಂತಾದ ಉಪಯುಕ್ತ ವಸ್ತುಗಳಾಗಿ ಪರಿಣಮಿಸಿವೆ ಇಷ್ಟೆಲ್ಲ ವಸ್ತುಗಳು ಸ್ವಧರ್ಮದಲ್ಲಿಯ ಸ್ವಾಭಿಮಾನಿಗಳಿಂದಲೇ ದೊರಕಿದರೆ ಆ ಬಳ್ಳಿಯು ಹಬ್ಬುವದೇನು ತಡ? ಅದು ಹಬ್ಬಿ ಉನ್ನತ ಶಿಖರಕ್ಕೆ ಮುಟ್ಟಲೆಂದು ನಮ್ಮೆಲ್ಲರ ಹಾರೈಕೆ!!

ಪೂರ್ವಿಕ ಶಿವಶರಣರ, ಶಿವಶರಣೆಯರ ರೀತಿ, ನೀತಿ, ಭಕ್ತಿ ಬಹಳ ಆಕರ್ಷಕವಾದಂಥವುಗಳು. ಇವು ತಿಳಿಯಬೇಕಾದರೆ ಶಿವಶರಣರ ವಚನಗಳು ಅತ್ಯಗತ್ಯ. ಇಷ್ಟು ಕಾಲದ ವರೆಗೆ ಬೂದಿ ಮುಚ್ಚಿದ ಕೆಂಡದಂತೆ ಇದ್ದ ಅವುಗಳನ್ನು ಬೂದಿಯಿಂದ ಹೊರತೆಗೆಯಲು ಹೆಣಗಾಡುತ್ತಿರುವದು ಈ ಶಿವಾನುಭವ. ಇದು ಅವುಗಳನ್ನು ಹೊರಗೆಡವಿ ಲೇಖನಿಯ ರೂಪದಲ್ಲಿ ಜನರಿಗೆ ಪ್ರಚಾರಪಡಿಸಿರುತ್ತಿದೆ. ಇದನ್ನು ತಿಳಿದುಕೊಳ್ಳುವದು ಜ್ಞಾನಿಗಳ ಮಾತಾಯಿತು. ಇನ್ನು ಮೂಢ ನಂಬಿಕೆಗಳಿಂದ ಕೂಡಿದ ಅಜ್ಞಾನಿಗಳ ಬಗೆಯೆಂತು? ಅದಕ್ಕೆ ಇದು ಕಥೆಯ

ರೂಪದಲ್ಲಿ ಒಳ್ಳೆಯ ಸರಳವಾಗಿ ಮಧುರವಾದ ಭಾಷೆಯಿಂದ ಎಲ್ಲ ಸಂಗತಿಗಳನ್ನು ತಿಳಿಸಲೆತ್ನಿಸುತ್ತಿದೆ. ಶರಣರ ಇರವು ಯಾವ ಬಗೆ, ಎಂತು, ಎಂಬುದನ್ನು ವಿಚಾರಿಸಿ ಸಾಮಾನ್ಯರಿಗೆ ಅವರ ಬಗೆಯಲ್ಲಿಯೇ ತಿಳಿಸಿ ಹೇಳಿದರೆ ಅವರಿಗೆ ಮನದಟ್ಟಾಗುವದಲ್ಲವೇ? ಇದೇ ಯುಕ್ತಿಯನ್ನು ತಿಳಿದ ಈ ಮಹಾಪತ್ರಿಕೆಯಿದು. ಇದರಿಂದ ಸದ್ಯಕ್ಕೆ ಜನರಲ್ಲಿಯ ಎಷ್ಟೋ ಮೂಢ ನಂಬಿಗೆಗಳು ಮಾಯವಾಗಿ ಹಳೆಯ ನಿರುಪಯೋಗ ನಡಾವಳಿಗಳು ತಾವಾಗಿಯೇ ಮಾಯವಾಗಹತ್ತಿವೆ.

ಬಸವಣ್ಣನವರೇ ವೀರಶೈವ ಧರ್ಮದ ಉದ್ಧಾರಕರಲ್ಲವೇ? ಅವರು ಈ ಧರ್ಮವನ್ನು ಉದ್ಧರಿಸಲಿಕ್ಕೆ ಮಾಡಿದ ಕಷ್ಟನಷ್ಟಗಳು ಎಷ್ಟು ಎಂಬುದು ಎಲ್ಲರಿಗೂ ಗೊತ್ತು. ಅವರು ಮಾಡಿದ ವಚನಗಳು ಎಷ್ಟು ಸೌಹಾರ್ದ್ರತೆಯನ್ನು ಸೂಚಿಸುವವೆಂಬುದು ತಿಳಿದ ಮಾತೇ. ಅವರು ಸಾರಿದ ತತ್ವಗಳು ಇನ್ನೂ ಅಚ್ಚಳಿಯದೆ ಉಳಿದು ಮತ್ತೆ ಅಚ್ಚಳಿಯದೆ ಪ್ರತಿಭೆಯನ್ನು ಹೊಂದುತ್ತಲಿವೆ. ಬಂಗಾರವನ್ನು ಹೊಡೆದು, ಬಡಿದು ಕಾಸಿ ಕೆತ್ತಿದರೆ, ಅದು ತನ್ನ ಮೊದಲಿನ ಪ್ರಭಾವವನ್ನು ಬಿಟ್ಟೀತೇ?

ಈಗ ನವೀನ ಕಲಿಯುಗದ ಬಸವಣ್ಣರೆಂದೇ ಹೆಸರಾದ ಶ್ರೀ ಕುಮಾರಸ್ವಾಮಿಗಳನ್ನು ಕೇಳದ ವೀರಶೈವರಾರಿಲ್ಲ. ಅವರು ತಮಗೆ ಹೊಳೆದ ದೀರ್ಘವಿಚಾರಗಳನ್ನು ವೀರಶೈವರ ಮುಂದೆ ಇಟ್ಟು, ಜನರ ಮನದಲ್ಲಿ ಚೆನ್ನಾಗಿ ಮೂಡುವಂತೆ ಮಾಡಿ ಅವರನ್ನು ಸ್ವಧರ್ಮಾಭಿಮಾನಿಗಳನ್ನಾಗಿ ಮಾಡಿರುವರು. ಅವರು ಹಗಲಿರುಳು ವೀರಶೈವ ಧರ್ಮೋದ್ಧಾರಕ್ಕೆ ಬಡಿದಾಡುತ್ತಿರುವರು. ತಾವು ಕೇವಲ ತ್ಯಾಗಿಗಳಾಗಿರುವರು. ಅವರ ಪ್ರತಿಯೊಂದು ಉಕ್ತಿಯೂ ಗ್ರಹಣಾರ್ಹವು. ಇಂಥವರು ಇದ್ದಮೇಲೆ ಕೇಳುವದೇನು? ತುಸು ದಿನಗಳಲ್ಲಿ ನಮ್ಮೀ ಸಮಾಜವು ಉನ್ನತಿಯನ್ನು ಹೊಂದದೆ ಇರಲಾರದು.

ವೀರಶೈವರಲ್ಲಿ ಲಲಿತಸಾಹಿತ್ಯ ಬೇಕಾದಷ್ಟಿವೆ. ಶ್ರೀಬಸವಣ್ಣನವರು ಮೊಟ್ಟಮೊದಲು ಸಾಹಿತ್ಯಕ್ಕೆ ನಿಜವಾದ ಮತ್ತು ಭದ್ರವಾದ ಅಡಿಗಲ್ಲನ್ನು ಹಾಕಿಕೊಟ್ಟರು. ಅಂಥ ಮಹಾನುಭಾವರೇ ಅಡಿಗಲ್ಲನ್ನು ಹಾಕಿದರೆ ಅದರ ಮೇಲೆ ಕಟ್ಟಿದ ಕಟ್ಟಡ ಬೀಳುವದೆಂತು? ವೀರಶೈವರಲ್ಲಿ ಇತರ ಜಾತಿಗಳಲ್ಲಿಯಂತೆ ಅನೇಕ ಮೇಧಾವಿಗಳೂ, ಪಂಡಿ

ತರೂ, ನಾಟಕಕಾರರೂ ಹೇರಳವಾಗಿ ಸಿಕ್ಕುವರು. ಸಾಹಿತ್ಯಕ್ಕೆ ಅನುಗುಣವಾದ ಕಾವ್ಯ ರಚನಾಸಾಮರ್ಥ್ಯ, ಗಾಯನಕಲೆ ಇವರಲ್ಲಿವೆ. ಅವು ಒಂದಕ್ಕೊಂದು ತಾಳಮೇಳದಿಂದ ಬೆಳೆಯುತ್ತಿವೆ. ಮುಂದೋಡುತ್ತಿವೆ.

ವೀರಶೈವರಲ್ಲಿ ಭಕ್ತಿಗೆ ಎಡೆಯೂ ಇದೆ. ವೀರಶೈವವು ಕೇವಲ ಭಕ್ತಿಯು ತವರು ಮನೆಯಾಗಿರುವದು! ಭಕ್ತಿ ಮತ್ತು ಅದರ ಪ್ರಭಾವ ಇವೆರಡು ವೀರಶೈವರ ಹೆಚ್ಚಳವನ್ನು ತೋರುವುದಲ್ಲಿ ಒಂದಾಗಿರುತ್ತವೆ. ಈ ವಿಶಾಲ ಭಕ್ತಿಗೆ ತಕ್ಕ ಫಲ ಸಿಕ್ಕೇಸಿಗುವದೆಂಬುದು ನನಗೆ ಶಿವಶರಣರ ಚರಿತ್ರೆಗಳಿಂದ ಸ್ಪಷ್ಟವಾಗುತ್ತಿದೆ.

ಭಕ್ತಿಗೆ ತಕ್ಕ ಫಲ ಒಮ್ಮೆ ಸಿಗುವದಿಲ್ಲ. ಅದಕ್ಕೆ ಅನೇಕ ಎಡರು ತೊಡರುಗಳು ಬರುತ್ತಿವೆ. ಆ ಭಕ್ತಿಯ ಮಹಿಮೆಯು ಸರ್ವ ಸಮಾಜಕ್ಕೆ ಪ್ರಚಾರವಾಗುವ ವರೆಗೂ ಹೊರಬೀಳಲಾರದು. ಕಷ್ಟಕ್ಕೆ ಫಲ ಸಿಗಲೇಬೇಕಲ್ಲವೇ? ಇನ್ನುಳಿದ ಅನ್ಯಜಾತಿ ಪಂಗಡಗಳಲ್ಲಿಯಷ್ಟೇ ಏಕೆ? ನಮ್ಮ ಸಮಾಜದಲ್ಲಿಯೂ ಸಹ ಅನೇಕ ಕ್ಷುಲ್ಲಕರು ಶಿವಶರಣರನ್ನೂ, ಶಿವಶರಣೆಯರನ್ನೂ, ಎಡಗಣ್ಣಿನಿಂದ ನೋಡುವವರು ಇದ್ದಾರೆ. ಇಂಥ ಮಹನೀಯರು ಅವರನ್ನು ಕಾಡಿ, ಅವರ ಭಕ್ತಿಗೆ ವಿರುದ್ಧವಾಗಿ, ಅವರನ್ನು ಬಹಳ ತೊಂದರೆಗೀಡುಮಾಡುತ್ತಾರೆ. ಆದರೆ ಶಿವನು ಮೊಟ್ಟ ಮೊದಲು ಏನೂ ಮಾಡುವದಿಲ್ಲ. ಆದರೆ ಮುಂದೆ ಗತಿಯು ಹೆಚ್ಚಳವು ಕಂಡುಬಂದರೆ ಅವರ ಹುಚ್ಚು ಅವರಿಗೇ ತಿಳಿಯುವಂತೆ ಮಾಡುವನು.

ಅಕ್ಕಮಹಾದೇವಿಯು 'ಚಂದನವ ಕೊರೆದು, ಕಡಿದು ತೇದೊಡೆ ನೊಂದೆನೆಂದು ಕಂಪ ಬಿಟ್ಟಿತ್ತೇ......" ಎಂದು ಹೇಳಿದಂತೆ ಶಿವಶರಣರು ಒಳ್ಳೆಯ ಕಷ್ಟಸಹಿಷ್ಣುಗಳಾಗಿರುವರು.

ಈ ಮೇಲಿನ ವೀರಶೈವರ ಎಡೆಗಳು ಈ ಶಿವಾನುಭವದಲ್ಲಿ ಸದಾ ಸ್ಪಷ್ಟವಾಗುತ್ತಿವೆ. ಇನ್ನು ಮುಂದಿನ ಎಡೆಗಳಿಗೆ ಅದನ್ನು ದಾರಿ ನೋಡುತ್ತಿರಬೇಕು. ಇಂಥ ಸರ್ವೋತ್ಕೃಷ್ಟವಾದ ಸಂಗತಿಗಳಿಂದ ಕೂಡಿದ ಈ ಧರ್ಮವು ಧನ್ಯವು! ಇನ್ನೂ ಈ ಭಂಡಾರದಲ್ಲಿ ಏನೇನಿದೆಯೋ ಯಾರಿಗೆ ಗೊತ್ತು? ಶಿವಾನುಭವಕ್ಕೆಯೇ ಅದನ್ನು ತಿಳಿಯಲು ಸಾಧ್ಯ! ಬಳ್ಳಿಯಂತೆ ಬೆಳೆಯುವ ಈ ಶಿವಾನುಭವಕ್ಕೆ ಇನ್ನೂ ಯಾವ ಯಾವ ಪುಷ್ಪಫಲಗಳು ಉದ್ಭವಿಸುತ್ತವೆಯೋ ನೋಡೋಣ.

ಪ್ರತಿಯೊಂದು ಧರ್ಮದಲ್ಲಿ ಸುಗುಣಗಳಂತೆಯೇ ದೋಷಗಳೂ ಇರುವವೆಂಬುದನ್ನು ಮರೆಯಬಾರದು. ಬರಿಯ ಸುಗುಣಗಳನ್ನೇ ವರ್ಣಿಸಿದರೆ ದೋಷಗಳು ಜನರಿಗೆ ಗೊತ್ತಾಗುವದೆಂತು? ಆ ದೋಷಗಳನ್ನೆಲ್ಲ ಜನರ ಮುಂದೆ ಇಟ್ಟು ಅವುಗಳಿಗೆ ತಕ್ಕ ಉಪಾಯಗಳನ್ನು ಏರ್ಪಡಿಸಲಿಕ್ಕೆ ಈ ಶಿವಾನುಭವವು ಸತತ ಹೆಣಗಾಡುತ್ತಿದೆ. ಇನ್ನೂ ಹೆಣಗಾಡಲೆಂದು ನನ್ನ ಆಶೆ. ಈ ದೋಷಗಳ ಬಗ್ಗೆ ಅನೇಕ ಮಹನೀಯರು ತಮ್ಮ ಉದಾತ್ತ ವಿಚಾರಗಳನ್ನು ಈ ಶಿವಾನುಭವದಲ್ಲಿ ತೋರ್ಪಡಿಸಿರುವರು. ಇನ್ನುಳಿದ ಅನೇಕರು ಅದರ ದಾರಿಯನ್ನು ತುಳಿಯಬೇಕಲ್ಲವೆ?

ಶಿವಾನುಭವ ಬಳ್ಳಿಯು ಇನ್ನೂ ಹಬ್ಬಬೇಕೆಂದು ನನ್ನ ಇಚ್ಛೆ. ಅದಕ್ಕೆ ಒಳ್ಳೆಯ ಬಲವಾದ ಸ್ತಂಭ ಬೇಕಾಗಿದೆ. ಆ ಸ್ತಂಭ ಯಾವುದು ಗೊತ್ತೇ? ಹಣದ ಸಹಾಯ. ಇದೇ ಗುಟ್ಟೇ ಶಿವಾನುಭವದ ಏಳ್ಗೆ. ಇದೇ ವೀರಶೈವರ ಏಳ್ಗೆ. ಇಂಥ ಧನ ಸಹಾಯವು ಶಿವಾನುಭವಕ್ಕಿಲ್ಲ. ಇದು ಅದಕ್ಕೆ ಸಿಕ್ಕು ಶಿವಾನುಭವ ಬಳ್ಳಿಯು ಒಳ್ಳೆಯ ಪ್ರಬಲವಾಗಿ ತನ್ನ ಕುಡಿಯನ್ನು ಚಾಚಿ ಅನೇಕ ಪುಷ್ಪ ಕಾಯಿ-ಹಣ್ಣುಗಳನ್ನು ಬಿಡಲೆಂದು ನನ್ನ ಹಾರ್ದಿಕ ಮತ್ತು ಬಲವಾದಆಶೆ ಮತ್ತು ನಂಬಿಗೆಯು!!!

---

## ಕೊಂತಮಠದ ಗುರುಗಳು.

(ಲೇಃ — ಕಾವ್ಯತೀರ್ಥ, ವಿದ್ವಾನ್, ಶಾಂತವೀರದೇವರು ಬಹೊಳೆ,
ಸಿದ್ಧೇಶ್ವರ ಹಾಯಸ್ಕೂಲ ವಿಜಾಪುರ.)

---

ಹಿರಿಯರೂ ಕಿರಿಯರೂ ಅಜ್ಞಾನಿಗಳಾದ ಇತರ ಪ್ರಾಣಿಗಳೂ ಸಹ ಸುಖವನ್ನೇ ಬಯಸುತ್ತವೆ. ಕಾಡುಸ್ಥಿತಿಯಲ್ಲಿದ್ದ ಸಹಸ್ರಾರು ವರುಷಗಳ ಹಿಂದಿನ ಹಿರಿಯರು ಹೊಟ್ಟೆಬಟ್ಟೆಗಳ ಸಲುವಾಗಿ ದುಡಿದಿದ್ದಾರೆ. ಪ್ರಥಮದಲ್ಲಿ ಜನಾಂಗಕ್ಕೆ ಇದೇ ಸುಖದ ಸಾಧನೆಯೆಂದು ಅರಿತರು. ಆದರೆ ಈ ವಿಚಾರವು ಅವರಿಗೆ ಅಸಮ್ಮತವಾಯಿತು. ಉಪಭೋಗದಲ್ಲಿ ಸುಖದಂತೆ ಆಭಾಸವಾಗುವ ವಿಷಯಗಳು ಪರಿಣಾಮದಲ್ಲಿ ಅಹಿತಗಳಾದುವು. ಹೀಗಾದೊಡನೆಯೇ ಜನಾಂಗಕ್ಕೆ ನಿತ್ಯಸುಖ

ಸಾಧನವು ಎಲ್ಲಿದೆ, ಎಂದೆನ್ನಿಸಿತು. ಈ ಜಿಜ್ಞಾಸೆಯು ಬಹು ದಿನಗಳ ವರೆಗೆ ಬಹು ಜಟಿಲವಾಯಿತು. ಅನಂತರ ಈಶ್ವರನ ಅಸ್ತಿತ್ವವನ್ನು ಕಂಡುಹಿಡಿದು ಆನಂದಪಟ್ಟರು. ಈಶ್ವರನ ಸಾಕ್ಷಾತ್ಕಾರದ ಕಾರ್ಯವು ಸರಳವಾಗಿ ನೆರವೇರಲು ಹಲಕೆಲವು ಮಾರ್ಗಗಳನ್ನು ಸಹ ಹುಡಿಕಿ ತೆಗೆದರು. ಇಂಥ ಮಾರ್ಗಕ್ಕೆ ಧರ್ಮಮಾರ್ಗವೆಂದು ಈ ಮಾರ್ಗದ ಮುಖಾಂತರವಾಗಿ ಆತ್ಮಸಾಕ್ಷಾತ್ಕಾರ ಪಡೆಯುವದೇ ಹೆಗ್ಗುರಿಯಾಯಿತು. ಇದರಲ್ಲಿಯೇ ಚಿರಸುಖವಿರುವ ತತ್ವವನ್ನು ಕಂಡುಕೊಂಡರು.

ಜನಸಾಮಾನ್ಯರಲ್ಲಿ ಧರ್ಮವು ಕಾಲೂರಬೇಕಾದರೆ ಹಿಂದಿನವರು ಒಂದು ಹೊಸ ಹಾದಿಯನ್ನು ಹಾಕಿಕೊಟ್ಟರು. ಈಶ್ವರನ ಅಸ್ತಿತ್ವವನ್ನುಸರುವ ಮಾತುಗಳಿಗೆ ಧರ್ಮವೆಂದೂ ಇಂಥ ಮಾತುಗಳನ್ನು ಸ್ವಾನುಭವಕ್ಕೆ ಅಳವಡಿಸಿ ಅನುಭವದಿಂದ ಬಂದ ಮಾತುಗಳನ್ನು ಉಪದೇಶ ಮಾಡುವವನಿಗೆ ಗುರುವೆಂದೂ, ಗುರುವಿನಿಂದ ಉಪದೇಶ ಪಡೆಯುವವನಿಗೆ ಶಿಷ್ಯನೆಂದೂ ಕರೆಯತೊಡಗಿದರು.

ನಮ್ಮ ಭರತ ಭೂಮಿಯಲ್ಲೆಲ್ಲ ಶಿವ ಪೂಜಕರೇ ಪೂರ್ವದಲ್ಲಿ ವಿಶೇಷವಾಗಿದ್ದರೆಂಬ ಸಂಗತಿಯು ನಿರ್ವಿವಾದ ವಾದ ಸಂಗತಿಯಾಗಿದೆ. ಶಿವನನ್ನು ಪೂಜಿಸುವವವರಿಗೆ ಶೈವರೆಂದು ಕರೆವ ಸಾಂಪ್ರದಾಯವಿದೆ. ಶಿವನನ್ನು ಪೂಜಿಸಿ ತಾವೂ ಶೈವರಂತೆ ಧಾರ್ಮಿಕರಾಗಬೇಕೆಂದಿದ್ದ ಇತರ ಕೀಳು ಕಸಬುದಾರರು ತಮ್ಮಲ್ಲಿಯೇ ಗುರುಗಳನ್ನು ಕಲ್ಪಿಸಿದರು. ಅವರಿಗೆ ತಾವೆಲ್ಲರೂ ಶಿಷ್ಯರಾದರು. ಗುರುವಿನ ಉಪದೇಶದಿಂದ ತಾವೂ ಶೈವರೆಂದೆನಿಸಿಕೊಂಡರು. ಅಲ್ಲದೆ ತಮ್ಮ ಧರ್ಮವನ್ನು ವಿಸ್ತಾರ ಮಾಡುವದಕ್ಕೆ ಬೇರೆ ಬೇರೆಡೆಗಳಲ್ಲಿ ತಮ್ಮ ಮಠಗಳನ್ನು ಸ್ಥಾಪಿಸಿದರು. ಹಿಂದಿನ ಕಾಲದಲ್ಲಿ ಇಂಥ ಎಲ್ಲ ಮಠಗಳಲ್ಲಿ ಐಹೊಳೆ ಗ್ರಾಮದಲ್ಲಿದ್ದ ಕೊಂತಮಠವು ಈ ದೃಷ್ಟಿಯಿಂದ ಮಹತ್ವವಾದುದು. ಐಹೊಳೆ ಊರಲ್ಲಿರುವ ಶಿಲಾಲಿಪಿ, ಅಲ್ಲಿಯ ಕೊಂತ ದೇವರ ಗುಡಿ, ಕೊಂತಮಠದವರು, ಈ ಮುಂತಾದ ಅವಶೇಷಗಳಿಂದ ಕೊಂತಮಠದ ಅಸ್ತಿತ್ವವೂ ಅದರ ಮಹತ್ವವೂ ಆಗಿನ ಕಾಲದಲ್ಲಿ ಉಜ್ವಲವಾಗಿತ್ತೆಂದು ಕಂಡುಬರುತ್ತಿದೆ.

## ಐಹೊಳೆ.

ಐಹೊಳೆ ಈ ಗ್ರಾಮವು ವಿಜಾಪುರ ಜಿಲ್ಹೆಗೆ ಒಳಪಟ್ಟಿದೆ. ಸೊಲ್ಲಾಪುರದಿಂದ ಹುಬ್ಬಳ್ಳಿಗಿರುವ ರೇಲ್ವೆ ಮಾರ್ಗದ ಮಧ್ಯದಲ್ಲಿ ಕಟಗೇರಿ

ಎಂಬ ಹೆಸರಿನ ಒಂದು ಚಿಕ್ಕ ಸ್ಟೇಶನ್ನಿದೆ. ಈ ಸ್ಟೇಶನ್ನದ ಪೂರ್ವಕ್ಕೆ ಹನ್ನೆರಡು ಮೈಲು ಅಂತರದ ಮೇಲೆ ಈ ಗ್ರಾಮವಿದೆ.

ಈ ಗ್ರಾಮವು ಜನಸಂಖ್ಯೆಯಿಂದ ಚಿಕ್ಕದಾದರೂ ದಕ್ಷಿಣ ದೇಶದಲ್ಲಿ ಬಹು ಪ್ರಸಿದ್ಧವಾದ ಪುಣ್ಯಕ್ಷೇತ್ರವಾಗಿದೆ. ಇಲ್ಲಿಯ ಪ್ರಕೃತಿದೇವಿಯತ್ತ ದೃಷ್ಟಿಯಿಟ್ಟು ನೋಡಿದರೆ ರಸಿಕನ ಕಣ್ಣುಗಳು ತಣಿಯದಿರಲಾರವು. ಪ್ರಕೃತಿದೇವಿಯೂ ಈ ಗ್ರಾಮವನ್ನು ತನ್ನ ಎರಡು ತೋಳುಗಳಿಂದ ಎತ್ತಿಹಿಡಿಯುವಳೋ ಏನೋ ಎನ್ನುವಂತೆ ಈ ಊರ ಎಡಬಲ ಪಕ್ಕಗಳಲ್ಲಿ ಹಳ್ಳಗಳು ಹರಿಯುತ್ತವೆ. ಮತ್ತೊಂದು ಮಗ್ಗುಲಲ್ಲಿ ಬೆಟ್ಟ ಮತ್ತು ನದಿಗಳು ಹೊಂದಿಕೆಯಾಗಿವೆ. ಇಲ್ಲಿಯ ಹೊಳೆಹಳ್ಳ ಮೊದಲಾದ ಪ್ರತಿಯೊಂದು ಪ್ರವಾಹವು ಪಶ್ಚಿಮ ಮುಖವಾಗಿಯೇ ಹರಿದಿವೆ. ಇಂಥ ವೈಚಿತ್ರ್ಯಯನ್ನು ಇನ್ನಾವ ಕ್ಷೇತ್ರ ಮತ್ತು ತೀರ್ಥಗಳಲ್ಲಿರುವದು ಕಂಡುಬರುವದಿಲ್ಲ.

ಇಲ್ಲಿಯ ಶಿವಾಲಯಗಳು ಊರಿನ ಮಧ್ಯ ಮತ್ತು ಪಕ್ಕಗಳಲ್ಲಿ ಗುಂಪುಗುಂಪಾಗಿ ಕಟ್ಟಲ್ಪಟ್ಟಿವೆ ನೂರಾರು ಶಿವಾಲಯಗಳು ತಮ್ಮ ಶಿಲ್ಪಕಲೆಗಳಿಂದ ಮನೋಹರವಾಗಿವೆ. ಈ ಕ್ಷೇತ್ರದಲ್ಲಿರುವಷ್ಟು ದೇವಾಲಯಗಳು ಕರ್ನಾಟಕದ ಬೇರೆಡೆಗಳಲ್ಲಿರಲಿಕ್ಕಿಲ್ಲ. ಕನ್ನಡಿಗರ ನಾಗರಿಕತೆಯನ್ನು ವ್ಯಕ್ತಗೊಳಿಸುವ ಶಿಲಾಲೇಖಗಳು ಇಲ್ಲಿ ಇವೆ.

ಪಂಚಾಚಾರ್ಯರು ಲಿಂಗದಲ್ಲಿ ಹುಟ್ಟಿ ವೀರಶೈವ ಮತವನ್ನು ಉದ್ಧರಿಸಿದಂತೆ, ಪಂಚವಕ್ತ್ರಗಣೇಶ್ವರನು ಈ ಗ್ರಾಮದಲ್ಲಿರುವ 'ಗೌರೀಗುಡಿ' ಎಂಬ ಹೆಸರುಳ್ಳ ದೇವಾಲಯದ ಶಿವಲಿಂಗದಲ್ಲಿ ಉದ್ಭವವಾದನಂತೆ. ಅಲ್ಲದೆ ಶಿಲಾಲಿಪಿ ಮತ್ತು ಸ್ಥಲಪುರಾಣಗಳಿಂದ ಶಾಸ್ತ್ರೀಯವಾಗಿ ಸಿದ್ಧವಾಗುವ ಕೊಂತಮಠದ ಮೂಲಾಚಾರ್ಯನಾದ 'ಹೆಗ್ಗಪ್ಪ'ನ ಜೀವಿತ ಹಾಗು ಅವನಲ್ಲಿರುವ ಧರ್ಮಮಾರ್ಗ ಮುಂತಾದವುಗಳು ಕನ್ನಡನಾಡು, ಸಂಸ್ಕೃತಿ ಇವು ಧರ್ಮಪೂರ್ಣವಾದುವೆಂಬುದನ್ನು ವ್ಯಕ್ತಮಾಡುತ್ತವೆ.

## ಕೊಂತಮಠದ ಮೂಲಾಚಾರ್ಯನು.

ವಿಂಧ್ಯಾದ್ರಿಯಿಂದ ರಾಮೇಶ್ವರದ ವರೆಗೆ ಇರುವ ನಾಡು ಆಗ ಕಾಡಾಗಿತ್ತು. ಅಂದಿನ ಕಾಡು ದಿನಗಳೆದಂತೆ ಅಲ್ಲಲ್ಲಿ ನಾಡಿನ ಲಕ್ಷಣ

ಗಳು ತೋರಿಬಂದವು. ಪೂರ್ವಕಾಲದಲ್ಲಿ ಐಹೊಳೆ ಗ್ರಾಮದ ಸುತ್ತು ಮುತ್ತು ಒಂದು ವಿಸ್ತಾರವಾದ ಕಾಡು ಅನೇಕ ಮೈಲು ದೂರದವರೆಗೆ ವ್ಯಾಪಿಸಿತ್ತು. ಅಲ್ಲಲ್ಲಿ ಶೈವ ಧಾರ್ಮಿಕರ ಧರ್ಮದ ಅನುಷ್ಠಾನಗಳು ಆಗ ಒಳ್ಳೇ ಭರದಿಂದ ನಡೆಯುತ್ತಿದ್ದುವು. ಆಗ ಎಂದರೆಚಲುಕ್ಯ ವಿಕ್ರಮಶಕ ೩೪ ರಲ್ಲಿ ( ಕ್ರಿ. ಶ. ೧೧೧೦ ಶಿವೋಪಾಸಕರೇ ಇಲ್ಲಿ ಹೆಚ್ಚಾಗಿದ್ದರು. ಈ ಶಿವೋಪಾಸಕರಲ್ಲಿ ಹೆಗ್ಗಪ್ಪನೆಂಬವನಿದ್ದನು. ಈ ಹೆಗ್ಗಪ್ಪನು ತನ್ನ ಉಪಜೀವನಕ್ಕಾಗಿ ಕೆಲವು ಗೋವುಗಳನ್ನು ಸಾಕಿಕೊಂಡಿದ್ದನು. ದಿನಾಲು ಅರಣ್ಯದಲ್ಲಿ ಸೊಗಸಾದ ಹಸಿರು ಹುಲ್ಲನ್ನು ಆವುಗಳಿಗೆ ಮೇಯಿಸುತ್ತ ಆವುಗಳ ಸೇವೆ ಮಾಡುತ್ತ ಕಾಲಕಳೆಯುತ್ತಿದ್ದನು. ಈ ಹೆಗ್ಗಪ್ಪನು ಪ್ರಥಮದಲ್ಲಿ ಸಾಮಾನ್ಯರಂತೆಯೇ ಜೀವಿಸುತ್ತಿದ್ದನು. ಆದರೆ ತನ್ನ ಪೂರ್ವಜನ್ಮದ ಸುಕೃತದಿಂದಲೋ ಅಥವಾ ಗೋಸೇವೆಯ ಫಲದಿಂದಲೋ ಆತನು ಮುನಿಪದವಿಗೆ ಏರಿದನು. ಹಾಗು ಕೆಲವು ಮಠದವರಿಗೆ ಗುರುವೂ ಆದನು. (೧) ಹೆಗ್ಗಪ್ಪ, (೨) ಗೋಮುನೀಶ್ವರ, (೩) ಹೆಗ್ಗಪ್ಪಗೋಮುನೀಶ್ವರ, (೪) ಗೋಮುನೀಶ್ವರಹೆಗ್ಗಪ್ಪ ಎಂಬ ಹೆಸರು ಗಳು ಹೆಗ್ಗಪ್ಪನಿಗಿದ್ದವು. ಶಿಲಾಲಿಪಿಯಲ್ಲಿ ಈತನ ಈ ನಾಲ್ಕು ಹೆಸರು ಗಳೂ ಉಕ್ತವಾಗಿವೆ. ಈತನು ಗೋ ಸೇವೆಯಲ್ಲಿ ಬಹು ಆಸಕ್ತಿಯುಳ್ಳ ವನಾಗಿ ಆ ಕಾಯಕವನ್ನು ಒಳ್ಳೇ ಭಕ್ತಿಯಿಂದ ಆಚರಿಸುವವನಾದುದ ರಿಂದ ಈತನಿಗೆ 'ಗೋಮುನೀಶ್ವರ'ನೆಂಬ ಹೊಸ ನಾಮವು ಇರಿಸಲ್ಪಟ್ಟಿರ ಬಹುದು.

ಭಾರತೀಯರೆಲ್ಲರಿಗೆ ಆಕಳು ಅತಿ ಪವಿತ್ರವಾದ ಪ್ರಾಣಿ, ಮತ್ತು ಪೂಜಾರ್ಹವಾದ ದೇವತೆಯು. ಗೋಮಹಿಮೆ, ಗೋ ಸೇವೆಯ ಫಲವು ಅತ್ಯಧಿಕವೂ ಪುಣ್ಯಪ್ರದವೂ ಇರುವದಾಗಿ ಹಿಂದೂ ಧರ್ಮಶಾಸ್ತ್ರಗಳು ಉಪದೇಶಿಸುತ್ತವೆ. ಈ ತತ್ವಕ್ಕನುಸರಿಸಿ ಗೋಮುನೀಶ್ವರನು ತನ್ನ ಪವಿತ್ರ ಕಾಯಕವಾದ ಗೋಸೇವೆಯನ್ನು ಮಾಡುತ್ತ ಅರಣ್ಯದಲ್ಲಿ ಅಲ್ಲಲ್ಲಿ ತಪಸ್ಸು ಮಾಡುವ ಕಾಪಾಲಿಕ, ಕಾಳಾಮುಖ ಮುಂತಾದ ತಪಸ್ವಿಗ ಳಿಗೆ ಹಾಲಿನಿಂದ ಸಹಾಯ ಮಾಡುತ್ತಿದ್ದನು. ಹಾಗು ಅವರಿಗೆ ಒದಗುವ ಎಲ್ಲ ತೊಂದರೆಗಳನ್ನೂ ಪರಿಹರಿಸುತ್ತಿದ್ದನು. ಎಲ್ಲ ತಪಸ್ವಿ ಗಳ ತಪಕ್ಕಿಂತಲೂ ಈತನ ತಪವು ಮಿಗಿಲಾಯಿತು. ಈಶ್ವರನು ಈತ ನಿಗೆ ಪ್ರತ್ಯಕ್ಷನಾಗಿ ತನ್ನ ಕೊಂತವನ್ನು ಗೊಗ್ಗಯ್ಯನಿಗೆ ಕೊಟ್ಟನು.

ಈ ಗೊಗ್ಗಯ್ಯನಾದರೂ ತಪಸ್ವಿಗಳ ತಪೋಭಂಗ ಮಾಡುವ ದುರಾಚಾರಿಗಳನ್ನು ತನಗೆ ಅನುಗ್ರಹವಾಗಿ ಬಂದ ಕೊಂತಾಯುಧದಿಂದ ನಾಶಮಾಡುತ್ತಿದ್ದನು. ಇದು ಈಶ್ವರನಿಂದ ಬಂದಿದ್ದರಿಂದ ಅದನ್ನು ಅವನು ಒಳ್ಳೇ ಭಕ್ತಿಯಿಂದ ಪೂಜೆ ಮಾಡುತ್ತಿದ್ದನು.

ಈ ಹೆಗ್ಗಪ್ಪನ ಹಿರಿಮೆಯನ್ನು ಕಂಡ ಎರೆಯಂಬರಗೆ (ಎಲಬುರ್ಗಿ)ಯ ಸಿಂದವಂಶದ ಚಾಮುಂಡಿರಾಯನು ತನ್ನ ಅರಸಿಯಾದ ಸಿರಿಯದೇವಿಯೊಡನೆ ಹೆಗ್ಗಪ್ಪನ ದರ್ಶನಕ್ಕಾಗಿ 'ಐವದ್ಯಾ' (ಐಹೊಳೆ) ನಗರಕ್ಕೆ ಬಂದನು. ಈತನ ಕೊಂತಾಯುಧ ಪೂಜೆಗಾಗಿ ರಾಜನು ಗುಡಿಯೊಂದನ್ನು ಕಟ್ಟಿಸಿ ಅಲ್ಲಿ ಕೊಂತವನ್ನು ಸ್ಥಾಪಿಸಿದನು. ಈ ಗುಡಿಗೆ ಈಗಲೂ ಕೊಂತದವರ ಗುಡಿ ಎಂದು ತೋರಿಸುತ್ತಾರೆ. ಪೂಜೆ ನಿರ್ವಿಘ್ನವಾಗಿ ಸಾಗುವದಕ್ಕಾಗಿ 'ಐವದ್ಯ'ನಗರದಲ್ಲಿ ಆ ಗ್ರಾಮದ ಪೂರ್ವಭಾಗದಲ್ಲಿರುವ ಮೇಗುಡಿ ಚಿಕ್ಕಬೆಟ್ಟಕ್ಕೆ ಪೂರ್ವಭಾಗದ ಹೊಲ "ಮೂನ್ನೂರು ಮೂಡವಾಯು ಹೊಲಂ ರುದ್ರದೇವರ ತ್ರಿಶೂಲಿನ ಕೊಂತಾಯುಧದ ಪೂಜೆಗೆ ಗೋಮುನೀಶಗೆ ಕೊಟ್ಟಂತಹದು" ಎಂದು ಉಲ್ಲೇಖಗಳಿವೆ.

ಶಿರಿಯದೇವಿಯ ಪತಿಯಾದ ಚಾಮುಂಡರಾಯನು ಅಭಿನವ ಮತಕ್ಕೆ ಅಭಿನವ ಗುರುವಾಗುವಂತೆ ಹೆಗ್ಗಪ್ಪನಿಗೆ ಬೆಸಸಿದನು. ಅಂದಿನಿಂದ ಕೀಳಜಾತಿಯವರೆಂದೆನಿಸಿದ ಕಬ್ಬಿಲ, ಸುಣ್ಣಗಾರ, ಮೀನಗಾರ ಮುಂತಾದ ಕುಲಗಳಿಗೆ ಗುರುವಾದ ಹೆಗ್ಗಪ್ಪನು ತನ್ನ ಮಠಗಳನ್ನು ಎಲ್ಲಕಡೆಗೂ ವಿಸ್ತರಿಸತೊಡಗಿದನು.

### ಐಹೊಳೆಯ ಕೊಂತದವರ ಗುಡಿಯಲ್ಲಿರುವ ಶಿಲಾಲಿಪಿಯು.

ನಮಸ್ತುಂಗ ಶಿರಶ್ಚುಂಬಿ। ಚಂದ್ರ ಚಾಮರ ಚಾರವೆ॥ ಕೈಲಾಸ ನಗರಾರಂಭ। ಮೂಲಸ್ತಂಭಾಯ ಶಂಭವೆ ॥೧।

ಶ್ರೀ ಮದ್ವಿನತ ಸಮಸ್ತಾಮರ ಮುಕುಟ ನಿಕಟ ರತ್ನಗಭಸ್ತಿ ನ್ಯಸ್ತಾಂಘ್ರಿ ಪೀಠ ಕೂರ್ಮ ಪಾಠೀನ ನಕ್ರೋನ್ಮದ ಮಾತಂಗಾರಿ ಕೇಸರಿ ಚಳಿತ ಜಲ ಚರಾಸ್ಫಾಳಮಳ ನದ ನದ್ಯ ಭಃಷ್ಟ ವಾಳಂ ...ಸಮುದ್ರಂ ಸಮುದ್ರಂ॥

ತದುದಧಿ ಮೇಖಳವಲಿರ್ಗೆ ಆ ವಸುಧಿಗೆ ಮುಕುಟಮೆನಿಪ ಮೇರುಗೆ ಟೆಂಕಲು ಸದಮಳ ಭರತಾವನಿಯುಂ ಆದರದಿಂದಂ ಕುಂತ ವಿಷಯು ವನಾಳ್ವಂ ನಿರಂತ ಸುಖಾಸ್ಪದ ಮೆನಿಪ ಚಾಳುಕ್ಯ ವಂಶವರ ರತ್ನಂ॥

ಸ್ವಸ್ತಿ ಶ್ರೀ ಸಿಂಧ ವಂಶೋದ್ಭವ ಕಮಳವನಾದಿತ್ಯಂ ನಾನಾಭೂಭೃ ನ್ನ್ಯಸ್ತಕನ್ಯಸ್ತಾರಿಸ್ತೋಮಂ ಗುರ್ಜರಾಂಧ್ರ, ದ್ರವಿಳ ಮಗಧ, ನೇಪಾಳ, ಭೂಪಾಳ ಕಾದಿ ಪ್ರಸ್ತುತ್ಯಂ ನಿತ್ಯ ತೇಜಂ ಪ್ರಬಳ ಬಳಯುತಂ ವೀರ ಚಾಮುಂಡ ಭೂಪಂ॥

ಜಯಂತು ವಿಜಯ ಲಕ್ಷ್ಮೀ ನೃತ್ಯಂ ನಾಟ್ಯ ರಂಗೋಪ ಜಿತ ಸಮರ ರಂಗೋ ವೈರಿ ದೋರ್ದರ್ಪಭಂಗಂ ವಿತರಣಗುಣಸ್ತುಂಗ ವಿಶ್ವ ವಿದ್ಯಾ ನತ ರಂಗೋ ವಿವಿಧ ಬುಧಸಂಗಃ ಸಾಹಸೋತ್ತುಂಗಭೂಪಃ

ಅನತ ರಾತಿ ಭೂಪಾಳ ಬೃಂದರುಗಳ ವಸ್ತುವಾಹನಮಂ ಗುಡಿ ಗುಡಾರುಮಂ। ನಾಡುಮಂ ವಶಕೊಳ್ವುದೆ ವಿನೋದಮಾಗೆ ಅನಘ ಶೌರ್ಯಂಬಡಿದಿಪ್ಪ ಚಾಮುಂಡಾವನಿಪಾಳಂ॥

ಅನಿತೆನಿಸಿದ ಶ್ರೀ ಮನ್ಮಹಾಮಂಡಳೇಶ್ವರಂ ಚಾಮುಂಡರಸ ದೇವರಾರ್ಧಾಂಗ ಲಕ್ಷ್ಮಿ ಸಿರಿಯಾದೇವಿಯರಾದ ಸ್ವಾರ್ಥ ಕೀರ್ತಿ ಎಂ ತೆಂದೊಡೆ ॥

ಕಂ॥ ಪತಿ ಭಕ್ತಿಯಿಂದರುಂಧತಿ ಮತಿಯಿಂ ಭಾರತಿ ಸುಭೋ ಗ್ಯದಿಂ ರತಿಯಿಂದಿರತಿಯೊಳು ಚಾಮುಂಡ ಭೂಪನಸತಿ ಸಿರಿಯಾ ದೇವಿಯುಂ ಜಗಂ ಬಣ್ಣಿಸುಗುಂ॥ ಅನಿತೆನಿಸಿದ ಸಿರಿಯಾದೇವಿಗೆ ಚಾಮುಂಡವನೀಶಗೆ ಪಗೆದ ವೀರ ಬಿಜ್ಜಲದೇವ, ವಿಕ್ರಮದೇವ ಕುಮಾರರು ಕೂಡಿ ಸುಕಥಾ ವಿನೋದದಿಂ ರಾಜ್ಯಂಗೈಯುತ್ತಿರೆಯಿರೆ॥

ಸ್ವಸ್ತಿ ಶ್ರೀ ಚಾಳುಕ್ಯ ವಿಕ್ರಮ ವರ್ಷದ ೩ಳನೆಯ ವಿರೋಧಿ ಸಂವತ್ಸರದಲ್ಲು ಶ್ರೀ ಮಹಾರುದ್ರ ದೇವರ ತ್ರಿಶೂಲಿನ ಕೊಂತಾಯುಧದ ಪೂಜೆಗೆ ಗೋಮುನೀಶಗೆ ಕೊಟ್ಟ ಭೂಮಿ ಐವದ್ಯಾ ನಗರದಲ್ಲಿ ಗ್ರಾಮಾ ಪೂರ್ವದಲ್ಲಿರುವ ಮೇಗುಡಿ ಬಿಟ್ಟಕ್ಕೆ ಪೂರ್ವಭಾಗದ ಹೊಲ ೩೦೦ ಮುನ್ನೂರು ಮೂಡವಾಯಾವಳಿಯ ಹೊಲಂ ಮೇರೆ ತೆಂಕಣಾ ಭಾಗಕ್ಕೆ

ಮಾರ್ಗ ಬಡಗಲು ತ್ರಿಶೂಲದ ಕಲ್ಲು ಈ ಭೂಮಿಯನ್ನು ಧಾರೆಯೆರೆದು ಕೊಟ್ಟದೆ. ಈ ಭೂಮಿಗೆ ಆರೊಬ್ಬರು ಆಳಿದರು ತಮ್ಮ ಕುಲಕೋಟಿ ಉದ್ಧಾರವಾಗುವದಕ್ಕೆ ಪರಿಪಾಲಿಸಿ ಮಾಡಿಕೊಂಡು ಬರುವದು॥೧॥

## ಕೊಂತ ತ್ರಿಶೂಲ.

ಇಲ್ಲಿ ಉಲ್ಲೇಖಿಸಿದ ಶಿಲಾಲಿಪಿಯಲ್ಲಿ ಕೊಂತ ಮತ್ತು ತ್ರಿಶೂಲಗಳ ಆಯುಧಗಳು ಈಶ್ವರನವು ಎಂದು ಇರುತ್ತವೆ. ಹಾಗು ಹೆಗ್ಗಪ್ಪನಿಗೆ ದತ್ತಿಯಾಗಿಕೊಟ್ಟ ಹೊಲದ ಒಂದು ಭಾಗದಲ್ಲಿ ಚಾವುಂಡರಾಯನು ತ್ರಿಶೂಲ ಚಿನ್ಹವುಳ್ಳ ದೊಡ್ಡಕಲ್ಲನ್ನು ನಿಲ್ಲಿಸಿದ್ದಾನೆ. ಅದೇ ಭೂಮಿ ಅದೇ ಕಲ್ಲು ಈಗಲೂ ಇವೆ. ಆ ಭೂಮಿಯನ್ನು ಹೆಗ್ಗಪ್ಪನ ವಂಶಜರು ಈಗಲೂ ಸಾಗಿಸುತ್ತಾ ಬಂದಿದ್ದಾರೆ. ತ್ರಿಶೂಲದ ಪೂಜೆಯನ್ನು ಅಂದಿನಿಂದ ಇಂದಿನವರೆಗೆ ಹೆಗ್ಗಪ್ಪನ ವಂಶದವರು ಮಾಡುತ್ತಾಬಂದಿದ್ದಾರೆ. ಮೇಲೆ ಉಲ್ಲೇಖಿಸಿದ ಕೆಲವು ಕಟ್ಟಿಮನೆಗಳಿಗೆ ಹೆಗ್ಗಪ್ಪನ ವಂಶಜರು ಹೋಗಿ ಅಲ್ಲಿಯ ಶಿಷ್ಯರನೇಕರಲ್ಲಿ ಗುರು ದಕ್ಷಿಣೆಯನ್ನು ತೆಗೆದುಕೊಳ್ಳುವ ಸಂಪ್ರದಾಯವಿದೆ.

ಈ ಹೆಗ್ಗಪ್ಪನ ವಂಶದವರಿಗೆ "ಕೊಂತದವ"ರೆಂದು ಈಗಲೂ ಕರೆಯುತ್ತಾರೆ. ಕನ್ನಡ ಅರ್ಥಕೋಶಗಳಲ್ಲಿ "ಕೊಂತ" ಎಂಬ ಶಬ್ದಕ್ಕೆ ಈಟಿ, ಭಲ್ಲೆ, ಬರ್ಚಿ, ಎಂಬ ಅರ್ಥಗಳು ಸಿಕ್ಕುತ್ತವೆ. ಆದರೆ ಈಟಿಯ ಆಕಾರದ ಆಯುಧವು ಈಗ ಕೊಂತದವರ ಮಠದಲ್ಲಿ ಕಾಣುವದಿಲ್ಲ. ಅವರು ಪರಂಪರೆಯಿಂದ ಪೂಜಿಸುತ್ತ ಬಂದುದು ತ್ರಿಶೂಲವನ್ನು ಮಾತ್ರ. ಇದಕ್ಕೆಯೇ ಎಲ್ಲರೂ "ಕೊಂತ"ವೆಂದು ಕರೆದು ಪೂಜೆಮಾಡುತ್ತಾರೆ. ಐಹೊಳೆ ಗ್ರಾಮದಲ್ಲಿ ನಡೆಯುವ ಬೇಸಿಗೆಯ ಜಾತ್ರೆಯಲ್ಲಿ ಈ ಕೊಂತದ ಮೆರವಣಿಗೆಯು ನಡೆಯುತ್ತದೆ.

## ಕೊಂತದ ಮಹಿಮೆ.

ಶಿವನಿಂದ ಹೆಗ್ಗಪ್ಪನ ಸ್ವಾಧೀನವಾದ ಕೊಂತವು ಅವನಿಗೆ ಹೆಚ್ಚು ಮಹತ್ವವನ್ನು ಕೊಟ್ಟಿದೆ ಎಂದು ಒಪ್ಪಬೇಕು. ಅದರ ಪೂಜೆಯಿಂದ ಆತನು ಮುನಿಪದವಿಗೇರಿದನು. ಹಾಗು ಗಂಗೆ ಮಠಕ್ಕೆ ಗುರುವಾದನು.

ಐಹೊಳೆಗೆ ಹನ್ನೆರಡು ಮೈಲು ಅಂತರದಲ್ಲಿ ಪೂರ್ವ ಭಾಗಕ್ಕೆ ಚಂಡಾಲಿಂಗನ ಬೀಳಿಗೆ ಎಂಬಲ್ಲಿ ಉತ್ಸವ ದಿನವು ಬಂದೊಡನೆ

ಐಹೊಳೆಯ ಕೊಂತವು ಮತ್ತು ಎಲಬುರಿಗೆಯ ಕೊಂತವು ಅಲ್ಲಿರುವ ಶುಭಸೂಚನೆಯ ಕಟ್ಟಿಗೆ ಬರುವವಂತೆ. ಐಹೊಳೆಯ ಕೊಂತವು ಆ ಕಟ್ಟಿಯ ಸಮೀಪಕ್ಕೆ ಬಂದೊಡನೆ ಜನಗಳು ಆ ಸಂವತ್ಸರವು ಜಗಕ್ಕೆ ಶುಭಕೊಡುವದೆಂದು ಭಾವಿಸುತ್ತಾರೆ. ಹಾಗಾಗದೆ, ಎಲಬುರಿಗೆಯ ಕೊಂತವು ಅದಕ್ಕಿಂತಲೂ ಮೊದಲು ಆ ಕಟ್ಟಿಯನ್ನು ಮುಟ್ಟಿದರೆ ಅಶುಭವೆಂದು ತಿಳಿಯುವ ಕಾರ್ಯಕ್ರಮವು ಅವಿಚ್ಛಿನ್ನವಾಗಿ ನಡೆಯುತ್ತಬಂದಿದೆ.

## ವಿಮರ್ಶಕಾರರಿಗೆ ಹೊಸ ಶೋಧ

ಕನ್ನಡನಾಡಿನಲ್ಲಿ ಮೈಲಾರದೇವನನ್ನು ಪೂಜಿಸುವ ಕುರುಬ ಜನಾಂಗವು ವಿಶೇಷವಾಗಿದೆ. ಈ ದೇವರ ಆರಾಧನೆಯು ಪುರಾತನವಾದುದು. "ಮೈಲಾರನ ಪೂಜಿಸಿ ನಾಯಾಗಿ ಬೊಗಳುವರ ಕಂಡೆ" ಎಂದು ಬಸವಣ್ಣನವರು ತಮ್ಮ ವಚನದಲ್ಲಿ ಹೇಳಿದ್ದಾರೆ. ಬಸವಣ್ಣನವರ ಕಾಲಕ್ಕೆ ಮೈಲಾರನ ಪೂಜೆಯು ಅತಿ ಪ್ರಚಾರದಲ್ಲಿದ್ದಂತೆ ಕಂಡು ಬರುತ್ತದೆ. ಮದ್ರಾಸ ಪ್ರಾಂತದ ಆದವಾನಿಯ ಬಳಿಯಲ್ಲಿ ಮೈಲಾರ ದೇವರ ಗುಡ್ಡವಿದೆ. ಅಲ್ಲಿ ಆಶ್ವಿಜ ಮಾಸದಲ್ಲಿ ಸುತ್ತುಮುತ್ತು ಅತಿ ಪ್ರಸಿದ್ಧವಾದ ಜಾತ್ರೆಯಾಗುತ್ತದೆ. ಮತ್ತು ನೈಜಾಂ ಪ್ರಾಂತಕ್ಕೆ ಸೇರಿದ ಯಾತಗಿರಿಯ ಬಳಿಯಲ್ಲಿ ಮೈಲಾಪೂರವೆಂಬ ಗ್ರಾಮವಿದೆ. ಇಲ್ಲಿಯ ಪರ್ವತದಲ್ಲಿ ಮೈಲಾರನ ಮೂರ್ತಿಯಿದ್ದು ಮಕರಸಂಕ್ರಮಣ ಕಾಲಕ್ಕೆ ಪ್ರಸಿದ್ಧ ಜಾತ್ರೆಯಾಗುತ್ತದೆ. ಧಾರವಾಡ ಜಿಲ್ಹೆಯ ರಾಣೇಬಿನ್ನೂರಿಗ ಸಮೀಪವಾಗಿರುವ ದೇವರಗುಡ್ಡದಲ್ಲಿ ಮೈಲಾರಮೂರ್ತಿಯು ಇದ್ದು ವಿಜಯದಶಮಿಯಲ್ಲಿ ಪ್ರಸಿದ್ಧ ಜಾತ್ರೆಯಾಗುತ್ತದೆ. ಈ ಮೂರು ಪ್ರಾಂತಗಳು ಶುದ್ಧ ಕನ್ನಡ ನಾಡುಗಳಾಗಿವೆ. ಈ ಮೂರು ಸ್ಥಲಗಳ ಜಾತ್ರೆಯಲ್ಲಿ ಆ ಆ ಭಾಗದ ಭಕ್ತಜನರಾದ ಕುರುಬರು ತಮ್ಮ ಮನೆಯಲ್ಲಿನ ಮೈಲಾರಮೂರ್ತಿಗಳನ್ನು ಪ್ರತಿವರ್ಷ ಮೈಲಾರ ಗುಡ್ಡಗಳಿಗೆ ಅತಿ ವೈಭವದಿಂದ ಒಯ್ಯುತ್ತಾರೆ. ಈ ಮೂರ್ತಿಯ ಆರಾಧನೆಯಲ್ಲಿ ನಾಯಿಯಂತೆ ಬೊಗಳುವದು ಅವರಿಗೆ ಧಾರ್ಮಿಕ ವಿಧಿಯಾಗಿದೆ. ಮೈಲಾರನ ಅತ್ಯಂತ ಪ್ರಿಯಭಕ್ತರೆಂದರೆ "ಗೊಗ್ಗಯ್ಯ"ಗಳೆಂದು ಕರೆಸಿಕೊಳ್ಳುವ ಕುರುಬರು.

ಈ ಮೈಲಾರನ ಭಕ್ತರ ಧಾರ್ಮಿಕ ವಿಧಿಗಳನ್ನು ಇನ್ನೂ ಸೂಕ್ಷ್ಮವಾಗಿ ನಿರೀಕ್ಷಿಸಿದಷ್ಟು ಇವರಲ್ಲಿ ದ್ರಾವಿಡರ ಸಂಪ್ರದಾಯಗಳು ವಿಶೇಷವಾಗಿ ಕಂಡುಬರುತ್ತವೆ. ಈ ಎಲ್ಲ ಸಂಪ್ರದಾಯಗಳಿಗೂ ಮೈಲಾರ ಭಕ್ತನ ಹೆಸರು ಗೊಗ್ಗಯ್ಯ ಎಂದು ಕಲ್ಪಿಸಿಕೊಂಡಿರುವದನ್ನು ವಿಚಾರಿಸಿದರೆ ಇವೆಲ್ಲಕ್ಕೆ ಐಹೊಳೆಯ ಕೊಂತಮಠದ "ಹೆಗ್ಗಪ್ಪ"ನ ಪ್ರಭಾವವೇ ಮೂಲವೆಂದೂ, ಮೈಲಾರನ ಹಿರಿಯ ಪೂಜಾರಿಯೂ ಭಕ್ತಾಗ್ರಣಿಯೂ ಈತನೇ ಇರಬಹುದೆಂದೂ ಊಹಿಸಬೇಕಾಗುತ್ತದೆ. ಯಾಕೆಂದರೆ ಮೈಲಾರ ಭಕ್ತರಾದ ಗೊಗ್ಗಯ್ಯಗಳು ಗುಂಪುಗೂಡಿ ಕೊಂತಮಠಕ್ಕೆ ಬಂದು ಕೊಂತ, ಗೊಗ್ಗಯ್ಯ, ಹಾಗು ಈತನ ತಂಗಿ ಗಂಗೆಮಾಳಿ ಎಂಬವರ ಕಥೆಗಳನ್ನು ಪದ್ಯರೂಪವಾಗಿ ಹಾಡುತ್ತಾರೆ, ಹಾಗು "ಗೊಗ್ಗಯ್ಯ" "ಹೆಗ್ಗಪ್ಪ" "ಹೆಗ್ಗಯ್ಯ"ನೆಂಬ ಹೆಸರುಗಳಲ್ಲಿ ವಿಶೇಷ ಸಾಮ್ಯಗಳು ಕಂಡುಬರುತ್ತವೆ. ಹಾಗು ಈ ಎಲ್ಲ ಸಂಗತಿಗಳ ಸವಿಸ್ತರನೆ ಮಾಡಿ ಹೇಳುವ ಕಥೆಗಳೂ ಉಂಟು. ಆದರೆ ಅವೆಲ್ಲ ವಿಮರ್ಶಕರ ವಿಮರ್ಶೆಗೆ ಕಥೆಗಳಾಗಬಹುದೆಂದು ತರ್ಕಿಸಲಾಗಿದೆ. ಮೈಲಾರ ಗುಡ್ಡಗಳಲ್ಲಿ ಕೊಂತಮಠದವರಿಗೆ ಕೆಲವು ಬಾಬುಗಳೂ ಮಾನಮನ್ನಣೆಗಳೂ ಪರಂಪರೆಯಾಗಿ ನಡೆದುಬಂದಿವೆಯೆಂದು ತಿಳಿಯುತ್ತದೆ.

ಶೋಧಕರು ಇವೆಲ್ಲ ವಿಚಾರಗಳನ್ನು ಹೆಚ್ಚು ಹೆಚ್ಚು ಶೋಧಿಸಿದರೆ ಕನ್ನಡಿಗರ ತಮ್ಮದಾದ ಒಂದು ಸಂಸ್ಕೃತಿಯು ಒಂದು ಕಾಲದಲ್ಲಿ ಉಜ್ವಲವಾಗಿತ್ತೆಂದು ತಿಳಿಯಲರ್ಹವಿದೆ.

---

# ಶಿವಶರಣರ ಚರಿತ್ರೆಗಳು.

## ಭಾಗ ೩.

## ದೇವರ ದಾಸಿಮಯ್ಯ.

ದೇವರ ದಾಸಿಮಯ್ಯನು ಮುದನೂರು ಎಂಬ ಗ್ರಾಮದವನು. ಈ ಗ್ರಾಮವು ವಿಜಾಪುರ ಜಿಲ್ಲೆಯಲ್ಲಿ ಒಂದು ತಾಲೂಕು ಸ್ಥಳವಾದ ಸಿಂದಿಗಿಯ ಆಗ್ನೇಯ ದಿಕ್ಕಿಗೆ ೩೦ ಮೈಲುಗಳ ಮೇಲೆ ಇರುತ್ತದೆ. ಇದು ಈಗ ಕಲಬುರ್ಗಿ ಜಿಲ್ಲೆಯ ಸುರಪುರ ತಾಲೂಕಿನಲ್ಲಿದೆ. ಇಲ್ಲಿ ಅಸಂಖ್ಯ ಪುರಾತನ ದೇವಾಲಯಗಳೂ ತೀರ್ಥಗಳೂ ಇದ್ದು ಅವುಗಳಲ್ಲಿ ಅನೇಕ ದೇವಾಲಯಗಳು ಈಗ ನೆಲಸಮವಾಗಿವೆ. ಈ ದೇವಾಲಯಗಳಲ್ಲಿ ರಾಮನಾಥ ದೇವಾಲಯವೇ ಮಹತ್ವವಾದುದು. ಅಲ್ಲದೆ ಮಲ್ಲಿಕಾರ್ಜುನ ಗುಡಿಯೊಂದಿದ್ದು ಇದಾದರೂ ಮುಖ್ಯವಾದುದು. ಈ ದೇವಾಲಯಗಳ ಗೋಡೆಗಳ ಮೇಲೆ ಭಾವ ಪೂರ್ಣವಾದ ಗೊಂಬೆಗಳೂ ಸೂಕ್ಷ್ಮತರವಾದ ಕೆತ್ತಿಗೆಯ ಕುಸುರುಗಳೂ ತುಂಬಿ ಹೋಗಿದ್ದು ಈ ಸ್ಥಾನಗಳು ಚಿತ್ರಗಳಂತೆ ಕಂಗೊಳಿಸುತ್ತವೆ. ಈ ಗ್ರಾಮದಲ್ಲಿ ಚಾಲುಕ್ಯ, ರಾಷ್ಟ್ರಕೂಟ, ಕಲಚೂರ್ಯ, ಮೊದಲಾದ ರಾಜಮನೆತನಗಳ ಅನೇಕ ಶಿಲಾಶಾಸನಗಳಿದ್ದು ಅವುಗಳಲ್ಲಿ ಈ ಸ್ಥಳವು ದಕ್ಷಿಣ ವಾರಣಾಸಿ ಎಂದು ಕರೆಯಲ್ಪಟ್ಟಿರುತ್ತದೆ. ಇಲ್ಲಿ ರಾಮತೀರ್ಥ, ಲಕ್ಷ್ಮಣ ತೀರ್ಥ, ಹಾಲು ತೀರ್ಥ, ಸಂಗಮ ತೀರ್ಥ, ಪಾಂಡು ತೀರ್ಥ, ಮರುಳು ತೀರ್ಥ, ಸಕ್ಕರೆ ತೀರ್ಥ, ಎಂಬ ಹೆಸರಿನ ಏಳು ತೀರ್ಥಗಳಿವೆ. ಇವುಗಳಲ್ಲಿ ರಾಮತೀರ್ಥ ಮತ್ತು ಲಕ್ಷ್ಮಣ ತೀರ್ಥಗಳು ದೊಡ್ಡವಿದ್ದು ಅವುಗಳೊಳಗಿಂದ ನೀರಿನ ಪ್ರವಾಹವು ಯಾವಾಗಲೂ ಹರಿಯುತ್ತಿರುತ್ತದೆ. ಹಾಲು ತೀರ್ಥ ಮತ್ತು ಸಂಗಮ ತೀರ್ಥಗಳಲ್ಲಿ ಬರಗಾಲದಲ್ಲಿಯೂ ಕೂಡ ನೀರು ಸರಿಯುವದಿಲ್ಲ. ಈ ನೀರಿನ ಪ್ರವಾಹಗಳ ಮೂಲಕ ಗ್ರಾಮದ ಸುತ್ತಲೆಲ್ಲ ಅಸಂಖ್ಯ ತೋಟಪಟ್ಟಿಗಳು ಉಂಟಾಗಿದ್ದದರಿಂದ ಈ ಭಾಗದ

ಸೃಷ್ಟಿಯ ಸೌಂದರ್ಯವು ಮನಸ್ಸಿಗೆ ಆಲ್ಹಾದವನ್ನುಂಟುಮಾಡುತ್ತದೆ. ಈ ಗ್ರಾಮದಿಂದ ೪ ಮೈಲುಗಳ ಮೇಲೆ ಅಗ್ಗವಣಿಯ ಹೊನ್ನಯ್ಯನ ಅಗ್ನಿಗ್ರಾಮವೂ ಆರು ಮೈಲುಗಳ ಮೇಲೆ ಕೆಂಭಾವಿ ಭೋಗಣ್ಣನ ಕೆಂಭಾವಿ ಗ್ರಾಮವೂ ಇರುವವಲ್ಲದೆ, ಇಲ್ಲಿಂದ ೩೦-೪೦ ಮೈಲುಗಳ ಅಂತರದ ಮೇಲೆ ಸುತ್ತಲೂ ಮೊದಲಿನ ಕಾಲದಲ್ಲಿ ಆಗಿ ಹೋದ ಶಿವಶರಣರ ಅನೇಕ ಸ್ಥಾನಗಳಿರುತ್ತವೆ. ಈಗ ಇಲ್ಲಿ ಎರಡು ಸಾವಿರ ಜನ ವಸತಿಯು ಇದ್ದರೂ ಸುತ್ತಲೂ ಪಸರಿಸಿರುವ ಪುರಾತನ ಅವಶೇಷಗಳಿಂದ ಈ ಗ್ರಾಮವು ಹಿಂದಿನ ಕಾಲದಲ್ಲಿ ಬಹು ದೊಡ್ಡ ಪಟ್ಟಣವಾಗಿತ್ತೆಂದು ತೋರುತ್ತದೆ. ಇಂಥ ಸ್ಥಳದಲ್ಲಿ ದೇವರ ದಾಸಿಮಯ್ಯನು ಜನಿಸಿ ಅನೇಕ ಮಹತ್ವಗಳನ್ನು ನಡಿಸಿ ಶಿವಶರಣರಲ್ಲಿ ಅತ್ಯುಚ್ಚ ಸ್ಥಾನವನ್ನು ಪಡೆದಿದ್ದಾನೆ.

ಈ ಗ್ರಾಮದಲ್ಲಿ ಪುರಾತನಕಾಲದಲ್ಲಿ ಕಾಮಯ್ಯ ಮತ್ತು ಶಂಕರೀ ಎಂಬ ದಂಪತಿಗಳು ವಾಸಮಾಡುತ್ತಿದ್ದರು. ಅವರು ರಾಮನಾಥನ ಕೇವಲ ಭಕ್ತರು. ಅವರಿಗೆ ದೇವರದಾಸಿಮಯ್ಯನೆಂಬ ಪುತ್ರನು ಜನಿಸಿದನು. ಈತನು ಶಿವನ ಗಣಾಧೀಶ್ವರರಲ್ಲಿ ಮುಖ್ಯ ಸ್ಥಾನವನ್ನು ಹೊಂದಿದ ದೇವಾಂಗ ಗಣೇಶ್ವರನ ಅವತಾರವೆಂದು ಭಾವಿಸಲ್ಪಟ್ಟಿರುತ್ತಾನೆ.

ಲೋಕೋದ್ಧಾರ ಮಾಡುವದು ಪಂಚಮುಖ ಶಿವನ ಕಾರ್ಯವಾಗಿರುತ್ತದೆ. ಅವನಿಗೆ ಗಣಾಧೀಶ್ವರರು ಯಾವಾಗಲೂ ಸಹಾಯಕರಾಗಿ ವರ್ತಿಸುತ್ತಾರೆ. ಅವರು ಶಿವನ ಅಪ್ಪಣೆಯ ಮೇರೆಗೆ ಕಾಲಕಾಲಕ್ಕೆ ಜಗತ್ತಿನಲ್ಲಿ ಅವತರಿಸಿ ಲೋಕಕಲ್ಯಾಣ ಕಾರ್ಯಗಳನ್ನು ಮಾಡುವದುಂಟು. ಅವರು ಲೋಕದಲ್ಲಿರುವ ಅನಾಚಾರ, ಅಧರ್ಮಗಳನ್ನು ದೂರಮಾಡಿ ಧರ್ಮವನ್ನು ನೆಲೆಗೊಳಿಸುವದೇ ಇವರೆಲ್ಲರ ಮುಖ್ಯ ಕಾರ್ಯವಾಗಿರುತ್ತದೆ.

ಒಂದು ದಿನ ನಾರದ ಮಹರ್ಷಿಯು ತ್ರಿಲೋಕಗಳನ್ನು ಸಂಚರಿಸುತ್ತಾ ಶಿವನನ್ನು ಕೈಲಾಸದಲ್ಲಿ ಕಂಡು ಅವನಿಗೆ - ಲೋಕಗಳಲ್ಲೆಲ್ಲ ದೇವತೆಗಳೂ ಮನುಜರೂ ವಸ್ತ್ರರಹಿತರಾಗಿ ಚಳಿಯಿಂದ ವ್ಯಥೆಪಡುತ್ತಿದ್ದಾರೆ. ಅವರು ದಿಗಂಬರಿಗಳಾಗಿ ಚರಿಸುತ್ತಿದ್ದಾರೆ. ಅವರ ಬಾಧೆಯನ್ನು ಪರಿಹರಿಸಬೇಕೆಂದು ಸೂಚಿಸಿದನು. ಆಗ ಶಿವನು ಕೆಲಹೊತ್ತು ವಿಚಾರ ಮಾಡಿ ಇದಕ್ಕೊಂದು ಉಪಾಯವನ್ನು ಯೋಜಿಸಿದನು.

ಶಿವನು ಕೆಲಹೊತ್ತು ತನ್ನಲ್ಲಿ ಧ್ಯಾನ ಮಾಡುತ್ತ ತನ್ನ ಪ್ರಾಣಲಿಂಗ ವನ್ನು ಬಹಿಷ್ಕರಿಸಿದನು. ಅದು ಪುರುಷಾಕಾರವನ್ನು ತಳೆದು ಶಿವನ ಇದಿರಿಗೆ ನಿಂತು- ನನಗೇನಪ್ಪಣೆ ಎಂದು ಕೇಳಿತು. ಹೀಗೆ ಬಹಿರಂಗಕ್ಕೆ ಬಂದ ಆ ಪುರುಷನಲ್ಲಿ ಪರತತ್ವ, ಸದಾಶಿವತತ್ವ ಮತ್ತು ಶಿವತತ್ವ ಗಳು ಪುಂಜೀಕೃತವಾಗಿದ್ದವು. ಆತನು ಅತ್ಯಂತ ಪ್ರಕಾಶಮಾನನಾಗಿ ಹೊಳೆಯುತ್ತಿದ್ದನು. ಅವನು ಶಿವನ ಅಂಗದಿಂದ ಹೊರಟದ್ದರಿಂದ ಶಿವನು ಅವನನ್ನು 'ದೇವಾಂಗ' ನೆಂದು ಕರೆದು, ಅವನಿಗೆ ನೀನು ದೇವತೆಗಳಿಗೂ ಮನುಜರಿಗೂ ಬೇಕಾಗಿರುವ ಒಂದು ಆವರಣವನ್ನು ರಚಿಸೆಂದು ಆಜ್ಞಾಪಿಸಿದನು.

ಈ ದೇವಾಂಗನಿಗೆ ಲಿಂಗಕ್ರಿ, ಅವನ ಪ್ರಾಣದಲ್ಲಿ ಜಂಗಮಲಿಂಗವು, ಶಿಖಿಯಲ್ಲಿ ಇಷ್ಟಲಿಂಗವು, ಅವನು ಜಟಾಧಾರಿಯು, ಶಿಖಾ, ಕೃಷ್ಣಾ ಜಿನ, ಯಜ್ಞೋಪವೀತ, ಯೋಗವಟ್ಟಿಗೆ ಇವುಗಳನ್ನು ಧಾರಣಮಾಡಿ ದವನು, ಅವನಿಗೆ ಓಂಕಾರ ಮೂಲಮಂತ್ರವೇ ಧ್ಯಾನ, ಹೀಗೆ ಜಗ ತ್ತಿನಲ್ಲಿ ಅವನ ಆಚರಣೆಯಾಗಿತ್ತು. ಅವನು ವಸ್ತ್ರಗಳನ್ನು ನೇಯುತ್ತಾ ಇರುವಲ್ಲಿ, ಅವನಿಗೆ ಪರಮ ಷಟ್‌ಸ್ಥಲಗಳೇ ನೂಲುಗಳು, ಷಟ್‌ಶಕ್ತಿ ಗಳೇ ಅಳತೆಗಳು, ಷಡ್ಲಿಂಗಗಳೇ ಕುಂಚಿಗೆಗಳು, ನೂರೊಂದು ಸ್ಥಲ ಗಳೇ ಹುಂಜಗಳು, ಓಂಕಾರ ಮೂಲಪ್ರಣವುವೇ ಮಗ್ಗದ ಕುಣಿಯು, ಪಂಚಸಾದಃಖ್ಯಗಳೇ ಲಾಳಿಗಳು, ಹೀಗೆ ಸಾಧನೆಗಳನ್ನು ಕಲ್ಪಿಸಿಕೊಂಡು ಮೊದಲು ಚಿದಂಬರವನ್ನು ನೆಯ್ದು ಅದನ್ನು ಪರಶಿವನಿಗೆ ಅರ್ಪಿಸಿದನು.

ಹೀಗಿರಲು ಪರಶಿವನಲ್ಲಿ ತೊಳಗುತ್ತಿರುವ ತೇಜಸ್ಸೇ ಬಹಿರ್ಮು ಖವಾಗಲು ಅದರ ಮೂಲಕ ಒಬ್ಬ ಹೆಣ್ಣುಮಗುವು ಜನಿಸಿತು. ಅವಳು ದೇವದತ್ತೆ ಎಂಬ ಹೆಸರಿನಿಂದ ಪರಿಪೋಷಿಸಲ್ಪಡುವವಳಾದಳು. ಆ ವಹ್ನಿ ತನುಜೆಯನ್ನು ಶಿವನು ದೇವಾಂಗ ಗಣೇಶ್ವರನಿಗೆ ಕೊಟ್ಟು, ಮದುವೆ ಮಾಡಿದನು. ಅವರಿಂದ ಮುಂದೆ ಕ್ರಮೇಣ ನಾಡಿನಲ್ಲಿ ಅಸಂಖ್ಯ ವಸ್ತ್ರಕಾರರು ಉದಯಿಸಿದರು. ಅವರು ದೇವಾಂಗನಂತೆಯೇ ಬಟ್ಟೆ ಗಳನ್ನು ನೆಯ್ದು ಅದರಿಂದ ಸಮಸ್ತ ಜನರಿಗೆ ಉಂಟಾಗಿದ್ದ ಸೀತ ಬಾಧೆಯನ್ನು ಪರಿಹರಿಸಿದರು.

ಈ ವಸ್ತ್ರಕಾರರಿಗೆ ಶಿವನ ನಡೆ, ಶಿವನ ನುಡಿ, ಶಿವನ ಭಾವ, ಶಿವನ ಭಕ್ತಿ, ಶಿವಲಿಂಗ ದೀಕ್ಷೆಗಳುಂಟಾಗಿ ನಾಡಿನಲ್ಲಿ ಬಹು ಬಲಿಷ್ಠರಾಗಿ ಆಚರಿಸುವವರಾದರು. ಅವರಿಗೆ ದೇವಾಂಗರು, ವೀರಶೈವ ಮಹಾದೇವಾಂಗರು, ದೇವಾಂಗ ವೀರಶೈವರು, ಪಟಕಾರರು, ಸಾಲಿಗರು, ನೆಯ್ಗೆಯುವರು, ಇವೇ ಮೊದಲಾದ ನಾಮುಗಳನ್ನು ದೇಶ ಮಧ್ಯದಲ್ಲಿ ಧರಿಸುವವರಾದರು.

ಈ ದೇವಾಂಗ ಗಣೇಶ್ವರನು ಮುಂದೆ ವಿದ್ಯಾಧರ, ವರರುಚಿ, ದೇವಸಾಲಿ ಎಂಬಿವೇ ಮೊದಲಾದ ಕೆಲವು ಅವತಾರಗಳನ್ನು ಕಾಲ ಕಾಲಕ್ಕೆ ತಾಳಿ ಲೋಕವನ್ನು ಉದ್ಧರಿಸುವವನಾದನು. (೧)

ದೇವಾಂಗ ಗಣೇಶ್ವರನ ಅಸ್ತಿತ್ವವನ್ನೂ ಮಹತ್ವವನ್ನೂ ಹಿಂದಿನ ಕಾಲದ ಶಿವಶರಣರು ಒಪ್ಪಿಕೊಂಡಿರುತ್ತಾರೆ. ಅವರು ಅವನನ್ನು ತಮ್ಮ ಉಕ್ತಿಗಳಲ್ಲಿ ಸ್ಮರಿಸಿರುತ್ತಾರೆ. ಪ್ರಮಥ ಶ್ರೇಷ್ಠನಾದ ಚನ್ನ ಬಸವೇಶ್ವರನು ತನ್ನ ಒಂದು ವಚನದಲ್ಲಿ ಪ್ರಭುದೇವರ ಮತ್ತು ಬಸವೇಶ್ವರನ ಪೂರ್ವಾಪರವನ್ನು ಹೇಳುವಲ್ಲಿ ನುಡಿದಿರುವದೇನೆಂದರೆ:--

"ಕೃತಯುಗದಲ್ಲಿ **ದೇವಾಂಗ**ನೆಂಬ ಗಣೇಶ್ವರನಾಗಿ ನೀನು ಬಂದು ಆರಾಧಿಸುವಲ್ಲಿ ಸ್ಥೂಲಕಾಯನೆಂಬ ಜಂಗಮನಾಗಿ ಬಂದು ಲಿಂಗಾರ್ಚನೆ ಮಾಡಿ ಹೋದನು, ಆದರ ಕ್ರಿಯಾಂಗವನು ಮರೆದೆಯಲ್ಲ ಬಸವಣ್ಣ. ತ್ರೇತಾಯುಗದಲ್ಲಿ ಘಂಟಾಕರ್ಣನೆಂಬ ಗಣೇಶ್ವರನಾಗಿ ನೀನು ಬಂದು ಆರಾಧಿಸುವಲ್ಲಿ ಶೂನ್ಯ ಕಾಯನೆಂಬ ಜಂಗಮನಾಗಿ ಬಂದು ಲಿಂಗಾರ್ಚನೆಯ ಮಾಡಿ ಹೋದನು, ಆದರ ಕ್ರಿಯಾಂಗವನು ಮರೆದೆಯಲ್ಲ ಬಸವಣ್ಣ. ದ್ವಾಪರದಲ್ಲಿ ನೀನು ವೃಷಭನೆಂಬ ಗಣೇಶ್ವರನಾಗಿ ಬಂದು ಆರಾಧಿಸುವಲ್ಲಿ ಅನುಮಿಷನೆಂಬ ಜಂಗಮನಾಗಿ ಬಂದು ಲಿಂಗಾರ್ಚನೆಯ ಮಾಡಿಹೋದನು, ಆದರ ಕ್ರಿಯಾಂಗವನು ಮರೆದೆಯಲ್ಲ ಬಸವಣ್ಣ. ಕಲಿಯುಗದಲ್ಲಿ ನೀನು ಬಸವಣ್ಣ

---

**ಟೀಪು--(೧) ಮನು ಪುರಾಣ ಎಂಬುದರಲ್ಲಿ ದೇವಾಂಗನ ಹೆಸರಿನ ಬದಲು ಮನು ಎಂಬ ಹೆಸರು ಬಂದಿರುತ್ತದೆ. ಈ ಮನುವು ದೇವದತ್ತೆಯನ್ನು ಲಗ್ನವಾದನೆಂತಲೂ ಅವನಿಗೆ ೭೨ ಮಾನಸ ಪುತ್ರರು ಉದಯವಾದರೆಂತಲೂ ಈ ಪುತ್ರರಿಂದ ವಸ್ತ್ರಕಾರರು ಜನಿಸಿದರೆಂತಲೂ ಹೇಳಲ್ಪಟ್ಟಿರುತ್ತದೆ. ಈ ಮನುವು ವೀರಶೈವ ದೀಕ್ಷೆಯನ್ನು ಹೊಂದಿದ್ದನೆಂದು ಇದರಲ್ಲಿ ಹೇಳಿದೆ.**

ನೆಂಬ ಗಣೇಶ್ವರನಾಗಿ ಬಂದು ಆರಾಧಿಸುವಲ್ಲಿ ಪ್ರಭುದೇವರೆಂಬ ಜಂಗಮವಾಗಿ ಬಂದು ಲಿಂಗಾರ್ಚನೆಯ ಮಾಡಬಂದ ಕಾರಣ, ಇಂತೀ ದೇವಭಕ್ತನೆಂಬ ನಾಮ ನಾಟಕ ಬಿನ್ನಾಣವಲ್ಲದೆ ಬೇರೆಂದು ಕಂಡವರಿಗೆ ನರಕ ತಪ್ಪದು ಕೂಡಲ ಚನ್ನ ಸಂಗಮ ದೇವಾ" ಹೀಗೆ ಚನ್ನಬಸವನು ನುಡಿದಿದ್ದು. ಇದನ್ನು ಗೂಳೂರು ಸಿದ್ಧವೀರಣಾಚಾರ್ಯರು ತಮ್ಮ ಶೂನ್ಯ ಸಂಪಾದನೆಯ ಗ್ರಂಥದಲ್ಲಿ ಉದಹರಿಸಿದ್ದಾರೆ (ಶೂನ್ಯ ಸಂಪಾದನೆ ಪುಟ ೩೧೨.)

ಈ ದೇವಾಂಗ ಗಣೇಶ್ವರನ ಸಂತತಿಯುವರು ಕರ್ನಾಟಕ, ದ್ರಾವಿಡ ಮತ್ತು ಆಂಧ್ರ ದೇಶಗಳಲ್ಲಿ ವಾಸಿಸುವವರಾಗಿದ್ದಾರೆ. ಅಲ್ಲಿ ಅವರಿಗೆ ಮೇಲೆ ಹೇಳಿದಂತೆ ಅನೇಕ ತರದ ಅಭಿಧಾನಗಳುಂಟಾಗಿರುತ್ತದೆ. ಅವರಲ್ಲಿ ಅನೇಕರು ಪೂರ್ಣ ವೀರಶೈವರಾಗಿಯೂ ಕೆಲವರು ಮಿಶ್ರ ಶೈವರಾಗಿಯೂ ಈಗ ವ್ಯವಹರಿಸುವದು ಕಂಡುಬರುತ್ತದೆ.

ಆಂಧ್ರ ದೇಶದಲ್ಲಿ ಕರ್ನಾಟಕದಲ್ಲಿಯಂತೆಯೇ ವೀರಶೈವ ವಸ್ತ್ರಕಾರರಿದ್ದಾರೆ. ಅವರ ವಿಷಯವಾಗಿ ಶ್ರೀ ಜಗದ್ಗುರು ಕಾಶೀ ವಿಶ್ವಾರಾಧ್ಯ ಸಿಂಹಾಸನ ಪೀಠಾಧಿಪತಿಗಳಾದ ಈಗಿನ ಮಹಾಸ್ವಾಮಿಗಳವರು (ಮೊದಲು ಅವರು ಚಿದರೆ ಮಠದ ವೀರಭದ್ರ ಶರ್ಮರು ಬನಾರಸ ಸಿಟಿ) ಶಿವಾನುಭವ ಪತ್ರಿಕೆಯ ೪ನೇ ಸಂಪುಟ ಸಂಚಿಕೆ ೧ ಪುಟ ೬ಮತ್ತು ೧೩ ಇವುಗಳಲ್ಲಿ 'ಆಂಧ್ರ ವೀರಶೈವರು' ಎಂಬ ಶಿರೋನಾಮೆಯುಳ್ಳ ತಮ್ಮ ಒಂದು ಲೇಖದಲ್ಲಿ ಕೆಳಗೆ ಕಾಣಿಸಿದಂತೆ ನಿರೂಪಿಸಿರುತ್ತಾರೆ. ಅದು ಹೇಗೆಂದರೆ: —

**ಶೀಲವಂತರು:** – "ಆಂಧ್ರ ದೇಶದ ವೀರಶೈವರಲ್ಲಿ ಕಟ್ಟುನಿಟ್ಟುಗಳಾದ ಆಚಾರ (ಶೀಲ)ಗಳುಳ್ಳವರೆಂದರೆ ಇವರೇ! ಈ ವಿಷಯದಲ್ಲಿ ವರನ್ನು ಮಾಹೇಶ್ವರರು ಕೂಡಾ ಸರಿಗಟ್ಟಲಾರರು. ಪಾಲ್ಕುರಿಕೆ ಸೋಮನಾರಾಧ್ಯರ ತರುವಾಯ ಅರುವತ್ತುಮೂರು ಶೀಲಗಳಲ್ಲಿ ಕೆಲವನ್ನಾದರೂ ದೀಕ್ಷೆಯಿಂದ ಉಳಿಸಿಕೊಂಡು ಬಂದಿರುತ್ತಾರೆ. ಇವರ ಸಂಖ್ಯೆ ಬಹಳ ಅಲ್ಪವಾದುದು. ಇವರನ್ನು ಆಂಧ್ರಭಾಷಿಗಳು 'ಶೀಲವಂತುಲು' ಎಂದು ಕರೆಯುತ್ತಾರೆ. ಇವರು ಕೇವಲ ಮಾಹೇಶ್ವರರೊಡನೆ ಭುಂಜಿಸುತ್ತಾರಷ್ಟೇ. ಇವರ ಮುಖ್ಯ ವೃತ್ತಿ ನೆಯಿಗಾರಿಕೆ. ವಿದ್ಯಾಗಂಧರಹಿತ

ರಾದಾಗ್ಯೂ ತಕ್ಕ ಮಟ್ಟಿಗೆ ವೀರಶೈವ ಮತದ ಪ್ರಾಶಸ್ತ್ಯವನ್ನೂ ಕೆಲವು ವಿಶೇಷ ವಿಷಯಗಳನ್ನೂ ತಿಳಿದವರಾಗಿರುತ್ತಾರೆ. ಬಣಜಿಗರಿಗೂ ಶೀಲ ವಂತರಿಗೂ ಪರಸ್ಪರವಾಗಿ ಮನಸ್ಪರ್ಧೆಗಳಿವೆ. ಆದುದರಿಂದ ಇವರ ನ್ನವರೂ ಅವರನ್ನಿವರೂ ಕಡಿಮೆ ಕುಲದವರೆಂದು ತಿಳಿಯುವದುಂಟು. ಈ ಜಾತಿಯವರಲ್ಲಿ ವಿಶೇಷವಾಗಿಯರುಹಬೇಕಾದುದಿಷ್ಟೇ ! ''

**ದೇವಾಂಗರು:**—"ಇವರಲ್ಲಿ ಶೈವ ವೈಷ್ಣವ ಸ್ಮಾರ್ತ ಭೇದ ದಿಂದ ಮೂರು ಪಂಗಡಗಳಾಗಿವೆ. ಶೈವರೆಂಬುವರೇ ಲಿಂಗವಂತರು. ಉಳಿದವರಲ್ಲಿ ಕೆಲವರು ಜನಿವಾರ ಹಾಕಿ ತಿಲಕವನ್ನಿಟ್ಟುಕೊಂಡು ಸ್ಮಾರ್ತರಾಗಿಯೂ ಮತ್ತೆ ಕೆಲವರು ಹಣೆಯ ಮೇಲೆ ಮೂರು ಉದ್ದನ್ನ ಗೀಟು (ಉರ್ಧ್ವ ಪುಂಡ್ರ)ಗಳನ್ನು ಧರಿಸಿಕೊಂಡು ವೈಷ್ಣವರಾಗಿಯೂ ಕಾಣಿಸುತ್ತಾರೆ. ಲಿಂಗಧಾರಿಗಳ ಹವ್ಯಕವ್ಯಾದಿಗಳನ್ನು ಮಾಹೇಶ್ವರರು ನೆರವೇರಿಸುತ್ತಾರೆ. ವಿಶೇಷವಾಗಿ 'ಸ್ಥಳಪತಿ ಜಂಗಮ'ರೊಡನೆ ಇವರಿಗೆ ಸಂಬಂಧವಿದೆ. ಆಚಾರ ವಿಚಾರಗಳಿಂದಲೂ ಇವರು ಸ್ಥಳಪತಿ ಜಂಗ ಮರನ್ನೇ ಹೋಲುತ್ತಾರೆ. ವೈಷ್ಣವರಿಗಿಂತಲೂ ಶೈವದೇವಾಂಗಿಗಳು ಸಂಖ್ಯೆಯಿಂದ ಹೆಚ್ಚಿರಬಹುದು... ಗಂಜಾಂ, ಗೋದಾವರೀ, ಕೃಷ್ಣಾ, ಗುಂಟೂರು, ವಿಶಾಖಪಟ್ಟಣ ಜಿಲ್ಲೆಗಳು ಇವರಿಗೆ ಮುಖ್ಯ ವಾಸ ಸ್ಥಾನವು. ಅದರಂತೆ ಇವರ ಮುಖ್ಯ ವೃತ್ತಿ ನೆಯಿಗಾರಿಕೆಯೇ-ಆಂಧ್ರ ದೇಶದಲ್ಲಿಯವರಿಗೆ 'ದೇವಾಂಗುಲು' ಎಂದು ಹೆಸರುಂಟು. ಸಂಗೀತ ಸರಸ್ವತಿ ಎನಿಸಿದ ಶ್ರೀ ತ್ಯಾಗರಾಜರು ದೇವಾಂಗ ಜಾತಿಗೆ ಸೇರಿದವ ರೆಂದು ಪ್ರತೀತಿ. ಇವರ ತೆಲುಗು ಕೃತಿ (ಪದ)ಗಳನ್ನು ಇಡೀ ದಕ್ಷಿಣ ಭಾರತ ದೇಶದ ಸಂಗೀತ ವಿದ್ವಾಂಸರೆಲ್ಲರೂ ಅವಶ್ಯವಾಗಿ ಅಭ್ಯಾಸಿ ಸುತ್ತಾರೆನ್ನುವದು ವಿಜ್ಞರಿಗೆ ಪರಿಚಯವೇ ಸರಿ.

"ಲಿಂಗವಂತ ದೇವಾಂಗರಿಗೆ ಜಂಗಮರೇ ಗುರುಗಳಾಗಿರುತ್ತಾರೆ. ದೇವಾಂಗಿಗಳ ಮೂಲ ಪುರುಷನ ಉತ್ಪತ್ತಿಯನ್ನು ಕುರಿತು 'ದೇವಾಂಗ ಪುರಾಣ'ದಲ್ಲಿ---"ಈಶ್ವರನ ಶರೀರದಿಂದ ದೇವಲ (ದೇವಾಂಗ)ನೆಂಬ ಋಷಿ ಹುಟ್ಟಿ ಬ್ರಹ್ಮನಿಗೂ ಅಶಕ್ಯವಾದ ತಂತುಕಾರಕ ವಿದ್ಯೆಯನ್ನು ಸಂಪಾದಿಸಿ ವಸ್ತ್ರಗಳನ್ನು ಸಿದ್ಧಗೊಳಿಸಿ ದೇವತೆಗಳಿಗೆ ಕೊಟ್ಟನು. ಅಲ್ಲದೆ ಮತ್ತು ಶಂಕರನ ಅಪ್ಪಣೆಯ ಮೇರೆಗೆ ಆಮೋದಪುರಕ್ಕೆ ರಾಜನಾಗಿ

ಶೇಷನ ಪುತ್ರಿಯಾದ ಚಂದ್ರರೇಖೆಯನ್ನೂ ಸೂರ್ಯನ ಸೋದರಿಯಾದ ದೇವದತ್ತೆಯನ್ನೂ ಲಗ್ನಮಾಡಿಕೊಂಡು, ದಿವ್ಯಾಂಗ, ವಿಮಲಾಂಗ, ಧವಳಾಂಗರೆಂಬ ಮಕ್ಕಳನ್ನು ಪಡೆದನು. ಆ ಮೇಲೆ ರಂಭಾಶಾಪದಿಂದ ೫ ಸಾವಿರ ವರುಷಗಳ ವರೆಗೆ ಶೂದ್ರನಾಗಿಯೂ ೫ ಸಾವಿರ ವರುಷಗಳ ವರೆಗೆ ಬ್ರಾಹ್ಮಣನಾಗಿಯೂ ಜೀವಿಸಿದನು, ಎಂದು ಇದರಲ್ಲಿ ವರ್ಣಿಸಲ್ಪಟ್ಟು ಕಡೆಗೆ ದೇವಾಂಗಿಗಳು ಅವನ ವಂಶದವರೆಂದೇ ನಿರೂಪಿಸಲ್ಪಟ್ಟಿದೆ. 'ಪಟ್ಟುಸಾಲೆವಾರೆ'ಂಬ ಜಾತಿಯೂ ಇವರೊಳಗೆ ಮತ್ತೊಂದಿದೆಯೆಂದು ತಿಳಿದುಬರುತ್ತಿದೆ. ಇವರು ಪಶ್ಚಿಮಾಂಧ್ರ ದೇಶದಲ್ಲಿ ವಾಸಿಸುತ್ತಾರೆ."

ಹಿಂದೆ ವಿವರಿಸಿದ ಪ್ರಕಾರ ದೇವಾಂಗ ಗಣೇಶ್ವರನು ಕೆಲವು ಅವತಾರಗಳನ್ನು ತಾಳಿ ಹೋದಬಳಿಕ ಭೂಲೋಕದಲ್ಲಿ ಅಧರ್ಮವೂ ಅನಾಚಾರಗಳೂ ಪುನಃ ಹೆಚ್ಚಾದ್ದನ್ನು ನಾರದಮುನಿಯು ತಿಳಿದು ಅದನ್ನು ಶಿವನಿಗೆ ಅರಿಕೆ ಮಾಡಬೇಕೆಂದು ಅವನಿದ್ದೆಡೆಯಾದ ಕೈಲಾಸಕ್ಕೆ ಹೋಗಿ ಇದನ್ನು ನಿವೇದಿಸಲು, ಶಿವನು ಇದನ್ನು ದೂರಮಾಡಲು ದೇವಾಂಗ ಗಣೇಶ್ವರನೇ ಸಮರ್ಥನೆಂದು ತಿಳಿದು ಪುನಃ ಅವನಿಗೆ— ನೀನು ಭೂಲೋಕದಲ್ಲವತರಿಸಿ ಧರ್ಮೋದ್ಧಾರ ಮಾಡಬೇಕೆಂದು ತಿಳಿಸಲು ಅವನು ಅದಕ್ಕೆ ಒಪ್ಪಿ ಕರ್ನಾಟಕದಲ್ಲಿ ಪುಣ್ಯಭೂಮಿ ಎಂದೆನಿಸಿಕೊಂಡ ಮುದುನೂರಲ್ಲಿ ಕಾಮಯ್ಯ ಮತ್ತು ಶಂಕರೀ ಇವರಲ್ಲಿ ಮಗನಾಗಿ ಜನಿಸಿದನು. ಆ ಸಮಯದಲ್ಲಿ ರಾಮನಾಥಲಿಂಗದೊಳಗಿಂದ ಒಬ್ಬ ಜಂಗಮನು ಉದ್ಭವಿಸಿ, ಅವನು ಆ ಮಗುವನ್ನು ಕಂಡು ಆಶೀರ್ವದಿಸಿ, ಅವನಿಗೆ ದೇವರದಾಸಿಮಯ್ಯನೆಂಬ ಹೆಸರನ್ನಿಟ್ಟು ತಾನು ಅದೇ ಲಿಂಗದಲ್ಲಿ ಅಂತರ್ಧಾನನಾದನು. ಅಂದಿನಿಂದ ದೇವರದಾಸಿಮಯ್ಯನು ರಾಮನಾಥನ ಪೂರ್ಣ ಭಕ್ತನಾಗಿ ಆಚರಿಸಹತ್ತಿದನು.

ಶಿವಶರಣರಲ್ಲಿ ಅವತಾರಿಕ ಪುರುಷರೆಂತಲೂ ಮಹಾತ್ಮರೆಂತಲೂ ನಾವು ಎರಡು ವಿಭಾಗಗಳನ್ನು ಮಾಡಬಹುದು. ಅವತಾರಿಕ ಪುರುಷರು ಶಿವನಿಂದ ನಿರೂಪಣೆ ಹೊಂದಿ ಕೆಲವೊಂದು ವಿಶಿಷ್ಟ ಕಾರ್ಯವನ್ನು ಮಾಡಲು ಜಗತ್ತಿಗೆ ಬಂದವರು ಮತ್ತು ಮಹಾತ್ಮರಾದವರು ಶಿವನಿಂದ ನಿರೂಪಣೆ ಹೊಂದದಿದ್ದರೂ ತಮ್ಮ ಆಚರಣೆಯಿಂದ ಉಚ್ಚ

ಸ್ಥಾನವನ್ನು ಹೊಂದಿದವರು, ಮಹಾದೇವಿಯಕ್ಕ. ಅಲ್ಲಮಪ್ರಭು, ಬಸವಾದಿಪ್ರಮಥರೂ ರೇವಣಸಿದ್ಧಾದಿ ಪಂಚಪೀಠಗಳ ಮೂಲ ಸಂಸ್ಥಾಪಕರೂ ಮೊದಲಿನ ವರ್ಗದಲ್ಲಿ ಬರುತ್ತಾರೆ. ಇವರು ಕಾಲಕಾಲಕ್ಕೆ ಸಮಾಜದಲ್ಲಿ ಉದ್ಭವಿಸಿ ಕ್ರಾಂತಿಯನ್ನುಂಟು ಮಾಡುತ್ತಾರೆ. ಬೇರೆ ಶಿವಶರಣರು ಹೀಗೆ ಅನುಜ್ಞೆಯನ್ನು ಹೊಂದದೆ ಇದ್ದರೂ ತಮ್ಮ ಆಚರಣೆಯಿಂದ ನಾಡಿನಲ್ಲಿ ಧರ್ಮಜಾಗ್ರತಿಯ ಕಾರ್ಯವನ್ನು ಮಾಡುತ್ತಾರೆ. ಈ ಉಭಯತರಲ್ಲಿ ಅವತಾರಿಕ ಪುರುಷರ ಸಂಖ್ಯೆಯು ಸ್ವಾಭಾವಿಕವಾಗಿ ಬಹಳ ಕಡಿಮೆ ಇರುತ್ತದೆ. ಆದರೂ ಅವರು ಯಾವ ಯಾವ ಕಾಲದಲ್ಲಿ ಉದ್ಭವಿಸಿದರು, ಅವರು ಯಾವ ಯಾವ ಕಾರ್ಯಗಳನ್ನು ಮಾಡಿದರು ಎಂಬುದನ್ನು ನಾವು ನಿರೀಕ್ಷಿಸುವದು ಬಹು ಮಹತ್ವವಾದುದು. ಇದರಿಂದ ಸಮಾಜದಲ್ಲಿ ಉತ್ಕ್ರಾಂತಿಯು ಹೇಗೆ ಆಗುತ್ತ ಬಂದಿತೆಂಬುದನ್ನು ತಿಳಿಯಲು ನಮಗೆ ಬಹಳ ಸಹಾಯವಾಗುತ್ತದೆ.

ನಾವು ಇದುವರೆಗೆ ಪ್ರಸಿದ್ಧಮಾಡಿದ ಶಿವಶರಣರ ಚರಿತ್ರೆಗಳನ್ನು ನಿರೀಕ್ಷಿಸಿದಲ್ಲಿ ವರದಾನಿಗುಡ್ಡಮ್ಮ, ಬಹುರೂಪಿಚೌಡಯ್ಯ, ಶಿವಯೋಗಿ ಮಲ್ಲರಸ, ಸಕಲೇಶಮಾದರಸ ಇವರು ಅವತಾರಿಕ ಪುರುಷರೆಂದು ನಾವು ತಿಳಿಯಬಹುದು. ಅವರು ಶಿವನಿಂದ ನಿಶ್ಚಿತ ಆಜ್ಞೆಯನ್ನು ಹೊಂದಿ ಲೋಕದಲ್ಲಿ ಅವತರಿಸಿ ಧರ್ಮೋದ್ಧಾರದ ವಿಶಿಷ್ಟಕಾರ್ಯಗಳನ್ನು ಮಾಡಿದ್ದಾರೆ. ಇವರಲ್ಲಿ ಬಹುರೂಪಿಚೌಡಯ್ಯನು ಶಿವನ ಸನ್ನಿಧಿಯಲ್ಲಿ ಶ್ರೀಧರ ಗಣೇಶ್ವರನಾಗಿದ್ದನು. ಅವನು ಭೂಲೋಕದಲ್ಲಿ ಜನಿಸಿ ಶೈವಧರ್ಮೀಯರಲ್ಲಿ ಕ್ರಾಂತಿಯನ್ನು ಮಾಡಿದನು. ವರದಾನಿಗುಡ್ಡಮ್ಮೆಯು ಪಾರ್ವತಿಯ ಅವತಾರಳು. ಅವಳು ಇಡೀ ಕರ್ನಾಟಕದಲ್ಲಿಯೂ ಶ್ರೀಶೈಲ ಪರ್ವತದ ಪ್ರಾಂತದಲ್ಲಿಯೂ ಧರ್ಮಕ್ರಾಂತಿಯನ್ನು ಮಾಡಿದಳು. ಸಕಲೇಶಮಾದರಸ, ಶಿವಯೋಗಿಮಲ್ಲರಸರು ಸಹನೇಶ ಮತ್ತು ಗಗನೇಶ ಎಂಬ ಇಬ್ಬರು ಗಣಾಧೀಶ್ವರರು. ಇವರು ಕ್ರಿಯಾ ಮಾರ್ಗ, ಜ್ಞಾನ ಮಾರ್ಗ ಇವುಗಳಲ್ಲಿರುವ ತಿಕ್ಕಾಟವನ್ನು ದೂರ ಮಾಡಲು ಅವತರಿಸಿದರು. ಇವರಲ್ಲಿ ಸಕಳೇಶ ಮಾದರಸನು ಧರ್ಮ ಜಾಗ್ರತಿಯನ್ನು ಮಾಡಿದ ರಾಜತ್ರಯರಲ್ಲಿ ಒಬ್ಬನೆಂದು ಭಾವಿಸಲ್ಪಟ್ಟಿದ್ದು ಅವನನ್ನು ಆಂಧ್ರ ವೀರಶೈವರು ಬಹಳ ಪೂಜ್ಯಭಾವದಿಂದ ಕಾಣುತ್ತಾರೆ.

ಅವತಾರ ಪುರುಷರು ತಾಳಿದ ಬೇರೆ ಬೇರೆ ಅವತಾರಗಳಲ್ಲಿ ಅವರಲ್ಲಿ ಭಿನ್ನ ಭಿನ್ನ ವರ್ತನೆಗಳಿರುವದನ್ನು ನಾವು ಕಾಣಬಹುದು. ಆದರೂ ಈ ಭಿನ್ನತೆಗಳ ನಿರೀಕ್ಷಣೆಯಿಂದ ಸಮಾಜದ ಉತ್ಕ್ರಾಂತಿಯನ್ನು ಕಂಡು ಹಿಡಿಯಲು ನಮಗೆ ಬಹಳ ಸಹಾಯವಾಗುತ್ತದೆ.

ಶಿವಶರಣರಲ್ಲಿ ದೇವರದಾಸಿಮಯ್ಯನನ್ನು ನಾವು ಇಂಥ ಮಹತ್ವದ ಅವತಾರಪುರುಷರಲ್ಲಿ ಎಣಿಸಬಹುದು. ಅವನು ದೇವಾಂಗ ಗಣೇಶ್ವರನ ಅವತಾರವೆಂದು ತಿಳಿಯಲ್ಪಟ್ಟದ್ದರಿಂದ ಅವನ ಮೊದಲನೆಯ ಅವತಾರವಾದ ದೇವಾಂಗನ ಸಂಕ್ಷಿಪ್ತ ವೃತ್ತಾಂತವನ್ನು ನಾವು ಇಲ್ಲಿ ಕೊಟ್ಟಿದ್ದೇವೆ. ಆದರೆ ಕರ್ನಾಟಕದಲ್ಲಿಯ ವೀರಶೈವ ನೆಯ್ಗೆಯವರಿಗೆ ದೇವಾಂಗರೆಂಬ ಹೆಸರು ಇರುವದಿಲ್ಲ. ಆಂಧ್ರದೇಶದಲ್ಲಿಯವರಿಗೆ ಈ ಹೆಸರು ಇದ್ದಹಾಗೆ ತೋರುತ್ತದೆ. ಆದರೆ ಶಿವಶರಣರು ವೀರಶೈವರಲ್ಲಿ ಭೇದ ವಿಭೇದಗಳನ್ನು ಒಪ್ಪದೆ ಎಲ್ಲರೂ ವೀರಶೈವರು, ಲಿಂಗಿಗಳು ಎಂದು ಭಾವಿಸಬೇಕೆಂದು ತಮ್ಮ ಉಕ್ತಿಗಳಲ್ಲಿ ಪ್ರತಿಪಾದಿಸುವದನ್ನು ನಾವು ಲಕ್ಷಿಸತಕ್ಕದ್ದು.

ದೇವರದಾಸಿಮಯ್ಯನು ತನ್ನ ಬಾಲ್ಯವನ್ನು ಮುದನೂರಲ್ಲಿ ಕಳೆದ ಹಾಗೆ ತೋರುತ್ತದೆ. ಆದರೆ ಮುಂದೆ ಅವನಲ್ಲಿ ತನ್ನ ಶಿವಜ್ಞಾನವನ್ನು ಹೆಚ್ಚಿಸಬೇಕೆಂಬ ಆಕಾಂಕ್ಷೆಯು ಬಲಿಯಿತು. ಆಗ ಅವನು ಶ್ರೀಶೈಲ ಪರ್ವತ ಪ್ರದೇಶಕ್ಕೆ ತೆರಳಿದನು. ಹಿಂದುಸ್ಥಾನದಲ್ಲಿ ಅತ್ಯಂತ ಪ್ರಸಿದ್ಧಿ ಹೊಂದಿದ ದ್ವಾದಶಲಿಂಗಗಳಲ್ಲಿ ಶ್ರೀಮಲ್ಲಿಕಾರ್ಜುನ ಲಿಂಗವು ಒಂದಾಗಿರುತ್ತದೆ.. ಈ ಪರ್ವತಪ್ರಾಂತವು ಶಿವಜ್ಞಾನಿಗಳ ಮತ್ತು ಯೋಗಿಗಳ ಕೇಂದ್ರಸ್ಥಾನವಾಗಿರುತ್ತದೆ. ಇದು ಪೂರ್ವಕಾಲದಲ್ಲಿ ಒಂದು ಪಟ್ಟಣವಾಗಿತ್ತೆಂದು ಅಲ್ಲಿಯ ಶಿಲಾಶಾಸನಗಳಿಂದ ತಿಳಿದುಬರುತ್ತದೆ. ಈ ಪ್ರದೇಶದಲ್ಲಿ ತಪಸ್ಸನ್ನಾಚರಿಸಬೇಕೆಂದು ದೇವರದಾಸಿಮಯ್ಯನು ಅಲ್ಲಿಗೆ ಹೊರಟು ಬಂದನು. ಈ ಭಾಗವು ನಿಬಿಡವಾದ ವೃಕ್ಷಲತೆಗಳಿಂದಲೂ ಅರಣ್ಯಪ್ರದೇಶಗಳಿಂದಲೂ ಬಹಳ ಮನೋಹರವಾದುದು. ಅಲ್ಲಿ ಅಷ್ಟಾಂಗನಿಷ್ಠರಾದ ಮುನಿಗಳೂ ತಪಸ್ಸನ್ನಾಚರಿಸುವವರೂ ಇದ್ದು ಅವರನ್ನು ಅವನು ಸಂದರ್ಶಿಸುತ್ತ ಪಾತಾಳಗಂಗೆಗೆ ಬಂದು, ಅಲ್ಲಿಯ ಪವಿತ್ರ ತೀರ್ಥದಲ್ಲಿ ಮಿಂದು, ಅಲ್ಲಿಂದ ಭೀಮೇಶ್ವರ ಲಿಂಗದ ದರ್ಶನವನ್ನು ಹೊಂದಿ ಬಿಲ್ವಾರಣ್ಯವನ್ನು ಪ್ರವೇಶಿಸಿದನು. ಅಲ್ಲಿ ಅವನು ಪರಮಾತ್ಮನ ಧ್ಯಾನದಲ್ಲಿ ಇರಹತ್ತಿದನು.

ಹೀಗೆ ಅವನು ತಪಸ್ಸು ಮಾಡುತ್ತ ಕೆಲವುಕಾಲ ಕಳೆದಬಳಿಕ ಶ್ರೀಮಲ್ಲಿಕಾರ್ಜುನ ದೇವನು ಅವನ ನಿಷ್ಠೆಗೆ ಮೆಚ್ಚಿ ಅವನಿಗೆ ಪ್ರತ್ಯಕ್ಷ ನಾಗಿ ನಿನ್ನ ಇಷ್ಟವೇನೆಂದು ಕೇಳಲು ದೇವರದಾಸಿಮಯ್ಯನು ತನಗೆ ಮುಕ್ತಿಯ ಮಾರ್ಗವನ್ನು ತೋರಿಸಬೇಕೆಂದು ವಿಜ್ಞಾಪಿಸಿಕೊಂಡನು. ಆಗ ಶ್ರೀಮಲ್ಲಿಕಾರ್ಜುನನು ಅವನಿಗೆ ಇಂಥ ಕಷ್ಟಕರವಾದ ತಪಸ್ಸನ್ನು ಆಚರಿಸಬೇಡ, ತ್ರಿಲಿಂಗಗಳನ್ನು ಅರಿ, ಎಂದು ಹೇಳಿ ತನ್ನ ಸಮ್ಮುಖದಲ್ಲಿ ಶಿವಯೋಗಮಂಟಪವನ್ನು ರಚಿಸಿ, ಮಾಹೇಶ್ವರ ಮೂರ್ತಿಗಳನ್ನು ಬರಮಾಡಿಕೊಂಡು ದಾಸಿಮಯ್ಯನಿಗೆ ಲಿಂಗದೀಕ್ಷೆಯನ್ನು ಮಾಡಿ ಇಷ್ಟಲಿಂಗವನ್ನು ಅನುಗೊಳಿಸಿ, ಪರಶಿವಲಾಂಛನಗಳನ್ನು ಅವನಿಗೆ ತೊಡಿಸಿ, ಅಲ್ಲಿಯ ಸಿಂಹಾಸನೇಶನಾದ ಚಂದ್ರಗುಂಡ ದೇಶಿಕೇಂದ್ರನ ಶುಶ್ರೂಷೆಯಲ್ಲಿ ಇರಬೇಕೆಂದು ಆಜ್ಞಾಪಿಸಿದನು. ಹೀಗೆ ಆಜ್ಞಾಪಿಸಿ ಅವನಿಗೆ ವಸ್ತ್ರರಚನಾ ಕಾಯಕವನ್ನು ಕೈಕೊಂಡು ಅದರ ಮೂಲಕ ದಾಸೋಹದಲ್ಲಿರಲು ನಿಯಾಮಿಸಿದನು. ಮುಂದೆ ದೇವರದಾಸಿಮಯ್ಯನು ಚಂದ್ರಗುಂಡ ಅಥವಾ ಶಶಿಗುಂಡ ದೇಶಿಕನಿಂದ ಶಿವಾನುಭವದ ಪರಮರಹಸ್ಯಾರ್ಥಗಳನ್ನು ತಿಳಿದುಕೊಂಡು ವಸ್ತ್ರಗಳನ್ನು ಮಾಡುವದನ್ನೇ ತನ್ನ ಕಾಯಕವಾಗಿ ಇಟ್ಟುಕೊಂಡು ಅದರಿಂದ ಆರ್ಜಿಸಿದ ದ್ರವ್ಯದಿಂದ ಗುರು ಲಿಂಗ ಜಂಗಮದ ದಾಸೋಹವನ್ನು ಜರಿಗಿಸುತ್ತ ವಿರಕ್ತಾಶ್ರಮಿಯಾಗಿ ಕೆಲವುಕಾಲ ಶ್ರೀಶೈಲದಲ್ಲಿ ಕಳೆದನು. ಶಿವಶರಣರು ಶರೀರಕ್ಕೆ ಅತ್ಯಂತ ಕಷ್ಟಕರವಾಗಿರುವ ತಪಸ್ಸನ್ನಾಚರಿಸದೆ, ಲಿಂಗಧಾರಿಗಳಾಗಿ ಲಿಂಗದ ನೆಲೆ ಕಲೆಗಳನ್ನು ಅರಿತುಕೊಂಡು ಲಿಂಗನಿಷ್ಠರಾಗಿ ತ್ರಿಲಿಂಗಗಳನ್ನರಿಯುವದೇ ಅವರ ಮಾರ್ಗವಾಗಿದೆ. ಇದೇ ರೀತಿಯಾಗಿ ಆಚರಿಸುತ್ತ ದೇವರದಾಸಿಮಯ್ಯನು ಶ್ರೀಶೈಲದಲ್ಲಿ ಶ್ರೀಮಲ್ಲಿಕಾರ್ಜುನನ ಸನ್ನಿಧಿಯಲ್ಲಿ ಇರಹತ್ತಿದನು.

ಈ ಕಾಲದಲ್ಲಿ ದೇವರ ದಾಸಿಮಯ್ಯನು ವಿರಕ್ತಾಶ್ರಮವನ್ನು ವಹಿಸಿ ವೀರಶೈವ ಮತಪ್ರಚಾರ ಕಾರ್ಯವನ್ನು ಮಾಡುತ್ತ ಈ ನಾಡಿನಲ್ಲಿ ಕೆಲ ಕಾಲವಿದ್ದನು. ಅವನು ಈ ಭಾಗದಲ್ಲಿದ್ದ ವಸ್ತ್ರಕಾರರಿಗೆಲ್ಲ ಶಿವಾನುಭವವನ್ನು ಬೋಧಿಸಿ ಅವರನ್ನು ಲಿಂಗಧಾರಿಗಳನ್ನಾಗಿ ಮಾಡಿದನು. ಆ ಮೇಲೆ ಅವನು ಶ್ರೀಶೈಲ ಪ್ರಾಂತವನ್ನು ಬಿಟ್ಟು ಸ್ವಗ್ರಾಮಕ್ಕೆ ಹೊರಡಲು ಉದ್ಯುಕ್ತನಾದನು.

ದೇವರ ದಾಸಿಮಯ್ಯನು ಹೀಗೆ ಮುದನೂರಿಗೆ ಬರುತ್ತಾ ಇರುವಲ್ಲಿ ಅವನು ದಾರಿಯಲ್ಲಿದ್ದ ಒಂದು ಮಹತ್ತಾದ ಅರಣ್ಯದಲ್ಲಿ ಒಂದು ಬಿಲ್ವ ವೃಕ್ಷದ ಕೆಳಗೆ ಕುಳಿತು ವಿಶ್ರಮಿಸುತ್ತಿದ್ದನು. ಆಗ ಅವನು ಅಲ್ಲಿ ಬೇಟೆಯಾಡುತ್ತ ಮೃಗಗಳನ್ನು ಹಿಂಸಿಸಿ ಅವುಗಳ ಮಾಂಸವನ್ನು ತಿಂದು ಉಪಜೀವನ ಮಾಡುತ್ತಿದ್ದ ಕಾಡು ಜನರ ಅನೇಕ ತಂಡಗಳನ್ನು ನೋಡಿದನು. ಅವರನ್ನು ಕಂಡು ಅವರ ಆಚರಣೆಯ ವಿಷಯವಾಗಿ ಅತ್ಯಂತ ಕನಿಕರ ಪಟ್ಟು ಅವರಿಗೆ ಶಿವಜ್ಞಾನವನ್ನು ಬೋಧಿಸಬೇಕೆಂಬ ಆಕಾಂಕ್ಷೆಯು ಅವನಲ್ಲಿ ಹುಟ್ಟಿತು. ಮಹಾನುಭಾವರಾದ ಶಿವಾನುಭವಿಗಳಿಗೆ ಈ ತರದ ಬುದ್ಧಿಯು ಉಂಟಾಗುವದು ಸ್ವಾಭಾವಿಕವಾದುದು.

ಈ ಕಾಡು ಜನರು ಕಾರ್ತವೀರ್ಯಾರ್ಜುನನ ವಂಶದವರು. ಅವರು ರಾಜ್ಯಪದಭ್ರಷ್ಟರಾಗಿ ಇಂಥ ಕಾಡು ಸ್ಥಿತಿಗೆ ಬಂದಿದ್ದರ ವಿವರವು ಪುರಾಣೋಕ್ತವಾಗಿ ಇರುವದು ಹೇಗೆಂದರೆ:—

ಕಾರ್ತವೀರ್ಯಾರ್ಜುನನು ತಾನಿದ್ದ ಕಾಲದಲ್ಲಿ ಅತ್ಯಂತ ಪ್ರಬಲ ರಾಜನು. ಅವನು ಒಂದು ದಿನ ತನ್ನ ದಂಡಾಳುಗಳೊಂದಿಗೆ ಬೇಟೆಯಾಡುತ್ತ ಜಮದಗ್ನಿ ಮತ್ತು ಅವನ ಹೆಂಡತಿ ರೇಣುಕಾದೇವಿ ಇವರು ಇದ್ದ ಆಶ್ರಮಕ್ಕೆ ಅಕಸ್ಮಾತ್ತಾಗಿ ಬಂದನು. (೧) ಆಗ ಜಮದಗ್ನಿಯು ತನ್ನ ಆಶ್ರಮದಲ್ಲಿ ಕಾಮಧೇನುವಿನನ್ನು ಬರಮಾಡಿಕೊಳ್ಳಲು ಅದರ ಮಹತ್ವದಿಂದ ರೇಣುಕಾದೇವಿಯು ರಾಜನ ಇಡೀ ಸೈನ್ಯಕ್ಕೆ ಭೋಜನವನ್ನು ಪೂರೈಸಿ ಎಲ್ಲರನ್ನೂ ಉಪಚರಿಸಿದಳು. ಇದನ್ನು ಕಾರ್ತವೀರ್ಯಾರ್ಜುನನು ನೋಡಿ ರೇಣುಕಾದೇವಿಯನ್ನೂ ಕಾಮಧೇನುವಿನನ್ನೂ ಅಪಹರಿಸಿಕೊಂಡು ಹೋಗಬೇಕೆಂಬ ದುರ್ಬುದ್ಧಿಯು ಅವನಲ್ಲಿ ಉಂಟಾಯಿತು. ಇದಕ್ಕೆ ರೇಣುಕಾದೇವಿಯು ಅನುಕೂಲಳಾಗಿ ಅವನಿಗೆ- ಜಮದಗ್ನಿಯ ಶಿರಸ್ಸನ್ನು ಕೊಯ್ದು ಕಾಮಧೇನುವಿನ ಕೊರಳಿಗೆ ನೀನು ಅದನ್ನು ಕಟ್ಟಿ ಹೊಡೆದುಕೊಂಡು ಹೋದರೆ ಆಧೇನುವು ನಿನ್ನೊಡನೆ ಬರುವದೆಂದು ಸಲಹೆ ಕೊಟ್ಟಳು. ಅದೇ ರೀತಿ ಕಾರ್ತವೀರ್ಯನು ಜಮದಗ್ನಿಯ ಶಿರಸ್ಸನ್ನು ಕತ್ತರಿಸಿ ಕಾಮಧೇನುವಿನ ಕೊರಳಲ್ಲಿ ಕಟ್ಟಲು ಅದು ಅವನೊಡನೆ ಬರಲಿಲ್ಲ. ಅದರ ಬದಲು ಅದು ಮಾಯವಾಗಿ ಹೋಗಿಬಿಟ್ಟಿತು!

---

(೧) ಈ ಸ್ಥಾನವು ಬೆಳಗಾವಿ ಜಿಲ್ಲಾ ಸವದತ್ತಿಯ ನೆರೆಯಲ್ಲಿದೆ.

ಜಮದಗ್ನಿಯ ಮಾನಸಪುತ್ರನಾದ ಪರಶುರಾಮನು ಅಲ್ಲಿಗೆ ಅಷ್ಟರಲ್ಲಿ ಬಂದು ಹೀಗೆ ಅನಾಹುತಗಳಾದುದನ್ನು ನೋಡಿ ಸಂತಾಪ ಹೊಂದಿ ಕಾರ್ತವೀರ್ಯನಿಗೂ ಅವನ ವಂಶದವರಿಗೂ ಶಾಪವನ್ನು ಕೊಟ್ಟನು. ಆದರಿಂದ ಅವರೆಲ್ಲರೂ ರಾಜ್ಯಪದಭ್ರಷ್ಟರಾಗಿ ಕಾಡನ್ನು ಸೇರಿ ಮೃಗ ಹಿಂಸಕರಾಗಿ ಬೇಟೆಯಾಡುತ್ತ ಘೋರಾರಣ್ಯದಲ್ಲಿ ಉಪಜೀವಿಸುವವರಾ ದರು. ದೇವರ ದಾಸಿಮಯ್ಯನು ಅರಣ್ಯದಲ್ಲಿ ಕಂಡ ಕಾಡುಜನರು ಕಾರ್ತವೀರ್ಯಾರ್ಜುನ ವಂಶದವರೇ ಆಗಿದ್ದರು.

ದೇವರ ದಾಸಿಮಯ್ಯನು ಶ್ರೀಶೈಲದಿಂದ ಸಂಚಾರ ಮಾಡುತ್ತ ಬಿಲ್ವವೃಕ್ಷದಡಿಯಲ್ಲಿ ಕುಳಿತಿದ್ದಾಗ ಈ ಕಾಡು ಜನರು ಅವನನ್ನು ಕಂಡು ಅವನ ತೇಜಃಪುಂಜವಾದ ಕಾಯ ಕಾಂತಿಯನ್ನು ನೋಡಿ ಭಯಭಕ್ತಿ ಯುಳ್ಳವರಾಗಿ ಅವನಿದ್ದೆಡೆಗೆ ಬಂದು–ಈ ಅರಣ್ಯದಲ್ಲಿ ನೀವೇಕೆ ಬಂದಿರಿ? ಇಲ್ಲಿ ಭೀಕರವಾದ ಕಾಡು ಮೃಗಗಳಿವೆ. ಹೆಬ್ಬಾವುಗಳ ಉಪಟಳವಿದೆ. ನಾವು ಯಾವಾಗಲೂ ಕಾಡಿನಲ್ಲಿರುವವರು. ನಮಗೆ ಸಹ ಇಲ್ಲಿರಲು ದಿಗಿಲು ಬೀಳುತ್ತಿದೆ. ತಾವಿಲ್ಲಿ ನಿಲ್ಲಬಾರದು ಎಂದು ಹೇಳಲು, ದಾಸಿಮ ಯ್ಯನು ಗಹಗಹಿಸಿ ನಕ್ಕು ಅವರ ನೀಚ ವೃತ್ತಿಯನ್ನು ಬಿಡಿಸಿ ಅವರನ್ನು ಶಿವಮತದೊಳಗೆ ಅಳವಡಿಸಬೇಕೆಂಬ ಭಾವವು ಅವನಲ್ಲಿ ಬಲಿದು ಅವ ರನ್ನು ಅಲ್ಲಿಯೇ ಕುಳ್ಳಿರಿಸಿಕೊಂಡು, ಮಧುರೋಕ್ತಿಯಿಂದ ಹೇಳಿದುದೇ ನೆಂದರೆ:—

ಬೇಟೆಗಾರರೇ, ನಿಮ್ಮ ಸಾಹಸವು ಬಹು ಹೆಚ್ಚಿನದು. ನೀವು ಬಲು ಶೂರರು. ಆದರೆ ನಿಮ್ಮದು ದುರಿತ ಕರ್ಮವು. ಇದರಿಂದ ನಿಮ್ಮ ದಾರಿದ್ರ್ಯವು ತೊಲಗದು. ನೀವು ನರಕದಲ್ಲಿ ಯಾವಾಗಲೂ ತೊಳಲಾಡುವಿರಿ. ಇಹದಲ್ಲಿಯೂ ಪರದಲ್ಲಿಯೂ ನೀವು ದುರ್ಗತಿಗಿಳಿ ಯುವಿರಿ. ನೀವು ಹೀಗೆ ಬಲವಂತವಾಗಿ ಪ್ರಾಣಿಗಳ ಹಿಂಸೆ ಮಾಡ ಬೇಡಿರಿ. ಇದು ಪಾಪಕರ್ಮವು. ಇದರಿಂದ ಜನ್ಮಜನ್ಮಗಳಲ್ಲಿಯೂ ನೀವು ನಿಮ್ಮ ಸಂಕಟಗಳಿಂದ ಮುಕ್ತರಾಗಲಾರಿರಿ. ನಿಮಲ್ಲಿ ಮದನ ಹರನ ಚಿಂತೆಯು ಇರಲಿ. ತಲ್ಲಿಂಗ ಪೂಜಾ ಧ್ಯಾನದಲ್ಲಿ ಇರಿರಿ. ಪರಶು ರಾಮನು ಕನಲಿ ನಿಮ್ಮನ್ನು ಮೊದಲು ಶಪಿಸಿದ್ದಾನೆ. ಇದರಿಂದ ನೀವು ಕಷ್ಟ ಬಡುತ್ತೀರಿ. ನೀವು ಅವನ ಶಾಪದಿಂದ ಮುಕ್ತರಾಗಬೇಕಾದರೆ ಈ ಕ್ರೂರ ಕರ್ಮಗಳನ್ನು ತ್ಯಜಿಸಬೇಕು. ಶಮೆ ದಮೆ ದಾನ ಧರ್ಮ

# ಶಿವಾನುಭವಕ್ಕೆ ಸಹಾಯ.

(೧) ಹಲಕನಹಾಳ ಗ್ರಾಮದಲ್ಲಿ ಪುಣಬಗಟ್ಟಿಯ ಮಠದ ಬಸಪ್ಪಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ನಡೆದ ಶಿವಾನುಭವ ಸಂಘದಲ್ಲಿ ಗ್ರಾಮಸ್ಥರು ಕೊಟ್ಟ ಸಹಾಯ ಧನ ೧೦ ರೂಪಾಯಿಗಳನ್ನು ಶ್ರೀಪಟೀಲ್ ರುದ್ರಪ್ಪನವರು ಕಳಿಸಿರುತ್ತಾರೆ.

(೨) ಮೈಸೂರು ಪ್ರಾಂತದ ಚನ್ನಗಿರಿ ತಾಲೂಕ ಬಿಲ್ಲಿಹಳ್ಳಿ ವಿರಕ್ತಮಠದ ಶ್ರೀಮನ್ನಿರಂಜನ ಸಂಗಮನಾಥ ಸ್ವಾಮಿಗಳವರು ಶಿವಾನುಭವದ ಸಹಾಯಾರ್ಥವಾಗಿ ೨೦ ರೂ. ಕಳಿಸಿರುತ್ತಾರೆ.

ಈ ಎಲ್ಲ ಮಹನೀಯರಿಗೂ ನಾವು ಅತ್ಯಂತ ಕೃತಜ್ಞರಾಗಿರುತ್ತೇವೆ

ಸಂಪಾದಕರು— **ಶಿವಾನುಭವ**

**ವಿಜಾಪುರ.**

---

**ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.**

ವಾರ್ಷಿಕ ಚಂದಾ ಅಂಚೆವೆಚ್ಚಸಹಿತ ರೂ. ೪—೧೨—೦ [illegible]




ವರ್ಷ ೨೧ ]   ಏಪ್ರಿಲ್ ೧೯೪೭   [ ಸಂಚಿಕೆ ೭

## ವಿಷಯಾನುಕ್ರಮಣಿಕೆ.


೧ ಅಲ್ಲಮಪ್ರಭುದೇವರು— ಜ್ಞಾನೋಪಾಸಕ. ಜ್ಞಾನಮಂದಿರ ಹಲಗೂರು. ೧೩೩

೨ ಲಿಂಗಾಂಗವೆಂದರೇನು?— ಶ್ರೀ. ಅನ್ನದಾನೀಶ್ವರ ವಿರಕ್ತಮಠ, ಅಸಿ. ಟೀಚರ ರಾಣೀಬಿನ್ನೂರು ೧೪೦

೩ ಬಸವ ಜಯಂತಿಯನ್ನು ಹೇಗೆ ಆಚರಿಸಬೇಕು?— — ಶ್ರೀ. ಅನ್ನದಾನೀಶ್ವರ ವಿರಕ್ತಮಠ ೧೪೨

೪ ಲೋಕಗಳ ವಿಚಾರ— ಶ್ರೀ. ಸಾಸನೂರ ಮಡಿವಾಳಪ್ಪನವರು ೧೪೭

೫ ಶಿವಶರಣರ ಚರಿತ್ರೆಗಳು ಭಾಗ—೩. ೧೩—೨೮

—ರಾ॥ ಬ॥ ಫ. ಗು. ಹಳಕಟ್ಟಿ, ವಿಜಾಪುರ.

(೧) ದೇವರದಾಸಿಮಯ್ಯ.

# ಶಿವಾನುಭವ

| ವರ್ಷ ೨೧ | ಏಪ್ರಿಲ್ ೧೯೪೭ | ಸಂಚಿಕೆ ೭ |
|---|---|---|

## ಅಲ್ಲಮಪ್ರಭುದೇವರು.

(ಲೇಃ—ಜ್ಞಾನೋಪಾಸಕ. ಜ್ಞಾನಮಂದಿರ ಹಲಗೂರು.)

ಕನ್ನಡನಾಡು ಚಿನ್ನದನಾಡು, ಇಂತಹ ಪುಣ್ಯನಾಡು. ಇಲ್ಲಿ ಅನೇಕ ಮಹಾವಿಭೂತಿಗಳು ಉದಯಿಸಿ ಅಸ್ತಮಯವಾದರು. ಪರಶಿವನ ಅಪರಾವತಾರಿಯಾದ ಅಲ್ಲಮಪ್ರಭು ಹುಟ್ಟಿದ ನಾಡು, ಧನ್ಯ ಕನ್ನಡನಾಡು. ಈತನ ಜೀವನ ಕಾಲದಲ್ಲಿಯೇ ಜನರು ಈತನನ್ನು ಪ್ರತ್ಯಕ್ಷ ಪರಶಿವನೆಂದು ಭಾವಿಸಿದ್ದರು. ಏನೇ ಆಗಲಿ ಅಲ್ಲಮನು ದೈವೀಮಟ್ಟಕ್ಕೇರಿದ ಪ್ರಭುವಾತನು. ಅನುಭವಮಂಟಪದ ಅಧ್ಯಕ್ಷ ಅಲ್ಲಮ. ಅನುಭವಮಂಟಪದಲ್ಲಿನ ಮಹಾತ್ಮ ಬಸವಣ್ಣನ ಬಲಗೈಯ್ಯು ಪ್ರಭುದೇವರು. ವೀರಶೈವ ಧರ್ಮದ ನವ ಚೈತನ್ಯದ ಉದ್ಭವಕಾಲದಲ್ಲಿ ಹಲವು ಶಿವಶರಣರು ಹುಟ್ಟಿದರು. ಅಂಥವರಲ್ಲಿ ಅಗ್ರೇಸರ ಮಹಾಪುರುಷನು ಅಲ್ಲಮನು. ಅಂದು ಮತೋದ್ಧಾರಕ್ಕೆ ಸೊಂಟ ಕಟ್ಟಿ ನಿಂತು ಧರ್ಮ ಪ್ರಸಾರಣೆ ಮಾಡುವಾಗ ಪ್ರತಿಯೊಬ್ಬರಿಗೂ ನಿರರ್ಗಳವಾದ ಜ್ಞಾನಬೋಧೆಯನ್ನು ಮಾಡಿದ ಪ್ರಭುದೇವರು ಸನ್ಮಾನ್ಯನೇ ಸರಿಯು. ವೈರಾಗ್ಯ ಶ್ರೇಷ್ಠಿಯೂ, ಜ್ಞಾನಸಂಪನ್ನನೂ ಆದವರು ಪ್ರಭುದೇವರು. ಉತ್ಸವ ಮೂರ್ತಿಯಾಗಿ ಬಸವೇಶನನ್ನು ಮಾಡಿಕೊಂಡು ಶೈವೋದ್ಧಾರದ ಉತ್ಸವವನ್ನು ಬಹು ವಿಜೃಂಭಣೆಯಿಂದ ನಡೆಯಿಸಿದ ಮಹನೀಯ ಪ್ರಭುದೇವರು. ಯಾವ ಭೇದವನ್ನೂ ನೋಡದೆ ಪ್ರತಿಯೊಬ್ಬರೂ ಅಲ್ಲಮಪ್ರಭುವಿನ ಚರಿತ್ರೆಯನ್ನು ಓದಿ ಪಾವನರಾಗಲಿ.

ಪ್ರಭುವಿನಂತಹ ವ್ಯಕ್ತಿಗೆ ಸಾದೃಶ್ಯ ವ್ಯಕ್ತಿಯು ಸಿಕ್ಕಲಾರನು. ಆತನ ಪ್ರಭಾವವು ಪ್ರತಿಯೊಬ್ಬರನ್ನೂ ಬೆಕ್ಕಸ ಬೆರಗುಮಾಡಿತು. ಪ್ರಭುದೇವರ ಜ್ಞಾನಖನಿಯು ನಮ್ಮನ್ನು ಆಕರ್ಷಿಸುವುದು. ನಮ್ಮೆಲ್ಲರನ್ನು ನಿಶ್ಚಲರನ್ನಾಗಿ ಮಾಡುವುದು. ಆ ಮಹಾತ್ಮನ ಬುದ್ಧಿಶಕ್ತಿ ಮತ್ತು ಅಚಲವೈರಾಗ್ಯವು ಬಹು ಪಟುತರವಾದದ್ದು. ಆತನು ನಮ್ಮ ಕಣ್ಣಿಗೆ ಪರಿಪೂರ್ಣ ಜಿತಕಾಮನಾದ ವೈರಾಗ್ಯಮೂರ್ತಿಯಂತೆ ಹೊಳೆದು ಕಾಣಿಸಿಕೊಳ್ಳುತ್ತಾನೆ. ಪ್ರಭುವಿನಲ್ಲಿ ಸಂಕಲ್ಪಸಿದ್ಧಿಯು ಅತಿಯಾಗಿರುವುದರಿಂದಲೇ ಎಲ್ಲ ಸಾಧನೆಯು ಅಂತರಂಗದಲ್ಲಿ ನಡೆದು ನಿಮಿಷ ಮಾತ್ರದಲ್ಲಿ ಜ್ಞಾನದ ಖನಿಯಾದನು. ಅಲ್ಲಮನ ನೈಜ ಲಕ್ಷಣವು ನಿಷ್ಕಾಮಕರ್ಮವು. ನಿರಹಂಕಾರದಲ್ಲಿ ಪ್ರಭುದೇವರು ಪ್ರಭುಪದವಿಯನ್ನು ಪಡೆವನೆಂಬುದಕ್ಕೆ ನಿದರ್ಶನ ವಚನವಿದು. "ನಾನೆಂಬ ಅಹಂಕಾರದಲ್ಲಿ ನಾನುಂಡೆನಾದರೆ ಎನಗದೇ ಭಂಗ. ಸ್ತುತಿನಿಂದೆಗೆ ನೊಂದೆನಾದೊಡೆ ಅಂಗೈಯಲ್ಲಿದ್ದ ಗುಹೇಶ್ವರಲಿಂಗಕ್ಕೆ ದೂರ." ಪ್ರಭುದೇವರು ಈ ಲೋಕದ ಕಾರ್ಯಕಲಾಪಗಳನ್ನು ಹೊರಗಡೆ ನಿಂತು ನೋಡುತ್ತಾನೆ. ಈ ಕಾರಣದಿಂದ ಮನುಜರ ಕುಂದುಕೊರತೆಗಳು ಈತನಿಗೆ ಚೆನ್ನಾಗಿ ಗೊತ್ತಾಗುವವು. "ಅಂಗಜೀವಿಗಳೆಲ್ಲ ಅಶನಕ್ಕೆ ನೆರೆದು ಲಿಂಗವಾರ್ತೆಯ ನುಡಿವರಯ್ಯ. ಕಾಯಜೀವಿಗಳೆಲ್ಲ ಕಳವಳಿಸಿ ನುಡಿವರಯ್ಯ. ಮನಬಂದ ಪರಿಯಲ್ಲಿ ನುಡಿವವರಿಗೆ ಗುಹೇಶ್ವರನೆಂಬ ಲಿಂಗ ನಿಮಗೆಲ್ಲಿಯದೋ'' ಎಂಬ ವಚನವನ್ನು ಉಚ್ಚಾಸನದಲ್ಲಿ ಮಂಡಿಸಿದ್ದಾಗ ಹೇಳಿದ್ದು. ಜನರ ಆಚಾರ ವ್ಯವಹಾರವನ್ನು ಬಹಿರಂಗದೃಷ್ಟಿಯಿಂದ ಒಪ್ಪದೆ ಅಂತರಂಗವನ್ನು ಸೂಕ್ಷ್ಮಬುದ್ಧಿಯಿಂದ ನೋಡಿ ವಿಮರ್ಶಿಸಿ ಒಪ್ಪುವಾತನು.

ಅಲ್ಲಮನ ಜ್ಞಾನಾನಲವು ಬಗೆಬಗೆಯ ಕಿಡಿಗಳ ರೂಪಿನಿಂದ ಶರಣ ಜಗತ್ತನ್ನು ಆವರಿಸಿಕೊಂಡಿತು. ಈತನಿಗೆ ಅಕ್ಕಮಹಾದೇವಿಯಂತಹ ವಿರಾಗಿಣಿಯೂ, ಬಸವೇಶ್ವರನಂತಹ ಭಕ್ತಿಭಂಡಾರಿಯೂ, ಚನ್ನಬಸವಣ್ಣನಂತಹ ಜ್ಞಾನಿಯೂ ಅನುಯಾಯಿಗಳಾಗಿ ಬಂದರು. ಈತನಲ್ಲಿ ಅಡಗಿದ್ದ ದಿವ್ಯಾನಲದ ಕೆಚ್ಚಿನೆಯ ಕಿಡಿಗಳು ಪ್ರಕಾಶಮಾನವಾಗಿ ಹೊಳೆದವು. ಮಾಯೆಯ ಬೇರನ್ನು ಸುಟ್ಟುಹಾಕಿ ಬೂದಿಮಯವಮಾಡಿದ ಅಗ್ನಿಯೂ, ಶರಣರಲ್ಲಿನ ಹುಟ್ಟು ಸಾವುಗಳ ಮೂಳೆಗಳನ್ನು ಉರಿಸಿ ಹಾಕಿಸಿದ ಮತ್ತೊಂದು ಅಗ್ನಿಯೂ, ಶರಣರಲ್ಲಿನ ಹುಟ್ಟು ಸಾವುಗಳ

ಮೂಳೆಗಳನ್ನು ಉರಿಸಿಹಾಕಿಸಿದ ಮತ್ತೊಂದು ಅಗ್ನಿಯೂ, ಕಾಮಲತೆಯನ್ನು ಬಾಡಿ ಸೊರಗುವಂತೆ ಮಾಡಿದವು. ಅಗ್ನಿಕಿಡಿಗಳು ಮಹಾತ್ಮ ಅಲ್ಲಮನಲ್ಲಿ ಅಡಗಿದ್ದವು. ವೀರಶೈವ ಕವಿಗಳು ಪ್ರಭುದೇವರನ್ನು "ಶ್ರೀಮದ್ದೇಶಿಕ ಷಟ್‌ಸ್ಥಲ ಚಕ್ರಿಬ್ರಹ್ಮಾನಂದ ಪರಶಿವಮೂರ್ತಿ ವಿರಕ್ತ ಶಿಖಾಮಣಿ ಕೋಲಾಹಲ" ಎಂದು ಹೊಗಳಿರುವರು. ಸುಮಾರು ೧೭೦೦ ರಲ್ಲಿ ಕವಿಯೋರ್ವನು ಅಲ್ಲಮನನ್ನು 'ಶ್ರೀರವ-ಣಸಿಂಹಪ್ರದಿವಂದಿತ ಚರಣನಂ ಶುಭಕರಣನಂ । ಮಾರಮದಸಂಹಾರ ನಿರ್ಮಲಮಾರನಂ ಸುಶರೀರನಂ ॥ ಕಾರುಣಿಕ ಮಹಾತ್ಮ್ಯನುತ ಜಗಪಾಲನಂ ದಯಾಶೀಲನಂ । ಧೀರಗುಣಗಂಭೀರನಲ್ಲಮದೇವನಂ ಸುಖಜೀವನಂ ॥ ಎಂದು ಸ್ತೋತ್ರ ಮಾಡಿರುವನು. ಇದೂ ಅಲ್ಲದೆ ಹಲವಾರು ಪ್ರೌಢವೀರಶೈವ ಕವಿಗಳೂ ಕೂಡ ಈತನನ್ನು ಸ್ತುತಿಸಿರುವರು. ಇವರ ಸೀರವು ಯಾವಾಗಲೂ ಪ್ರಕಾಶಮಾನವಾಗಿ ಹೊಳೆಯುತ್ತಿತ್ತು. ಅಷ್ಟಾವರಣಗಳ ವಿಚಾರವಾಗಿ ಇವರ ವಚನಗಳು ಹಲವು. ಅನುಭವಾಬ್ಧಿಯಲ್ಲಿ ಉದಿಸಿದ ನವನೀತಾಮೃತವೇ ಕಾವ್ಯವು ಎಂಬುದನ್ನು ಇವರ ಕಲಾಕೃತಿಯು ಸ್ಪಷ್ಟಪಡಿಸಿರುವುದು. ನುಡಿಯಂತೆ ನಡೆ ಎಂಬುದನ್ನು ತಮ್ಮ ಜೀವನ ಜೀವನದಲ್ಲಿ ಪರರಿಗೆ ಉದಹರಿಸಿ, ಅವರಿಗೆ ಮಾರ್ಗದರ್ಶಕರಾಗಿದ್ದರು. ಅರಿವಿಗೆ ವಯೋಪ್ರಧಾನಕೆಯು ಮುಖ್ಯವಲ್ಲವು. ಅರಿವನ್ನು ಆರ್ಜಿಸಲು ಅರಿತುಕೊಳ್ಳಲು ಸಕಲರಿಗೂ ಹಕ್ಕಿದೆ. ಅರಿವಿನಲ್ಲಿ ಹಿರಿಯರಾದವರು ಯಾರ್ರೇ ಆಗಿರಲಿ, 'ಅವರಿಗೆ ನನ್ನ ನಮಸ್ಕಾರಗಳು ಎಂದು ನಿರಹಂಭಾವದಿಂದ, ವಿನಯದಿಂದ ಹೇಳಿರುವರು.

ಆತನ ಸರ್ವಸ್ವವು ಶಿವಾರ್ಪಣವಾಗಿತ್ತು. ಸರ್ವವು ಶಿವಮಯವಾಗಿತ್ತು. "ಸುಖವಿಲ್ಲ ಸೂಳೆಗೆ, ಪಥವಿಲ್ಲ ಶೀಲಕ್ಕೆ, ಮಾಡಲಾಗದು ನೇಮವ, ನೋಡಲಾಗದು ಶೀಲವ, ಸತ್ಯವೆಂಬುದೆ ಸುಶೀಲ ಗುಹೇಶ್ವರ ಲಿಂಗವನರಿಯಬಲ್ಲವಂಗೆ.'' ಪುಣ್ಯಕರ್ಮಗಳನ್ನು ಅಲ್ಲಗಳೆದು ಕರ್ಮದ್ವಯದಿಂದ ಬಿಡುಗಡೆಯನ್ನು ಹೊಂದಿದರೆಂದೂ, ಲಿಂಗದ ಬೆಳಕಿನಲ್ಲಿ ಪ್ರಕಾಶಮಾನವಾಗಿ ಮೆರೆಯಿರಿ ಎಂಬುದೆ ಆತನ ಬೋಧೆಯು. "ಸುತ್ತಿ ಸುತ್ತಿ ಬಂದಡಿಲ್ಲ. ಲಕ್ಷ ಗಂಗೆಯ ಮಿಂದಡಿಲ್ಲ. ತುಟ್ಟತುದಿಯ ಮೇರುಗಿರಿಯ ಮೆಟ್ಟಿ ಕೂಗಿದಡಿಲ್ಲ. ನಿತ್ಯನೇಮದಿಂದ ತನು ಮುಟ್ಟಿಕೊಂಡಡಿಲ್ಲ.

ನಿಚ್ಚಕ್ಕೆ ಮನವಂದಂದಿಗೆ ಅತ್ತಿತ್ತ ಹರಿಯಲೀಯದೆ ಚಿತ್ತದಲ್ಲಿ ಧರಿಸ ಬಲ್ಲಡೆ ಬಚ್ಚಬರಿಯ ಬೆಳಗು ಗುಹೇಶ್ವರಲಿಂಗವು." ಮೋಕ್ಷಮಾರ್ಗ ವನ್ನು ಕಂಡ ಮಹಾತ್ಮನು ಪ್ರಭುವು ಎನ್ನಲು ನಿದರ್ಶನ ವಚನವು ಮೇಲಿನದು. ಅಂತರ್ಮುಖಿಯಾಗಲು ಸಾಧನೆಗೆ ಜ್ಞಾನವೂ, ಕರ್ಮವೂ ಬೇಕು. ತನಗೆ ಒಪ್ಪಿಗೆಯಾದಾಗ ಮೆದುನುಡಿಯಿಂದ ಜ್ಞಾನೋಪದೇಶ ವನ್ನು ಮಾಡುವನು. ಮತ್ತೆ ಕೆಲವು ಸಮಯದಲ್ಲಿ ಆತನ ನುಡಿಗ ಳಲ್ಲಿ ಒರಟುತನವೂ, ಬಿರುಸೂ ಕಾಣುವುದು. ಪ್ರಭುವು ಜನನ ಮರಣಗಳಿಂದಲೂ, ಕಷ್ಟದುಃಖಗಳಿಂದಲೂ ಬಿಡುಗಡೆಯನ್ನು ಹೊಂದಿದ ಮಹಾತ್ಮನು. ಪ್ರತಿಯೊಬ್ಬರೂ ಪ್ರಭುವಿನ ತತ್ವಬೋಧನೆಯ ಮಾರ್ಗ ವನ್ನು ಅನುಸರಿಸಲು ಯೋಗ್ಯವಾಗಿದೆ. ಅಲ್ಲಮನ ಜ್ಞಾನದ ಗಣಿಗೆ ಸರಿಜೋಡಿಯು ಅಕ್ಕಮಹಾದೇವಿಯು. ಅಕ್ಕನವರ ಸಂಗಡ ವಾದ ಮಾಡುವಾಗ ಇವರ ತರ್ಕವಾದವೂ, ವಾಗ್ವೈಖರಿಯೂ, ಮಹತ್ತರ ವಾದ ಶಾಂತಿವೈಖರಿಯೂ ಪ್ರಭುದೇವರಲ್ಲಿ ಇದೆ.

ಅಲ್ಲಮಪ್ರಭುವು ಬಳ್ಳಿಗಾವಿ ಪ್ರಾಂತದವನು. ಈತನ ತಂದೆ ನಿರ ಹಂಕಾರಿ, ತಾಯಿ ಸುಜ್ಞಾನಿ. ಈ ವೇಳೆಯಲ್ಲಿ ಶಿವನ ಅಂಶವಾದ ಅಲ್ಲಮನನ್ನು ವಶಪಡಿಸಿಕೊಳ್ಳುವೆನೆಂದು ಪಾರ್ವತಿಯು ಪ್ರತಿಜ್ಞೆಮಾಡಿ, ತನ್ನ ತಾಮಸಗುಣದ ಮೂರ್ತಿಯಾದ ಮಾಯೆಯನ್ನು ಭೂಲೋ ಕಕ್ಕೆ ಕಳುಹಿಸುವಳು. ಈಕೆಯು ಬನವಾಸಿಯಲ್ಲಿ ಮಮಕಾರ ಮತ್ತು ಮಾಯಾದೇವಿಯರಿಗೆ ಮಾಯೆ ಎಂಬ ನಾಮಧೇಯದಿಂದ ಹುಟ್ಟಿ ಬೆಳೆಯುತ್ತಿದ್ದಳು. ಜಿತಕಾಮನೂ ವೈರಾಗ್ಯಮೂರ್ತಿಯೂ ಆದ ಅಲ್ಲ ಮನು ಮಧುಕೇಶ್ವರ ದೇವಾಲಯದ ಮುಂದೆ ಇದ್ದಾಗ ಮಾಯೆಯೂ, ಪಾರ್ವತಿಯೆಂದು ಕಳುಹಿಸಲ್ಪಟ್ಟ ವಿಮಲೆಯೂ ಈತನನ್ನು ತಮ್ಮ ಮೋಹಜಾಲಕ್ಕೆ ಸಿಕ್ಕಿಸಿಕೊಳ್ಳಲು ಭಗೀರಥಪ್ರಯತ್ನ ಮಾಡಿದರು. ಅದು ವಿಫಲವಾಯಿತು. ಇದು ಅಲ್ಲಮನ ವೈರಾಗ್ಯದ ಸೂಚನೆ! ಇದರ ಫಲವಾಗಿ ಮಾಯಾಕೋಲಾಹಲ ಎಂಬ ಬಿರುದು ಬಂದಿತು. ಈತನು ಮಹಾತ್ಮನೆಂದರಿತು ಗೊಗ್ಗಯ್ಯನು ಈತನಲ್ಲಿ ಉಪದೇಶವನ್ನು ತೆಗೆದು ಕೊಂಡನು. ಹೀಗೆಯೇ ತನ್ನ ಜೀವನದಲ್ಲಿಯೇ ಹಲವಾರು ಮಂದಿಗೆ ಉಪದೇಶ ಮಾಡಿ, ಅವರನ್ನು ಪುನೀತರನ್ನಾಗಿ ಮಾಡಿದರು. ಗುರು

ಲಿಂಗಜಂಗಮದ ಮಹತ್ತನ್ನು ಪರರಿಗೆ ತಿಳಿಸಿ, ತಾನೂ ಕೂಡ ನುಡಿಯಂತೆ ನಡೆ ಎಂಬುದನ್ನು ತನ್ನ ಉಪದೇಶದಲ್ಲಿ ತೋರಿಸಿದನು.

ಅಲ್ಲಮಪ್ರಭುವು ಚತುರ್ಯುಗಗಳಲ್ಲಿ ಹುಟ್ಟಿ ಜಗದೋದ್ಧಾರ ಕಾರ್ಯವನ್ನು ಮಾಡಿದ್ದಾರೆ. ಕೃತಯುಗದಲ್ಲಿ ಇವರು ದೇವಾಂಗನೆಂಬ ಗಣೇಶ್ವರರಾಗಿಯೂ, ತ್ರೇತಾಯುಗದಲ್ಲಿ ಘಂಟಾಕರ್ಣನೆಂಬ ಗಣೇಶ್ವರರಾಗಿಯೂ, ದ್ವಾಪರಯುಗದಲ್ಲಿ ವೃಷಭನೆಂಬ ಗಣೇಶ್ವರರಾಗಿಯೂ, ಕಲಿಯುಗದಲ್ಲಿ ಪ್ರಭುದೇವರು ಎಂಬ ನಾಮಧೇಯದಿಂದಲೂ ಜನಿಸಿ ಜಗದೋದ್ಧಾರಕರಾಗಿ ಜನರನ್ನು ಪಾವನ ಮಾಡಿದರು. ಇಂತಹ ಮಹಾವಿಭೂತಿಯ ಉಪದೇಶವನ್ನು ಪಡೆದ ಭಕ್ತಜಂಗುಳಿಯೇ ಪುನೀತ ಭಕ್ತಜಂಗುಳಿಯು. ಸಮಾಜದಲ್ಲಿ ದೊಡ್ಡದಾದ ಕ್ರಾಂತಿಯನ್ನುಂಟು ಮಾಡಿ ಅದರ ಮೂಲಕ ವೀರಶೈವ ಧರ್ಮವನ್ನು ಸಕಲ ಕಡೆಗೂ ಹರಡಿದ ಮಹಾ ವಿಭೂತಿಗಳಲ್ಲಿ ಒಬ್ಬರು ಅಲ್ಲಮಪ್ರಭುವು. ಇವರು ತಮ್ಮ ಉದಾತ್ತ ಶಿವಾನುಭವ ಸಂಗತಿಗಳನ್ನು ನಡುವಣ ನಾಡಿನಲ್ಲಿ ಹರಡಿದರು. ಕೇದಾರನಾಥ ದೇವಾಲಯದಲ್ಲಿನ ಸಮಾಧಿಯಲ್ಲಿ ನಿರತರಾಗಿ ಶಿವಾನುಭವದ ನಿಚ್ಚಳ ಸಮಾಧಿಯನ್ನು ಪಡೆದರು. ವಟವೃಕ್ಷವನ್ನಾಶ್ರಯಿಸಿದ ಬುದ್ಧನಿಗೆ ಹೇಗೆ ನಿರ್ವಾಣ ಪ್ರಾಪ್ತಿಯಾಯಿತೋ, ಕ್ರಿಸ್ತ ಮತ್ತು ಮಹಮದರಿಗೆ ದಿವ್ಯದೃಷ್ಟಿಯು ತಲೆದೋರಿ ನೂತನ ಮಾರ್ಗವನ್ನು ಅವರು ಹೇಗೆ ಹರಡಿದರೋ ಹಾಗೆಯೇ ಇವರಿಗೆ ಶಿವಾನುಭವದ ಸಮಾಧಿಯುಂಟಾಯಿತು.

ಈತನ ಮಹಾತ್ಮೆಯು ಅಭೂತಪೂರ್ವವಾದುದು. ಕನಸುನೆನಸಿನಲ್ಲಿಯೂ ಈತನ ರೂಪಿನ ಪ್ರತ್ಯಕ್ಷತೆಯು ಶಿವಶರಣರಿಗೆ ಅರಿವಾಗುವುದು. ಈತನ ದಯೆಯನ್ನು ಪಡೆಯಬೇಕೆಂದು ನಾವು ಆಶಿಪಡೋಣ. ನಮ್ಮಲ್ಲಿರುವ ಕೊಳೆಯನ್ನು ಕಳೆದುಕೊಂಡು ನಿರ್ಮಲರಾಗಿರಲು ನಾವು ಪ್ರಯತ್ನ ಮಾಡಬೇಕು. ಪ್ರಭುವು ಬಂದು ಮೆಚ್ಚಿಗೆಯನ್ನು ತೋರುವ ಹೊತ್ತಿಗೆ ನಮಗೆ ಅಲ್ಲಮನ ವೈರಾಗ್ಯಲೀನತೆಯು ನಮ್ಮಲ್ಲಿ ವ್ಯಕ್ತವಾಗುವುದು. ಒಂದುಬಾರಿ ಅಲ್ಲಮನನ್ನು ನೋಡಿದವರು ಆತನನ್ನು ಎಂದಿಗೂ ಮರೆಯುವುದಿಲ್ಲ. ಆತನಲ್ಲಿರುವ ಬಲವು ಸಂದಿಸಂದಿಗಳಲ್ಲಿಯೂ ನಮ್ಮನ್ನು ಸಂಧಿಸಿ ನಮ್ಮ ಆತ್ಮಸಾಕ್ಷಿಯನ್ನು ಪಟುತ್ವಮಾಡಿಕೊಡುತ್ತದೆ. ಪ್ರಭುದೇವರಿಗೆ ಬಸವೇಶ, ಚನ್ನಬಸವ, ಮತ್ತು ಸಿದ್ಧ

ರಾಮರಲ್ಲಿ ಬಹಳವಾಗಿ ಅಕ್ಕರೆಯಿದ್ದಿತು. ಪ್ರಭುವಿನ ವಚನಗಳಲ್ಲಿ ತೂಕವಿದೆ, ಸತ್ಯವಿದೆ, ಬಿಗಿಯಿದೆ, ಸಾಧನೆಯಿದೆ. ಕನ್ನಡ ಸಾಹಿತ್ಯದ ಮುಕುಟಮಣಿಗಳಲ್ಲಿ ಅಲ್ಲಮನಿಗೆ ಉಚ್ಚ ಸ್ಥಾನವಿದೆ. ಅಲ್ಲಮನು ತಾನು ತನ್ನ ಜೀವನದಲ್ಲಿ ಉಂಡು ತಣಿದು ಸಂತೋಷಪಟ್ಟುದುದನ್ನು ಇತರೆಯುವರು ಸವಿಯುವಂತೆ ಮಾಡಿದರು. ಹೆಂಗಸಿಗೆ ಹೆಂಗಸಾಗಿ, ಗಂಡಸಿಗೆ ಗಂಡಸಾಗಿ, ಮಕ್ಕಳಿಗೆ ಮಕ್ಕಳಾಗಿ, ಶರಣರಿಗೆ ಶರಣನಾಗಿ ಅನುಸರಿಸಿಕೊಂಡು ನಡೆದ ಮಹಾತ್ಮ ಪ್ರಭುದೇವರು. ವಂಗದೇಶದಲ್ಲಿ ಪರಮಹಂಸರು ಹೇಗೆ ಭಕ್ತಿಯ ವೈರಾಗ್ಯದ ಸೋಪಾನವಾಗಿದ್ದರೋ ಹಾಗೆಯೇ ಕನ್ನಡನಾಡಿನಲ್ಲಿದ್ದ ಮಹಾವಿಭೂತಿಯು ಪ್ರಭುದೇವರು.

ಅಲ್ಲಮಪ್ರಭುವಿನ ಗುಣವೈಶಿಷ್ಟ್ಯದ ವಿವರಣೆಯು ಎಂತಿದೆ ಎಂಬುದನ್ನು ನೋಡೋಣ. ಹಲವಾರು ವರ್ಷಗಳಿಂದ ನಾಡಿನಲ್ಲಿ ಮುಕ್ತಿಸಾಧನೆಗಾಗಿ ಪ್ರಚಾರದಲ್ಲಿದ್ದ ಜ್ಞಾನ, ಭಕ್ತಿ, ವೈರಾಗ್ಯದ ಸತ್ಯಸ್ವರೂಪವು ಸಡಿಲವಾಗಿ ಸಣ್ಣದಾಗಿ ಹೋಗಿದ್ದುದರ ಕಾರಣ ಬಿಗುಪು ಬಿರಿತ ಬಗೆಯು ಜನದ ಬಾಳಿಗೆ ಬೇಕಾಗಿತ್ತು. ಅಂತಹುದನ್ನು ನೀಡಿದ ಮಹಾವ್ಯಕ್ತಿಯಲ್ಲಿ ಒಬ್ಬನು ಅಲ್ಲಮನು. ಗುರುಗಳ ಗುರುವಾಗಿ, ವಿನಯಶಾಲಿಗಳ, ನಿಗರ್ವಿಗಳ, ಆಚಾರ್ಯನಾಗಿ ವಿರಕ್ತರಲ್ಲಿ ಮುಕ್ತರಲ್ಲಿ ಅಗ್ರಗಣ್ಯನಾಗಿ, ಜ್ಞಾನಿಗಳಲ್ಲಿ ಜ್ಞಾನಿಯಾಗಿ ಸರ್ವಸಮತಾಶೀಲನಾಗಿ ನಡೆದಾತ ಅಲ್ಲಮನು. ಜನಗಳಿಗೆ ತನ್ನದೇ ಆದ ಒಂದುತೆರನ ವೈವಿಧ್ಯದ ದಯಾ, ಉದಾರತೆ, ಪ್ರೀತಿಗಳಿಂದ ಅನುಗ್ರಹಿಸಿದ ಮಹೋಪದೇಶಕನು ಅಲ್ಲಮಪ್ರಭುವು. ಚಾಮರಸನ ದೃಷ್ಟಿಯಲ್ಲಿ ಈತನ ಮೂರ್ತಿಯು ಸುಂದರತಮವಾಗಿಯೂ, ಶುದ್ಧವಾಗಿಯೂ, ಉನ್ನತವಾಗಿಯೂ ಚಿತ್ರಿಸಲ್ಪಟ್ಟಿದೆ. ಈತನೇ ಶಿವನಾಗಿ ವರ್ಣಿಸಲ್ಪಟ್ಟಿರುವನು. ಈತನಿಗೆ ಮೀರಿದುದು, ಸೇರದದು, ಅಸಾಧ್ಯವಾದುದು, ಹೊರಗಾದದು ಇದಾವುದು ಇಲ್ಲವು. ಜನಿಸಿದ ಚಣದಿಂದ ಹಿಡಿದು ಗ್ರಂಥದ ಅಂತ್ಯವವರೆಗೂ ಈತನ ಮೂರ್ತಿಯು ಅಲೌಕಿಕವು. ಈತನು ಸಾಮಾನ್ಯರ ಹಾಗೆ ನಡೆದರೂ, ನುಡಿದರೂ, ಪ್ರೇಮಿಸಿದರೂ, ರೇಗಿದರೂ, ಏನುಮಾಡಿದರೂ, ಅದೆಲ್ಲವೂ ಜಗದನುಗ್ರಹಕ್ಕಾಗಿಯೇ ಹೊರತು ಮತ್ತಿನ್ನಾವುದಕ್ಕೂ ಅಲ್ಲವು. ನಾಮರೂಪಕ್ರಿ ಕಲಾಪವಿಹೀನನಾಗಿ, ಬಯ

ಲಿಗನಾಗಿ ಜ್ಯೋತಿಸ್ವರೂಪನಾದ ಅದ್ವೈತ ಮೂರ್ತಿಯ ವರ್ತನೆಯು ವರ್ಣನಾತೀತವಾದದ್ದು. ಬೇಡಿದವರ ಭಕ್ತಿಗನುಗುಣವಾಗಿ ಕಾಣಿಸಿಕೊಂಡು, ಅವರಲ್ಲಿ ಬೆರೆಯದೆ ಅವರವರಿಗೆ ಬೇಕಾದಂತೆ ಸುಳಿದು ಅವರವರ ಅಭೀಷ್ಟವನ್ನು ಫಲಪ್ರದಾಯಕವನ್ನಾಗಿ ಮಾಡುವ ಮಹಾ ಶೀಲವು ಈತನಲ್ಲಿತ್ತು. ಯೋಗಿಗಳು, ಭೋಗಿಗಳು, ತ್ಯಾಗಿಗಳು, ಅನುಭವಿಗಳು, ಪ್ರವೃತ್ತಿಪಥಿಕರು, ನಿವೃತ್ತಿಶೀಲರು, ನೊಂದಹೃದಯಿಗಳು, ಬೆಂದು ಸೊಕ್ಕಿ ಸೊರಗಿದವರು, ಸಾಧಕರು, ಭಕ್ತರು, ಹಿರಿಯರು ಕಿರಿಯರು ಎಲ್ಲರೂ ಈತನ ಸಂದರ್ಶನವನ್ನು ಪಡೆದು ಪುನೀತರಾಗುವ ಲಭ್ಯವು ಒದಗಿತು. ಈತನಿಗೆ ಅಮರತ್ವವನ್ನು ತಂದುಕೊಟ್ಟದು ಜನರ ಬಳಕೆಯಲ್ಲಿ ಈತನು ಪ್ರದರ್ಶಿಸಿದ ಗುಣೌನ್ನತ್ಯವು.

ಪರರು ಕೀಳು, ತಾನು ಮೇಲು ಎಂಬ ಭಾವನೆಯು ಅಳಿಸಿ ಹೋಗಿದ್ದಿತು. ಮೆದುಮನಸ್ಸಿನಿಂದ ಗಂಭೀರ ಚಿತ್ತದಿಂದ ಕರುಣಾದ್ರ್ರ ಹೃದಯದಿಂದ ಕೂಡಿದ ಶೀಲವಂತನು ಈತನು. ಈತನ ಹಾದಿಯು ಜ್ಞಾನಿಯದು. ಈತನ ಪಥವು ಸುಟ್ಟಿದೋರುವ ಶಿವಮಾರ್ಗವು. ಜನಕನು ಸುತನನ್ನು ನೋಡುವಂತೆ, ಸ್ನೇಹಿತನು ಮಿತ್ರನಿಗೆ ಒಲಿಯುವಂತೆ ಸತತವೂ ಒಲಿಯುವನು. ಈತನು ಹಿಂದೆ ನಿಂತು ಜನರಿಗೆ ಘನತೆಯನ್ನು ನೀಡಿ ಅವರೆ ಹಿರಿಯರೆಂದು ಮರೆಸುವನು, ಮರುಕ ಪಡುವನು, ದಯೆದೋರುವನು, ಗುಣಗಳನ್ನು ಒಪ್ಪಿಕೊಳ್ಳುವನು, ಯೋಗ್ಯತೆಯನ್ನು ಪ್ರಶಂಸಿಸುವನು, ಕೆಳಗೆ ಬಿದ್ದವರನ್ನು ಕೈಹಿಡಿದು ಮೇಲಕ್ಕೆತ್ತುವನು, ಸಮಾಧಾನಮಾಡುವನು. ಬಾಳಿನಲ್ಲಿ ಪ್ರತಿಯೊಂದಕ್ಕೂ ಜಾಗವುಂಟೆಂಬ ತಿಳಿವಿದೆ. ಈತನ ಗೆಲುವು ಸಂಪೂರ್ಣವು, ಅಮಾನುಷೀಯವು. ಈತನ ಸತ್ವ ತಾನೇ ತಾನಾಗಿಯೇ ಹರಡಿ ಜನರನ್ನು ಜ್ಞಾನಪದಕ್ಕೆ ತರುತ್ತ ಪರಿಣಾಮಕಾರಿಯಾಗಿರುತ್ತಿತ್ತು. ಪ್ರತಿಯೊಬ್ಬ ಮಂದಿಯೂ ಅವರವರ ಮನೆ ದೇವರನ್ನೆ ಈತನಲ್ಲಿ ನೋಡಿದರು. ತಮ್ಮ ತಮ್ಮ ಆದರ್ಶದಲ್ಲಿ ಯಾವ ಯಾವ ಕನಸು ನೆನಸುಗಳನ್ನು ನೆಯ್ದುಕೊಂಡಿದ್ದು ಅದು ಶಿವನೆಂದು ಅರಿತುಕೊಂಡಿದ್ದರೋ ಅದರ ಮೂರ್ತಿಸ್ವರೂಪ ಅಲ್ಲಮನೆಂದೇ ಮನಗಾಣುತ್ತಿದ್ದರು. ಈತನ ಚಿತ್ರವು ನುಡಿಯು ಆಚಾರವು ನಡೆವಳಿಯು ಆತ್ಮೀಯ ಗುಣವು ತೇಜಸ್ಸು ಓಜಸ್ಸು ಇವೆಲ್ಲವೂ ಒಂದು ಬಗೆಯ ಸಿದ್ಧಿಯಾದದ್ದು. ಅಯಾಯ

ಮಂದಿಯ ಸ್ಥಿತಿಗತಿ ಸಂಸ್ಕಾರ ಸನ್ಮಾನ ಶಕ್ತಿಭಕ್ತಿಗನುಗುಣವಾಗಿ ಅವರವರು ಮುನ್ನಡೆಯಬೇಕಾದುದರಿಂದ ಕಾತುರವು ಬೇಕಾಗಿಲ್ಲವೆಂದು ಆಚರಿಸುತ್ತಿದ್ದರು. ಈತನ ಮಹೋನ್ನತಿಯ ಮಹತ್ತಿನಿಂದ ಜನತೆಯ ದುರ್ಬಲತೆಯೂ ಹಾಗೂ ವಿರೋಧವು ಹಲವು ಘಳಿಗೆಯಲ್ಲಿ ಕರಗಿ ಹೋಗಿ ಈತನನ್ನು ಪೂಜಿಸುವ ಬಗೆಗೆ ಮುಟ್ಟುತ್ತಿದ್ದರು. ಅಲ್ಲಮನು ಮಹಾತ್ಮನಿರಬೇಕು ಎಂಬ ತಿಳಿವಿನ ವೊಳಕೆಯು ವಿವೇಕದ ಹುಟ್ಟು ಸಿದ್ಧರಾಮನಲ್ಲಿ ಮೂಡಿತು. ಲೋಕೋದ್ಧಾರವಾಗಬಹುದಾದ ರೀತಿ ನೀತಿಯು ಈತನಲ್ಲಿ ಬಯಲಾಗಿರುವುದು ಚಿರಪರಿಚಿತವಾಗಿರುವುದು. ಈ ಬಗೆಯ ಮಹಾತ್ಮರು ಜನಿಸಿ ಉತ್ತಮ ಹಾದಿಯಲ್ಲಿ ಹಾಯ್ದು ಹೋಗಿ ದಾರಿಯ ಪಯಣಿಗರಿಗೂ ಕೈಬೆಳಕಾಗಿ ಹೊಳೆದಿದ್ದರಿಂದಲೇ ನಮ್ಮ ಸಂಸ್ಕೃತಿಯು ನಂದನವನವಾಗಿ ನಾಡು ನಾಕವಾಗಿ ಉಳಿಯುವುದು.

---

## ಲಿಂಗಾಂಗವೆಂದರೇನು?

(ಲೇಖಕರು:—ಶ್ರೀ. ಅನ್ನದಾನೀಶ್ವರ ವಿರಕ್ತಮಠ, ಅಸಿ॥ ಟೀಚರ ರಾಣೀಬಿನ್ನೂರು.)

---

ಲಿಂಗವೆಂದರೆ ವಿಶ್ವಾತ್ಮವು, ವಿಶ್ವಚೈತನ್ಯವು, ವಿಶ್ವದ ರಸವು, ಜೀವನವು. ಅಂಗವೆಂದರೆ ಚರಾಚರಾತ್ಮಕವಾದ ಪಂಚಭೌತಿಕವಾದ ಈ ವಿಶ್ವವು. ವಿಶ್ವಾತ್ಮವನ್ನು ಬಿಟ್ಟು ವಿಶ್ವಕ್ಕೆ ಸ್ವತಂತ್ರವಾದ ಅಸ್ತಿತ್ವವಿಲ್ಲ. ಲಿಂಗವನ್ನು ಬಿಟ್ಟು ಅಂಗಕ್ಕೆ ಸ್ವತಂತ್ರವಾದ ಇರವು ಇಲ್ಲವೆಂದು ಹೇಳಿದರೂ ಅದೇ ಅರ್ಥ. ಲಿಂಗವು ಅಥವಾ ವಿಶ್ವಾತ್ಮವು ಈ ವಿಶ್ವದಲ್ಲಿ ಅಥವಾ ಅಂಗದಲ್ಲಿ ಇದ್ದಾಗ ಜಗದ ಲೀಲೆ ನಡೆಯಬಲ್ಲುದು. ಅಂಗವು ಅಥವಾ ವಿಶ್ವವೆಂದರೆ ಕೇವಲ ಜಡವಲ್ಲ. ಚೈತನ್ಯ ರಸಭರಿತ ಜಡವು. ಲಿಂಗಾಂಗವೆಂದರೆ ವಿಶ್ವಾತ್ಮಮಯವಾದ ಈ ವಿಶ್ವವು. ಇದು ಬ್ರಹ್ಮಾಂಡದ ವಿಚಾರವು.

ಇನ್ನು ಪಿಂಡಾಂಡದ ವಿಚಾರ. ಲಿಂಗವೆಂದರೆ ದೇಹದೊಳಗಿನ ಆತ್ಮ ಚೈತನ್ಯವು. ಲಿಂಗವೆಂದರೆ ಪ್ರಾಣಚೈತನ್ಯವು. ಲಿಂಗವೆಂದರೆ ಜ್ಞಾನ ಚೈತನ್ಯವು. ಲಿಂಗವೆಂದರೆ ದೇಹದ ಕ್ರಿಯಾ ಚೈತನ್ಯವೂ ಅಹುದು. ಅಂಗ ವೆಂದರೆ ಈ ದೇಹವು. ಅಂಗವೆಂದರೆ ಪ್ರಾಣವು. ಅಂತಃಕರಣ ಚತು ಷ್ಟಯವು. ಅಂಗವೆಂದರೆ ಜೀವವು, ಭಾವವು. ದೇಹ, ಮನ, ಪ್ರಾಣ, ಜೀವ, ಇವೆಲ್ಲ ಕೂಡಿದ್ದೇ ಅಂಗವು. ಕ್ರಿಯಾಚೈತನ್ಯ, ಪ್ರಾಣಚೈತನ್ಯ, ಜ್ಞಾನಚೈತನ್ಯವೇ ಲಿಂಗವು. ಲಿಂಗಾಂಗವೆಂದರೆ ಜ್ಞಾನ, ಪ್ರಾಣ ಇವುಗಳ ಕ್ರಿಯಾ ಚೈತನ್ಯಗಳಿಂದ ಯುಕ್ತವಾದ ದೇಹ, ಪ್ರಾಣ, ಮನ, ಜೀವ ಅಥವಾ ಭಾವ. ಸ್ವಲ್ಪದರಲ್ಲಿಯೇ ಹೇಳಬೇಕೆಂದರೆ ಲಿಂಗವೆಂದರೆ ದೇಹ ದೊಳಗಿನ ಆತ್ಮವು. ಅಂಗವೆಂದರೆ ದೇಹವು. ಆತ್ಮವನ್ನು ಬಿಟ್ಟು ದೇಹಕ್ಕೆ ಸ್ವತಂತ್ರವಾದ ಅಸ್ತಿತ್ವವಿಲ್ಲ. ಲಿಂಗವನ್ನು ಬಿಟ್ಟು ಅಂಗವಿಲ್ಲ ವೆಂದರೂ ಇದೇ ಅರ್ಥ. ಅಂಗವೆಂದರೆ ಕೇವಲ ಜಡವಲ್ಲ; ಲಿಂಗ ಮಯವಾದ ಜಡವು. ಲಿಂಗಾಂಗವೆಂದರೆ ಆತ್ಮನಿಂದ ಯುಕ್ತವಾದ ದೇಹವು. ಇದು ಪಿಂಡಾಂಡದ ವಿಚಾರವಾಯಿತು.

ದೇಹದೊಳಗಿನ ಆತ್ಮವೂ, ವಿಶ್ವದಲ್ಲಿಯ ವಿಶ್ವಾತ್ಮವೂ ಬೇರೆಯಲ್ಲ, ಒಂದೇ. ಅಂದ ಮೇಲೆ ಲಿಂಗ ಒಂದೇ. ಈ ದೇಹವೂ ವಿಶ್ವವೂ ಪಂಚ ಭೌತಿಕವು. ಎರಡೂ ಒಂದೇ.

ಈ ವರೆಗಿನ ವಿವೇಚನೆಯಿಂದ ಲಿಂಗಾಂಗವೆಂದರೆ ಸೃಷ್ಟಿಯ ಸಹಜ ಧರ್ಮವೆಂದು ಹೇಳಿದಂತಾಯಿತು. ಸಹಜ ಧರ್ಮವ ಬಲ್ಲವನೇ ಲಿಂ ಗಾಂಗಿಯು. ಸಹಜಾಚರಣೆಯುಳ್ಳವನೇ ಲಿಂಗಾಂಗಿಯು.

ಲಿಂಗವನ್ನು ಬಿಟ್ಟು ಅಂಗವಿಲ್ಲ. ಅಂಗವನ್ನು ಬಿಟ್ಟು ಲಿಂಗವಿಲ್ಲ. ಲಿಂಗಾಂಗಿಯ ಧರ್ಮದಲ್ಲಿ ಪ್ರಪಂಚ ಬೇರೆ, ಪಾರಮಾರ್ಥ ಬೇರೆ ಎಂಬ ವಿಚಾರಕ್ಕೆ ಆಸ್ಪದವಿಲ್ಲ. ಪಾರಮಾರ್ಥಮಯವಾದ ಪ್ರಪಂಚವೇ ಲಿಂ ಗಾಂಗಿಯ ಪ್ರಪಂಚವು. ಯೋಗಮಯವಾದ ಭೋಗ, ಶಿವ ಮಯ ವಾದ ವ್ಯವಹಾರ, ಲಿಂಗ ಭೋಗೋಪ ಭೋಗ—ಇವೆಲ್ಲ ಒಂದೇ.

ಸನ್ಯಾಸವು ಹೆಚ್ಚು, ಗಾರ್ಹಸ್ಥ್ಯವು ಕಡಿಮೆ ಎಂಬ ಮಾತು ಸಹಜ ಧರ್ಮಕ್ಕೆ ವಿರೋಧವಾದದ್ದು. ಈ ದೃಷ್ಟಿಯಿಂದ ವರ್ಣಾಶ್ರಮವು ಸಹಜ ಧರ್ಮವಲ್ಲವೆಂದು ತಿಳಿಯುವದು.

ಜಾತಿ ಭೇದ, ವರ್ಣಭೇದಗಳೂ, ಸಹಜ ಧರ್ಮಕ್ಕೆ ವಿರೋಧವಾಗಿವೆ. ಅನೇಕ ದೇವತೋಪಾಸನೆಯೂ ಸಹಜ ಧರ್ಮಕ್ಕೆ ವಿರೋಧವು. ಉಪವಾಸ, ದೇಹದಂಡನೆಯು, ಉಗ್ರ ತಪವು ಸಹಜ ಧರ್ಮಕ್ಕೆ ವಿರೋಧವು. ಇಂಥ ಸಹಜ ಲಿಂಗಾಂಗಿ ಧರ್ಮವು ಪಾಶ್ಚಾತ್ಯರಿಗೂ ಪೌರ್ವಾತ್ಯರಿಗೂ ಬೇಕು.

ಲಿಂಗಾಂಗಿ ಧರ್ಮವು ಪೌರ್ವಾತ್ಯ ಪಾಶ್ಚಾತ್ಯ ಸಂಸ್ಕೃತಿಗಳನ್ನು ಸಮನ್ವಯ ಮಾಡಬಲ್ಲದು. ಲಿಂಗವೆಂದರೆ ಆಧ್ಯಾತ್ಮಿಕ ಪ್ರಗತಿ. ಅಂಗವೆಂದರೆ ಭೌತಿಕ ಪ್ರಗತಿ. ಆಧ್ಯಾತ್ಮಿಕ, ಭೌತಿಕ ಪ್ರಗತಿಯೇ ಭೂ ಕೈಲಾಸವು. ಕೈಲಾಸ ಬೇರೆ ಇಲ್ಲ. ಪಾಶ್ಚಾತ್ಯರು ಅಂಗದ ಪ್ರಗತಿ ಮಾಡಿದರು. ಪೌರ್ವಾತ್ಯರು ಲಿಂಗದ ಪ್ರಗತಿ ಮಾಡಿದರು. ಆದರೆ ಇಬ್ಬರದೂ ಏಕ ಪಕ್ಷೀಯ ಪ್ರಗತಿಯಾದ್ದರಿಂದ ದುಃಖ ಬಿಡಲಿಲ್ಲ. ಈಗ ಲಿಂಗಾಂಗ ಸಾಮರಸ್ಯ ಬೇಕು. ಅಂದರೆ ಯುದ್ಧಗಳು ನಿಂತು ಹೊಸ ಸಮಾಜ ಸ್ಥಾಪನೆಯಾಗಿ ಜನದಲ್ಲಿ ಶಾಂತಿಯುಂಟಾಗುವದು. ಆದ ಕಾರಣ ಲಿಂಗಾಂಗಿಯು ಜಗತ್ತಿಗೆ ದಾರಿ ತೋರಿಸಬೇಕು. ಕಾಂತಿಮಯವಾದ, ಸತ್ಕ್ರಿಯೆಯ ದೇಹ, ಶಾಂತ ಮನಸ್ಸು, ಜ್ಞಾನಮಯವಾದ ಚಿತ್ತ, ಅಂತಃಸ್ಫೂರ್ತಿಮಯವಾದ ಜೀವ--ಹೀಗೆ ಸಂಸಾರ ಸಾಗಿಸುವವನೇ ಲಿಂಗಾಂಗಿಯು. ಇಂಥ ಲಿಂಗಾಂಗಿಯು ಶರಣ ಬಸವಣ್ಣನು. ಜಗದಣ್ಣ ಬಸವಣ್ಣನ ಕಡೆಗೆ ಜಗತ್ತು ಹೊರಳಿದರೆ ಸುಖಶಾಂತಿಗಳ ಬೀಡಾಗುವದು.

---

## ಬಸವ ಜಯಂತಿಯನ್ನು ಹೇಗೆ ಆಚರಿಸಬೇಕು?

(ಲೇಖಕರು:—ಶ್ರೀ. ಅನ್ನದಾನೀಶ್ವರ ವಿರಕ್ತಮಠ.)

ಬಸವಜಯಂತಿಯು ಕನ್ನಡನಾಡಿನಲ್ಲಿ ವಿಜೃಂಭಣೆಯಿಂದ ಆಚರಿಸಲ್ಪಡುತ್ತಲಿದೆಯಷ್ಟೇ. ಆದರೆ ಇಡೀ ಹಿಂದುಸ್ತಾನದಲ್ಲಿ ಅದು ಆಚರಿಸಲ್ಪಡುವಂತೆ ಸಮಾಜ ಮುಖಂಡರು ಪ್ರಯತ್ನ ಮಾಡದಿರುವದು ಅತ್ಯಂತ ವಿಷಾದಕರವಾದ ಸಂಗತಿಯಾಗಿದೆ. ನಮ್ಮ ಅಲ್ಪ ಸಂತುಷ್ಟ ವೃತ್ತಿಯು ನಮ್ಮ ಸಮಾಜದ ಪ್ರಗತಿಗೆ ದೊಡ್ಡ ವೈರಿಯಾಗಿದೆಯೆಂದು ಹೇಳಬಹುದು. ಬುದ್ಧ ಕ್ರೈಸ್ತ ಜಯಂತಿಗಳು ಜಗತ್ತಿನಲ್ಲಿ ವೈಭವದಿಂದ ಆಚರಿಸಲ್ಪಡುತ್ತವೆ. ಶ್ರೀ ಕೃಷ್ಣ ಜಯಂತಿಯೂ ಇಡೀ ಜಗತ್ತಿನಲ್ಲಿ ಹಬ್ಬುವದರಲ್ಲಿದೆ.

ಆದರೆ ಬಸವ ಜಯಂತಿಯು ಜಗತ್ತಿನಲ್ಲಿ ಹಬ್ಬುವದೊತ್ತಟ್ಟಿಗಿರಲಿ, ಹಿಂದುಸ್ತಾನದಲ್ಲಿ ಸಹ ಹಬ್ಬದಿರುವದನ್ನು ನೋಡಿದರೆ ನಮ್ಮ ದೌರ್ಬಲ್ಯಕ್ಕೆಲ್ಲಿ ಏನೆನ್ನಬೇಕು? ಇನ್ನು ಮೇಲಾದರೂ ಸಮಾಜದ ಜವಾಬ್ದಾರೀ ಮುಂದಾಳುಗಳು ಈ ದಿಸೆಯಲ್ಲಿ ಬಲಾಢ್ಯಚಳವಳಿಯನ್ನು ಹೂಡಬೇಕಾಗಿ ವಿಜ್ಞಾಪನೆ.

## ಚಳವಳಿಯ ಕಾರ್ಯಕ್ರಮ

ಬಸವನ ವಿಶ್ವಬಂಧುತ್ವದ ತತ್ವಗಳ ಪ್ರಸಾರವಾಗಬೇಕೆಂದರೆ ಸುಸಂಘಟಿತವಾದ ಚಳವಳಿಯು ಬೇಕು. ಆ ಚಳವಳಿಯ ಕಾರ್ಯಕ್ರಮವನ್ನು ಕೆಳಗೆ ಕೊಡಲಾಗಿದೆ.

ಬಸವನು ವಿಶ್ವವಿಭೂತಿಯಾಗಿರುವದರಿಂದ ಇಡೀ ವಿಶ್ವದಲ್ಲಿ ಅವನ ತತ್ವಗಳು ತಿಳಿಯುವಂತೆ ಇಂಗ್ಲಿಷ ಭಾಷೆಯಲ್ಲಿ ವಚನಗಳ ಪರಿವರ್ತನವಾಗಬೇಕು. ಆ ಪರಿವರ್ತನವು ಹೊಸಮಾದರಿಯ ಬಾಯಬಲ್ಲಿನಂತೆ ಸಂಗೀತ, ಸಾಹಿತ್ಯ, ಮತ್ತು ಕಲಾಯುಕ್ತವಾಗಿರಬೇಕು. ಬಸವನ ಬಾಯಬಲ್ಲನ್ನು ಮಧುರವಾಗಿ ಹಾಡುವ ಸಂಗೀತ ಕಲಾವಿಶೇಷಜ್ಞರನ್ನು ಪರದೇಶಗಳಿಗೆ ಕಳಿಸಬೇಕು. ಇಂಗ್ಲಿಷದಲ್ಲಿ ಪರಿಣಾಮಕಾರಿಯಾಗಿ ಭಾಷಣ ಮಾಡಬಲ್ಲ ಭಾಷಣಕಾರರ ಜೊತೆಗೆ ಅವರನ್ನು ಕಳಿಸಬೇಕು.

ಹಿಂದುಸ್ತಾನಿ ಭಾಷೆಯಲ್ಲಿ ಬಸವನ ವಚನಗಳು ಭಾಷಾಂತರಿಸಲ್ಪಟ್ಟರೆ ಉತ್ತರ ಹಿಂದುಸ್ತಾನದಲ್ಲಿ ಚನ್ನಾಗಿ ಪ್ರಸಾರವಾಗುತ್ತವೆ. ದಕ್ಷಿಣದಲ್ಲಿಯೂ ತಕ್ಕಮಟ್ಟಿಗೆ ಹಬ್ಬುತ್ತವೆ. ಆದರೆ ದಕ್ಷಿಣದಲ್ಲಿ ತಮಿಳು, ತೆಲಗು, ತುಳು, ಮಲಿಯಾಳಿ, ಭಾಷೆಗಳಲ್ಲಿ ಅವು ಅನುವಾದಿಸಲ್ಪಡಬೇಕು. ಉತ್ತರ ಹಿಂದುಸ್ತಾನದಲ್ಲಿ ಆರ್ಯ ಸಮಾಜದವರಂತೆ ಪ್ರಸಾರಸಾಗಬೇಕು. ದಕ್ಷಿಣದಲ್ಲಿ ಕ್ರಿಶ್ಚನ್ನರಂತೆ ಪ್ರಸಾರವಾಗಬೇಕು.

ಈ ವರೆಗೆ ಆಗಿರುವ ಬಸವನ ಭಾಷಾಂತರ ವಚನಗಳನ್ನೂ, ಅವನ ಜೀವನ ಮತ್ತು ವಿಚಾರಗಳ ಬಗ್ಗೆ ಪ್ರಕಟವಾದ ಪುಸ್ತಕಗಳನ್ನೂ ಪ್ರತಿಯೊಂದು ಬಸವ ಜಯಂತಿಯ ಸ್ಥಳಗಳಲ್ಲಿ ಪ್ರದರ್ಶನಕ್ಕೆ ಇಡಬೇಕು.

ಬಸವ ಜಯಂತಿಯು ಹಬ್ಬದ ದಿನವು. ಈ ಹಬ್ಬದ ದಿನ ಎಲ್ಲ ಸರಕಾರಗಳಿಂದ ರಜೆ ಸಿಗಲಿಕ್ಕೆ ಬೇಕು. ಆ ರಜೆಯನ್ನು ಎಂದೂ ಯಾರೂ ರದ್ದುಗೊಳಿಸದಂತೆ ನೋಡಬೇಕು.

ಜಯಂತಿಯ ಸ್ಥಾನಗಳಲ್ಲಿ ವಚನಗಳ ಪ್ರಭಾತ ಫೇರಿಯನ್ನು ಹೊರಡಿಸಬೇಕು. ಭಾಷಣಗಳ ಜೊತೆಗೆ ವಚನಗೀತಾ ಸ್ಪರ್ಧೆಯನ್ನು ಏರ್ಪಡಿಸಬೇಕು.

ಅನುಭಾವಿಗಳ ಮತ್ತು ತತ್ವಜ್ಞಾನಿಗಳ, ಸಮಾಜ ಸುಧಾರಕರ ಮತ್ತು ಆಧುನಿಕ ವಿದ್ಯಾವಿಭೂಷಿತರ ಭಾಷಣಗಳನ್ನು ರೇಡಿಯೋದ್ವಾರಾ ಎಲ್ಲಕಡೆಗೆ ಪ್ರಚಾರಪಡಿಸಬೇಕು.

ವಚನಗಳ ಅರ್ಥವನ್ನು ಹೊಸರೀತಿಯಲ್ಲಿ ಮಾನಸ ಶಾಸ್ತ್ರಕ್ಕನುಸರಿಸಿ ಬರೆದು ಪ್ರಕಾಶಪಡಿಸುವದಂತೂ ಎಲ್ಲಕ್ಕು ಮೊದಲು ಮಾಡತಕ್ಕ ಕಾರ್ಯವು. ವಚನಗಳ ಅರ್ಥ ತಿಳಿಯದಿದ್ದರೆ ಅವು ಎಂದೂ ಪ್ರಸಾರವಾಗುವದಿಲ್ಲ. ಆ ಅರ್ಥ ವಿವರಣೆಯು ಹೊಸ ಮನಶ್ಶಾಸ್ತ್ರಕ್ಕನುಸರಿಸಿ ಆಗಬೇಕು. ಇಲ್ಲದಿದ್ದರೆ ಚಿತ್ತಾಕರ್ಷಕವಾಗಿಯೂ ಬೋಧಪ್ರದವಾಗಿಯೂ ಆಗುವದಿಲ್ಲ.

ಕನಿಷ್ಟ ಪಕ್ಷಕ್ಕೆ ಒಂದು ಕೋಟಿ ಬಸವನ ವಚನಗಳ ಪ್ರತಿಗಳನ್ನಾದರೂ ಪುಕ್ಕಟೆಯಾಗಿ ಹಂಚಬೇಕು.

ಜಗತ್ತಿನ ಎಲ್ಲ ಸಂಘದವರೂ ಬಸವನ ವಚನವನ್ನು ಓದಬೇಕಾದರೆ ಏನು ಮಾಡಬೇಕೆಂಬದನ್ನು ದೊಡ್ಡ ಪಂಡಿತರಿಂದಲೂ, ಅನುಭಾವಿಗಳಿಂದಲೂ ಅಭಿಪ್ರಾಯ ಪಡೆಯಬೇಕು.

ಮೇಲೆ ಹೇಳಿದ ಕಾರ್ಯಕ್ರಮವು ಯಶಸ್ವಿಯಾಗಬೇಕಾದರೆ ಕ್ರಿಶ್ಚನ್ ಮಿಶನ್ನುಗಳಂಥ ಲಿಂಗಾಂಗೀ ಸಮಾಜದ ಮಿಶನ್ನುಗಳು ಬೇಕು. ಈ ಮಿಶನ್ನಿನಿಂದಲೇ ಸಂಸ್ಕೃತಿ ಪ್ರಚಾರ ಸಾಗಲು ಶಕ್ಯವಿದೆ.

## ಯಾರು ಮಾಡಬೇಕು?

ಈ ಮಹಾಕಾರ್ಯವನ್ನು ಯಾರು ಮಾಡಬೇಕೆಂದರೆ ಬಸವನ ವಿಚಾರಗಳಲ್ಲಿ ಮತ್ತು ಅವನ ಜೀವನಮಾರ್ಗದಲ್ಲಿ ಶ್ರದ್ಧೆಯುಳ್ಳಂಥವರು ಕೂಡಿ ಮಾಡಬೇಕು. ಅನುಭಾವಿಗಳು, ತತ್ವಜ್ಞಾನಿಗಳು, ಸಾಹಿತಿಗಳು, ಸಂಗೀತ ಮತ್ತು ಕಲಾಭಿಜ್ಞರು, ಪ್ರತಿಭಾ ಸಂಪನ್ನ ಪಂಡಿತರು, ಹೊಸ ಸಮಾಜವನ್ನು ಕಟ್ಟಬೇಕೆನ್ನುವವರು, ಸ್ತ್ರೀ ಸಮಾಜ ಸುಧಾರಕರು, ಜಾತ ಘಾತ ತೋಡಕ ಮಂಡಲದವರು, ವ್ಯಾವಹಾರಿಕ ವೇದಾಂ

ತಿಗಳು, ಆಧುನಿಕ ಮನಶ್ಶಾಸ್ತ್ರ ಶಿಕ್ಷಣತಜ್ಞರು, ಸಮತಾ ಬುದ್ಧಿಯ ಕವಿಗಳು, ವರ್ಣಾಶ್ರಮದ ಘಾತುಕ ಪದ್ಧತಿಯ ವಿರೋಧಿಗಳು, ಸಮತಾವಾದಿಗಳು, ದ್ರಾವಿಡ ಸಂಸ್ಕೃತಿಯ ಅಭಿಮಾನಿಗಳು, ಕನ್ನಡನಾಡು ನುಡಿಗಳ ಬಾಳು ಚಂದವಾಗಬೇಕೆನ್ನುವವರು ಮತ್ತು ಕನ್ನಡ ನಾಡು ಸ್ವತಂತ್ರ ಪ್ರಾಂತವಾಗಬೇಕೆನ್ನುವವರು ಹೀಗೆ ಮೇಲಿನ ಎಲ್ಲರೂ ಜವಾಬ್ದಾರಿಯಿಂದ ಈ ಮಹಾಕಾರ್ಯವನ್ನು ಮಾಡಬೇಕು.

ಇವರೆಲ್ಲರನ್ನು ಒಂದು ಕಡೆಗೆ ಕೂಡಿಸುವ ಕೆಲಸವನ್ನು ಲಿಂಗಾಂಗೀ ಸಮಾಜದ ಅಥವಾ ಬಸವನ ಮಿಶನ್ ಮಾತ್ರ ಮಾಡಬಲ್ಲದು.

## ಬಸವ ಮಿಶನ್ ಯಾರು ಸ್ಥಾಪಿಸಬೇಕು?

ಶ್ರೀ ನವಕಲ್ಯಾಣಮಠದ ಕುಮಾರ ಸ್ವಾಮಿಗಳು ಧಾರವಾಡ, ಶ್ರೀ ವಚನ ಪಿತಾಮಹ ಹಳಕಟ್ಟಿಯವರು ವಿಜಾಪುರ. ಶ್ರೀ. ಸಬ್‌ಜಜ್ಜ್ ಟಿ. ಎಚ್. ಎಂ. ಸದಾಶಿವಯ್ಯನವರು ಬಳ್ಳಾರಿ, ಧಾರವಾಡದ ಶ್ರೀ. ನಿ. ಪ್ರ. ಮೃತ್ಯುಂಜಯ ಸ್ವಾಮಿಗಳು, ಬಾಗಲಕೋಟೆಯ ಪ್ರಿನ್ಸಿಪಾಲ ಶ್ರೀ ನಂದಿಮಠ, ಈ ಪ್ರಮುಖ ಮುತ್ಸದ್ದಿಗಳು ಬಸವ-ಮಿಶನ್ ಸ್ಥಾಪಿಸಲುದ್ಯುಕ್ತರಾದರೆ ಜಯವು ಸಿಗುದದು ಖಂಡಿತ. ಸಂಸ್ಕೃತಿ ಪ್ರಕಾಶಕ ಸಮಿತಿ ಗದಗ ಈ ಸಂಸ್ಥೆಯಂಥ ಕೆಲವು ಸಂಸ್ಥೆಗಳನ್ನು ಈ ಬಸವ ಮಿಶನ್ನಿನಲ್ಲಿ ಸೇರಿಸಲು ಶಕ್ಯವಿದೆ. ವೀರಶೈವ ಮಹಾಸಭೆಯು ಇದರಲ್ಲಿ ಕ್ರಿಯಾತ್ಮಕ ಸಹಾನುಭೂತಿಯನ್ನು ತೋರಿಸುವಂತೆ ಮಾಡಬಹುದು. ಶ್ರೀ. ಭೂಮರಡ್ಡಿ ಮುಂಬಯಿ ಇಂಥ ಮಹನೀಯರು ಧನ ಸಹಾಯ ಮಾಡಲು ಮುಂದೆ ಬಂದೇ ಬರುವರು. ಮೊದಲು ಕಾರ್ಯ ಪ್ರಾರಂಭವಾಗಬೇಕು. ಮೇಲಿನ ಮುಂದಾಳುಗಳು ಒಂದು ಗೂಡಿ ಸಮಾಜದ ತುಂಬ ಸಂಚರಿಸಿದರೆ ದುಡ್ಡು ತಾನೇ ಕೂಡುವದು.

## ಜಯಂತಿಯನ್ನು ಹೇಗೆ ಆಚರಿಸಬೇಕು ?

ಮೇಲೆ ಹೇಳಿದ ಸಂಗತಿಗಳಲ್ಲಿ ಕೆಲವು ಸಂಗತಿಗಳನ್ನಾದರೂ ಆಚರಣೆಯಲ್ಲಿ ತರುವ ದೃಢನಿಶ್ಚಯದಿಂದ ಬಸವ ಜಯಂತಿಯನ್ನು ಆಚರಿಬೇಕು. ಸುಮ್ಮನೇ ಪದ್ಧತಿಪ್ರಕಾರ—ಎಷ್ಟುವರ್ಷ ಆಚರಿಸಿದರೂ ಆಗ

ಬೇಕಾದ ಮುಖ್ಯ ಪರಿಣಾಮ ಆಗುವದಿಲ್ಲ. ಸಮಾಜ ಪ್ರಗತಿಯೂ ಆಗುವದಿಲ್ಲ. ಆತ್ಮವಿಶ್ವಾಸವೂ ಸಂಭವಿಸುವದಿಲ್ಲ.

## ಮುಖ್ಯ ಆಚರಣೆ.

ಜಯಂತಿಯಲ್ಲಿ ಬಸವನ ತತ್ವಗಳಂತೆ ಆಚರಿಸುವ ಮನೋವೃತ್ತಿಯನ್ನು ತಾಳುವದೇ ಮುಖ್ಯವು. ಆದರೂ ಈ ಕೆಳಗಿನ ಒಂದೆರಡು ಸಂಗತಿಗಳನ್ನು ಜಯಂತಿಯ ವ್ಯವಸ್ಥಾಪಕರು ಆಚರಣೆಯಲ್ಲಿ ತರಬೇಕಾಗಿ ವಿನಂತಿ.

ಬೆಂಗಳೂರ ಕನ್ನಡ ಸಾಹಿತ್ಯ ಪರಿಷತ್ತಿನವರು ೧೯೪೧ನೇ ಇಸ್ವಿಯಲ್ಲಿ "ಕನ್ನಡ ನಾಡಿನ ಚರಿತ್ರೆ" ಮೊದಲನೆಯ ಭಾಗ ಎಂಬ ಪುಸ್ತಕವನ್ನು ಪ್ರಕಟಿಸಿರುವರು. ಅದು ಬೆಳ್ಳಿಯ ಹಬ್ಬದ ಪ್ರಕಟನೆ ಎಂಬದಾಗಿ ಪ್ರಕಟವಾಗಿದೆ. ಅದರ ಪ್ರಧಾನ ಸಂಪಾದಕರು ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು. ಎಂ. ಎ. ಬಿ. ಎಲ್.. ಅವರು. ಅವರು ದಿವಂಗತರಾಗಿರುವರು. ಆದರೆ ಈ ಪುಸ್ತಕವನ್ನು ಇಂದಿಗೂ ಪ್ರತಿವರ್ಷ ಸಾಹಿತ್ಯ ಪರೀಕ್ಷೆಗಳಿಗೆ ಹಚ್ಚುವರು. ಅಧುನಿಕ ತರುಣ ವಿದ್ಯಾರ್ಥಿಗಳಲ್ಲಿ ಬಸವನ ಬಗ್ಗೆ ತಪ್ಪು ತಿಳುವಳಿಕೆಯಾಗುವಂತೆ ಆ ಪುಸ್ತಕದ ೪೮, ೪೯ ನೆಯ ಪುಟಗಳಲ್ಲಿ ಪ್ರಕಟಿಸಿರುವರು. ಅದನ್ನು ಕೂಡಲೇ ತೆಗೆದು ಹಾಕಿ ನಿಜವಾದ ಬಸವನ ಚರಿತ್ರೆಯನ್ನು ಸೇರಿಸುವಂತೆ ಒತ್ತಾಯಪಡಿಸಬೇಕು.

ಬಸವನ ನಿಜವಾದ ಇತಿಹಾಸವನ್ನು ವಚನಗಳ ಆಧುನಿಕ ಅರ್ಥವಿವರಣೆಯನ್ನು ಬರೆಯುವಂತೆಯೂ ಮತ್ತು ಬಸವ ಮಿಶನ್ ಸ್ಥಾಪಿಸುವಂತೆಯೂ ಮೇಲ್ಕಾಣಿಸಿದ ಶ್ರೀ. ಹಳಕಟ್ಟಿ ವಿಜಾಪುರ ಮುಂತಾದ ಮುಂದಾಳುಗಳಿಗೆ ವಿನಂತಿಸಿಕೊಳ್ಳಬೇಕು.

---

# ಲೋಕಗಳ ವಿಚಾರ.

(ಲೇಖಕಃ—ಶ್ರೀಯುತ ಸಾಸನೂರ ಮಡಿವಾಳಪ್ಪನವರು.
ಶಾಲಾಧ್ಯಾಪಕ—ಮು॥ ಸಾಸನೂರ ತಾ॥ ಬಾಗೇವಾಡಿ)



ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸ್ವರ್ಗಲೋಕ ಹಾಗು ಮರ್ತ್ಯಲೋಕಗಳ ಮಾತು ಹಲವರ ಬಾಯಿಯಿಂದ ಹೊರಬೀಳುವದು. ಆದರೆ ಬಹು ಸ್ವಲ್ಪ ಜನರು ಮಾತ್ರ ಈ ವಿಷಯದ ನಿಜತ್ವವನ್ನು ತಿಳಿದಿರುವರು. ಸ್ವರ್ಗವೆಂದರೆ ಮೇಲಕ್ಕೆ ಬೊಟ್ಟುಮಾಡಿ ತೋರಿಸುವದೇ ಅಭ್ಯಾಸವಾಗಿ ಬಿಟ್ಟಿದೆ. ನಮ್ಮದೇಶದಲ್ಲಿ ಪಂಡಿತರೆನಿಸಿಕೊಳ್ಳುವ ಹಲವರಿಗೆ ಈ ವಿಷಯದಬಗ್ಗೆ ನಿಜವಾದ ಕಲ್ಪನೆ ಇಲ್ಲ. ತಿಳಿದು ಕೊಳ್ಳಲಿಕ್ಕೆ ಪ್ರಯತ್ನವನ್ನು ಮಾಡುವದಿಲ್ಲವೆಂಬುವದು ಶೋಚನೀಯ ಸಂಗತಿಯು. ಅಜ್ಞಮುತ್ತಾತರ ಕಾಲದಿಂದ ಸ್ವರ್ಗವೆಂದರೆ ಶೂನ್ಯ (ಆಕಾಶ)ಸ್ಥ ಲೋಕವೆಂದೇ ತಿಳಿದು ಸಂತುಷ್ಟರಾಗಿದ್ದಾರೆ. ನಿಜವಾಗಿ ಈ ತಿಳುವಳಿಕೆ ಎಷ್ಟು ಭ್ರಮಾತ್ಮಕವೆಂಬುವದು ನಮ್ಮ ಸಂಸ್ಕೃತ ಗ್ರಂಥಗಳನ್ನು ಓದಲು ಸ್ಪಷ್ಟವಾಗಿ ತಿಳಿದು ಬರುತ್ತದೆ. ವೇದ ಉಪನಿಷತ್, ಪುರಾಣ, ರಾಮಾಯಣ, ಮಹಾಭಾರತ, ಜ್ಯೋತಿಷಶಾಸ್ತ್ರ ಇತ್ಯಾದಿ ಗ್ರಂಥಗಳನ್ನು ಮನಸುಗೊಟ್ಟು ಓದಲು, ಸ್ವರ್ಗ ಸಂಬಂಧದ ವಿಶೇಷ ಜ್ಞಾನವುಂಟಾಗುವದು. ಉಳಿದ ಗ್ರಂಥಗಳನ್ನು ಬಿಟ್ಟು ಕೇವಲ ರಾಮಾಯಣ ಮಹಾಭಾರತಗಳನ್ನು ನೋಡುವದರಿಂದಲೇ ಈ ವಿಷಯದ ಹಲವು ನಿಜಸಂಗತಿಗಳು ಗೊತ್ತಾಗುವವು.

ಯುಧಿಷ್ಠಿರ ಮಹಾರಾಜನು, ನಾಲ್ವರು ತಮ್ಮಂದಿರು ಹಾಗು ದ್ರೌಪದಿಯೊಡನೆ ಕಾಲುನಡಿಗೆಯಿಂದ ಸ್ವರ್ಗಕ್ಕೆ ಹೊರಟನು. ದಾರಿಯಲ್ಲಿ ಮೇರು ಪರ್ವತದೊಳಗೆ ಯುಧಿಷ್ಠಿರನ ಹೊರತು ಎಲ್ಲರೂ ಸತ್ತರು. ಯುಧಿಷ್ಠಿರ ಮಹಾರಾಜನೊಬ್ಬನೇ ಸ್ವಶರೀರದಿಂದ ಸ್ವರ್ಗಕ್ಕೆ ಹೋದನು. ಸ್ವರ್ಗವು ಒಂದುವೇಳೆ ಶೂನ್ಯ (ಆಕಾಶ)ದಲ್ಲಿ ಇದ್ದುದಾದರೆ, ಅಥವಾ ಮೃತಾತ್ಮರ ಆವಾಸ ಸ್ಥಳವಾಗಿದ್ದರೆ, ಯುಧಿಷ್ಠಿರನು ಕಾಲುನಡಿಗೆಯಿಂದ

ಸಶರೀರವಾಗಿ, ಸ್ವರ್ಗದಲ್ಲಿ ಹೋಗಲು ಸಮರ್ಥನಾಗುತ್ತಿದ್ದನೋ? ಸಂಧ್ಯಾವಂದನೆಯ ಮಂತ್ರಗಳಲ್ಲಿ ಸಪ್ತ ಸ್ವರ್ಗಗಳ ವಿಷಯವು, ಉಲ್ಲೇಖಿತವಾಗಿದೆ. ವೈದಿಕಯುಗದಲ್ಲಿ ಈ ಸಪ್ತಸ್ವರ್ಗಗಳು ಇದ್ದವು. ಯುಗ ಪರಿವರ್ತನದೊಡನೆಯೇ ಈ ಎಲ್ಲ ಸ್ವರ್ಗಗಳ ಹೆಸರುಗಳು ಸಹ ಮಾರ್ಪಾಟಾಗಿ ಹೋಗಿರುವವು.

ಈ ಸಪ್ತಸ್ವರ್ಗಗಳು:—

೧. ಭೂಃಲೋಕ—ಭಾರತವರ್ಷ; ವೈದಿಕ ಯುಗದಲ್ಲಿ ಭಾರತ ವರ್ಷಕ್ಕೆ ದಕ್ಷಿಣ ಕುರುದೇಶವೆಂದೂ ಅನ್ನುತ್ತಿದ್ದರು. ಪೂರ್ವಕಾಲದಲ್ಲಿ ಈ ಭಾರತವರ್ಷವು ವೇನ ರಾಜನ ಮಗನಾದ ಪೃಥುವಿನ ನಾಮಾನುಸಾರವಾಗಿ ಹಲವು ಸ್ಥಳಗಳಲ್ಲಿ "ಪೃಥಿವೀ" ಎಂಬ ಹೆಸರಿನಿಂದ ಕರೆಯಲ್ಪಟ್ಟಿದೆ.

೨. ಭುವರ್ಲೋಕ— ಇದು ಕೇತುಮಾಲ ವರ್ಷವೆಂದೂ ಕರೆಯಲ್ಪಡುತ್ತದೆ. ಇದು ಮೊದಲು ದೈತ್ಯರಾಜರ ಹಾಗು ಅನಂತರದಲ್ಲಿ ವರುಣನ ಆವಾಸ ಭೂಮಿಯಾಗಿತ್ತು. ಈ ಕೇತುಮಾಲ ವರ್ಷವು ಈಗಿನ ಅಫಗಾನಿಸ್ತಾನದ ಉತ್ತರಭಾಗ, ಪರ್ಶಿಯಾ ಹಾಗು ತುರಸ್ಕ ಮೊದಲಾದ ಸ್ಥಾನಗಳ ವರೆಗೆ ಹಬ್ಬಿತ್ತು.

೩. ಸ್ವರ್ಲೋಕ—ವೈದಿಕ ಕಿಂಪುರುಷವರ್ಷ; ಹರಿವರ್ಷ, ಹಾಗು ಇಲಾವೃತವರ್ಷ. ಈ ಸ್ವರ್ಲೋಕವೇ ಈಗಿನ ತಿಬೇಟ (ವೈದಿಕ-ಮಾಶಕ ದೇಶ,) ಚೀನ ತಾರ್ತರಿ, ಹಾಗು ಮುಂಗೋಲಿಯಾ (ವೈದಿಕ-ಮಂಗ ದೇಶ) ಈ ಮೂರುವರ್ಷಗಳು ಕ್ರಮದಿಂದ ಶಿವ, ಯಮ, ಹಾಗು ಇಂದ್ರರ ವಾಸಸ್ಥಾನವಾಗಿದ್ದವು.

೪. ಜನಃಲೋಕ—ಈಗಿನ ದಕ್ಷಿಣ ಸೈಬೇರಿಯಾ, ವೈದಿಕನಾಮ-ಭದ್ರಾಶ್ವವರ್ಷ. ಇದು ಸೂರ್ಯನ ಆವಾಸ ಸ್ಥಳವಾಗಿತ್ತು.

೫. ಮಹರ್ಲೋಕ— ವೈದಿಕ-ರಮ್ಯಕವರ್ಷ; ಈಗಿನ ಚೀನ, ಮಂಚೂರಿಯಾ ಮೊದಲಾದವುಗಳು. ಇದು ಚಂದ್ರನ ಆವಾಸ ಭೂಮಿಯಾಗಿತ್ತು.

೬. ತಪೋಲೋಕ—ಮಧ್ಯ ಸೈಬೀರಿಯಾ, ವೈದಿಕ ಹಿರಣ್ಮಯ ವರ್ಷ ಇದೇ ವಿಷ್ಣುವಿನ ವೈಕುಂಠವಾಗಿತ್ತು.

೭ ಸತ್ಯಲೋಕ—ವೈದಿಕ ನಾವು ಉತ್ತರ ಕುರುವರ್ಷ ಈಗಿನ ಉತ್ತರ ಸೈಬೀರಿಯಾ, ಮೇರುದೇಶ ಹಾಗು ಗ್ರೀನಲ್ಯಾಂಡ. ಇದೇ ಚತುರ್ಮುಖನೆಂಬ ಪ್ರಜಾಪತಿ ಬ್ರಹ್ಮನ ಬ್ರಹ್ಮಲೋಕವು.

—ವಾಯುಪುರಾಣ, ೩೪ನೇ ಅಧ್ಯಾಯ.

ಈ ಭಾರತವು ನಮ್ಮ ಮಾತೃಭೂಮಿಯು. ಪಿತೃಭೂಮಿಯಲ್ಲ ವೆಂದು ವೇದದಿಂದ ಗೊತ್ತಾಗುವದು. *

ದ್ಯೌ ನಃ ಪಿತಾ ಜನಿತಾ ನಾಭಿರತ್ರ ಬಂಧನಂ ಮಾತಾ
ಪೃಥಿವೀ ಮಹೀಯಮ್ । ” (ಋಗ್ವೇದ ೧೦।೧೦।೪)
“ ದ್ಯೌ ಪಿತಾ ಪೃಥಿವೀ ಮಾತಾ ಪಿತರಂಚ ದ್ಯುಲೋಕವ ಪಿ
(ಮಹೀಧರ ಭಾಷ್ಯ)

—ಅರ್ಥಾತ್ ನಮ್ಮ ಪಿತೃಭೂಮಿಯು ಸ್ವರ್ಗಲೋಕವು ಮತ್ತು ನಮ್ಮ ವಾಸಸ್ಥಾನವು ಭಾರತವರ್ಷವು. ವಸ್ತುತಃ ಭಾರತವರ್ಷವು ಆರ್ಯರ ಉಪನ್ನಿವೇಶವಾಗಿತ್ತು. ಭಾರತವರ್ಷದಲ್ಲಿಯ ಆರ್ಯರು. ಪಿತೃ ಭೂಮಿಯ ಸಂದರ್ಶನಕ್ಕೋಸುಗ ಪಿತೃಲೋಕಕ್ಕೆ ಅರ್ಥಾತ್ ಸ್ವರ್ಗ ಲೋಕಕ್ಕೆ ಹೋಗುತ್ತಿದ್ದರು. ಈ ಪಿತೃಲೋಕವು ಪುಣ್ಯಾತ್ಮರ ವಾಸ ಸ್ಥಾನವಾಗಿತ್ತು. ಹಲವರು ಶೇಷಾಯುಷ್ಯದಲ್ಲಿ ಅಲ್ಲಿಹೋಗಿ ಬ್ರಹ್ಮಚಿಂತನೆಯಲ್ಲಿ ಕಾಲಕಳೆಯುತ್ತಿದ್ದರು. ಕೆಲವರು ತಮ್ಮ ಜ್ಞಾತಿ ಕುಟುಂಬ ಗಳನ್ನು ನೋಡುವದಕ್ಕೋಸುಗ ಅಲ್ಲಿಗೆ ಹೋಗುತ್ತಿದ್ದರು. ಮತ್ತು ಕೆಲ ವರು ಬ್ರಹ್ಮ, ಶಿವ ಮೊದಲಾದ ದೇವತೆಗಳನ್ನು ನೋಡಲಿಕ್ಕೂ ಹೋಗು ತ್ತಿದ್ದರು.

ಮಹಾಭಾರತದಲ್ಲಿ:—ಪಂಡು ಮಹಾರಾಜನು ತನ್ನ ಹೆಂಡರೊಡನೆ ಹಿಮಾಲಯದ ಎರಡನೇ ಪಾರ್ಶ್ವದಲ್ಲಿ ಶತಶೃಂಗಶೈಲದಲ್ಲಿ ತಪಸ್ಸು ಮಾಡು ತ್ತಿರುವಾಗ, ಒಂದು ಅಮಾವಾಸ್ಯೆಯ ತಿಥಿಯಲ್ಲಿ, ಉತ್ತರದಿಕ್ಕಿಗೆ ಹೋಗು ತ್ತಿರುವ ಕೆಲವು ಋಷಿಗಳನ್ನು ಅಲ್ಲಿಕಂಡು, “ ನೀವು ಎಲ್ಲಿಗೆ ಹೋಗು

* ‘ ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ ।

ವಿರಿ? ” ಎಂದು ಕೇಳಿದನು. ಅದಕ್ಕೆ ಋಷಿಗಳು —“ಬ್ರಹ್ಮಲೋಕದಲ್ಲಿ ದೇವತೆಗಳು, ಋಷಿಗಳು ಹಾಗು ಪಿತೃಲೋಕವಾಸಿಗಳಾದ ಮಹಾತ್ಮರ ಒಂದು ದೊಡ್ಡ ಸಭೆಯಾಗುವದು. ನಾವು ಅಲ್ಲಿ ಪ್ರಜಾಪತಿಯನ್ನು ನೋಡುವದಕ್ಕೋಸುಗ ಹೋಗುವೆವು. ×

ಸಭಾ ಪರ್ವದಲ್ಲಿ:— ಯುಧಿಷ್ಠಿರ ಮಹಾರಾಜನು ರಾಜಸೂಯ ಯಜ್ಞದ ಆ ಯೋಜನೆಯನ್ನು ಮಾಡುವನು. ಎಲ್ಲ ದೇಶದ ರಾಜರಿಂದ ಕಪ್ಪನ್ನು ತರಬೇಕಾಗುವದು. ಅರ್ಜುನನು ಉತ್ತರದೇಶವನ್ನು ಗೆಲ್ಲಲಿಕ್ಕೆ ಹೊರಟು, ಮೊದಲು ಹಿಮಾಲಯವನ್ನು ದಾಟಿ, ಶ್ವೇತಪರ್ವತದ ಆಚೆಗೆ ಕುಬೇರನ ಮಗನಿಂದ ಆಳಲ್ಪಡುವ ರಾಜ್ಯವನ್ನು ಆಕ್ರಮಿಸಿ, ಅವನಿಂದ ಕಪ್ಪನ್ನು ತೆಗೆದುಕೊಂಡನು. ಅನಂತರ ಮಾನಸ ಸರೋವರದ ತೀರದಲ್ಲಿದ್ದ, ಗಂಧರ್ವ ಮತ್ತು ಅಪ್ಸರರನ್ನು ಸೋಲಿಸಿ, ಹರಿವರ್ಷವನ್ನು ದಾಟಿ, ಉತ್ತರ ಕುರುದೇಶದಲ್ಲಿ ಹೋದನು. ಅಲ್ಲಿ ದೇವತೆಗಳು ವಾಸಮಾಡುತ್ತಿದ್ದರು. ಅವರು ಯುದ್ಧ ಮಾಡದೆಯೇ ಕರವನ್ನು ಕೊಟ್ಟು, ವಶ್ಯತೆಯನ್ನು ಒಪ್ಪಿಕೊಂಡರು. ×

---

× ಅಮಾವಾಸ್ಯಾಸ್ತು ಸಹಿತಾ ಋಷಯಃ ಸಂಶಿತ ವ್ರತಾಃ ।
ಬ್ರಹ್ಮಾಣಂ ದ್ರಷ್ಟುಕಾಮಾಸ್ತೇ ಸಂಪ್ರತಸ್ಥುರ್ಮಹರ್ಷಯಃ ॥
ಸಂಪ್ರಯಾತಾ ನೃಷೀನ್ ದೃಷ್ಟ್ವಾ ಪಾಂಡುರ್ವಚನಮಬ್ರವೀತ್ ।
ಭವನ್ತಃ ಕ್ವ ಗಮಿಷ್ಯನ್ತಿ ಬ್ರೂತಮೇ ದೇವತಾಂ ವರಾಃ ॥

ಋಷಯ ಊಚುಃ—
ಸಮವಾಯೋ ಮಹಾನದ್ಯ ಬ್ರಹ್ಮಲೋಕೇ ಭವಿಷ್ಯತಿ
ದೇವಾನಾಂಚ ಋಷೀಣಾಂಚ ಪಿತೃಣಾಂಚ ಮಹಾತ್ಮನಾಮ್ ।
ವಯಂತತ್ರಗಮಿಷ್ಯಾಮೋ ದ್ರಷ್ಟು ಕಾಮಾಃ ಪ್ರಜಾಪತಿಮ್ ॥ ”
—ಆದಿಪರ್ವ ೧೨೦ನೆಯ ಅಧ್ಯಾಯ.

× “ಸಶ್ವೇತಪರ್ವತಂ ವೀರಃ ಸಮತಿಕ್ರಮ್ಯ ವೀರ್ಯವಾನ್ ।
ದೇಶಂ ಕಿಂಪುರುಷ ವರ್ಷಂ ದ್ರುಮಪುತ್ರೇಣ ರಕ್ಷಿತಮ್ ॥
× × × ×
ಸರೋ ಮಾನಸ ಮಾಸಾದ್ಯ ಹಾಟಕಾನಭಿತಃ ಪ್ರಭುಃ ।
ಗಂಧರ್ವ ರಕ್ಷಿತಂ ದೇಶಮಜಯತ್ ಪಾಂಡವಸ್ತತಃ ॥

ವನಪರ್ವದಲ್ಲಿ:—ಅರ್ಜುನನು ಅಸ್ತ್ರವಿದ್ಯೆಯನ್ನು ಕಲಿಯುವದಕ್ಕೋಸುಗ, ವ್ಯಾಸದೇವನ ಸಲಹೆಯಂತೆ ಸ್ವರ್ಗಲೋಕದಲ್ಲಿಯ ಇಂದ್ರಾಲಯಕ್ಕೆ ಹೊರಟನು. ಹೋಗುವಾಗ ಹಾದಿಯಲ್ಲಿ ಹಿಮಾಲಯದ ಉತ್ತರದಲ್ಲಿ ಶ್ವೇತಪರ್ವತ (ಕೈಲಾಸ ಪರ್ವತ)ದಲ್ಲಿ ಶಿವನಿಂದ ಪಾಶುಪತ ಅಸ್ತ್ರವನ್ನು ಸಂಪಾದನೆ ಮಾಡಿದನು. ಹಾಗು ವರುಣನಿಂದಲೂ, ಹಲವು ದಿವ್ಯಾಸ್ತ್ರಗಳನ್ನು ಸಂಪಾದಿಸಿ, ಆ ಮೇಲೆ ಇಂದ್ರಾಲಯದಲ್ಲಿ ಹೋದನು. ಅರ್ಜುನನು ಕಾಲ್ನಡಿಗೆಯಿಂದಲೇ ಈ ಪ್ರವಾಸವನ್ನು ಮಾಡಿದನು ಸ್ವರ್ಗಕ್ಕೆಹೋಗುವಾಗ ಮಾರ್ಗದಲ್ಲಿ ಹತ್ತುವಸ್ಥಾನಗಳೂ, ಸ್ವರ್ಗಲೋಕದ ಹತ್ತರದಲ್ಲಿದ್ದ ಎಲ್ಲಸ್ಥಾನಗಳೂ ಈಗ ಸಹ ದೊರೆಯುವವು. ಒಂದೆರಡು ಸ್ಥಾನಗಳ ಹೆಸರು ಮಾತ್ರ ಪರಿವರ್ತಿತವಾಗಿದೆ. ಇದರಿಂದ ದೇವತೆಗಳ ಆವಾಸ ಭೂಮಿಯಾದ ಸ್ವರ್ಗವು ಭೂಮಿಯಮೇಲೆಯೇ ಇತ್ತೆಂದೂ, ಆಕಾಶಸ್ಥವಿದ್ದಿಲ್ಲವೆಂದೂ ಗೊತ್ತಾಗುವದು.

ಮಹಾ ಪ್ರಸ್ಥಾನಿಕ ಪರ್ವದಲ್ಲಿ:—ಯುಧಿಷ್ಠಿರ ಮಹಾರಾಜನು, ನಾಲ್ವರು ತಮ್ಮಂದಿರು ಹಾಗು ದ್ರೌಪದಿಯೊಡನೆ ಕಾಲುನಡಿಗೆಯಿಂದಲೇ ಸ್ವರ್ಗಕ್ಕೆ ಹೋದನು. ಮೊದಲು ಮಹಾಗಿರಿ ಹಿಮಾಲಯವನ್ನು ದಾಟಿ, ವಾಲುಕಾ ಸಮುದ್ರದಲ್ಲಿ ಹೋದರು. ಈ ವಾಲುಕಾ ಸಮುದ್ರವು ಚೀನದೇಶದಲ್ಲಿಯ ಗೋಬೀ ಎಂಬ ಮರುಭೂಮಿಯು. ಅನಂತರ ಮೇರು ಪರ್ವತ (ಗೋಬೀ ಮರುಭೂಮಿಯ ಉತ್ತರದಲ್ಲಿದ್ದ ಆಲ್ತಾಯಿ (ಇಲಾಸ್ಥಾಯಿ) ಪರ್ವತ; ಉತ್ತರ ಮೇರುವಿನಲ್ಲಿಯ ಸುಮೇರು ಪರ್ವತವಲ್ಲ.) ಕಣ್ಣಿಗೆ ಬಿತ್ತು. ಇದೇ ಪರ್ವತದಲ್ಲಿ ಕೆಲಕಾಲದ ನಂತರ ದ್ರೌಪದಿ, ಸಹದೇವ, ನಕುಲ, ಅರ್ಜುನ, ಭೀಮರು ಸತ್ತರು. ಯುಧಿಷ್ಠಿರ

---

ಉತ್ತರಂ ಹರಿವರ್ಷನ್ತು ಸಮಾಸಾದ್ಯ ಸ ಪಾಂಡವಃ ।
ಇಯೇಷ ಜೇತುಂ ತಂ ದೇಶಂ ಪಾಕಶಾಸನ ನಂದನಃ ॥

× × ×

ತತ ಏನಂ ಮಹಾವೀರ್ಯಂ ಮಹಾಕಾಯಾ ಮಹಾಬಲಾಃ ।

× × ×

ಉತ್ತರಾಃ ಕುರವೋ ಹ್ಯೇತೇ ನಾತ್ರ ಯುದ್ಧಂ ಪ್ರವರ್ತತೇ ॥

ನೊಬ್ಬನೇ ಮೇರುಪರ್ವತವನ್ನು ದಾಟಿ, ಮುಂದೆ ಉತ್ತರಕ್ಕೆ ಮಾರ್ಗ ಕ್ರಮಿಸುತ್ತ ಬ್ರಹ್ಮಲೋಕದಲ್ಲಿ ಹೋದನು. ಸ್ವರ್ಗವು ಭೂಮಿಯಲ್ಲಿ ಇರದೆ, ಆಕಾಶದಲ್ಲಿ ಅಥವಾ ಶೂನ್ಯದಲ್ಲಿ ಇದ್ದುದಾದರೆ ಯುಧಿಷ್ಠಿರನು ಬ್ರಹ್ಮಲೋಕಕ್ಕೆ ಹೋದುದು ಹೇಗೆ? ಮತ್ತೊಂದುಮಾತು— ಈ ಸ್ವರ್ಗ ಭೂಮಿಯು ಹಿಮಾಲಯದ ಉತ್ತರದಲ್ಲಿಯೇ ಇತ್ತು. ಆದುದರಿಂದ ಸ್ವರ್ಗಕ್ಕೆ ಹೋದವರೆಲ್ಲರೂ ಹಿಮಾಲಯ ಪರ್ವತವನ್ನು ದಾಟಿಯೇ ಹೋಗಿರುವರು.

ಯುಧಿಷ್ಠಿರ ಮಹಾರಾಜನು ಬ್ರಹ್ಮಲೋಕದಲ್ಲಿ ಹೋಗಿ ಗಂಗೆಯಲ್ಲಿ ಜಳಕಮಾಡಿದನು. ಮತ್ತು ಅಲ್ಲಿಯ ಬ್ರಹ್ಮರ್ಷಿಗಳೊಡನೆ ವಾಸ ಮಾಡಿದ ತರುವಾಯ ತನುತ್ಯಾಗವನ್ನು ಮಾಡಿದನು. ಇದು ಯಾವ ಗಂಗೆಯು? ಹಿಮಾಲಯದ ನಡುವಿನ ಗೋಮುಖ ಎಂಬ ಸ್ಥಾನದಿಂದ ಹೊರಟು, ಭಾರತವರ್ಷದೊಳಗಿಂದ ಹರಿದು, ಬಂಗಾಲದ ಉಪಸಾಗರಕ್ಕೆ ಕೂಡುವ ಒಂದು ಗಂಗೆಯನ್ನು ಮಾತ್ರ ನಾವು ಬಲ್ಲೆವು. ಆದರೆ ಯುಧಿಷ್ಠಿರನು ಯಾವ ಗಂಗೆಯಲ್ಲಿ ಜಳಕ ಮಾಡಿದ್ದನು? ಭಾಸ್ಕರಾಚಾರ್ಯನು ತನ್ನ ಸಿದ್ಧಾಂತ ಶಿರೋಮಣಿ ಗ್ರಂಥದ ಭುವನ ಕೋಶಾಧ್ಯಾಯದಲ್ಲಿ ಬರೆದಿರುವನು:—

"ವಿಷ್ಣುಪದೀ ವಿಷ್ಣುಪದಾತ್ ಪತಿತಾಮೇರೌ ಚತುರ್ದ್ಧಾಸ್ಯಾತ್ । ವಿಷ್ಕಂಭಾಚಲ ಮಸ್ತಕಾಸ್ತಸರಃ ಸಂಗತಾಗತವಿಯತಾ । ಸೀತಾಖ್ಯಾ ಭದ್ರಾಶ್ವಂ ಸಾಲಕ ನಂದಾಚ ಭಾರತವರ್ಷಮ್ । ಚಕ್ಷುಶ್ಚ ಕೇತುಮಾಲಂ ಭದ್ರಾಖ್ಯಾ ಚೋತ್ತರಾನ್ ಕುರೂನ್ ಯಾತಾ ।"

—ಅರ್ಥಾತ್ ಮೇರು ಅಥವಾ ಅಲ್ತಾಯಿ (ಇಲಾಸ್ಥಾಯಿ) ಪರ್ವತದ ದಕ್ಷಿಣದಲ್ಲಿ ವಿಷ್ಕಂಭ ಪರ್ವತದಲ್ಲಿಯ ಸರೋವರದಿಂದ ಗಂಗೆಯು ನಾಲ್ಕು ಪ್ರವಾಹಗಳಾಗಿ ಹೊರಗೆ ಬರುತ್ತದೆ. ಭದ್ರಾಶ್ವವರ್ಷದಲ್ಲಿ ಅಥವಾ ದಕ್ಷಿಣ ಸೈಬೇರಿಯಾ ದೇಶದಲ್ಲಿ ಹರಿಯುವ ಪ್ರವಾಹದ ಹೆಸರು ಸೀತೆ, ಭಾರತ ವರ್ಷದಲ್ಲಿ ಹರಿಯುವ ಪ್ರವಾಹವು ಅಲಕನಂದೆ ಕೇತುಮಾಲವರ್ಷದಲ್ಲಿ ಹರಿಯುವ ಪ್ರವಾಹವು ಚಕ್ಷು; ಹಾಗು ಉತ್ತರ ಕುರುದೇಶದಲ್ಲಿ ಹರಿಯುವ ಪ್ರವಾಹವು ಭದ್ರೆ. ಯುಧಿಷ್ಠಿರ ಮಹಾರಾಜನು ಇದೇ ಭದ್ರಾ ಎಂಬ ಗಂಗೆಯಲ್ಲಿ ಜಳಕ ಮಾಡಿದ್ದನು. ಶ್ರೀಮತ್

ಸ್ವಾಮೀ ಯೋಗಾನಂದ ಸರಸ್ವತಿಗಳವರು, ಭದ್ರೆಯ ಈಗಿನ ಹೆಸರು "ಇನಿಸಿ" ಎಂದು ಹೇಳುವರು. ಈ ನದಿಯು ಈಗ ಉತ್ತರ ಸೈಬೇರಿಯಾದಲ್ಲಿ ಹರಿದು, ಉತ್ತರ ಮೇರು ಸಮುದ್ರಕ್ಕೆ ಕೂಡುತ್ತದೆ. ಭದ್ರಾಶ್ವ ವರ್ಷ ಅಥವಾ ದಕ್ಷಿಣ ಸೈಬೇರಿಯಾದಲ್ಲಿ ಹರಿಯುವ ಸೀತೆಯ ಈಗಿನ ಹೆಸರು "ಅಮೂರ." ಈ ನದಿಯು ಅಲ್ತಾಯಿ (ವೈದಿಕ-ಇಲಾಸ್ಥಾಯಿ) ಪರ್ವತದಲ್ಲಿ ಹುಟ್ಟಿ ಓಖಟಸ್ಕ ಸಮುದ್ರಕ್ಕೆ ಹೋಗಿ ಕೂಡುತ್ತದೆ. ಕೇತುಮಾಲ ವರ್ಷದಲ್ಲಿ ಹರಿಯುವ 'ಚಕ್ಷು'ವಿನ ಈಗಿನ ಹೆಸರು, 'ಅರ್ಕಾಸ್' ಚಕ್ಷುವಿನ ಮತ್ತೊಂದು ಹೆಸರು 'ಅರ್ಕಿ' ಅಥವಾ ಅಕ್ಷಿಯಿಂದಲೇ ಈ ಅರ್ಶಾಸ್ ಹೆಸರಿನ ರಚನೆಯಾಗಿರುತ್ತದೆ. ಈ ಅರ್ಶಾಸ್ ತುರ್ಕೀಸ್ತಾನ ಹಾಗು ಬೊಖಾರಾ ಪ್ರದೇಶದಲ್ಲಿ ಹರಿದು ಅರಲ್ ಸಮುದ್ರಕ್ಕೆ ಕೂಡುತ್ತದೆ. ಅರಲ್ ಸಮುದ್ರ ಅಥವಾ ಅರಲ್ ಸರೋವರದ ವೈದಿಕ ಹೆಸರು "ಅರಹ್ರದ" (ಕೌಷಿತಕಿ-ಬ್ರಾಹ್ಮಣೋಪನಿಷತ್, ೧ ನೆಯ ಅಧ್ಯಾಯು). ಮತ್ತು ಭಾರತವರ್ಷದಲ್ಲಿ ಹರಿಯುವ ಪ್ರವಾಹವಾದ ಅಲಕನಂದೆಯ ಸಂಬಂಧದಿಂದ ಹೇಳುವದು ಅವಶ್ಯಕವು.—ಮೂಲಪ್ರವಾಹವು ತಿಬೇತ ದೇಶವನ್ನು ದಾಟಿ ಹಿಮಾಲಯದಲ್ಲಿ ಪ್ರವೇಶವಾಗಿ, ಗೋಮುಖೀ ಎಂಬ ಸ್ಥಾನದಲ್ಲಿ ಪರ್ವತವನ್ನು ಒಡೆದು ಹೊರಬೀಳುತ್ತದೆ. ಹಾಗು ಅಲ್ಲಿಂದ ತಗ್ಗು ಪ್ರದೇಶದಲ್ಲಿ ಹರಿದು ಬಂಗಾಲದ ಉಪಸಾಗರಕ್ಕೆ ಕೂಡುತ್ತದೆ. ಈ ನಾಲ್ಕು ನದಿಗಳು ಒಂದೇ ಸ್ಥಾನದಲ್ಲಿ ಹುಟ್ಟಿದ್ದರಿಂದಲೂ, ಇವುಗಳ ನೀರು ಮಧುರವೂ, ಸ್ವಾಸ್ಥ್ಯಕರವೂ ಇದ್ದುದರಿಂದಲೂ, ಇವುಗಳು ಒಂದೇ ಹೆಸರಿನಿಂದ (ಗಂಗೆಯೆಂದು) ಕರೆಯಲ್ಪಟ್ಟಿವೆ. ಕೌಷಿತಕಿ ಬ್ರಾಹ್ಮಣೋಪನಿಷತ್ತಿನಲ್ಲಿ ಭದ್ರಾ ಗಂಗೆಯ ಹೆಸರು, "ವಿಜರಾ" ಎಂದು ಹೇಳಿದೆ. ಉಳಿದ ಮೂರು ಗಂಗೆಗಳ ಈ ಗುಣಸಂಬಂಧದಿಂದ ವಿಶೇಷ ಹೇಳಲು ಶಕ್ಯವಾಗದಿದ್ದರೂ, ಭಾರತವರ್ಷದಲ್ಲಿಯ ಗಂಗೆಯು ವಾಸ್ತವಿಕವಾಗಿ "ವಿಜರಾ" ಎಂಬ ವಿಷಯದಲ್ಲಿ ಯಾವ ಸಂದೇಹವೂ ಇಲ್ಲ. ಸ್ವರ್ಗನದಿಯಿಂದ ಗಂಗೆಯು ನಾಲ್ಕು ಭಾಗಗಳಲ್ಲಿ ವಿಭಕ್ತವಾಗಿ, ನಾಲ್ಕು ಬೇರೆ ಬೇರೆ ದೇಶಗಳೊಳಗಿಂದ ಹರಿದು ಸಮುದ್ರಕ್ಕೆ ಕೂಡುವ ಸಂಗತಿಯು ವಿಷ್ಣುಪುರಾಣದಲ್ಲಿಯೂ ಸ್ಪಷ್ಟವಾಗಿ ಬರೆದಿರುತ್ತದೆ. (೨ನೇ ಖಂಡ, ೨ನೇ ಅಧ್ಯಾಯ.)

ಈಗ ಬ್ರಹ್ಮಲೋಕ, ಇಂದ್ರಲೋಕ, ವರುಣಲೋಕ- ಮೊದಲಾದವುಗಳ ಸ್ಥಾನ ನಿರ್ಣಯ ಸಂಬಂಧದ ವಿಚಾರವನ್ನು ಮಾಡುವದು ಅವಶ್ಯಕವಾಗಿರುವದು. ಮಹಾಭಾರತದ ಭೀಷ್ಮಪರ್ವದಲ್ಲಿ ಬರೆದುದು ಏನಂದರೆ---ಹಿಮಾಲಯದ ಉತ್ತರ ದಿಕ್ಕಿನಲ್ಲಿಯೇ ಹೇಮಕೂಟ ಪರ್ವತವು; ಹೇಮಕೂಟದ ಆಚೆಗೆ ಹರಿವರ್ಷ (ಹೇಮಕೂಟದ ಮತ್ತೊಂದು ಹೆಸರು ಕೈಲಾಸ ಪರ್ವತ. ಅಥವಾ ಶ್ವೇತಪರ್ವತ). ಹೇಮಕೂಟಕ್ಕೆ ಹೊಂದಿ ಉತ್ತರಕ್ಕೆ ನಿಷಧ, ನೀಲ ಮತ್ತು ಮಾಲ್ಯವಾನ್ ಪರ್ವತಗಳು. ಮಾಲ್ಯವಾನದ ಆಚೆಯಲ್ಲಿ ಗಂಧಮಾದನಪರ್ವತ. ಮಾಲ್ಯವಾನ್ ಮತ್ತು ಗಂಧಮಾದನ ಈ ಎರಡು ಪರ್ವತಗಳ ಮಧ್ಯದಲ್ಲಿದ್ದ ಪರ್ವತವೇ ಮೇರುಪರ್ವತವು. ಈ ಮೇರು ಪರ್ವತದ ಪೂರ್ವಕ್ಕೆ ಭದ್ರಾಶ್ವ ವರ್ಷ, ಪಶ್ಚಿಮಕ್ಕೆ ಕೇತುಮಾಲವರ್ಷ ಹಾಗು ಉತ್ತರಕ್ಕೆ ಉತ್ತರಕುರು ವರ್ಷ. ಮತ್ತು ಈ ಎಲ್ಲ ವರ್ಷ (ದೇಶ) ಗಳಲ್ಲಿ ದೇವತೆಗಳು, ಗಂಧರ್ವರು, ಅಸುರರು, ಕಿನ್ನರರು, ಅಪ್ಸರರು ವಾಸ ಮಾಡುತ್ತಾರೆ. ಇಲ್ಲಿಯೇ ಬ್ರಹ್ಮ, ಶಿವ, ಇಂದ್ರ ಮೊದಲಾದವರೂ ವಾಸಿಸುವರು. §

ಭಾಸ್ಕರಾಚಾರ್ಯನು ತನ್ನ ಸಿದ್ಧಾಂತ ಶಿರೋಮಣಿ ಗ್ರಂಥದಲ್ಲಿ ಹೇಳಿರುವನು- ನಿಷಧ, ನೀಲ, ಗಂಧಮಾದನ, ಮಾಲ್ಯವಾನ ಪರ್ವತಗಳಿಂದ ಪರಿವೇಷ್ಟಿತವಾದುದು, ಇಲಾವೃತ ವರ್ಷವು. ಈ ಇಲಾವೃತ ವರ್ಷದ ಮಧ್ಯಸ್ಥಳದಲ್ಲಿ ಮೇರುಗಿರಿಯು. ಇದೇ ಕನಕ ರತ್ನಮಯ ತ್ರಿದಶಾಲಯವು; ಹಾಗು ಬ್ರಹ್ಮನ ಜನ್ಮಭೂಮಿಯು. ಪುರಾಣವಿದರು ಹೀಗೆಯೇ ಹೇಳಿರುವರು. +

ಈ ಇಲಾವೃತ ವರ್ಷದಲ್ಲಿಯ ಮೇರುಪರ್ವತವೇ ತ್ರಿದಶಾಲಯವು, ಅಥವಾ ದೇವತೆಗಳ ಆವಾಸ ಭೂಮಿಯಾಗಿತ್ತು, ಎಂಬುವದು ಗೊತ್ತಾ

---

§ ''ತತ್ರ ದೇವಗಣಾ ರಾಜನ್ ಗಂಧರ್ವಾಸುರ ರಾಕ್ಷಸಾಃ ।
ಅಪ್ಸರಾಗಣ ಸಂಯುಕ್ತಾಃ ಶೈಲೇಕ್ರೀಡನ್ತಿ ಸರ್ವದಾ ।
ತತ್ರ ಬ್ರಹ್ಮಾಚ ರುದ್ರಶ್ಚ ಶಕ್ರಶ್ಚಾಪಿ ಸುರೇಶ್ವರಃ !
ಸಮೇತ್ಯ ವಿವಿಧೈರ್ಯಜ್ಞೈರ್ಯಜನ್ತೇಽನೇಕ ದಕ್ಷಿಣೈಃ ॥''

— ಭೀಷ್ಮಪರ್ವ ೬ನೆಯ ಅಧ್ಯಾಯ.

ಗುವದು. ಈ ಇಲಾವೃತ ವರ್ಷದ ಸಂಬಂಧದಿಂದ ವಾಯು ಪುರಾಣ ದಲ್ಲಿ ಕೆಳಗಿನಂತೆ ವರ್ಣನೆಯು ಇರುತ್ತದೆ.

"ವೇದ್ಯರ್ಧಂ ದಕ್ಷಿಣೇ ತ್ರೀಣಿ ವರ್ಷಾಣಿ ತ್ರೀಣಿ ಚೋತ್ತರೇ।
ತಯೋರ್ಮಧ್ಯೇತು ವಿಜ್ಞೇಯಂ ಮೇರುಮಧ್ಯಮಿಲಾವೃತವರ್ಷ ॥

× × × ×

ತತ್ರದೇವಗಣಾಃ ಸರ್ವೇಗಂಧರ್ವೋರಗಾ ರಾಕ್ಷಸಾಃ।
ಶೈಲರಾಜ್ಯೈಃ ಪ್ರದೃಶ್ಯನ್ತೇಶುಭಾಶ್ಚಾಪ್ಸರಸಾಂ ಗಣಾಃ।
ಸತು ಮೇರುಪರಿವೃತೋ ಭುವನೈರ್ಭೂತ ಭಾವನಃ ॥

—ವಾಯುಪುರಾಣ, ೩೪ನೆಯ ಅಧ್ಯಾಯ.

ಅರ್ಥಾತ್ ವೇದೀ ಅಥವಾ ಇಲಾವೃತ ವರ್ಷದ ದಕ್ಷಿಣದಲ್ಲಿ ಹರಿ ವರ್ಷ, ಕಿಂಪುರುಷವರ್ಷ, ಹಾಗು ಭಾರತವರ್ಷ ಎಂದು ಮೂರುವರ್ಷ ಗಳು. ಮತ್ತು ಉತ್ತರದಲ್ಲಿ ಭದ್ರಾಶ್ವವರ್ಷ, ಹಿರಣ್ಮಯವರ್ಷ, ಉತ್ತರ ಕುರುವರ್ಷ ಎಂದು ಮೂರು ವರ್ಷಗಳು. ಸುತರಾಂ ಇಲಾವೃತ ವರ್ಷವು ನಟ್ಟನಡುವೆ ಇರುವದು. ಅಲ್ಲಿ ಸಹ ಮೇರುಪರ್ವತವು ಇರುವದು. ಈ ಮೇರುಪರ್ವತದಲ್ಲಿ ದೇವತೆಗಳು (ಬ್ರಹ್ಮ, ವಿಷ್ಣು, ಚಂದ್ರ, ಪ್ರಭೃತಿ) ಗಂಧರ್ವರು ರಾಕ್ಷಸರು, ಅಪ್ಸರರು ವಾಸಮಾಡುತ್ತಾರೆ. ಹಾಗು ಈ ಸ್ಥಾನವೇ ಪೃಥ್ವಿಯಲ್ಲಿಯ ಯಾವತ್ತು ಜೀವಿಗಳ ಉತ್ಪತ್ತಿ ಸ್ಥಾನವು. ಮೇರುಪರ್ವತವು ಈ ಇಲಾವೃತ ವರ್ಷದಲ್ಲಿ ಇದ್ದುದರಿಂದ ಇದರ

---

+ " ನಿಷಧ ನೀಲ ಸುಗಂಧ ಸುಮಾಲ್ಯಕೈಃ,
ಅಲಮಿಲಾವೃತ ಮಾವೃತಮಾವ ಭೌ।
ಇಹ ಹಿ ಮೇರುಗಿರಿ ಕಿಲ ಮಧ್ಯಗಃ,
ಕನಕ ರತ್ನಮಯ ಸ್ತ್ರಿದಶಾಲಯಃ,
ದ್ರುಹಿಣ ಜನ್ಮಶುಪದ್ಮಜ ಕರ್ಣಿಕಾ,
ಇತಿಚ ಪುರಾಣವಿದೋऽಮುಮವರ್ಣಯನ್ ||"

—ಸಿದ್ಧಾಂತ ಸಿರೋಮಣಿ-ಭುವನಕೋಷಾಧ್ಯಾಯ. ೩೧—೩೧

ಮತ್ತೊಂದು ಹೆಸರು ಇಲಾಸ್ಥಾಯಿಪರ್ವತ. ಈ ಇಲಾಸ್ಥಾಯಿಯಿಂದಲೇ ಈಗಿನ ಅಲ್ತಾಯಿ ಹೆಸರು ಹುಟ್ಟಿರುವದು. ಅಲ್ತಾಯಿ ಪರ್ವತದ ಚೀನದೇಶೀಯ ಹೆಸರು. ಉಲಿಯಾ ಸುತಾಯಿ, ಎಂದಿರುವದು. ಉತ್ತರ ಕುರುದೇಶವು ಉತ್ತರ ಸಮುದ್ರದ ದಕ್ಷಿಣದಲ್ಲಿ ಇರುವದೆಂದು ವಾಯು ಪುರಾಣವು ಹೇಳುವದು.

" ಉತ್ತರಸ್ಯ ಸಮುದ್ರಸ್ಯ ಸಮುದ್ರಾನ್ತೇ ಚ ದಕ್ಷಿಣೇ ।
ಕುರವಸ್ತತ್ರ ತದ್ವರ್ಷಃ ಪುಣ್ಯಂ ಸಿದ್ಧನಿಷೇವಿತಮ್ ॥ "

—೪೫ನೆಯ ಅಧ್ಯಾಯ-

( ಮುಂದುವರಿದುದು)

---

ವೆಲ್ಲಿ ನೀವು ಇರಬೇಕು. ನೀವು ಸದ್ಗುರುವಾದವನ್ನು ನಂಬಬೇಕು. ಈ ದುಷ್ಟವೃತ್ತಿಯನ್ನು ಬಿಟ್ಟುಬಿಡಬೇಕು. ಇದರಿಂದ ನೀವು ಪರಮ ಸುಖವನ್ನು ಪಡೆಯುವಿರಿ. ಹೀಗೆ ದಾಸಿಮಾರ್ಯನು ಅನೇಕ ವಿಧವಾಗಿ ಅವರಿಗೆ ವಿನಯೋಕ್ತಿಗಳಿಂದ ಬೋಧಿಸಿದನು. ಅವನ ಬೋಧೆಯನ್ನು ಆ ಕಾಡುಜನರು ಕೇಳಲು ಅವರ ಮೊದಲಿನ ಮನೋವೃತ್ತಿಯು ಬದ ಲಾಯಿತು. ಈ ವೃತ್ತಿಯು ಬದಲಾದ ಕೂಡಲೆ ಅವರ ಸಂಚಿತ ಪ್ರಾರಬ್ಧ ಕರ್ಮಗಳು ಅಳಿದುಹೋದವು. ಅವರ ಹೃದಯಗಳು ಪರಿ ಪಕ್ವವಾದವು. ಅವರಲ್ಲಿ ಸುಜ್ಞಾನವು ಉದಯವಾಯಿತು. ಆಗ ಅವರು ದಾಸಿಮಯ್ಯನಿಗೆ-- ನಾವು ಅಪರಾಧಿಗಳು. ನೀವು ನಮ್ಮ ಶಾಪವಿಮೋ ಚನೆಯ ಹಾದಿಯನ್ನು ತೋರಿಸಿರಿ, ಎಂದು ನುಡಿದು ಅವನಿಗೆ ಸಾಷ್ಟಾಂಗ ವೆರಗಿದರು. ದಾಸಿಮಾರ್ಯನು ಅವರನ್ನು ನೋಡಿ ಹರುಷಿತನಾಗಿ ಅವರಿಗೆ ಲಿಂಗಧಾರಣೆಯನ್ನು ಮಾಡಿ ಅವರಿಗೆ ಅದರ ಕ್ರಿಯಾಪದ್ಧತಿ ಗಳನ್ನು ಅರುಹಿದನು. ಆಮೇಲೆ ಅವನು ಅವರಿಗೆ— ನೀವು ಇನ್ನು ಮೇಲೆ ನಿಮ್ಮ ಹಿಂಸಾಕರ್ಮವನ್ನು ಬಿಟ್ಟುಕೊಟ್ಟು ತಿಲಗಾಣವನ್ನಾಡಿಸಿ, ತೈಲವನ್ನು ತೆಗೆದು ಅದನ್ನು ಶ್ರೀಮಲ್ಲಿಕಾರ್ಜುನಲಿಂಗಕ್ಕೆ ಎರೆಯುತ್ತ ಹೋಗಬೇಕು ಮತ್ತು ಅದನ್ನು ಅಲ್ಲಿಯ ದೀಪಾರಾಧನೆಗೆ ಅರ್ಪಿಸುತ್ತ ಹೋಗಬೇಕು. ಇದನ್ನೇ ನೀವು ನಿಮ್ಮ ಸತ್ಕಾಯಕವನ್ನಾಗಿ ಇಟ್ಟು ಕೊಳ್ಳಿರಿ. ಇದೇ ನಿಮ್ಮ ಆಚರಣೆಯು, ಎಂದು ಬೋಧಿಸಿದನು. ಆ ಕಾಡುಜನರು ಅಂದಿನಿಂದ ತಮ್ಮ ಹಿಂಸಾಚರಣೆಗಳನ್ನು ಬಿಟ್ಟುಕೊಟ್ಟು ತಿಲಕಾಯಕವನ್ನು ಕೈಕೊಂಡು ಪರ್ವತಸಿಂಹಾಸನಕ್ಕೆ ನಡೆದುಕೊಳ್ಳುತ್ತ ಅದರ ಶಿಷ್ಯರೆಂದೆನಿಸಿಕೊಂಡರು ಮತ್ತು ದೇಶಮಧ್ಯದಲ್ಲಿ ಭಕ್ತಶ್ರೇಷ್ಠ ರೆಂದು ಪ್ರಸಿದ್ಧರಾದರು.

ಹೀಗೆ ದೇವರದಾಸಿಮಯ್ಯನು ಅರಣ್ಯವಾಸಿಗಳಾಗಿದ್ದ ಕಾಡು ಜನ ರಿಗೆ ಸನ್ಮಾರ್ಗವನ್ನು ಬೋಧಿಸಿ, ಮುಂದೆ ತೆರಳುವವನಾದನು. ಅವನು ಶ್ರೀಶೈಲಪರ್ವತ ಪ್ರಾಂತಕ್ಕೆ ಸಮೀಪವಿರುವ ನಂದಿ ಎಂಬ ಗ್ರಾಮಕ್ಕೆ ಬಂದು ಅಲ್ಲಿದ್ದ ಒಂದು ಜಲಾಶಯದ ಬಳಿಯಲ್ಲಿ ಒಂದು ದೇವಾಲ ಯದ ಸಮೀಪದಲ್ಲಿ ಇಳಿದುಕೊಂಡನು. ಆ ಕಾಲದಲ್ಲಿ ಆ ಗ್ರಾಮದ ಕೆಲವು ಬ್ರಾಹ್ಮಣರು ಕೆರೆಯಲ್ಲಿ ಸ್ನಾನಮಾಡಿ ಶುಚಿಯಾದ ವಸ್ತ್ರಗಳನ್ನು ಧಾರಣಮಾಡಿಕೊಂಡು ತಿರುಗಿ ಬರುತ್ತಿರುವಾಗ ಶಿವಲಾಂಛನಧಾರಿ

ಯಾದ ಆ ದೇವರದಾಸಿಮಯ್ಯನನ್ನು ದಾರಿಯಲ್ಲಿ ಕಂಡು ಅವರು ಅವ
ನಿಗೆ—ನೀವು ಶಿವನು ಹೆಚ್ಚೆನ್ನುತ್ತೀರಿ. ಇದು ಹುಸಿ, ಎಂದು ಅವನನ್ನು
ಕೆಣಕಿ ನುಡಿದರು. ಅದಕ್ಕೆ ಅವನು—ಇದು ಹೇಗೆ ಎಂದು ಕೇಳಲು,
ಅವರು—ಶಿವನು ಭೂತಗಳರಸ, ಅವನು ಹೊದೆಯುವದು ತೊಗಲು
ಡಿಗೆ, ಬೂದಿಮೆಯ್ಯನು, ಇಂಥವನು ನಮ್ಮ ಕಂಸಾರಾತಿ (ವಿಷ್ಣು) ಗೆ
ಹೇಗೆ ಸರಿಯಾದಾನು? ಈ ಗ್ರಾಮವು ಹರಿಯು ಇರುವ ಪುಣ್ಯ
ಗ್ರಾಮವು. ಇಂಥಲ್ಲಿ ನೀನು ಇರಕೂಡದು. ಇರುವಿಯಾದರೆ ನೀನು
ವಿಷ್ಣುವಿನ ಭಜಕನಾಗಬೇಕು ಎಂದು ನುಡಿದರು. ಅದಕ್ಕೆ ದೇವರ
ದಾಸಿಮಯ್ಯನು— ನೀವು ಶಿವನು ತೊಗಲುಡಿಗೆಯುವನೆಂದೆನ್ನುತ್ತೀರಿ.
ಆದರೆ ನಿಮ್ಮ ವಿಷ್ಣುವು ಹಂದಿಯ ಬಸಿರಲ್ಲಿ ಬಂದಿದ್ದಾನೆ. ನಿಮ್ಮ
ವರಾಹಾವತಾರದ ಕತೆಯು ಏನು ಹೇಳುತ್ತಿದೆ? ನಿಮ್ಮ ವಿಷ್ಣುವು
ಮಡಿಸೀರೆಯನ್ನು ಕದ್ದು ವೃಕ್ಷವನೇರಿದ್ದಾನೆ. ಬೆಣ್ಣೆಯನ್ನು ಕದ್ದಿ
ದ್ದಾನೆ. ಇದು ಎಂಥ ನೀತಿ! ಆದರೆ ನಮ್ಮ ಶಿವನು ಸರ್ವ
ಮಯನು. ನೀವು ಅವನನ್ನು ಧಿಕ್ಕರಿಸಿ ನುಡಿಯಬೇಡಿರಿ ಎಂದನು.
ಅದಕ್ಕೆ ಆ ವಿಪ್ರರು— ನಿಮಗೆ ಜಾತಿ ಎಂಬುದು ಇಲ್ಲ. ಕುಲವಿಲ್ಲ.
ನಮ್ಮ ವಿಪ್ರಕುಲವು ಶ್ರೇಷ್ಠವಾದುದು ಎಂದು ತಿರುಗಿ ನುಡಿದರು.
ಅದಕ್ಕೆ ದಾಸಿಮಯ್ಯನು— ನೀವು ಋಷಿಗಳ ಗೋತ್ರ ಹೇಳುತ್ತೀರಿ.
ಆದರೆ ಆ ನಿಮ್ಮ ಋಷಿಗಳು ಯಾರು? ಅವರಲ್ಲಿ ಒಬ್ಬನು ಮಚ್ಚಿಗ,
ಒಬ್ಬನು ಹಡಪಿಗ, ಮತ್ತೊಬ್ಬನು ಅಂಬಿಗಳ ಮಗ. ಇಂಥವರಲ್ಲಿ
ಹುಟ್ಟಿದ ನೀವು ಕುಲಜರೆಂಬುದು ಹೇಗೆ? ಆದರೆ ಶಿವಭಕ್ತರು ಗುರು
ವಿನಲ್ಲಿ ಪುನರ್ಜಾತರಾದವರು. ಅವರಿಗೆ ಕುಲ ಜಾತಿ ಎಂಬುದಿಲ್ಲ
ಎಂದು ನುಡಿದು ವಿಪ್ರರು ಹೆರವರಲ್ಲಿ ತಿರಿತಂದು ಹೊಟ್ಟೆಹೊರೆದು
ಕೊಳ್ಳುತ್ತಾರೆ. ಅವರಿಗೆ ಕಾಯಕದ ರೀತಿ ಗೊತ್ತಿಲ್ಲ. ಅವರು ಯಜ್ಞದ
ನೆವಮಾಡಿ ಕುದುರೆ, ಹೋತುಗಳನ್ನು ತಿನ್ನುತ್ತಾರೆ. ಅವರದು ಹಿಂಸಾ
ಕರ್ಮವು. ನೀವು ಇಂಥ ಮಾರ್ಗವನ್ನು ಬಿಟ್ಟುಕೊಟ್ಟು ಈಶ್ವರನನ್ನು
ಭಜಿಸಬೇಕು. ಅಂದರೆ ನಿಮ್ಮ ಪಾಪವು ಹೋಗುವದು, ಕರ್ಮಕ್ಷಯ
ವಾಗುವದು, ಎಂದು ದೇವರದಾಸಿಮಯ್ಯನು ಅವರಿಗೆ ಅನೇಕ ರೀತಿ
ಯಿಂದ ಬೋಧಿಸಿದನು. ಅದಕ್ಕೆ ಅವರು ಇದಿರು ನುಡಿಯಲಾರದೆ ಅವ
ನಿಗೆ— ನಿನ್ನ ಮಾತಿನಲ್ಲಿ ನಮಗೆ ಭರವಸೆ ಉಂಟಾಗುವದಿಲ್ಲ. ಆದರೆ

ಇಗೋ ನೋಡು, ಇಲ್ಲಿ ದೇವಾಲಯವಿದೆ. ಇದರಲ್ಲಿ ನಿನ್ನ ಮಹೇಶ್ವರನನ್ನು ತಂದು ತೋರಿಸು. ಅಂದರೆ ಮಾತ್ರ ನಿನ್ನ ವಾಕ್ಯವು ಸತ್ಯವೆಂದು ನಾವು ನಂಬುತ್ತೇವೆ, ಇಲ್ಲದಿದ್ದರೆ ಇಲ್ಲ, ಎಂದು ಹೇಳಲು ದೇವರ ದಾಸಿಮಯ್ಯನು— ಹಾಗೆಯೇ ಆಗಲಿ. ಶಿವನು ಜಗದ್ಭರಿತನಾಗಿದ್ದಾನೆ. ನೀವು ಅಪೇಕ್ಷಿಸಿದಂತೆಯೇ ನಾನು ಇಲ್ಲಿಯೇ ಅವನನ್ನು ತೋರಿಸುವೆನು ಎಂದು ನುಡಿದು, ಶಿವನನ್ನು ಆಹ್ವಾನಿಸುತ್ತ ಆ ದೇವಾಲಯದ ಬಾಗಿಲನ್ನು ತೆರೆಯಲು, ಒಳಗೆ ನೋಡುತ್ತಾರೆಯೇ, ಅಲ್ಲಿ ಮೊದಲಿದ್ದ ಮುಕ್ಕುಂದನ ಮೂರುತಿಯು ಇರಲಿಲ್ಲ. ಅದರ ಸ್ಥಳದಲ್ಲಿ ಶಿವಲಿಂಗವು ನೆಲಸಿತ್ತು. ಬ್ರಾಹ್ಮಣರು ಇದನ್ನು ನೋಡಿ ಆಶ್ಚರ್ಯಭರಿತರಾಗಿ ತಮ್ಮನ್ನು ಉದ್ಧಾರ ಮಾಡಬೇಕೆಂದು ದೇವರದಾಸಿಮಯ್ಯನಿಗೆ ಶರಣಾಗತರಾದರು. ಆಗ ದೇವರದಾಸಿಮಯ್ಯನು ಅವರಿಗೆ ವೀರಶೈವ ದೀಕ್ಷಾ ಸಂಸ್ಕಾರವನ್ನು ಮಾಡಿ ಲಿಂಗದ ನೆಲೆ ಕಲೆಗಳನ್ನೂ ಕ್ರಿಯಾಚಾರಗಳನ್ನೂ ತಿಳಿಸಿ ಅವರೆಲ್ಲರಿಗೆ ಲಿಂಗಧಾರಣೆಯನ್ನು ಮಾಡಿದನು.

ದೇವರದಾಸಿಮಯ್ಯನ ಮೂಲಕ ಉತ್ಪನ್ನನಾದ ಈ ಲಿಂಗಕ್ಕೆ ರಾಮೇಶ್ವರಲಿಂಗವೆಂಬ ಹೆಸರಾಯಿತು.

ದೇವರ ದಾಸಿಮಯ್ಯನು ಈ ಸವಾಡವನ್ನು ಮಾಡಿದ ಬಳಿಕ ನಂದಿಗ್ರಾಮದಿಂದ ಹೊರಟು ಮುಂದೆ ಪ್ರವಾಸ ಮಾಡುತ್ತ, ಗೌಡಗೆರೆ ಎಂಬ ಗ್ರಾಮಕ್ಕೆ ಬಂದನು. ಆ ಊರಿಗೆ ಮುದ್ದಯ್ಯನೆಂಬುವನು ಗೌಡನಿದ್ದು ಅವನು ಅನೇಕ ಹೊಲ ಗದ್ದೆಗಳನ್ನು ಮಾಡಿಕೊಂಡು ಬೇಸಾಯದಿಂದ ಬಹಳ ಧಾನ್ಯ ಬೆಳೆದು ಶ್ರೀಮಂತನಾಗಿದ್ದನು. ಅವನು ದೊಡ್ಡ ಕುಟುಂಬಸ್ತನು, ವ್ಯವಹಾರ ಚತುರನು, ಗ್ರಾಮದಲ್ಲಿ ಯಾರಾದರೂ ಮೇರೆದಪ್ಪಿ ನಡೆದರೆ, ಪಕ್ಷ ಪರಪಕ್ಷ ಮಾಡದೆ, ಅನ್ಯಾಯ ಮಾಡಿದವರನ್ನು ಶಿಕ್ಷಿಸುವನು. ಮನೆಗೆ ಯಾರು ಬಂದರೂ ಇಲ್ಲೆನ್ನನು. ಬಹಳ ಉದಾರಿಯು. ಹೀಗೆ ಅವನು ಎಲ್ಲ ಜನರಿಗೂ ಹಿತವಾದುದನ್ನೇ ಮಾಡುತ್ತ ಬರುವನು.

ಅವನು ಜಾತಿಯಿಂದ ಕಡಿಮೆ ಕುಲದವನು. ಆದರೂ ಬಹಳ ಧರ್ಮಿಷ್ಠನು. ಹೀಗಿರುವಲ್ಲಿ ಒಂದು ದಿವಸ ಅವನು ತನ್ನ ಗ್ರಾಮದಲ್ಲಿದ್ದ ಒಬ್ಬ ಜಂಗಮನು 'ಮಾಹೇಶ್ವರಾಚಾರ' ಎಂಬ ಗ್ರಂಥದಲ್ಲಿಯ

ಒಂದು ಕಾಂಡವನ್ನು ಓದುತ್ತಿರಲು ಅದನ್ನು ಕೇಳಿ ಅವನ ಮನಸ್ಸು ಅದರ ಕಡೆಗೆ ಒಲಿದು ಅದನ್ನು ಕೇಳಲು ನಿತ್ಯವೂ ಅವನ ಮನೆಗೆ ಬರಹತ್ತಿದನು. ಆಗ ಅವನಲ್ಲಿ ವೀರಶೈವಾಚಾರವನ್ನು ಹೊಂದಬೇಕೆಂಬ ಆಪೇಕ್ಷೆಯುಂಟಾಯಿತು. ಮತ್ತು ತಾನು ಎಂದಿಗೆ ಲಿಂಗ ದೀಕ್ಷೆಯನ್ನು ಹೊಂದಿ ಭವಿಜನ್ಮವನ್ನಳಿದು ಪುನೀತನಾಗುವೆನೋ ಎಂಬ ಆತುರತೆಯು ಅವನಲ್ಲಿ ಹೆಚ್ಚಿತು. ಇಂಥ ಸಮಯದಲ್ಲಿ ದೇವರ ದಾಸಿಮಯ್ಯನು ಅವನ ಗ್ರಾಮಕ್ಕೆ ಬಂದನು.

ಮುದ್ದಯ್ಯನು ಅವನನ್ನು ಕಂಡು ಅವನಿಗೆ ನಮಸ್ಕರಿಸಿ ತನ್ನ ಗ್ರಾಮದಲ್ಲಿದ್ದ ವೃಷಭೇಶ್ವರಾಲಯದಲ್ಲಿ ಅವನನ್ನು ಇಳಿಸಿ, ಅನೇಕ ರೀತಿಯಿಂದ ಅವನನ್ನು ಉಪಚರಿಸಿದನು. ಬಳಿಕ ಅವನಿಗೆ ಸಾಷ್ಟಾಂಗ ಪ್ರಣಾಮಗಳನ್ನು ಮಾಡಿ ತನ್ನ ನಿಜಾಭಿಪ್ರಾಯವನ್ನು ಅವನಿಗೆ ಅರುಹಿ ತನಗೆ ವೀರಶೈವ ದೀಕ್ಷೆಯನ್ನು ಕೊಡಬೇಕೆಂದು ಬಹುಪರಿಯಿಂದ ಅವನನ್ನು ಪ್ರಾರ್ಥಿಸಿಕೊಂಡನು.

ಆಗ ದಾಸಿಮಯ್ಯನು ಅವನಿಗೆ—ಹೋ! ಹೋ!! ನೀನು ಹೇಳುವದು ಆಶ್ಚರ್ಯವು! ನೀನು ಡಂಭಕನಂತೆ ನಟಿಸುವಂತೆ ನನಗೆ ತೋರುತ್ತಿದೆ. ನೀನು ವಾರಕ್ಕೊಂದಾವರ್ತಿ ಸ್ನಾನ ಮಾಡುತ್ತೀ. ಹೊತ್ತು ಹೊರಟ ಕೂಡಲೆ ಮಿಣಿ ನೇಗಿಲುಗಳನ್ನು ಹೊತ್ತುಕೊಂಡು ಹೊಲಕ್ಕೆ ಹೋಗುತ್ತೀ. ಮನೆಗೆ ಬಂದ ಬಳಿಕ ಮುಂಗಾಲುಗಳ ಮೇಲೆ ನೀರು ಸುರಿದುಕೊಂಡು ಸಿಕ್ಕಿದ್ದನ್ನು ಹೊಟ್ಟೆ ಬಿರಿಯುವ ಹಾಗೆ ತಿನ್ನುತ್ತೀ. ಕುರಿ, ಮೇಕೆ ದನಗಳ, ಕಾಲುದೆಸೆಯಲ್ಲಿ ಬಿದ್ದ ಕಸವಲ್ಲಿಯೇ ಮಲಗುತ್ತೀ. ನಿನಗೆ ಮಡಿ ಮೈಲಿಗೆ ಎಂಬುವಿಲ್ಲ. ದುರಿಗಿ, ಮಾರಿ, ಮಸಣಿ ಇಂಥ ದೈವಗಳಿಗೆರಗಿ, ಅವುಗಳನ್ನು ಅರ್ಚಿಸುತ್ತೀ. ಇಂಥವನಿಗೆ ನಮ್ಮ ವೀರಶೈವಾಚಾರವು ಸಲ್ಲದು. ಆದರೆ ಲಿಂಗ ದೀಕ್ಷೆಯನ್ನು ನೀನು ಹೊಂದಿದರೆ ನಿನ್ನ ಕುಲವು ನಶಿಸುವದು, ಹುಟ್ಟುಗೆಡುವುದು, ಕುಳವರ್ಣ ವಳಿವುದು. ಆದ್ದರಿಂದ ನೀಚ ಕುಲದವರಿಗೆ ಗುರುದೈವವೆಂಬುದು ಎತ್ತಣದು? ಆದ್ದರಿಂದ ನೀನು ಇಂಥ ವಿಚಾರವನ್ನು ಬಿಟ್ಟುಕೊಡಬೇಕು, ಎಂದು ದಾಸಿಮಯ್ಯನು ಸ್ವಂದ್ಸಾರ್ಥವಾಗಿ ಅವನ ಮನಸ್ಸನ್ನು ಪರೀಕ್ಷಿಸಲು ನುಡಿದನು. ಆದರೆ ದಾಸಿಮಯ್ಯನು ತನ್ನನ್ನು ಹೀಗೆ ಜರಿದು

ನುಡಿದದ್ದೇ ತನಗೆ ಕೊಟ್ಟ ಬುದ್ಧಿವಾದವೆಂದು ತಿಳಿದು ಮುದ್ದಯ್ಯನು ಸಿಟ್ಟಿಗೇಳದೆ ಅವನಿಗೆ ನಯಭಕ್ತಿಯಿಂದ ನಮಸ್ಕರಿಸಿ- ಎಲೋ ದೇಶಿಕನೇ, ನಿನ್ನ ಪಾದದರ್ಶನದಿಂದ ನಾನು ಪುನೀತನಾದೆನು. ಶರಣಾಗತನಾದ ನನ್ನನ್ನು ಕರುಣದಿಂದ ನೋಡು. ನೀನು ಹೇಳಿದಂತೆ ನಾನು ನಡಿಯುತ್ತೇನೆ. ಹರನ ಭಕ್ತರ ಪರಿಚರ್ಯದಲ್ಲಿ ನನ್ನನ್ನು ಇರಿಸು. ಪರಮಾತ್ಮನ ಸ್ಮರಣೆಯನ್ನು ಮಾಡುವ ರೀತಿಯನ್ನು ನನಗೆ ತಿಳಿಸು, ಎಂದು ಬೇಡಿಕೊಂಡನು.

ಆಗ ದಾಸಿಮಯ್ಯನು ಮುದ್ದಯ್ಯನು ದೃಢಮನಸ್ಕನಾಗಿ ನಿಜವಾಗಿ ಭಕ್ತಾಚಾರದಲ್ಲಿರಲು ಬಯಸುತ್ತಾನೆ, ಎಂಬುದನ್ನು ತಿಳಿದು ಅವನ ಹೆಂಡತಿ, ಮಕ್ಕಳು ಸಂಬಂಧಿಕರನ್ನೆಲ್ಲ ತನ್ನಲ್ಲಿ ಬರಮಾಡಿಕೊಂಡು ಅವರೆಲ್ಲರೂ ಇದೇ ಮನಸ್ಸಿನವರಾಗಿರುತ್ತಾರೆಂಬುದನ್ನು ತಿಳಿದು ಅವರಿಗೆ— ಗೌಡರುಗಳೇ ಕೇಳಿರಿ, ನೀವು ಈ ವರೆಗೆ ಕೀಳುಕುಲದವರೆಂದು ಮುಗ್ಧರಾಗಿದ್ದಿರಿ. ಗುರುಹಿರಿಯರೆಂಬುದನ್ನು ಲಕ್ಷಿಸದೆ ಬಿರಿಸು ಮಾತುಗಳನ್ನಾಡುತ್ತಲಿದ್ದಿರಿ. ಎಂಜಲೆನ್ನದೆ ದವಡೆಯಲ್ಲಿ ಸಿಕ್ಕಿದುದನ್ನು ತಿಂದು ಬಾಯ್ದೊರಿಸುತ್ತಿದ್ದಿರಿ. ಇದೇ ನಿಮ್ಮ ಶೀಲ. ಇಂಥವರಾದ ನೀವು ಇಂದು ಲಿಂಗಧಾರಿಗಳಾಗಿ ಹೇಗೆ ಭಕ್ತರೆನ್ನಿಸಿಕೊಳ್ಳುವಿರಿ? ಹೀಗೆ ದಾಸಿಮಯ್ಯನು ಅವರ ದುಶ್ಚಟಗಳನ್ನು ಹೀಯಾಳಿಸಿ ನುಡಿಯಲು, ಅದಕ್ಕೆ ಅವರು ಅವನಲ್ಲಿ ಬೇಸರಗೊಳ್ಳದೆ ನಿಷ್ಕಲ್ಮಷ ಮನಸ್ಸಿನವರಾಗಿ ದಾಸಿಮಾರ್ಯನ ಪಾದಕ್ಕೆರಗಿ ಅವನಿಗೆ— ನಾವು ಶಿವಭಕ್ತಿಯನ್ನು ಹಿಡಿದು ಮುಕ್ತಿಯನ್ನು ಪಡೆಯುವೆವೆಂದು ನಂಬುಗೆಯನ್ನು ಕೊಡಲು, ದಾಸಿಮಯ್ಯನು ಅವರಿಗೆ ದೀಕ್ಷಾ ಸಂಸ್ಕಾರ ಪೂರ್ವಕವಾಗಿ ಲಿಂಗಧಾರಣಾದಿ ಕ್ರಿಯೆಗಳನ್ನು ವಿಜೃಂಭಣೆಯಿಂದ ಅನುಗೊಳಿಸಿದನು.

ಈ ಪ್ರಕಾರ ದೇವರದಾಸಿಮಯ್ಯನು ಅವರಿಗೆ ಲಿಂಗಧಾರಣೆಯನ್ನು ಮಾಡಿ, ಅವರಿಗೆ ಪಂಚಾಕ್ಷರಿಯನ್ನು ಉಪದೇಶಿಸಿ, ಅವರಿಗೆ ಚರಪಾದ ತೀರ್ಥ ಪ್ರಸಾದಗಳನ್ನು ಸಲ್ಲಿಸಿ, ಗಿರೀಶಾರ್ಚನಾದಿ ಆಚಾರಧರ್ಮಗಳನ್ನು ತಿಳಿಸಿ ಅವರಿಗೆ— ಇನ್ನುಮೇಲೆ ನೀವು ನಿಮ್ಮ ಕೃಷಿಕಾಯಕವನ್ನೇ ಇಟ್ಟುಕೊಳ್ಳಿರಿ. ಅದನ್ನು ಬಿಡಬೇಡಿರಿ. ಅದರ ಮೂಲಕ ಪ್ರಮಥಗಣ ದಾಸೋಹವನ್ನು ನಡಿಸುತ್ತ ಇರ್‍ರಿ. ನೀವು ಗೋಡಗೆರೆಯವರೆಂದು ನಾಡಿನಲ್ಲಿ ವಿಖ್ಯಾತರಾಗಿ ಬಾಳಿರಿ. ಶ್ರೀಶೈಲಮಲ್ಲಿಕಾರ್ಜುನನ ಭಕ್ತ

ರಾಗಿ ನಡೆಯಿರಿ, ಎಂದು ಉಪದೇಶಿಸಿದನು. ಆಮೇಲೆ ಮುದ್ದಯ್ಯನ ಕೂಡ ಅವನ ಸಂಗಡದ ೧೨ ಸಾವಿರ ಜನರು ದೇವರದಾಸಿಮಯ್ಯನಿಂದ ದೀಕ್ಷಾಸಂಸ್ಕಾರವನ್ನು ಹೊಂದಿದರು. ಆಮೇಲೆ ದೇವರದಾಸಿಮಯ್ಯನು ಕೆಲವು ದಿನ ಗೌಡಗೆರೆಯಲ್ಲಿದ್ದು ಅಲ್ಲಿಂದ ಮುಂದೆ ಸಾಗುವವನಾದನು.

ದೇವರದಾಸಿಮಯ್ಯನು ಈಪ್ರಕಾರ ಗೌಡಗೆರೆಯಿಂದ ಹೊರಟು ನಾಲ್ಕಾರು ದಿವಸ ದಾರಿ ನಡೆಯುತ್ತ ಈಗ ನಿಜಾಮನ ರಾಜ್ಯದಲ್ಲಿರುವ ಪೊಟ್ಟಲಕೆರೆಗೆ ಬಂದನು. ಈ ಎಲ್ಲ ವಿವರಣೆಗಳ ಮೇಲಿಂದ ಗೌಡಗೆರೆಯು ಮತ್ತು ಮುದ್ದಯ್ಯನ ಸಂಗಡದವರಾದ ಒಕ್ಕಲಿಗರು ಕರ್ನೂಲ, ಮಹಬೂಬನಗರ ಮತ್ತು ಮೆಡಕ್ಕ ಈ ಜಿಲ್ಹೆಗಳಲ್ಲಿರುವವರೆಂದು ತೋರುತ್ತದೆ.

ಈ ಪೊಟ್ಟಲಕೆರೆಯು ಚಾಲುಕ್ಯರ ಬಲಾಢ್ಯ ಚಕ್ರವರ್ತಿಯಾದ ೧ನೇ ಜಯಸಿಂಹ (ಜಗದೇಕಮಲ್ಲ) ರಾಜನ ರಾಜಧಾನಿಯಾಗಿತ್ತು. ಇವನು ಕ್ರಿ. ಶ. ೧೦೦೮ ರಿಂದ ೧೦೪೨ ರ ವರೆಗೆ ರಾಜ್ಯವಾಳಿದನು. ೧೦೧೯ ನೆ ಇಸ್ವಿಯ ಒಂದು ಶಿಲಾಶಾಸನದಲ್ಲಿ [೧] ಬಳ್ಳಿಗಾವಿ ಎಂತಲೂ, ೧೦೩೬ [೨]. ೧೦೩೯ [೩], ಮತ್ತು ೧೦೪೦ [೪] ಈ ವರ್ಷಗಳ ಶಿಲಾಶಾಸನಗಳಲ್ಲಿ ಪೊಟ್ಟಲಕೆರೆ ಎಂತಲೂ ಹೀಗೆ ಈ ಪಟ್ಟಣಗಳು ಅವನ ರಾಜಧಾನಿಯ ಸ್ಥಳಗಳಾಗಿದ್ದವೆಂದು ತಿಳಿದುಬರುತ್ತದೆ. ಪೊಟ್ಟಲಕೆರೆಯು ಹೈದ್ರಾಬಾದಿನಿಂದ ಬೀದರಕ್ಕೆ ಹೋಗುವ ಮಾರ್ಗದಲ್ಲಿ ಅದರ ಬಲಮಗ್ಗಲು ಹೈದರಾಬಾದಿನಿಂದ ೨೦ ಮೈಲುಗಳ ಮೇಲೆ ಮೆಡಕ್ಕ ಜಿಲ್ಹೆಯಲ್ಲಿ ಈಗ ಇದೆ. ಇಲ್ಲಿ ಈಗ ತೆಲುಗು ಭಾಷೆಯ ಪ್ರಾಬಲ್ಯವಿದ್ದು ಅದಕ್ಕೆ ಈಗ 'ಪೊಟ್ಲಚೇರು' ಅಥವಾ 'ಪೆಟಂಚೇರು' ಎಂಬ ಹೆಸರುಗಳು ಇವೆ. ಇಲ್ಲಿ ಈಗಲೂ ಅನೇಕ ಕನ್ನಡ ಶಿಲಾಶಾಸನಗಳಿದ್ದು ಅವುಗಳಲ್ಲಿಯ ಕೆಲವು ಶಾಸನಗಳಲ್ಲಿ ಈ ಗ್ರಾಮವು ಪೊಟ್ಟಲಕೆರೆ ಎಂದು ಕರೆಯಲ್ಪಟ್ಟಿದೆ.

---

(೧) ಎಪಿ-ಕರ್ನಾ-ಶಿವಮೊಗ್ಗಾ ವ್ಹಾ. ೧ ನಂ ೧೨೫.

(೨) ನಂ ೧೨೬.

(೩) ,, ನಂ ೧೫೩.

(೪) ಇಂಡಿ-ಆ್ಯಂಟಿ ೧೯ ಪುಟ ೧೬೧.

ಇದರಿಂದ ಇದೇ ಗ್ರಾಮವು ಜಯಸಿಂಹನ ರಾಜಧಾನಿಯಾದ ಪೊಟ್ಟಲ ಕೆರೆ ಇರುತ್ತದೆಂದು ತೋರುತ್ತದೆ. ಇಲ್ಲಿ ಸುರಾತನಕಾಲದ ಅವಶೇಷ ಗಳು ಈಗಲೂ ಇರುತ್ತವೆ.

ದೇವರದಾಸಿಮಯ್ಯನು ಇಲ್ಲಿಗೆ ಬಂದಬಳಿಕ ಅವನ ಕೂಡ ಬಂದ ಗೌಡಗೆರೆಯ ಭಕ್ತರನ್ನೆಲ್ಲ ಅವರವರ ಗ್ರಾಮಗಳಿಗೆ ತಿರುಗಿ ಕಳಿಸಿ ಕೊಟ್ಟನು. ಮತ್ತು ತನ್ನ ಧರ್ಮೋಪದೇಶದ ಕಾರ್ಯಗಳನ್ನು ಅಲ್ಲಿ ಕೆಲವು ದಿವಸ ಹಾಗೆಯೇ ಮುಂದುವರಿಸಿದನು. ಅವನು ಇಲ್ಲಿಯ 'ಮಹಾದೇವಾಂಗ' ಸಮಾಜದವರನ್ನು ತನ್ನಲ್ಲಿಗೆ ಬರಮಾಡಿಕೊಂಡು ಅವ ರಿಗೆ—ನೀವು 'ಭಕ್ತಾಚಾರ ಸಂಪನ್ನರಾಗಿ ನೇಗಿಯ ಕಾಯಕವನ್ನಾಚ ರಿಸುತ್ತ ಶಿವಗಣಾರಾಧನೆಯ ಮಾಡುತ್ತ ನಿಯಮವಾಗಿ ಬಾಳಿರೆಂದು ಉಚಿತ ಸ್ಥಾನಗಳಿಗಂ ಬೀಳ್ಕೊಟ್ಟು ತಾನು ನಿಶ್ಚಲಭಕ್ತಿ ನಿಷ್ಠಾಯೋಗಾನು ಭವ ಸಾಮ್ರಾಜ್ಯದೊಳಗೀ ಪರಿ ಇರ್ಪನು' ಎಂದು ಅವನ ಚರಿತ್ರೆಯಲ್ಲಿ ಹೇಳಿದೆ. ಇದರಿಂದ ಅವನು ಇಲ್ಲಿ ಕೆಲವು ದಿನ ಧರ್ಮಪ್ರಸಾರಕಾರ್ಯ ಮಾಡಿದನೆಂದು ತೋರುತ್ತದೆ. ಆಮೇಲೆ ಅವನಿಗೋಸ್ಕರ ಅಲ್ಲಿಯ ಭಕ್ತರು ಅದೇ ಸ್ಥಳದಲ್ಲಿ ಒಂದು ಮಠವನ್ನು ಕಟ್ಟಿಸಿ ಕೊಟ್ಟರು. ಅದರಲ್ಲಿ ದೇವರದಾಸಿಮಯ್ಯನು ಕೆಲವು ದಿನವಿದ್ದು ಮುಂದೆ ಅವನು ಅಲ್ಲಿಂದ ಹೊರಟು ಮಾರ್ಗಕ್ರಮಣ ಮಾಡುತ್ತ ತನ್ನ ಗ್ರಾಮವಾದ ಮುದನೂರಿಗೆ ಬಂದುಮುಟ್ಟಿದನು. ಪೊಟ್ಟಲಕೆರೆಯಿಂದ ಈ ಗ್ರಾಮವು ಅದರ ಪಶ್ಚಿ ಮಕ್ಕೆ ಸುಮಾರು ೧೫೦-೧೭೦ ಮೈಲುಗಳ ಮೇಲೆ ಇರುತ್ತದೆ. ಅಲ್ಲಿಗೆ ಬಂದಬಳಿಕ ದೇವರದಾಸಿಮಯ್ಯನು ತನ್ನ ಇಷ್ಟದೇವತೆಯಾದ ರಾಮ ನಾಥನ ಸೇವೆಯಲ್ಲಿರಹತ್ತಿದನು.

ಈ ಕಾಲದಲ್ಲಿ ಅವನು ರಾಜನಾದ ಜಯಸಿಂಹನನ್ನೂ ಅವನ ಹೆಂಡತಿಯಾದ ಸುಗ್ಗಲೆಯನ್ನೂ ಕಂಡಂತೆ ಅವನ ಚರಿತ್ರೆಗಳಲ್ಲಿ ಉಲ್ಲೇಖ ಗಳಿರುವದಿಲ್ಲ.

ದೇವರದಾಸಿಮಯ್ಯನು ಮುದನೂರು ಗ್ರಾಮಕ್ಕೆ ಬಂದ ಬಳಿಕ ಅವನು ತನ್ನ ನೆಯ್ಗೆಯ ಕಾಯಕವನ್ನು ಮಾಡುತ್ತ ಯಾವಾಗಲೂ ಶಿವಾನುಭವ ಗೋಷ್ಠಿಯಲ್ಲಿರುವನು. ಅವನು ಬೋಧಿಸುತ್ತಿದ್ದ ಶಿವಾ ನುಭವದ ತತ್ವಗಳು ಅವನು ರಚಿಸಿರುವ ಗಂಭೀರವಾದ ಮತ್ತು ಉದಾ

ತ್ರವಾದ ವಚನಗಳಲ್ಲಿರುತ್ತವೆ. ಆದ್ದರಿಂದ ಅಸಂಖ್ಯ ಜನರು ಅವನ ಲಿಂಗಾನುಭವದ ರೀತಿನಡೆಗಳನ್ನು ತಿಳಿಯಲು ಅವನಲ್ಲಿಗೆ ಬರಹತ್ತಿದರು. ಇದರಿಂದ ಅವರಲ್ಲಿ ಬಹುಜನರು ವೀರಶೈವ ಮತಾವಲಂಬಿಗಳಾಗಹತ್ತಿದರು. ಅವರಲ್ಲಿ ಬಹುಜನ ಜೈನರೂ ಕೂಡ ಇದ್ದರು. ಹೀಗಾಗಹತ್ತಿದ್ದನ್ನು ಮುದನೂರಿನ ಜೈನರು ಕಂಡು ಅವರು ದೇವರದಾಸಿಮಯ್ಯನನ್ನು ವಿರೋಧಿಸಲು ಪ್ರಾರಂಭಿಸಿದರು ಮತ್ತು ಅವರು ಅವನಿಗೆ ಅನೇಕ ತೊಂದರೆಗಳನ್ನು ಕೊಡಹತ್ತಿದರು. ಇದನ್ನು ದೇವರದಾಸಿಮಯ್ಯನು ನೋಡಿ ಅವರಿಗೆ ಶಿವಾನುಭವದಲ್ಲಿರುವ ಅಲೌಕಿಕ ಸಾಮರ್ಥ್ಯವನ್ನು ತೋರಿಸುವ ಉದ್ದಿಶ್ಯವಾಗಿ ಪಟ್ಟಣದಲ್ಲಿದ್ದ ಅವರ ಜೈನ ಬಸದಿಯ ಬಾಗಿಲನ್ನು ತನ್ನ ಕೈಮುಟ್ಟಿ ಮುಚ್ಚಿದನು. ಜೈನರು ಆ ಬಾಗಿಲನ್ನು ತೆರೆಯಲು ಬಹು ಶ್ರಮಪಟ್ಟರು. ಆದರೆ ಅವರು ಏನೂ ಮಾಡಿದರೂ ಅದು ತೆರೆಯಲಿಲ್ಲ. ಇದು ದೇವರದಾಸಿಮಯ್ಯನಿಗೆ ತಾವು ತೊಂದರೆಕೊಟ್ಟಿದ್ದರ ಪರಿಣಾಮವೆಂದು ತಿಳಿದು ಅವರು ಅದಕ್ಕೋಸ್ಕರ ತಮ್ಮನ್ನು ಕ್ಷಮಿಸಬೇಕೆಂದು ಅವನಿಗೆ ಬೇಡಿಕೊಂಡರು. ಆಗ ದೇವರದಾಸಿಮಯ್ಯನು ಅದರ ಬಾಗಿಲನ್ನು ಮುಟ್ಟಲು ಅದು ತಾನಾಗಿಯೇ ತೆರೆಯಿತು. ಆದರೆ ಒಳಗೆ ನೋಡುತ್ತಾರೆಯೇ, ಅಲ್ಲಿದ್ದ ಜೈನಮೂರ್ತಿಯು ಇರಲಿಲ್ಲ. ಅದರ ಸ್ಥಳದಲ್ಲಿ ಒಂದು ಲಿಂಗವು ಉದ್ಭವಿಸಿತ್ತು! ಜೈನರು ಅದನ್ನು ನೋಡಿ ವಿಸ್ಮಿತರಾಗಿ ಶಿವಾನುಭವವು ಅಗಾಧವಾದುದೆಂದು ತಿಳಿದವರಾಗಿ ಅವರೆಲ್ಲರು ದೇವರದಾಸಿಮಯ್ಯನಿಂದ ವೀರಶೈವ ದೀಕ್ಷೆಯನ್ನು ಹೊಂದಿದರು. ಇದರಿಂದ ಅವನ ಮಹತ್ವವು ಸುತ್ತಲೂ ನಾಡಿನಲ್ಲೆಲ್ಲ ಮತ್ತಿಷ್ಟು ಪಸರಿಸಿತು. ದೇವರದಾಸಿಮಯ್ಯನ ಮೂಲಕ ಆದ ಈ ಲಿಂಗಕ್ಕೆ 'ರಾಮೇಶ್ವರಲಿಂಗ'ವೆಂಬ ಹೆಸರಾಯಿತು.

ದೇವರದಾಸಿಮಯ್ಯನು ಶ್ರೀಶೈಲದಲ್ಲಿ ಶ್ರೀಮಲ್ಲಿಕಾರ್ಜುನನ ಸನ್ನಿಧಿಯಲ್ಲಿ ದೀಕ್ಷೆಯನ್ನು ಹೊಂದಿದ ಬಳಿಕ ಅವನು ಮುದನೂರಿಗೆ ಬರುವ ವರೆಗೂ 'ಆಚಾರ್ಯ ಪದ್ಧತಿ' ಎಂದರೆ ವಿರಕ್ತನಂತೆ ಆಚರಿಸುತ್ತ ಬಂದಿದ್ದನು. ಈ ವರೆಗೆ ಅವನು ಮದುವೆಯಾಗಿರಲಿಲ್ಲ. ಆದರೆ ಅವನು ಮುದನೂರಿಗೆ ಬಂದಬಳಿಕ ಅವನ ಶಿಷ್ಯರು ಅವನಿಗೆ ಲಗ್ನವಾಗಲು ಸೂಚಿಸಿದರು. ಆದರೆ ಅವನು— ನನ್ನ ಮನೋಧರ್ಮವನ್ನು ತಿಳಿದು ವರ್ತಿಸುವಂಥ ಸ್ತ್ರೀಯಳನ್ನು ನಾನು ವರಿಸುವೆನೇ

ಹೊರತು ಬೇರಾವ ಸ್ತ್ರೀಯನ್ನು ವರಿಸುವದಿಲ್ಲೆಂದು ಅವರಿಗೆ ತಿಳಿಸಿ ಇಂಥವಳನ್ನು ಶೋಧಿಸಲು ಹೊರಟನು.

ಲಗ್ನವಾಗುವದು ಶಿವಶರಣರ ಮಾರ್ಗಕ್ಕೆ ವಿರೋಧವಾದುದಲ್ಲ. ಅದು ಅವರ ಇಚ್ಛೆಯ ಮೇಲೆ ಅವಲಂಬಿಸಿದೆ. ಇಂದ್ರಿಯಗಳನ್ನು ಕ್ಲೇಶಪಡಿಸದೆ ಅವುಗಳನ್ನು ಲಿಂಗಮುಖವಮಾಡಿ ಆಚರಿಸುವದು ಶಿವಾನುಭವದ ಮಹತ್ವದ ತತ್ವವಿದೆ. ಆದ್ದರಿಂದ ವಿರಕ್ತ ಧರ್ಮವನ್ನು ಪಾಲಿಸುತ್ತಿದ್ದರೂ ಕೂಡ ಅದನ್ನು ತ್ಯಜಿಸಿ ಲಗ್ನವನ್ನು ಮಾಡಿಕೊಂಡು ಗೃಹಸ್ಥ ಧರ್ಮದಲ್ಲಿರುವದು ಶಿವಾನುಭವಕ್ಕೆ ವಿರೋಧವಾದುದಲ್ಲ. ಆದ್ದರಿಂದ ನಿರ್ಲಜ್ಜಶಾಂತಯ್ಯ, ರೇವಣಸಿದ್ಧ ಮೊದಲಾದ ಅನೇಕ ಮಹಾನುಭಾವರು ಲಗ್ನವಾಗಿ ತಮ್ಮ ಶಿವಾನುಭವದಲ್ಲಿ ಇದ್ದದ್ದು ಕಂಡುಬರುತ್ತದೆ.

ದೇವರದಾಸಿಮಯ್ಯನು ತನಗೆ ಅನುರೂಪಳಾದ ಸ್ತ್ರೀಯನ್ನು ಕಂಡು ಹಿಡಿಯಲು ಒಂದು ಉಪಾಯವನ್ನು ಯೋಜಿಸಿದನು. ಅವನು ಮಳಲನ್ನು ತನ್ನ ಕೂಡ ತೆಗೆದುಕೊಂಡು— ಇದನ್ನು ಯಾವಳು ಕುದಿಸಿ ಅನ್ನ ಮಾಡಿ ನನಗೆ ಉಣಲಿಕ್ಕೆ ಹಾಕುವಳೋ ಅವಳೇ ನನಗೆ ಯೋಗ್ಯಳಾದವಳು, ಅವಳನ್ನು ನಾನು ಮದುವೆಯಾಗುವೆನೆಂದು ತಿಳಿಸುತ್ತ ಸಂಚಾರ ಮಾಡುತ್ತ ಹೊರಟನು. ಆದರೆ ಅಂಥ ಸ್ತ್ರೀಯಳಾರೂ ಅವನಿಗೆ ಎಲ್ಲಿಯೂ ದೊರಕಲಿಲ್ಲ. ಹೀಗೆ ಅವನು ಬಹುಕಾಲ ಕಳೆದನು.

ಹೀಗಿರುವಲ್ಲಿ ಗೊಬ್ಬೂರು ಎಂಬ ಗ್ರಾಮದಲ್ಲಿ ಮಲ್ಲಿನಾಥ, ಅವನ ಹೆಂಡತಿ ಮತ್ತು ಅವರ ಮಗಳು ದುಗ್ಗಳಾಂಬೆ ಎಂಬವರು ವಾಸಿಸುತ್ತಿದ್ದರು. ಅವರು ಕೇವಲ ಶಿವಭಕ್ತರಾಗಿರುವರೆಂಬುದು ದೇವರದಾಸಿಮಯ್ಯನಿಗೆ ತಿಳಿದುಬಂದಿತು. ವಿಜಾಪುರ ಜಿಲ್ಲೆಯ ಈಶಾನ್ಯ ಮೇರೆಯಿಂದ ೧೬ ಮೈಲುಗಳು ಮತ್ತು ಮುದನೂರಿನಿಂದ ಉತ್ತರಕ್ಕೆ ೪೫ ಮೈಲುಗಳ ಮೇಲೆ ಚಿಕ್ಕ ಗೊಬ್ಬೂರು, ಹಿರಿಯ ಗೊಬ್ಬೂರು ಎಂಬ ಗ್ರಾಮಗಳಿವೆ. ಇವುಗಳಲ್ಲಿ ಹಿರಿಯ ಗೊಬ್ಬೂರು ಮೊದಲಿನ ಕಾಲದಲ್ಲಿ ಬ್ರಾಹ್ಮಣರ ಒಂದು ಪ್ರಸಿದ್ಧ ಅಗ್ರಹಾರವಾಗಿತ್ತು. ದೇವರದಾಸಿಮಯ್ಯನು ಈ ಹಿರಿಯ ಗೊಬ್ಬೂರಿಗೆ ಬಂದು ಅಲ್ಲಿ ವಾಮನಮುನಿ ಎಂಬ ವೇದವಿದನ ಮಠಕ್ಕೆ ಬಂದು ಅವನಿಗೆ ತನ್ನ ಮನೋಗತವನ್ನು ತಿಳಿಸಿದನು. ಅದಕ್ಕೆ ಅವನು ನೀನು ಹೇಳುವ ದಂಪತಿಗಳು ಶ್ರೇಷ್ಠ ಶಿವಶರಣ ಶರಣೆಯು

ರಿದ್ದಾರೆ. ಅವರ ಮಗಳೂ ಹಾಗೆಯೇ ಇದ್ದಾಳೆ. ಆದರೆ ಅವರು ಇಲ್ಲಿಲ್ಲ. ಅವರು ಶಿವಪುರದಲ್ಲಿರುತ್ತಾರೆ. ಅವರನ್ನು ನೀನು ಕಾಣು ಎಂದು ತಿಳಿಸಲು ದೇವರದಾಸಿಮಯ್ಯನು ಅಲ್ಲಿಂದ ಹೊರಟು ದಕ್ಷಿಣಕ್ಕೆ ೩೦ ಮೈಲು ದೂರವಿರುವ ಆ ಗ್ರಾಮಕ್ಕೆ ಬಂದು ಅಲ್ಲಿ ಮಲ್ಲಿನಾಥನನ್ನು ಕಾಣುವವನಾದನು. ಅವನು ಆ ಗ್ರಾಮದಲ್ಲಿ ಕ್ಷೇತ್ರಗೇರಿ ಎಂಬ ಕೇರಿಯಲ್ಲಿ ತನ್ನ ಹೆಂಡತಿ ಮತ್ತು ಮಗಳನ್ನು ಕೂಡಿಕೊಂಡು ತನ್ನ ನೆಯ್ಗೆಯ ಕಾಯಕವನ್ನು ಮಾಡುತ್ತಾ ಇದ್ದನು. ನಾಡಿನಲ್ಲಿ ಅತ್ಯಂತ ಪ್ರಖ್ಯಾತಿಯನ್ನು ಹೊಂದಿದ ದೇವರದಾಸಿಮಯ್ಯನು ತಮ್ಮನ್ನು ಕಾಣಲಿಕ್ಕೆ ತಾನಾಗಿಯೇ ಮನೆಗೆ ಬಂದದ್ದಕ್ಕೆ ಅವರು ಅತ್ಯಾನಂದಬಟ್ಟು ಅವನನ್ನು ಅತಿಭಕ್ತಿಭಾವದಿಂದ ಕಾಣುವವರಾದರು. ಆಮೇಲೆ ದಾಸಿಮಯ್ಯನು ಅವರೆದುರಿಗೆ ತಾನು ತಂದಿದ್ದ ಮಳಲನ್ನು ಇಟ್ಟು— ನಿಮ್ಮ ಮಗಳು ಇದನ್ನು ಕುದಿಸಿ ಅನ್ನಮಾಡಿ ನನಗೆ ನೀಡಿದರೆ ನಾನು ಅವಳನ್ನು ವರಿಸುವೆನೆಂದು ಹೇಳಿದನು. ಇದಕ್ಕೆ ಶಿವಶರಣಿಯಾದ ದುಗ್ಗಳವ್ವೆಯು ಒಪ್ಪಿಕೊಂಡು, ಮೊದಲು ದೇವರದಾಸಿಮಯ್ಯನ ಪಾದಪೂಜೆಯನ್ನು ಮಾಡಿ ಅವನ ಪಾದೋದಕದಲ್ಲಿ ಆ ಮಳಲನ್ನು ಹಾಕಿ ಅತ್ಯಂತ ಭಕ್ತಿಭಾವದಿಂದ ಕುದಿಸಹತ್ತಲು ಅದು ಸ್ವಲ್ಪ ಹೊತ್ತಿನಲ್ಲಿ ನಿಜವಾದ ಅನ್ನವೇ ಆಯಿತು! ಇದು ದುಗ್ಗಳಾಂಬೆಯ ಅಚಲ ಭಕ್ತಿ, ಪಾದೋದಕದ ಪರಿಣಾಮ ಮತ್ತು ಅವಳ ಮಂತ್ರದ ಮಹಿಮೆಯಾಗಿತ್ತು! ಅಂಥ ಅನ್ನವನ್ನು ದೇವರದಾಸಿಮಯ್ಯನು ಲಿಂಗಾರ್ಪಿತ ಮಾಡಿ ದುಗ್ಗಳವ್ವೆಯೇ ತನಗೆ ಅನುರೂಪಳಾದ ಸತಿಯು ಎಂದು ಭಾವಿಸಿ ಅವಳನ್ನು ಲಗ್ನವಾಗಲು ಒಪ್ಪಿಕೊಂಡನು. ಆಗ ಅವಳ ತಂದೆತಾಯಿಗಳು ಅವಳನ್ನು ಅವನಿಗೆ ಕೊಟ್ಟು ಲಗ್ನಮಾಡಿದರು. ಆಮೇಲೆ ಉಭಯತರು ಮುದನೂರಿಗೆ ಬಂದು ತಮ್ಮ ಶಿವಾನುಭವದಲ್ಲಿರಹತ್ತಿದರು.

ಮನುಷ್ಯನು ತನ್ನ ನಿತ್ಯದ ಕಾಯಕ ಮಾಡುವಲ್ಲಿ ಅದರಲ್ಲಿ ಅವನು ತತ್ಪರನಾಗಿರತಕ್ಕದ್ದು. ಅದರಲ್ಲಿ ದಾಸೋಹಭಾವ ಅಥವಾ ಲಿಂಗಾರ್ಪಣ ಭಾವವಿರಬೇಕು. ಹೀಗೆ ಭಕ್ತನು ಕಾಯಕ ಮಾಡಿದಲ್ಲಿ ಅವನಲ್ಲಿ ಷಟ್‌ಸ್ಥಲಗಳು ತಾವಾಗಿಯೇ ಇಂಬುಗೊಳ್ಳುತ್ತವೆಂದು ಶಿವಾನುಭವದ ತತ್ವವಿದೆ.

ದೇವರದಾಸಿಮಯ್ಯನು ತನ್ನ ಒಂದು ವಚನದಲ್ಲಿ ಕಾಯಕ ಮಾಡುವ ತನ್ನ ಈ ರೀತಿಯನ್ನು ಹೇಳಿದ್ದಾನೆ. ಕಾಯಕದ ಮೂಲಕ ಮನುಷ್ಯನಲ್ಲಿಯ ಅಂತಃಶಕ್ತಿಗಳು ಪ್ರಜ್ವಲಿತವಾಗಿ ಅಂಗಮನ ಪ್ರಾಣ ಗಳು ಹರಿತವಾಗುತ್ತವೆ. ಆದ್ದರಿಂದ ಅವು ಕಾರ್ಯವಾಡುವಲ್ಲಿ ಆರು ಸ್ಥಲಗಳಲ್ಲಿರುವ ಆರು ಲಿಂಗಗಳು ಭಕ್ತನಲ್ಲಿ ಉದ್ಭವಿಸಿ ಅವು ಅವನಲ್ಲಿ ಸಂಬಂಧಪಡುತ್ತವೆ. ಹೀಗೆ ಅವುಗಳನ್ನು ಸಂಬಂಧಿಸಿಕೊಂಡು ಭಕ್ತನು ಆರುಸ್ಥಲಗಳನ್ನು ದಾಟಿ ಏಳನೆಯದನ್ನು ಸೇರಿ ಶೂನ್ಯದಲ್ಲಿ ಹೋಗಬೇಕು, ಅಲ್ಲಿಂದ ಮುಂದೆ ಹೋಗಿ ಅವನು ಸಾಮರಸ್ಯವನ್ನು ಹೊಂದಬೇಕು. ಆದ್ದರಿಂದ ದೇವರದಾಸಿಮಯ್ಯನು ನೆಯ್ಗೆಯ ಕಾಯಕವನ್ನು ಮಾಡುವ ತನ್ನ ಈ ರೀತಿಯನ್ನು ವಿವರಿಸುವದು ಹೇಗೆಂದರೆ:—

'ಉಂಕಿಯ ನಿಗುಚಿ, ಸರಿಗೆಯ ಸಮಗೊಳಿಸಿ, ಸಮಗಾಲಸಿಕ್ಕಿ ಅಣಿಯೊಳು ಏಳ ಮೆಟ್ಟಿದೆ. ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು. ಈ ಸೀರೆಯ ನೆಯ್ದವ ನಾನೋ ನೀನೋ ರಾಮನಾಥಾ.'

ನೇಯುವಲ್ಲಿ ನೇಕಾರನು ಪೂರ್ವಸಿದ್ಧತೆಯನ್ನು ಕ್ರಮಪೂರ್ವಕ ವಾಗಿ ಮಾಡಬೇಕಾಗುತ್ತದೆ. ಅದನ್ನು ಅವನು ಸರಿಯಾಗಿ ಮಾಡಿಕೊಂಡು ಮಗ್ಗದಲ್ಲಿ ಕುಳಿತುಕೊಂಡು ಅಣಿಯನ್ನು ತುಳಿಯಬೇಕಾಗುತ್ತದೆ. ಈ ಅಣಿಯ ಮೂಲಕ ಏಳನೆಯ ಸ್ಥಳವಾದ ಆರಂಭದ ಶೂನ್ಯ ಲಿಂಗವನ್ನುಅವನು ಪ್ರವೇಶಿಸುವನು. ಆಗ ನೆಯ್ಯುವ ಲಾಳಿ ಅದರ ಮುಳ್ಳಿನಲ್ಲಿ ಸಿಕ್ಕಿಸಲ್ಪಟ್ಟ ಕಂಡಿಕೆ ಇವುಗಳ ಕ್ರಿಯೆಗಳು ಸೀರೆಯಲ್ಲಿ ಪರಿಣಾಮ ಹೊಂದುತ್ತವೆ. ಹೀಗೆ ಸೀರೆಯಲ್ಲಿ ಅವು ಅಭಿನ್ನಭಾವವನ್ನು ಹೊಂದಿದರೂ ಅವಕ್ಕೆ ಮೂಲಕಾರಣನಾದವನು ನೆಯ್ಕಾರನಿದ್ದಾನೆ. ಅವನು ಲಿಂಗಾ ನುಭಾವದಿಂದ ಈ ಕ್ರಿಯೆಗಳನ್ನು ಮಾಡಲು ಅವನಲ್ಲಿ ಲಿಂಗಚೈತನ್ಯವು ಉಂಟಾಗಿ ಅದರ ಮೂಲಕ ಅವನು ಶೂನ್ಯಸ್ಥಿತಿಯನ್ನು ಹೊಂದಿ ಆಮೇಲೆ ಪರಮಾತ್ಮನಲ್ಲಿ ಲಯವಾಗುತ್ತಾನೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

ದೇವರದಾಸಿಮಯ್ಯನು ತನ್ನ ಕಾಯಕ ಮಾಡುವಲ್ಲಿ ಅವನ ಹೆಂಡತಿಯಾದ ದುಗ್ಗಳೆಯು ಅವನಿಗೆ ಬಹಳ ಸಹಾಯಕಳಾಗಿ ವರ್ತಿಸಿದ್ದಾಳೆ. ವೀರಶೈವ ಶರಣೆಯರಲ್ಲಿ ಅವಳೊಬ್ಬ ಮಾದರೀ ಗೃಹಿಣಿ

ಎಂದು ಹೇಳಬಹುದು. ದೇವರದಾಸಿಮಯ್ಯನಾದರೂ ಸ್ತ್ರೀಯರ ಸಲು ವಾಗಿ ಅತ್ಯಂತ ಆದರಭಾವವನ್ನು ತಾಳಿದವನಾಗಿ ದುಗ್ಗಳೆಯೊಡನೆ ಸಹಕರಿಸುತ್ತ ಅವಳಿಗೆ ಅನುರೂಪವಾಗಿಯೇ ವರ್ತಿಸಿದ್ದಾನೆ.

ದೇವರದಾಸಿಮಯ್ಯನು ಸ್ತ್ರೀಪುರುಷರು ಸಮಾನರೆಂದು ಭಾವಿಸಿ ದ್ದಾನೆ. ಹೀಗೆ ತಿಳಿಯುಲು ಅವನು ಒಂದು ಸ್ವಾರಸ್ಯಪೂರ್ಣವಾದ ಕಾರ ಣವನ್ನು ಕೊಟ್ಟಿದ್ದು ಅದನ್ನು ಅವನು ನಿರೂಪಿಸಿರುವದು ಹೇಗೆಂದರೆಃ—

'ಮಡದಿಯು ಪ್ರಾಣಕ್ಕೆ ಮೊಲೆ ಮುಡಿ ಇದ್ದಿತ್ತೇ? ಒಡೆಯರ ಪ್ರಾಣಕ್ಕೆ ಇದ್ದಿತ್ತೇ ಯಜ್ಞೋಪವೀತ? ಕಡೆಯಲ್ಲಿದ್ದ ಅಂತ್ಯಜನು ಹಿಡಿ ದಿದ್ದನೇ ಪ್ರಾಣದಲ್ಲಿ ಹಿಡಿಗೋಲ? ನೀ ತೊಡಕಿಕ್ಕಿದ ತೊಡಕನೀ ಲೋಕದ ಜಡರೆತ್ತ ಬಲ್ಲರೈ ರಾಮನಾಥಾ? '

ಸ್ತ್ರೀಪುರುಷರಿಗೆ ಪ್ರಾಣವಿದ್ದು ಅದು ಉಭಯತರಿಗೂ ಒಂದೇ ಸಮ ನಾಗಿದೆ. ಈ ಪ್ರಾಣಕ್ಕೆ ಮೊಲೆ ಮುಡಿ (ಕೂದಲು, ಹೆರಳು) ಇಂಥ ಸ್ತ್ರೀ ಚಿನ್ಹಗಳಿಲ್ಲ. ಅವು ಅವಳ ಬಾಹ್ಯ ಶರೀರಕ್ಕೆ ಮಾತ್ರ ಇವೆ. ಆದ್ದರಿಂದ ಸ್ತ್ರೀಪುರುಷರು ಸಮಾನರೆಂದು ಅವನ ಅಭಿಪ್ರಾಯವು.

ಅವನು ಸ್ತ್ರೀಪುರುಷರ ವಿಷಯವಾಗಿ ಮತ್ತೊಂದು ವಚನದಲ್ಲಿ ಹೇಳಿರುವದೇನೆಂದರೆ—

(೧) ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ. ಸತಿಪತಿಗಳೊಂದಾಗದವನ ಭಕ್ತಿ ಅಮೃತದೊಳು ವಿಷ ಬೆರೆದಂತೆ ಕಾಣಾ ರಾಮನಾಥಾ.

(೨) ಗಂಡನುಳ್ಳಮ್ಮನ ಗೌರಿ ಎಂದು ಕಂಡಡೆ ಭೂಮಂಡಲಕ್ಕೆ ಅರಸಾಗಿ ಪುಟ್ಟುವನಾತನು. ಗಂಡನುಳ್ಳಮ್ಮನ ಒಡೆವೆರೆದಾತ ನರಕ ದಲ್ಲಿ ದಿಂಡುಗೆಡೆದಿಪ್ಪನೈ ರಾಮನಾಥಾ.

(೩) ಶಿವಭಕ್ತರು ತಮ್ಮ ನಿಜಕೈಲಾಸಕ್ಕೆ ಹೋದರೆ ಅವರರ ಸಿಯ ಪಾರ್ವತಿಯು ಸರಿ ಎಂದು ಕಾಣಲಿಬೇಕು. ಅಲ್ಲಿ ಅನುಸರ ಣೆಯ ಕೊಟ್ಟು ಬೆರಸಿ ಮಾತನಾಡುವ ನರಕಿಗಳನೇನೆಂಬೆ ರಾಮನಾಥಾ?

ಅನುಸರಣೆ = ಅಯೋಗ್ಯ ವರ್ತನೆ ; ಬೆರೆ = ಸೊಕ್ಕಿನಿಂದ ನಡೆ-

ಈ ವಚನಗಳ ಮೇಲಿಂದ ದೇವರದಾಸಿಮಯ್ಯನು ಸ್ತ್ರೀಯರ ಸಲುವಾಗಿ ಎಷ್ಟು ಆದರ ಭಾವವುಳ್ಳವನಾಗಿದ್ದನೆಂಬುದು ಗೊತ್ತಾಗುತ್ತದೆ. ಬಹುಜನರು ವಿಧವೆಯರು ಅಮಂಗಲೆಯರೆಂದು ತಿಳಿದು ಅವರಿಗೆ ಮನ್ನಣೆಕೊಡುವದಿಲ್ಲ. ಮಂಗಲ ಕಾರ್ಯಗಳಲ್ಲಿ ಅವರು ಭಾಗವಹಿಸುವಂತಿಲ್ಲ. ಆದರೆ ದೇವರದಾಸಿಮಯ್ಯನು ಅವರು ಸಾಕ್ಷಾತ್ ಪಾರ್ವತಿಗೆ ಸಮಾನರೆಂದು ಇಲ್ಲಿ ಹೇಳಿದ್ದಾನೆ. ಆದ್ದರಿಂದ ಅವರಲ್ಲಿ ಇಂಥ ಅಮಂಗಲತ್ವವು ಹೇಗೆ ಉಳಿಯುವದು!

ದೇವರದಾಸಿಮಯ್ಯನು ಸ್ತ್ರೀಯರಿಗೋಸ್ಕರ ಇಷ್ಟು ಉಚ್ಚ ಭಾವವನ್ನು ತಾಳಿದವನಾದ್ದರಿಂದ ಅವನ ಹೆಂಡತಿಯಾದ ದುಗ್ಗಳವ್ವೆಯು ಅವನ ಕಾಯಕದಲ್ಲಿ ಅವನಿಗೆ ಯಾವಾಗಲೂ ಸಹಾಯವಾಗುತ್ತಲೇ ಬಂದಳು. ಅವಳು ಅವನನ್ನು ಎಂದೂ ವಿರೋಧಿಸಲಿಲ್ಲ. ಆದರಿಂದ ಅವನಿಗೆ ಗೃಹಸೌಖ್ಯವು ಉಂಟಾದ್ದರಿಂದ ಷಟ್‌ಸ್ಥಲಾನುಸಾರವಾಗಿ ಅವನು ತನ್ನ ಕಾಯಕ ಮಾಡುತ್ತ ಬಂದನು. ಇದು ಅವನ ಕಾಯಕದ ಮಹತ್ವದ ವೈಶಿಷ್ಟ್ಯವಾಗಿದೆ. ಈ ವಿಷಯವಾಗಿ ಕೆಳಗೆ ಕಾಣಿಸಿದ ಅವನ ಚರಿತ್ರೆಯಲ್ಲಿಯ ಆಖ್ಯಾಯಿಕೆಗಳು ವಿಚಾರಾರ್ಹವಾಗಿರುತ್ತವೆ.

ಒಂದು ದಿವಸ ಕೈಲಾಸಪರ್ವತದಲ್ಲಿ ಇಬ್ಬರು ಗಣಾಧೀಶ್ವರರು ವೈರಾಗ್ಯವಧಿಕವೋ, ಸಂಸಾರವಧಿಕವೋ ಎಂಬುದರ ವಿಷಯವಾಗಿ ವಾಗ್ವಾದ ಮಾಡಹತ್ತಿದರು. ಅವರಲ್ಲಿ ಒಬ್ಬನು ಸಂಸಾರವಧಿಕವೆಂತಲೂ ಇನ್ನೊಬ್ಬನು ವಿರಕ್ತಿ ಅಧಿಕವೆಂತಲೂ ವಿಶೇಷವಾಗಿ ವಾದಿಸಿದರು. ಆದರೆ ಇವುಗಳಲ್ಲಿ ಯಾವದು ಅಧಿಕವೆಂಬುದು ಅವರಿಗೆ ಗೊತ್ತಾಗದೆ ಹೋಗಲು ಅವರು ಶಿವನಲ್ಲಿಗೆ ಬಂದು, ಈ ಎರಡರಲ್ಲಿ ಯಾವದು ಅಧಿಕವೆಂದು ಅವನನ್ನು ಕೇಳಿದರು. ಅದಕ್ಕೆ ಅವನು— ಭೂಲೋಕದಲ್ಲಿ ನನ್ನ ಭಕ್ತರಾದ ದಾಸದುಗ್ಗಳೆಯರಿದ್ದಾರೆ. ಅವರನ್ನು ನೀವು ಕಾಣಿರಿ, ಎಂದು ಹೇಳಿದನು. ಹಾಗೆ ಅವರು ಮಾಹೇಶ್ವರ ರೂಪು ಧಾರಣ ಮಾಡಿ ಅವನ ಮನೆಗೆ ಬಂದರು.

ಆಗ ಉಭಯ ದಂಪತಿಗಳು ತಮ್ಮ ಸಂಸಾರದ ನಿತ್ಯದ ಕಾರ್ಯಗಳಲ್ಲಿ ತೊಡಗಿದ್ದರು. ಹೀಗೆ ತೊಡಗಿದ್ದರೂ ಅವರ ಮನೆಯಲ್ಲಿ

ಶಿವಾನುಭವದ ದಿವ್ಯತೇಜಸ್ಸು ಸ್ಫುರಿಸುತಿತ್ತು. ಆಗ ದುಗ್ಗಳೆಯು ಧಾನ್ಯ ವನ್ನು ಕುಟ್ಟುವದರಲ್ಲಿ ತೊಡಗಿದ್ದಳು. ಆ ಕಾಲದಲ್ಲಿ ದೇವರದಾಸಿಮ ಯ್ಯನು ಅವಳನ್ನು ಕೆಲವೊಂದು ಕಾರ್ಯಕ್ಕೋಸ್ಕರ ಒಳಗಿಂದ ಕರೆದನು. ಆಗ ಅವಳು ಎತ್ತಿದ ಒನಿಕೆಯು ಮೇಲೆ ಅರ್ಧದಾರಿಯಲ್ಲಿದ್ದರೂ ಅವಳು ಅದನ್ನು ಕೆಳಗಿಳಿಸದೆ ಅಲ್ಲಿಯೇ ಬಿಟ್ಟು ಅವನಿದ್ದೆಡೆಗೆ ಬಂದಳು !

ನೆಯ್ಗೆಯ ಕೆಲಸದಲ್ಲಿ ಸ್ತ್ರೀಯರು ಉಂಕೀ ಹೊಡಿ ಮಗ್ಗಕ್ಕೆ ಬೇಕಾಗುವ ಎಳೆಗಳನ್ನು ಸಿದ್ಧಪಡಿಸಬೇಕಾಗುತ್ತದೆ. ಇದು ಸಾಮಾನ್ಯ ವಾಗಿ ಸ್ತ್ರೀಯರು ಮಾಡತಕ್ಕ ಕೆಲಸ. ಆದರೆ ದೇವರದಾಸಿಮಯ್ಯನು ಈ ಕಾರ್ಯವನ್ನು ತನ್ನ ಹೆಂಡತಿಗೋಸ್ಕರ ತಾನೇ ಕೈಕೊಂಡಿದ್ದನು. ಅದನ್ನು ಮಾಡುತ್ತಿರುವಾಗ ಅವನು ದುಗ್ಗಳೆಗೆ— ಎಳೆ ಹರಿಯಿತು. ದೀಪವನ್ನು ತೆಗೆದುಕೊಂಡು ಬಾ ಎಂದೆನ್ನಲು, ಅದು ಹಗಲು ಹೊತ್ತು, ಈಗೇಕೆ ದೀಪಬೇಕು ಎಂದು ಅವಳು ತಿರುಗಿ ನುಡಿಯದೆ ದೀಪವನ್ನು ಹಚ್ಚಿತಂದು ಹರಿದ ಎಳೆಯನ್ನು ಗಂಡನಿಗೆ ತೋರಿಸಿ ಕೊಟ್ಟು ಹೋದಳು ! ಇದರಿಂದ ದುಗ್ಗಳೆ ದಾಸಿಮಯ್ಯರಲ್ಲಿ ಎಷ್ಟು ಪರಸ್ಪರ ಸಹಕಾರವಿತ್ತೆಂಬದು ಗೊತ್ತಾಗುತ್ತದೆ.

ಆಮೇಲೆ ಕೆಲವು ವೇಳೆಯಾದ ಬಳಿಕ ದೇವರದಾಸಿಮಯ್ಯನು ಕುಂಚಿಗೆಯ ತಾರೆಂದು ಅವಳಿಗೆ ಹೇಳಲು, ಅವಳು ತನ್ನ ತಲೆಯ ಮೇಲಿನ ಕುಂಚಿಗೆಯನ್ನೇ ಅವನ ಕಯ್ಯಲ್ಲಿ ಕೊಟ್ಟು ಹೋದಳು.

ದೇವರದಾಸಿಮಯ್ಯ ದುಗ್ಗಳೆಯರು ತಮ್ಮ ಕಾಯಕವನ್ನು ಮತ್ತು ಸಂಸಾರ ಕಾರ್ಯಗಳನ್ನು ಮಾಡುವಲ್ಲಿ ಹೀಗೆ ಪರಸ್ಪರ ಸಹಾಯದಿಂದ ಮತ್ತು ಪ್ರೇಮದಿಂದ ಮಾಡುತ್ತಿರುವದನ್ನು ಆ ಮಹೇಶ್ವರರು ನೋಡಿ ಸಂಸಾರವು ಹೀಗಿದ್ದರೆ .ವಿರಕ್ತಿಗಿಂತ ಸಂಸಾರವೇ ಸುಖವೆಂದು ಅವರಿಗೆ ತೋರಿತು.

ಆಮೇಲೆ ದೇವರದಾಸಿಮಯ್ಯನು ಅವರನ್ನು ಒಳಗೆ ಕರೆದು ಕೊಂಡು ಭೋಜನಕ್ಕೆ ಕುಳಿತನು. ಆದರೆ ಅವರು ಬಡವರು. ಊಟದಲ್ಲಿ ಪಕ್ವಾನ್ನಗಳಿರಲಿಲ್ಲ, ಬಿಸಿಬಿಸಿ ಪದಾರ್ಥಗಳಿರಲಿಲ್ಲ. ದುಗ್ಗ ಳೆಯು ತಣ್ಣಗಿನ ತಂಗುಳ ಅಂಬಲಿಯನ್ನು ತಂದು ಎಲ್ಲರಿಗೂ ನೀಡಿದಳು.

ದೇವರದಾಸಿಮಯ್ಯನು ಅದನ್ನು ಲಿಂಗಾರ್ಪಣೆ ಮಾಡಿ ಅದನ್ನು ಸುರಿದು ಕೊಳ್ಳಹತ್ತಿದನು. ಆಗ ಅವನು ತನ್ನ ಹೆಂಡತಿಗೆ— ಈ ಅಂಬಿಲಿಯು ಬಹಳ ಬಿಸಿಯಾಗಿದೆ. ಅದನ್ನು ಬೀಸಿ ತಣ್ಣಗೆಮಾಡು ಎಂದು ಹೇಳಿದನು. ದುಗ್ಗಳವ್ವೆಯು ಅದನ್ನು ಕೇಳಿ ತಿರುಗಿ ಉತ್ತರ ಕೊಡದೆ ಒಂದು ಮೊರ ವನ್ನು ತಂದು ತಣ್ಣಗಿನ ಆ ಅಂಬಿಲಿಗೆ ಗಾಳಿಯನ್ನು ಬೀಸಹತ್ತಿದಳು!

ಆಗ ಆ ಉಭಯ ಗಣಾಧೀಶ್ವರರು ಸಂಸಾರದಲ್ಲಿದ್ದರೆ ಹೀಗಿರ ಬೇಕು, ಹೀಗಿದ್ದರೆ ಸಂಸಾರವೇ ಅಧಿಕವು, ಎಂದು ತಿಳಿದವರಾಗಿ ದುಗ್ಗಳೆ ದಾಸಿಮಯ್ಯಗಳ ಅಪ್ಪಣೆಯನ್ನು ತೆಗೆದುಕೊಂಡು ಹೋದರು.

ಅವರು ದಾಸಿಮಯ್ಯನ ಮನೆಯಿಂದ ಹೊರಟು ಗೊಗ್ಗೇಶ್ವರ ನೆಂಬ ಇನ್ನೊಬ್ಬ ಶಿವಶರಣನ ಮನೆಗೆ ಹೋದರು. ಅವನೂ ಕೂಡ ಒಬ್ಬ ಶ್ರೇಷ್ಠ ಶಿವಾನುಭವಿಯು, ಲಿಂಗಾಂಗಸಾಮರಸ್ಯ ವೃತ್ತಿಯುವನು, ಬಹು ಶಾಂತಸ್ವಭಾವದವನು. ಆದರೆ ಆ ಮಹೇಶ್ವರರು ಅವನ ಗೃಹ ವನ್ನು ಪ್ರವೇಶಿಸಿದ ಕೂಡಲೆ ಅವನ ಹೆಂಡತಿಯು ಅವರ ಮೇಲೆ ಬೈಗಳ ಸುರಿಮಳೆಯನ್ನು ಸುರಿಸಹತ್ತಿದಳು. ಅವಳ ಬಾಯಲ್ಲಿ ಭಕ್ತ ಜಂಗಮರ ನಿಂದೆ, ಬಂದ ಅತಿಥಿಗಳ ನಿಂದೆ, ಇವುಗಳೇ ತುಂಬಿದ್ದವು. ಆದರೆ ಗೊಗ್ಗೇಶ್ವರನು ಎಷ್ಟು ಮಾತ್ರವೂ ಕೋಪಿಸಲಿಲ್ಲ. ಅವನು ಆ ಮಹೇಶ್ವರರನ್ನು ಯಥಾರೀತಿ ತಾನೇ ಸತ್ಕರಿಸಿ ಕಳಿಸಿಕೊಟ್ಟನು. ಆಗ ಅವರು— ಈ ಗೊಗ್ಗೇಶ್ವರನು ಮಹಾ ಶಿವಶರಣನು. ಆದರೆ ಅವನ ಸಂಸಾರಕ್ಕೂ ದೇವರದಾಸಿಮಯ್ಯನ ಸಂಸಾರಕ್ಕೂ ಎಷ್ಟು ಅಂತರವು! ದೇವರದಾಸಿಮಯ್ಯನ ಸಂಸಾರವು ಕೈಲಾಸಕ್ಕಿಂತಲೂ ಮಿಗಿಲಾದದ್ದು. ಅವನನ್ನು ನಾವು ಕೈಲಾಸಕ್ಕೆ ಕರೆದುಕೊಂಡು ಹೋಗುವದು ಬೇಡ, ಅವನು ಇಲ್ಲಿಯೇ ಇರಲಿ. ಆದರೆ ಗೊಗ್ಗೇಶ್ವರನಂಥ ಶಿವಶರಣನು ಇಂಥ ಸಂಸಾರದಲ್ಲಿ ಇರಬಾರದು. ಅವನನ್ನು ಕೈಲಾಸಕ್ಕೆ ಕರೆದುಕೊಂಡು ಹೋಗಬೇಕೆಂದು ಅವರು ತಮ್ಮ ಕೂಡ ಅವನನ್ನು ಕರೆದುಕೊಂಡು ಹೋದರು!

ಇದರಿಂದ ಸರಿಯಾಗಿ ನಡೆಸಿದ ಕಾಯಕ ಮತ್ತು ಉತ್ತಮ ಗೃಹಿಣಿ ಇವುಗಳು ವಿರಕ್ತಿಗಿಂತಲೂ ಶ್ರೇಷ್ಠವಾದವುಗಳೆಂದು ಶಿವಶರಣರು ಭಾವಿ ಸುತ್ತಿದ್ದುದು ತಿಳಿಯುತ್ತದೆ.

ಕೆಲವು ದಿವಸಗಳಾದ ಮೇಲೆ ದಾಸಿಮಯ್ಯ ದುಗ್ಗಳೆಯರಿಗೆ ಒಬ್ಬ ಮಗನು ಹುಟ್ಟಿದನು. ಅವರು ಅವನಿಗೆ ರಾಮೇಶ್ವರನೆಂಬ ಹೆಸರನ್ನಿಟ್ಟರು.

ಮುಂದೆ ಉಭಯ ದಂಪತಿಗಳ ಕೀರ್ತಿಯು ನಾಡಿನಲ್ಲಿ ದಿನೇ ದಿನೇ ಹೆಚ್ಚುತ್ತಲೇ ನಡೆಯಿತು. ಇದು ಅವರು ಕೈಕೊಂಡ ಧರ್ಮೋದ್ಧಾರ ಕಾರ್ಯಗಳ ಪರಿಣಾಮವಾಗಿರುತ್ತದೆ. ಬಸವೇಶ್ವರನು ತನ್ನ ವಚನಗಳಲ್ಲಿ ಅವರಿಬ್ಬರ ಅನೇಕ ಬಗೆಯಾಗಿ ಸ್ತುತಿಸಿದ್ದಾನೆ. ಅವರ ಅತುಲವಾದ ಭಕ್ತಿ, ಅವರ ನಿಜಾಚರಣೆ ಅವರ ಶಿವಾನುಭವವನ್ನು ಅವನು ತುಂಬ ಹೊಗಳಿದ್ದಾನೆ. ಅವನ ಶಬ್ದಗಳಿಂದಲೇ ನಾವು ದಾಸಿಮಯ್ಯನ ಯೋಗ್ಯತೆಯನ್ನು ಇಲ್ಲಿ ವಿವರಿಸುವದು ವಿಹಿತವೆಂದು ನಮಗೆ ತೋರುತ್ತದೆ.

ದೇವರದಾಸಿಮಯ್ಯನು ೧೦೦೮ ರಿಂದ ೧೦೪೨ ರ ವರೆಗೆ ಆಳಿದ ಜಯಸಿಂಹರಾಜನ ಕಾಲದಲ್ಲಿ, ಅಂದರೆ ಬಸವೇಶ್ವರನಕಿಂತಲೂ ಮೊದಲು ೧೦೦-೧೫೦ ವರ್ಷಗಳ ಹಿಂದೆ ಪ್ರಸಿದ್ಧಿಗೆ ಬಂದಿದ್ದನೆಂಬುದನ್ನು ನಾವು ಇಲ್ಲಿ ಲಕ್ಷಿಸುವದು ಅವಶ್ಯವಿದೆ. ಆದ್ದರಿಂದ ಬಸವೇಶ್ವರನು ದೇವರ ದಾಸಿಮಯ್ಯನು ತನ್ನಕಿಂತಲೂ ಮೊದಲಿನವನಾಗಿ ಪ್ರಸಿದ್ಧಿಗೆ ಬಂದಿದ್ದರಿಂದ ಬಸವೇಶ್ವರನು ಉಚ್ಚ್ವಮನಸ್ಕನಾಗಿ ಅವನನ್ನು ತನ್ನ ವಚನಗಳಲ್ಲಿ ಬಹಳ ಹೊಗಳಿದ್ದಾನೆ. ಇದು ಅವನ ಉದಾರ ಸ್ವಭಾವಕ್ಕೆ ಅನುಗುಣವಾದದ್ದು.

ಬಸವೇಶ್ವರನು ಭಕ್ತಿ ಎಂದರೆ ಎಂತಹದೆಂದು ತನಗೆ ತಾನೇ ಕೇಳಿಕೊಂಡು ಅದು ದಾಸಯ್ಯ ಮಾಡಿದಂತಹದೆಂದು ತನ್ನ ವಚನದಲ್ಲಿ ಹೇಳಿದ್ದಾನೆ!

'ಭಕ್ತಿ ಎಂತಹದಯ್ಯ? ದಾಸಯ್ಯ ಮಾಡಿದಂತಹದಯ್ಯ. ಭಕ್ತಿ ಎಂತಹದಯ್ಯ? ಶಿರಿಯಾಳ ಮಾಡಿದಂತಹದಯ್ಯ. ಭಕ್ತಿ ಎಂತಹದಯ್ಯ? ಸಿಂಧುಬಲ್ಲಾಳ ಮಾಡಿದಂತಹದಯ್ಯ. ಭಕ್ತಿ ಎಂತಹದಯ್ಯಾ? ಕೂಡಲಸಂಗಮದೇವ ನೀ ಬಾಣನ ಬಾಗಿಲ ಕಾಯ್ದಂತಹದಯ್ಯ. (ನಂ॥ ೪೨೭)

ಈ ಪ್ರಕಾರ ಬಸವೇಶ್ವರನು ದೇವರದಾಸಿಮಯ್ಯನನ್ನು ಹೊಗಳುತ್ತ ಅವನನ್ನು ಸಿರಿಯಾಳ, ಸಿಂಧುಬಲ್ಲಾಳ, ಬಾಣಾಸುರ ಇಂಥ ಮಹಾನುಭಾವರ ಪಂಙ್ತಿಯಲ್ಲಿ ಸೇರಿಸಿ ಬಿಟ್ಟಿದ್ದಾನೆ.

# BOOK-POST.

R. N. B. 2554

*From,*
**Shivanubhava
Office
Bijapur**

ಶ್ರೀ. [illegible]
ನವಲ್ಲಪ್ಪ ಸಿದ್ದಪ್ಪ ಬಡೇವಿ
ಪೋ. ಬನಹಟ್ಟಿ
ಸ್ಟೇ. ಕುಡಚಿ
(M. S. M. Ry.)







ಈ ಪತ್ರಿಕೆಯನ್ನು ಇದರ ಸಂಪಾದಕರಾದ ... ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವ... ಮನೆ ನಂ. ೧೩೬೮ ರಲ್ಲಿರುವ ತಮ್ಮ ... ನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.




ವರ್ಷ ೨೧ ] ಮೇ-ಜೂನ ೧೯೪೭ [ ಸಂಚಿಕೆ ೮-೯

## ವಿಷಯಾನುಕ್ರಮಣಿಕೆ.

೧ ವೀರಶೈವ ಸಮಾಜದ ಏಳ್ಗೆ— ಶ್ರೀ ಉಪಾಧ್ಯಾಯ ಮ. ಮಲ್ಲಪ್ಪ
ಕನ್ನಡ ಜಾಣ,-ಕಿರುಗಾವಲು. ೧೫೭

೨ ಕಿತ್ತೂರ ಕಿಲ್ಲೆಯ ನೋಟ— ಶ್ರೀ ಆನಂದ ಕವಿಗಳು ಕುರಗುಂದ ೧೬೦

೩ ಲೋಕಗಳ ವಿಚಾರ— ಶ್ರೀ. ಸಾಸನೂರ ಮಡಿವಾಳಪ್ಪನವರು ೧೬೪

೪ ಮಹಾನುಭಾವಿ ಬಸವಣ್ಣನ ಸ್ತುತಿ—ಮ. ರಾ. ರಾ. ಶಿವಪ್ಪ ಅಡಿವೆಪ್ಪ
ತುಪ್ಪದ ಮು. ಗದಗ ೧೮೭

೫ ಶಿವಶರಣರ ಚರಿತ್ರೆಗಳು ಭಾಗ—೩. ೨೯—೩೭
—ರಾ॥ ಬ॥ ಫ. ಗು. ಹಳಕಟ್ಟಿ ವಿಜಾಪುರ

(೧) ದೇವರದಾಸಿಮಯ್ಯ.

## ವಾಚಕರಲ್ಲಿ ವಿನಂತಿ.

ಪ್ರೆಸ್ಸಿನ ವಿಶೇಷ ಕೆಲಸಗಳ ಮೂಲಕ ಶಿವಾನುಭವ ಮೇ ಮತ್ತು ಜೂನ ತಿಂಗಳುಗಳ ಸಂಚಿಕೆಗಳನ್ನು ಸಕಾಲಕ್ಕೆ ಹೊರಡಿಸುವುದಕ್ಕಾಗಲಿಲ್ಲ. ಇದಕ್ಕಾಗಿ ವಾಚಕರು ಕ್ಷಮಿಸಬೇಕೆಂದು ನಮ್ಮ ವಿನಂತಿ ಇದೆ. ಈಗ ಮೇ ಮತ್ತು ಜೂನ ತಿಂಗಳುಗಳ ಸಂಯುಕ್ತ ಸಂಚಿಕೆಯನ್ನು ಹೊರಡಿಸಿದ್ದು ಇದರಿಂದ ಕಡಿಮೆ ಬಿದ್ದ ಪುಟಗಳನ್ನು ಮುಂದೆ ಕೂಡಿಸಿಕೊಳ್ಳುವೆವು. ಆಕಸ್ಮಾತ್ತಾಗಿ ಸಂಭವಿಸಿದ ಈ ತೊಂದರೆಗಾಗಿ ವಾಚಕರು ಮನ್ನಿಸಬೇಕಾಗಿ ವಿನಂತಿ ಇದೆ.

ಮ್ಯಾನೇಜರ— **ಶಿವಾನುಭವ**
ವಿಜಾಪುರ.

# ಶಿವಾನುಭವ

ವರ್ಷ ೨೧ | ಮೇ-ಜೂನ ೧೯೪೭ | ಸಂಚಿಕೆ ೮-೯


## ವೀರಶೈವ ಸಮಾಜದ ಏಳ್ಗೆ.


(ಲೇಖಕರು:—ಶ್ರೀ ಉಪಾಧ್ಯಾಯ ಮ. ಮಲ್ಲಪ್ಪ ಕನ್ನಡ ಜಾಣ.
ಜನತಾ ಜ್ಞಾನ ಪ್ರಚಾರಕ-ಕಿರುಗಾವಲು)


ವೀರಶೈವ ಮತವು ಪುರಾತನವು, ಗಣ್ಯವಾದುದು. ಆದಿಯಿಂದಲೂ ಇವರ ಪ್ರಭೆಯು ಎಲ್ಲರನ್ನೂ ಸೇರಿದೆ. " ಲಿಂಗಾಂಗಶೋಭಾವೇಶೋಕ್ತಮಾರ್ಗೈಕನಿಷ್ಠಾಃ ಲಿಂಗಾಂಗಸಾಮರಸ್ಯಾಚ್ಚ ಶರೀರೆ ಲಿಂಗಧಾರಣಾತ್ ನಿಯಮೋನೈವ ಧೃತ್ವಾ ತೇ ಮುಕ್ತಾಸ್ಸಂಸಾರ ಬಂಧನಾತ್ " ಎಂಬುದು ಹಂಸೋಪನಿಷತ್ತಿನಲ್ಲಿದೆ. *Religion is the supreme science of life, the science of the spirit* ಎಂದು ವಾಸ್ವಾನಿಯವರು ಹೇಳಿದ್ದಾರೆ. *There is only one universal religion, the religion of Love* ಎಂದು ಬಿಷಪ್ ಬ್ರೂಕ ಅವರು ಹೇಳಿರುವರು. ಇದರ ಸರ್ವ ಸಾರಾರ್ಥವು ವೀರಶೈವ ಮತತತ್ವದಲ್ಲಿ ಅಡಗಿದೆ. ಹಿಂದೆ ಹಲವಾರು ಮಹಾ ವಿಭೂತಿಗಳು ಇದನ್ನು ಸಾಕ್ಷಾತ್ಕರಿಸಿದ್ದಾರೆ. ವೀರಶೈವ ಧರ್ಮವು ಕೇವಲ ವೈಯಕ್ತಿಕ ವೈಶಿಷ್ಟ್ಯವನ್ನು ಸಾರುವದಕ್ಕಾಗಲೀ, ಬರೀ ವ್ಯಕ್ತಿಯೊಬ್ಬನ ಮುಕ್ತಿಯನ್ನು ಸಾಧಿಸುವದಕ್ಕಾಗಲೀ ಜನ್ಮ ತಾಳಿಲಿಲ್ಲವು. ವಿಶ್ವಧರ್ಮವನ್ನೇ ಗುರಿಯಾಗಿಟ್ಟುಕೊಂಡು ಬಾಳಿದ, ಪೆಸರ್ವೆತ್ತಿದ ಧರ್ಮವು. *Dharma is the innermost nature, the essence, the implicit truth of all things. Dharma is the ultimate purpose that is working in our self* ಎಂದು ವಿಶ್ವಕವಿ ರವೀಂದ್ರರು ಹೇಳಿರುವರು.

ಸ್ಥೂಲ ಸೂಕ್ಷ್ಮವಾಗಿ ವೀರಶೈವ ಧರ್ಮವನ್ನು ಅವಲೋಕಿಸಿದರೆ ಈ ತತ್ತ್ವವನ್ನು ಕಾಣಬಹುದು. ಉಪನಿಷದಾಚಾರ್ಯರಾದ ಮಹರ್ಷಿಗಳು ಭಗವಂತನಿಗೆ ಎಂತಹ ಅನುಪಮ ರೂಪನ್ನು ತಮ್ಮ ಭಾವನೆಯಲ್ಲಿ ಕೊಟ್ಟಿದ್ದಾರೋ, ನಮ್ಮ ಶಿವಶರಣರೂ ಕೂಡ ಅಂತಹ ದಿವ್ಯ ರೂಪನ್ನೇ ಭಗವಂತನಿಗೆ ಕೊಟ್ಟು ವೀರಶೈವ ಮತದ ಉತ್ಕೃಷ್ಟತೆಯನ್ನು ಬೆಳಗಿದ್ದಾರೆ. ಆದಿಯಿಂದ ಈ ಮತದಲ್ಲಿ ಹಲವಾರು ದಾರ್ಶನಿಕರು, ಮಹಾಕವಿಗಳು, ಸಿದ್ಧಾಂತಿಗಳು, ರಾಜನೀತಿಜ್ಞರು, ಮಹಾನುಭಾವರು, ಸಮಾಜ ಸುಧಾರಕರು, ಜನ್ಮತಾಳಿ ಯಶೋವಂತರಾದರು ಆರ್ಯರ ತತ್ತ್ವಜ್ಞಾನ, ದ್ರಾವಿಡರ ಭಕ್ತಿ ಮಾರ್ಗ, ಜೈನರ ಅಹಿಂಸಾ ಅರಿವು, ಬೌದ್ಧರ ಸಮತಾವಾದ, ಸಿಕ್ಕರ ಧರ್ಮನಿಷ್ಠೆ ಇತ್ಯಾದಿ ಸಕಲ ಮತ ಧರ್ಮಸಾರ ವಿಚಾರಗಳು ಲಿಂಗವಂತ ಸಂಸ್ಕೃತಿಯಲ್ಲಿ ಅಡಕವಾಗಿವೆ. ಸಂಸ್ಕೃತಿ ಎಂಬುವನ್ನು ಕನ್ನಡದಲ್ಲಿ ಹುಟ್ಟುಗುಣವೆಂದೂ, ಇಂಗ್ಲೀಷಿನಲ್ಲಿ *Culture* ಎಂದೂ ಹೇಳುತ್ತೇವೆ. ಒಂದು ನಾಡಿನ ಜನರಿಗಾಗಲೀ, ಒಂದು ಧರ್ಮದ ಮಂದಿಗಾಗಲೀ ಒಂದು ಸಂಸ್ಕೃತಿಯು ಇದ್ದೇ ಇರುತ್ತದೆ. ಅಂತೆಯೇ ಲಿಂಗವಂತರಿಗೂ ಒಂದು ಸಂಸ್ಕೃತಿಯಿದೆ. ಚಿನ್ನದ ಗುಣವನ್ನು ಬಣ್ಣದಿಂದ, ಹೂವಿನ ಗುಣವನ್ನು ಮಧುರ ವಾಸನೆಯಿಂದ, ಹಸುವಿನ ಗುಣವನ್ನು ಹಾಲಿನಿಂದ, ಗುರುವಿನ ಗುಣವನ್ನು ಶೀಲದಿಂದ, ಕವಿಯ ಮಟ್ಟವನ್ನು ಶೈಲಿಯಿಂದ ಶಿಲ್ಪದ ಗುಣವನ್ನು ಹೃದಯಂಗಮತೆಯಿಂದ ಗೊತ್ತುಮಾಡುವಂತೆ ಜನತೆಯ ಮಟ್ಟವನ್ನು ಅದರ ಸಂಸ್ಕೃತಿಯಿಂದ ಗೊತ್ತುಮಾಡಬೇಕಾಗುತ್ತದೆ. ವೀರಶೈವ ಮತಸ್ಥನಿಗೆ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರವೆಂಬ ಅಷ್ಟಾವರಣಗಳೂ, ಲಿಂಗಾಚಾರ, ಸದಾಚಾರ, ಭೃತ್ಯಾಚಾರ, ಶಿವಾಚಾರ, ಗಣಾಚಾರ ಎಂಬ ಪಂಚಾಚಾರಗಳೂ, ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಟ್‌ಸ್ಥಲಗಳ ಜ್ಞಾನವೂ, ಲಿಂಗಾಂಗ ಪದ ವಾಚ್ಯರಾದ ಶಿವಜೀವರ ಐಕ್ಯವಾದ ಲಿಂಗಾಂಗ ಸಾಮರಸ್ಯವೂ ಇರಬೇಕು. ದೀಕ್ಷಾ ಪರನಾಗಿ, ಕ್ರಿಯಾ ವಂತನಾಗಿ, ಧರ್ಮನಿಷ್ಠನಾಗಿ ಜೀವಿಸಬೇಕು. "ಲಿಂಗಧಾರೀ ಸದಾ ಶುದ್ಧಃ ನಿಜಲಿಂಗಂ ಮನೋರಮಂ ಅರ್ಚಯೇದ್ಗಂಧಪುಷ್ಪಾದ್ಯೈಃ ಕರಪೀಠೆ ಸಮಾಹಿತಃ ಬಾಹ್ಯಪೀಠಾರ್ಚನಾದೇತತ್ಕರಪೀಠಾರ್ಚನಂ ವರಂ ಸರ್ವೇಷಾಂ ವೀರಶೈವಾನಾಂ ಮುಮುಕ್ಷೂಣಾ ನಿರಂತರಂ". ಏವಂಚ ಮೋಕ್ಷಸಾಧನೆಗೆ ಲಿಂಗೋಪಾಸನೆಯೇ ಆಧಾರವು. ಲಿಂಗೋಪಾಸನೆಗೆ ಭಕ್ತಿಯೇ ಬೀಜವು.

ವೀರಶೈವ ಮತವೆಂಬ ದೇಹಕ್ಕೆ ಸಂಸ್ಕಾರ, ವಿದ್ಯೆ, ಆಚಾರ, ಸಿದ್ಧಾಂತ, ಜ್ಞಾನವೆಂಬ ಆಹಾರವು ಪುಷ್ಕಳವಾಗಿ ಸಿಕ್ಕಬೇಕು. ನೈಜ ಪುರುಷಾರ್ಥವನ್ನು ಪಡೆದು ಮುಕ್ತಿಶೀಲರಾಗಬೇಕು.

ವೀರಶೈವ ಸಮಾಜವು ಹಿಂದೆ ಯಾವುದರಲ್ಲಿಯೂ ಕಿರಿದಾಗಿರಲಿಲ್ಲ. ಹಿರಿದಾಗಿತ್ತು. ಮಣ್ಣನ್ನು ಹೊನ್ನಾಗಿ ಹಳ್ಳಿಯನ್ನು ದಿಳ್ಳಿಯನ್ನಾಗಿ ಮಾಡಿದ ಮಹಾಪುರುಷರು ನಮ್ಮ ಸಮಾಜದಲ್ಲಿ ಹಲವಾರು ಮಂದಿಯಿದ್ದರು. ನಮ್ಮ ಹಿಂದಿನವರು ಹೇಡಿಗಳಲ್ಲ. ಮಹಾಶೂರರು. ಜಿಪುಣರಲ್ಲ ಮಹಾದಾನಿಗಳು ಸೋಮಾರಿಗಳಲ್ಲ, ಅತ್ಯಂತ ಕ್ರಿಯಾಪುರುಷರು. ಬರೀ ವಚನಶೂರರಲ್ಲವು, ಕಾರ್ಯಶೂರರು ಎಂಬುದು ನಮ್ಮ ಸಮಾಜದ ಇತಿಹಾಸದ ಸಿಂಹಾವಲೋಕನದಿಂದ ಅರಿವಾಗುವುದು. ಬೆಳವಾಡಿ ಮಲ್ಲಮ್ಮ, ಕಿತ್ತೂರ ಚೆನ್ನಮ್ಮ, ಕಲಿ ಭೀಮ ಶಿವಪ್ಪ, ಮಹಾದಾನಿ ಬಸವಣ್ಣ, ಯೋಗಿನಿ ಅಕ್ಕಮಹಾದೇವಿ, ಲಿಂಗಾಯತ ಅರಸರು ಇತ್ಯಾದಿ ಅವರೇ ಸಮಾಜದ ಬಲಗಟ್ಟಿನ ಭದ್ರ ಕೀಲಕಗಳಾಗಿದ್ದರು. ಕಲಿಗಳ ಕೋಡು, ದಾನಿಗಳ ಜೋಡು, ಉದ್ಯೋಗಶಾಲಿಗಳ ಜಾಡು, ನಮ್ಮ ನಾಡಿನ ಓಡು, ನಮ್ಮ ಸಮಾಜವು ಧರ್ಮದಾನಿಗಳ ನಿಧಿಯು, ಉದಾರಿಗಳ ಉದರವು, ತ್ಯಾಗಿಗಳ ಕಂಡವು, ಯೋಗಿಗಳ ಯಾನವು, ವಿದ್ಯಾವಂತರ ನಿಧಿ ನಿಕ್ಷೇಪವು, ಕಲಿಗಳ ಕಣ್ಣು, ವೀರರ ವಿಶಾಲೋದ್ಯಾನವನವು, ಆಚಾರಶೀಲರ ಆನಂದಮಠವು, ವಿಚಾರಪರರ ದೇಹಗೇಹವು, ಪರಮಪವಿತ್ರವಾದ ಭಾರತಭೂಮಿಯಲ್ಲಿ ವೇದಾಗಮಾವಲಂಬಿಗಳಾದ ಮತಗಳಲ್ಲಿ ಪ್ರಸಿದ್ಧ ಮತವು, ವೀರಶೈವ ಮತವು. ವೀರಶೈವ ಮತವು ಅತ್ಯಂತ ಪ್ರಾಚೀನವು ಮತ್ತು ಸನಾತನವು ಜಗತ್ ಪ್ರಸಿದ್ಧರಾದ ಸರ್ ಜಾನ್ ಮಾರ್ಶಲ್ ಅವರೂ ಸಹ ವೀರಶೈವ ಮತವು ಅನಾದಿಯೆಂದು ಹೇಳಿದ್ದಾರೆ. ಪ್ರಾಚೀನ ಗ್ರಂಥಗಳ ಮತ್ತು ಪ್ರಾಚೀನ ತತ್ವಗಳ ಶೋಧನೆಯಿಂದ ವೀರಶೈವ ಮತವು ಅತ್ಯಂತ ಪ್ರಾಚೀನವಾದುದು. ಇತಿಹಾಸಜ್ಞರಿಗೆ ಈ ಮತದ ಉತ್ಪತ್ತಿಕಾಲವನ್ನು ಕಂಡು ಹಿಡಿಯುವುದು ಅಸಾಧ್ಯವು ಎಂದು ಶ್ರೀಯುತ ರಾಮಚಂದ್ರದೀಕ್ಷಿತರ್ *M. A.* ಅವರು ಹೇಳಿರುವರು. ವೀರಶೈವರಿಗೆ ಪರಮ ಪಾವನವು ಮತ್ತು ಪಂಚಪ್ರಾಣವು ಲಿಂಗವು. ಲಿಂಗದ ಮಹಿಮೆಯು ಅಸದಳವು. ಪ್ರಾಚೀನ ತಪಸ್ವಿಗಳಿಗೂ ಸಹ ಇದು ಎಟುಕಲಿಲ್ಲ, ಸಿಗಲಿಲ್ಲ. ಲಿಂಗಪೂಜಾ ಪ್ರಭಾವವು ಮಹಾಪುಣ್ಯವನ್ನು ನೀಡುವುದು.

ಇಂದು ನಾವು ಜೀವಿಸುತ್ತಿರುವುದು ನಾಗರೀಕತೆಯ ಉಚ್ಛ್ರಾಯಕಾಲದಲ್ಲಿ, ಅತ ಏವ ನಾಡಿನ ಐಕ್ಯವೇ ನಮ್ಮ ಐಕ್ಯವು ಎಂದು ನಾವು ತಿಳಿದು ನಾಡಿನ ಅಭ್ಯುದಯಕ್ಕೆ ಟೊಂಕಕಟ್ಟಿ ನಿಂತು ದುಡಿಯಬೇಕು. ವೈಯಕ್ತಿಕವಾಗಿ ದುಡಿಯುವುದಕ್ಕೆ ಬದಲು ಸಾಮೂಹಿಕವಾಗಿ ದುಡಿಯುವುದೇ ಮೇಲು. ಸಮಾಜದಲ್ಲಿ ವ್ಯಕ್ತಿಗಳು ವಿವೇಕಿಗಳಾಗಿಯೂ ವಿದ್ಯಾವಂತರಾಗಿಯೂ ವಿಚಾರಶೀಲರಾಗಿಯೂ, ವಿಚಕ್ಷಣಪರರಾಗಿಯೂ, ವಿರಾಗಿಗಳಾಗಿಯೂ, ವಿಧರ್ಮರಹಿತರಾಗಿಯೂ ಇರಬೇಕು. ಒಂದು ಸಮಾಜವು ಅಭಿವೃದ್ಧಿಗೆ ಬರಬೇಕಾದರೆ ಅಲ್ಲಿ ವಿದ್ಯಾವಂತರೂ ಕಾರ್ಯಶೀಲರೂ, ತ್ಯಾಗಿಗಳೂ, ಶ್ರೀಮಂತರೂ, ಧೀಮಂತರೂ, ಕಲಾವಿದರೂ, ಸ್ವಾನುಭವಿಗಳೂ, ಬುದ್ಧಿವಂತರೂ, ಪ್ರತಿಭಾಶಾಲಿಗಳೂ ಇರಬೇಕು. ಇಂದಿನ ವಿಶಾಲ ಜಗತ್ತಿನಲ್ಲಿ ಕೂಪ ಮಂಡೂಕಜ್ಞಾನವನ್ನು ತೊಲಗಿಸಬೇಕು. ಕಾಲಚಕ್ರದ ಚಲನಕ್ಕೆ ಅನುಗುಣವಾಗಿ ನಮ್ಮ ಮತನಿಯಮಗಳನ್ನು ಬಿಡದೆ ಪಾಲಿಸಿಕೊಂಡು ಹೋಗಬೇಕು. ಪಾರಮಾರ್ಥಿಕ ಲೌಕಿಕ ವಿದ್ಯೆಗಳೆರಡನ್ನೂ ಕಲಿತುಕೊಳ್ಳಬೇಕು. ಪಾರಮಾರ್ಥಿಕ ವಿದ್ಯಾಸಂಪತ್ತಿನಲ್ಲಿ ಶಿವಶರಣರು ಅಗ್ರಗಣ್ಯರು. ಎಂದು ಬೇಕೆಂದರೆ ಅಂದೇ ಪಾರಮಾರ್ಥಿಕ ತಿಳಿವಿನ ಕಾಗರ್ಾಲವನ್ನು ಶಿವಶರಣರು ತೋರಿಸುತ್ತಿದ್ದರು. ಇಂಥಹವರನ್ನು ಪಡೆದ ನಾವೇ ಸುಕೃತಶಾಲಿಗಳು. ಇಂದಿನ ಮಕ್ಕಳೇ ಮುಂದಿನ ಜನಾಂಗವು. ಅತ ಏವ ಅವರಿಗೆ ಯೋಗ್ಯವಾದ ಮಾರ್ಗದಲ್ಲಿ ಶಿಕ್ಷಣ ಕೊಡುವುದು ನಮ್ಮ ಕರ್ತವ್ಯ. ಶಿಕ್ಷಣ ಪ್ರಭೆಯಿಂದ ಅವರು ಹೊಳಪುಗಟ್ಟುವರು. ಇಂದು ಹಲವಾರು ವಿದ್ಯಾರ್ಥಿಗಳು ಅನ್ನವಿದ್ದರೆ ಬಟ್ಟೆಯಿಲ್ಲದೆಯೂ ಬಟ್ಟೆಇದ್ದರೆ ಅನ್ನವಿಲ್ಲದೆಯೂ ಇವೆರಡೂ ಇದ್ದು ಅರ್ಥವಿಲ್ಲದೆಯೂ ಇವೆಲ್ಲವೂ ಇದ್ದು ಸನ್ನಿವೇಶ ಸಹವಾಸವು ಉತ್ತಮರೀತಿಯದು ಅಲ್ಲದೆಯೂ ಮುಂದೆ ಬರಲು ಹಾದಿಕಾಣದೆ ಕುರುಡರಾಗಿ ಉಳಿಯುತ್ತಿರುವರು. ವಿದ್ಯಾರ್ಥಿನಿಲಯದ ಸ್ಥಾಪನೆಯಿಂದ ಇದು ಕಾಲು ಹಾಕದ ಹಾಗೆ ಮಾಡಲು ಅವಕಾಶವಿದೆ. ಸಕಲರ ಸಹಾಯವು ಇದಕ್ಕೆ ಅಗತ್ಯವು. ನಮ್ಮ ನಾಡು ಕೊಡುಗೈಯ ಒಡೆಯರ ನಾಡು, ಉದಾರಶಾಲಿಗಳ ಬೀಡು, ವಿಶಾಲಹೃದಯಿಗಳ ಗೂಡು. ಹಣದ ಸದ್ವಿನಿಯೋಗದಿಂದ ನಾವು ನಮ್ಮ ಜನ್ಮ ಸಾರ್ಥಕ್ಯವನ್ನು ಪಡೆಯುತ್ತೇವೆ. ಮಹಾತ್ಮ ಬಸವೇಶ್ವರರ ಸೂಕ್ತಿ ಇದು. "ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಕಾರ್ಯಕ್ಕೆ ಸಲ್ಲುವುದೇ? ನಾಯಿಯ ಹಾಲು ನಾಯಿಯ ಮರಿಗಲ್ಲದೆ ಪಂಚಾಮೃತಕ್ಕೆ ಸಲ್ಲುವುದೇ? ಎಮ್ಮ ಕೂಡಲ ಸಂಗನ ಶರಣರಿಗೆ ಸಲ್ಲದ ಅರ್ಥ ವ್ಯರ್ಥ

ಕಂಡಯ್ಯ" ಮುತ್ತುಗದ ಮರದಲ್ಲಿ ಹೂವಿದ್ದರೆ ಹಂದಿಯ ಕೆಚ್ಚಲಲ್ಲಿ ಹಾಲು ಇದ್ದರೆ ಅದನ್ನು ಯಾರು ತಾನೇ ಬಯಸುವರು?

ಜನಗಳನ್ನು ಮೆಚ್ಚಿಸಿದರೆ ಜನಾರ್ದನನನ್ನು ಮೆಚ್ಚಿಸಿದಂತೆಯೇ ಸರಿ. "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ ಕೂಡಲ ಸಂಗಮದೇವಾ" ಎಂಬುದಾಗಿ ಹೇಳಿರುವ ವಿಶ್ವ ಪ್ರೇಮಿ ಬಸವಣ್ಣನವರ ವಚನದಂತೆ ನಿಮ್ಮ ದೇಹವನ್ನು ಜಗದೀಶ್ವರನ ಭಕ್ತರಿಗೆ ಸಮರ್ಪಿಸಿರಿ. ಈ ಸಮರ್ಪಣೆಯಿಂದ ಜಗದೀಶ್ವರನಿಗೆ ಪ್ರೀತಿಯಾಗಿ ನಿಮ್ಮ ಇಷ್ಟಾರ್ಥವನ್ನು ಸಲಿಸುವನು. ಭಗವಂತನು ಭಕ್ತನ ಅಧೀನನು. ಏವಂಚ ಭಕ್ತನ ಶ್ರೇಯಸ್ಸೇ ಭಗವಂತನ ಶ್ರೇಯಸ್ಸಾಗಿರುತ್ತದೆ. ನಮ್ಮ ಕೈ ಮುಂದಾದಷ್ಟು ನಮ್ಮ ಧನ ವೃದ್ಧಿಯು ಮಿಗಿಲಾಗುತ್ತದೆ. ವಿದ್ಯಾವಂತರ ತ್ರಿಕರಣಪೂರ್ವಕ ಕ್ರಿಯೆಯು ಮಿಗಿಮಿಗಿಲಾಗಬೇಕು. ಅಂದೇ ಸಮಾಜದ ಉನ್ನತಿಯು ಊರ್ಜಿತವಾಗಿ ನೆಲೆಯಾಗುತ್ತದೆ.

ಕಲಿಯುಗದಲ್ಲಿ ಸಂಘಶಕ್ತಿಯು ಪ್ರಧಾನವು. ಹನಿಗೂಡಿದರೆ ಹಳ್ಳ, ತೆನೆಗೂಡಿದರೆ ಭತ್ತ ಎಂಬಂತೆ, ಹತ್ತಾರು ಜನಗಳ ಕಾರ್ಯಮಿಲನದಿಂದ ಸಮಾಜದ ಏಳಿಗೆಗೆ ಮಾರ್ಗವಿರುತ್ತದೆ. ಸಾವಿರಾರು ಇರುವೆಗಳು ಸೇರಿ ತಮ್ಮ ಕೈಯ್ಯಲ್ಲಾಗದ ಕೆಲಸವನ್ನು ಸಾಧಿಸುತ್ತಿವೆ. ಹಿಂದೆ ಮಹಿಷಾಸುರನ ಸಂಹಾರಕ್ಕೆ ಈ ಸಂಘ ಶಕ್ತಿಯನ್ನರಿತುಕೊಂಡು ತಮ್ಮ ಕಾರ್ಯ ಭಾರವನ್ನು ಮುಂಮುವರಿಸಿದರು. ನಮ್ಮ ಶಿವಶರಣರೂ ಕೂಡ ಸಂಘ ಶಕ್ತಿಯನ್ನು ಅರಿತುಕೊಂಡು ಅನುಭವ ಮಂಟಪವನ್ನು ಏರ್ಪಡಿಸಿ ಧರ್ಮತತ್ವಗಳನ್ನು ಪ್ರಸರಿಸಿದರು. ಆ ಅನುಭವ ಮಂಟಪಕ್ಕೆ ಇಂದು ವಿಶ್ವದಲಿಯೇ ಒಂದು ಸ್ಥಾನವಿದೆ. ವಿದ್ಯಾರ್ಥಿನಿಲಯ, ಪುಸ್ತಕ ಭಂಡಾರ, ವಾಚನಾಲಯ, ಅನಾಥ ರಕ್ಷಕ ನಿವಾಸ, ಧರ್ಮತತ್ವಗಳ ಶಿಕ್ಷಣ ಮಂದಿರ, ಇವುಗಳನ್ನು ಏರ್ಪಡಿಸಿ ಸಮಾಜವನ್ನು ಉನ್ನತಿಗೆ ತರಬೇಕು. ಸಮಾಜದ ಅಭ್ಯುದಯವೇ ತನ್ನ ಅಭ್ಯುದಯವೆಂದು ಅರಿತುಕೊಂಡು ಕಾರ್ಯ ಮಾಡಬೇಕು. "ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ. ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ. ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ ನಮ್ಮ ಕೂಡಲ ಸಂಗಮದೇವ" ಎಂಬುದಾಗಿರುವ ಭಕ್ತಿ ಭಾಂಡಾರಿಯ ವಚನವು

ನೆನಪಿನಲ್ಲಿರಲಿ. ವ್ಯಕ್ತಿದ್ವೇಷವನ್ನು ದೂರೀಕರಿಸಿ ಸಮಾಜ ಸುಧಾರಣೆಗೆ ಯತ್ನಿಸಿರಿ. ಹತ್ತುಜನಕ್ಕಿಂತ ನಾನು ಹೆಚ್ಚಲ್ಲ ಎಂಬ ಮನೋಭಾವನೆಯಿಂದ ಪ್ರತಿಯೊಬ್ಬ ಸಮಾಜ ಸೇವಕನೂ ಕೆಲಸ ಮಾಡಬೇಕು. ಸಮಾಜದ ಕಟ್ಟು ನಿಯಮಗಳಿಗೆ ತಲೆಬಾಗುವುದಕ್ಕೆ ಎಷ್ಟು ಅಧಿಕಾರ ವಿರುತ್ತದೆಯೋ ಅಷ್ಟೇ ಅಧಿಕಾರವು ನಿಯಮವನ್ನು ಸುಧಾರಿಸಲು ಇದೆ.

"ಎನಗಿಂತ ಕಿರಿಯರಿಲ್ಲ. ಶಿವಭಕ್ತಗಿಂತ ಹಿರಿಯರಿಲ್ಲ. ಶಿವಭಕ್ತರ ನೋವೇ ಆದೇ ಲಿಂಗದ ನೋವು. ಕೈ ಕೂಲಿ ಮಾಡಿಯಾದರೂ ಕಾಡಿನಲ್ಲಿಯ ಸೊಪ್ಪು ತಂದು ಓಡಿನಲ್ಲಿ ಹುರಿದುಂಡೊಡೆಯಾದರೂ ಕೂಡಲ ಸಂಗಮದೇವ ನಿಮ್ಮ ನಿಲುವಿಂಗೆ ಕುದಿವೆನು" ಎಂಬ ಬಸವರಾಜನ ಉಕ್ತಿಯಂತೆ ಪ್ರತಿಯೊಬ್ಬರೂ ಸಮಾಜ ಸೇವೆಯ ಶ್ರೇಷ್ಠ ರೀತಿಯನ್ನರಿತುಕೊಂಡು ಸಮಾಜಸೇವೆಯಲ್ಲಿ ತೊಡಗಿದರೆ ಸತ್‌ಫಲವು ಲಭಿಸುವುದು. ಕೈಲಾಸವಾಸಿಗಳಾದ ತ್ಯಾಗಮೂರ್ತಿ ಶಿರಸಂಗಿ ಲಿಂಗರಾಜರು, ದಾನಶೂರ ಮಲ್ಲಪ್ಪ, ಧರ್ಮಪಾಣಿ ಸಕ್ಕರೆ ಕರಡಪ್ಪ, ಧರ್ಮನಿಷ್ಠ ಯಜಮಾನ ವೀರಸಂಗಪ್ಪ, ದಾನವೀರ ಸಜ್ಜನ ಶೆಟ್ಟಿ ಶಂಕರಣ್ಣ, ಗುರಿಕಾರ್ ಮರಿಮಲ್ಲಪ್ಪ, ಹಾನಗಲ್ಲ ಶಿವಯೋಗಿಗಳೂ ತಮ್ಮೆಲ್ಲರ ಮನದಲ್ಲಿ ಹೊಳೆದಾಡಲಿ. ಅವರೆಲ್ಲರೂ ಸಮಾಜಕ್ಕಾಗಿ ಅಪಾರ ಸೇವೆಯನ್ನು ಅರ್ಪಿಸಿ ಪುಣ್ಯ ಭಾಗಿಗಳಾಗಿ ಹಾಗೂ ಕೀರ್ತಿಶಾಲಿಗಳಾಗಿ ಬೆಳಗುತ್ತಿದ್ದಾರೆ. ಪುಣ್ಯ ಮಾಡಲಿಕ್ಕೂ ಪುಣ್ಯವಿರಬೇಕು. ಎಲ್ಲರಿಗೂ ದಾನ ಮಾಡಲು ಲಭ್ಯ ವಿರುವುದಿಲ್ಲ. "ಶುಭ ಕಾರ್ಯೇನ ಶತ ವಿಘ್ನೇನ" ಎಂಬಂತೆ ಒಳ್ಳೆಯ ಕೆಲಸವನ್ನು ಮಾಡಲು ಮಧ್ಯೆ ಮಧ್ಯೆ ಅಡ್ಡಿ ಅಡಚಣೆಗಳು ಅಪಾರವಾಗಿ ಬರುವುದು ರೂಢಿಯೇ ಸರಿಯು. ಅಂತಹ ಪರಿಸ್ಥಿತಿಯನ್ನು ನೀವು ಧೃತಿಗೆಡದೆ ಮೆತ್ತಗಾಗದೆ ಸಂಪೂರ್ಣ ಸ್ಫೂರ್ತಿಯಿಂದ ಕೆಲಸ ಮಾಡಿರಿ.

ಸಮಾಜ ಸೇವೆ ಮಾಡುವವರು ವಿನಯದಿಂದ ವರ್ತಿಸಬೇಕು. ಜಗಜ್ಯೋತಿ ಬಸವಣ್ಣನಂತಹ ಮಾಹಾತ್ಮರೇ ವಿನಯದಿಂದ ಕೆಲಸ ಮಾಡಿದ್ದಾರೆ. ಎನ್ನಲು ನಿದರ್ಶನ ವಚನವಿದು. "ಕಂಡ ಭಕ್ತರಿಗೆ ಕೈ ಮುಗಿವುದೇ ತಪ. ಮೃದು ವಚನಂಗಳೇ ಸಕಲ ಜಪಂಗಳಯ್ಯ. ಸದುವಿನಯವೇ ಸದಾಶಿವನ ಒಲುಮೆಯಯ್ಯ ಕೂಡಲ ಸಂಗಮದೇವನಂತಲ್ಲದೊಲ್ಲನಯ್ಯ" ಸಮಾಜದ ಅಭ್ಯುದಯದ ಕಾರ್ಯಗಳಿಗೆ ಅಡ್ಡಿ ಅಡಚಣೆ ಕೊಡುವ ಕೆಲವು ಕ್ರಿಮಿಕೀಟಕಗಳೂ, ಜಿಗಣೆಗಳೂ, ಗೂಬೆಗಳೂ, ಸ್ವ ಪ್ರತಿಷ್ಠೆಯ ಹಲವು

ಹದ್ದುಗಳೂ ಇವುಗಳೆಲ್ಲವೂ ತಲೆ ಯೆತ್ತದಂತೆ ನೋಡಿಕೊಳ್ಳಬೇಕು. ಬಕ ಪಕ್ಷಿಗಳಂತೆ ಅರ್ಜುನ ಸನ್ಯಾಸಿಗಳಂತೆ ಗೋಮುಖ ವ್ಯಾಘ್ರಗಳಂತೆ ವ್ಯಾಘ್ರ ಚರ್ಮದ ಗಾರ್ದಭಗಳಂತೆ ಇರುವ ವ್ಯಕ್ತಿಗಳನ್ನು ತಲೆಯ ಮೇಲೆ ಹೊಡೆದು ಬಗ್ಗಿ ಬಡಿದು ಸಮಾಜದ ಕಾಲಡಿಯಲ್ಲಿರಿಸಬೇಕು. 'ಮನೆಯ ಮುಂದೆ ಬೃಂದಾವನ, ಮಾಡುವುದು ಅನಾಚಾರ, ಬಾಯಲ್ಲಿ ಬೊಮ್ಮನ ಮಾತು, ಮನದಲಿ ಅಮ್ಮನ ಮಾತು, ಪುರಾತನರ ನುಡಿ, ಕಿರಾತನ ನಡೆ ಈ ತತ್ವಗಳನ್ನು ಅನುಸರಿಸಿರುವ ವ್ಯಕ್ತಿಗಳನ್ನು ದೂರ ಓಡಿಸಬೇಕು. ಈಗ ಹಲವಾರು ಸಮಾಜಗಳು ಸ್ವ ಪ್ರತಿಷ್ಠೆಯ ಸ್ವಾರ್ಥದ ಬಿಂಕು ಬೀಗಿನ ವ್ಯಕ್ತಿಯೊಂದರಿಂದ ಹಾಳಾಗಿ ಹೋಗಿವೆ. ಒಂದು ಖಂಡುಗ ಹಾಲಿಗೆ ಒಂದು ಛಟಾಕು ಹುಳಿ ಹಿಂಡಿದರೆ ಸಾಕು. ಹಾಲೆಲ್ಲವೂ ಕೆಟ್ಟು ಹೋಗುವುದು. ಕಾಡಿನಲ್ಲಿರುವ ಒಂದು ಕೆಟ್ಟ ಮರದ ಸಹವಾಸದಿಂದ ಇಡೀ ಕಾನನವೇ ನಸಿಸಿ ಹೋಗುತ್ತದೆ. ಏವಂಚ ಆ ಕೆಟ್ಟ ಮರವನ್ನು ಸುಟ್ಟು ಹಾಕಿ ಕಾಡಿನಲ್ಲಿರುವ ಇತರ ಮರಗಳಿಗೆ ಅಪಾಯ ತಗಲದಂತೆ ಮಾಡುವುದು ಎಂಬ ಚಾಣಕ್ಯ ನೀತಿವಚನವನ್ನು ಮನದಲ್ಲಿಟ್ಟುಕೊಂಡು ಸರ್ವರೂ ಕಾರ್ಯ ನಿಷ್ಠರಾಗಬೇಕು.

ಬಡವರನ್ನು ಅಶಕ್ತರನ್ನು ಹಸಿದವರನ್ನು ಕಂಡು ಕರಗಿ, ಬರೀ ಅರ್ಚನೆಯಿಂದ ಬರೀ ನೈವೇದ್ಯದಿಂದ ಭಗವಂತನು ತೃಪ್ತಿಗೊಳ್ಳಲಾರನು. "ಕಲ್ಲನಾಗರ ಕಂಡರೆ ಹಾಲನೆರೆ ಎಂಬರಯ್ಯಾ, ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯಾ. ಉಂಬ ಜಂಗಮ ಬಂದರೆ ನಡೆಯೆಂಬರು, ಉಣದ ಲಿಂಗಕ್ಕೆ ಬೋನವ ಹಿಡಿಎಂಬರಯ್ಯಾ" ಎಂಬುದಾಗಿರುವ ಭಕ್ತಿ ಭಾಂಡಾರಿ ಬಸವಣ್ಣನವರ ವಚನವು ಎಲ್ಲರ ಮನೋಮಂದಿರಕ್ಕೆ ಹೊಗಲಿ. ಸಮಾಜದ ಏಳಿಗೆಗೆ ಸಕಲರ ಸಂಪತ್ತೂ ಶಕ್ತಿಯೂ ಯಥೋಚಿತವಾಗಿ ವಿನಿಯೋಗವಾಗಬೇಕು. ಅಂದೇ ಸಮಾಜವು ಹಾಗೂ ಇಡೀ ನಾಡೂ ಕಳೆಕಳಿಸಿ ಮುಂದುವರಿದು ಸ್ಮಿತನಾಗಿ ಜೀವಿಸುವುದು. ಸಮಾಜ ಸೇವಕನು ಸತ್ಯದಲ್ಲಿ ಪ್ರೀತಿಯನ್ನೂ ನ್ಯಾಯ ವಿಚಾರಣೆಯಲ್ಲಿ ನಿಷ್ಪಕ್ಷಪಾತತೆಯನ್ನೂ ದೀನ ದುರ್ಬಲರಲ್ಲಿ ಮರುಕ ಕ್ಷಮೆಯನ್ನೂ ಯಾರಿಗೂ ಅನಗತ್ಯವಾಗಿ ನೋವನ್ನುಂಟು ಮಾಡಬಾರದೆಂಬ ವಿನಯವನ್ನೂ ಸಮಾಜದ ಸಾಧಾರಣ ಕಟ್ಟು ನಿಯಮಗಳಿಗೆ ವಿಧೇಯವಾಗಿರುವುದನ್ನೂ ಪಡೆದಿರಬೇಕು. ಈತನ ಹೃದಯವು ಚಿಲುಮೆಯ ತಿಳಿನೀರಿನಂತೆ ಬಲು ಶುಭ್ರವಾಗಿಯೂ, ನಿಷ್ಕಳಂಕವಾಗಿಯೂ ಇರಬೇಕು. ತಿಳಿವುನ

ಸ್ಸಿನ ಕಾರ್ಯವು ಜಗದೀಶ್ವರನಿಗೆ ಅರ್ಪಿತವು ಎನಲು ಮಹಾದೇವಿ ಅಕ್ಕನ ವರ ವಚನವಿದು. "ತನು ಕರಗದವರಲ್ಲಿ ಪುಷ್ಪವನೊಲ್ಲೆಯಯ್ಯಾ ನೀನು. ಮನ ಕರಗದವರಲ್ಲಿ ಪುಷ್ಪವನೊಲ್ಲೆಯಯ್ಯಾ ನೀನು. ಹದುಳಿಗರಲ್ಲದವರಲ್ಲಿ ಗಂಧಾಕ್ಷತೆಯನೊಲ್ಲೆಯಯ್ಯಾ ನೀನು. ಅರಿವು ಕಣ್ದೆರೆಯದವರಲ್ಲಿ ಆರುತಿಯ ನೊಲ್ಲೆಯಯ್ಯಾ ನೀನು. ಭಾವಶುದ್ಧ ವಿಲ್ಲದವರಲ್ಲಿ ಧೂಪವ ನೊಲ್ಲೆಯಯ್ಯಾ ನೀನು. ಪರಿಣಾಮಿಗಳಲ್ಲದವರಲ್ಲಿ ನೈವೇದ್ಯವನೊಲ್ಲೆಯಯ್ಯಾ ನೀನು. ತ್ರಿಕರಣ ಶುದ್ಧವಿಲ್ಲದವರಲ್ಲಿ ತಾಂಬೂಲವನೊಲ್ಲೆಯಯ್ಯಾ ನೀನು. ಹೃದಯ ಕಮಲ ಶುದ್ಧವಿಲ್ಲದವರಲ್ಲಿ ಇರಲೊಲ್ಲೆಯಯ್ಯಾ ನೀನು. ಎನ್ನಲ್ಲಿ ಏನುಂಟೆಂದು ಕರಸ್ಥಲ ವನಿಂಬುಗೊಂಡೆ ಹೇಳಾ ಚೆನ್ನಮಲ್ಲಿಕಾರ್ಜುನಯ್ಯಾ" ಸಮಾಜ ಸೇವೆ ಮಾಡುವವರು ಕೇವಲ ವಿರಕ್ತರಾಗಿ ಪಾರಮಾರ್ಥಿಕ ಬುದ್ಧಿಯಿಂದ ಸೇವೆ ಸಲ್ಲಿಸಬೇಕು. ವೈದ್ಯರು ಅತಿಯಾಗಿ ಹಣ ತೆಗೆದು ಕೊಳ್ಳಬಹುದು. ನ್ಯಾಯ ವಾದಿಗಳು ಹಸ್ತ ಪೂರ್ಣ ಧನವನ್ನು ಅಪೇಕ್ಷಿಸಬಹುದು. ಉಪಾಧ್ಯಾಯರು ಸಂಭಾವನೆಗೆ ಕೈ ನೀಡಬಹುದು; ಆದರೆ ಸಮಾಜ ಸೇವೆ ಮಾಡುವಾತನು ಮಾತ್ರ ಗಾಳಿಯನ್ನು ಸೇವಿಸಿ ಜೀವಿಸಿ ಧರ್ಮದ ಪ್ರಗತಿಗಾಗಿ ದುಡಿಯ ಬೇಕು. ಸಮಾಜಸೇವಕರಲ್ಲಿ ಅವಿಚಕ್ಷಣತೆ ಅವಿವೇಕ ಅಧರ್ಮಪರಾಯ ಣತೆಯು ನೆಲಸಿ ರಸದಂತಿದ್ದ ಸಮಾಜವು ಕಸವಾಗಿ ಹೋಗಿಬಿಟ್ಟಿದೆ.

ಧಾರ್ಮಿಕ, ರಾಜಕೀಯ, ನೈತಿಕ, ಸಾಮಾಜಿಕಾದಿ ವಿಷಯಗಳಲ್ಲಿ ಪ್ರಾವಿಣ್ಯತೆಯನ್ನು ಹೊಂದದ ಹೊರತು ಯಾವ ಸಮಾಜವಾಗಲೀ ಪ್ರಗತಿ ಯನ್ನು ಹೊಂದಲಾರದು. ಧರ್ಮವು ಮಾನವನಿಗೆ ಜೀವಸ್ವರೂಪವು. ಅದ ಕಾರಣ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಧರ್ಮವನ್ನು ಪೋಷಿಸುವುದು ಪ್ರಧಾನ ಕರ್ತವ್ಯವೆಂದರಿತುಕೊಳ್ಳಬೇಕು. ಧರ್ಮದಿಂದ ಪ್ರಪಂಚವು ಸುರಕ್ಷಿತವಾಗಿರು ವುದು. ಧರ್ಮವೇ ಪ್ರಪಂಚಕ್ಕೆ ಅಧಾರಮೂಲವಾಗಿರುತ್ತದೆ. ಧರ್ಮಕ್ಕಿಂತ ಮಿಗಿಲಾದ ವಸ್ತು ಇನ್ನು ಯಾವುದೂ ಜಗತ್ತಿನಲ್ಲಿ ಇಲ್ಲವು. ವೀರಶೈವ ಸಮಾಜ ದಲ್ಲಿ ಜನಿಸಿದ ಮೇಲೆ ಅದರ ಧಾರ್ಮಿಕಾದಿ ಕ್ರಿಯೆಗಳನ್ನು ಸಂಪೂರ್ಣ ಮಾಡಿದ್ದೇ ಆದರೆ ಅದು ಅಂದು ತನ್ನ ಜನ್ಮಸಾರ್ಥಕ್ಯವನ್ನು ಪಡೆದಂತೆಯೇ ಸರಿಯು. ಒಂದು ಪುರದಲ್ಲಿನ ಫಲಾಹಾರ ಮಂದಿರವನ್ನು ಹೊಕ್ಕೆನು. ಅಲ್ಲಿ ಕ್ಷಣಮಾತ್ರದ ವರ್ತನೆಯು ಎನ್ನ ಮನಸ್ಸನ್ನು ಕದಡಿಸಿತು. ಸುಮಾರು ೧೦ ವರ್ಷದ ಹುಡಿಗಿಯೊಂದು *Supplier* ಆಗಿ ಸಂಚರಿಸುತ್ತಿತ್ತು. ಧಾರ್ಮಿಕ ತಂಪು ಮೊದುಳಿಗೆ ಇಳಿದು ಧರ್ಮಕ್ಕೆ ಆಸರೆ ಆಶ್ರಯವನ್ನು ಮುಂದೆ ಕೊಡಲು

ಎಲ್ಲಿ ಹೇಗೆ ತಾನೇ ಬರುವುದು? ಈ ರೀತಿ ಪಥ ತಪ್ಪಿ ಹೋಗುವುದನ್ನು
ತಡೆಯುವುದು ಸಮಾಜದ ಮುಂದಾಳುಗಳ ಕರ್ತವ್ಯವಲ್ಲವೇ? ದೇವಿಯ
ಅಂಶವಾದ ಸ್ತ್ರೀಯು ವಿಧವೆಯಾದರೆ ಸಮಾಜವು ಉಳಿಯುವುದು ತಾನೇ
ಹೇಗೆ? ಸಮಾಜ ಸೌಧಕ್ಕೆ ಕೀರ್ತಿ ಕಳಶವು ಎಂತು ತಾನೇ ಬರುವುದು?
ನಮ್ಮ ಸುಧಾರಣೆಗೆ ರಾಜಮಾರ್ಗವು ಶಿಕ್ಷಣವು. ಶಿಕ್ಷಣ ಪಡೆದ ಮಹನೀಯರು
ಮತ್ತು ಪಂಡಿತರು ಸಮಾಜದಿಂದ ಋಷಿಋಣವನ್ನು ಪಡೆದಿದ್ದೇವೆ. ಅದಕ್ಕೆ
ಪರಿಹಾರವಾಗಿ ತಮ್ಮ ಕೈಯಲ್ಲಾದಷ್ಟು ಮಟ್ಟಿನ ಸೇವೆಯನ್ನು ಯಾವ ರೂಪ
ದಲ್ಲಾದರೂ ಸಮಾಜಕ್ಕೆ ತಪ್ಪದೆ ಸಲ್ಲಿಸುತ್ತೇವೆ ಎಂಬ ಭೀಷ್ಮಪ್ರತಿಜ್ಞೆಯಿಂದ
ತಮ್ಮ ವಿದ್ಯಾರ್ಥಿ ಬಾಳ ನೌಕೆಯನ್ನು ಹಾಯ್ದು ಬರಬೇಕು. ಮದುವೆ ಇತ್ಯಾದಿ
ಶುಭಕಾರ್ಯಗಳಲ್ಲಿ ಅವರವರಿಂದ ಒಂದು ಗೊತ್ತಾದ ಮೊತ್ತ ಹಣವನ್ನು
ಮಾಮೂಲಾಗಿ ಕೊಡುವಂತೆ ಏರ್ಪಾಡು ಮಾಡಬೇಕು. ಇದೆಲ್ಲವನ್ನೂ ಸೇರಿಸಿ
ಒಂದು 'ಧರ್ಮನಿಧಿ'ಯನ್ನಾಗಿ ಭದ್ರಪಡಿಸಿ ಸಮಾಜದ ಬಡ ವಿದ್ಯಾರ್ಥಿ
ಗಳಿಗೆ ಸಹಾಯ ಮಾಡಬೇಕು. ಪ್ರತಿಯೊಬ್ಬ ವೀರಶೈವ ಬಾಲಕ ಬಾಲಕಿಯೂ
೫ ರಿಂದ ೧೬ ವರ್ಷದ ವರೆಗೂ ಕಡ್ಡಾಯವಾಗಿ ವಿದ್ಯಾರ್ಜನೆಯನ್ನು ಮಾಡಿಯೇ
ತೀರಬೇಕೆಂದು ಚಳುವಳಿಯನ್ನು ನಡೆಯಿಸತಕ್ಕದ್ದು. ನಮ್ಮ ಸಮಾಜದ
ಕೀಲುತ್ರಯಗಳಾದ ಮಠಾಧಿಪತಿಗಳು, ಶೆಟ್ಟರು, ಯಜಮಾನರು ಈ ಕಾರ್ಯ
ವನ್ನು ಹಿಡಿದರೆ ಅದು ದಕ್ಷತೆಯಿಂದ ನಡೆಯುತ್ತದೆ. ಈ ಗಣ್ಯಸ್ಥಾನದ ಮಹನೀ
ಯರು ಪೀಠದ ಮಹತ್ವನ್ನು ಅರಿತು ಸೂಕ್ತ ರೀತಿಯಲ್ಲಿ ಮುಂಬರಿದರೆ
ಸಮಾಜದಲ್ಲಿ 'ಸುವರ್ಣನೀತಿ'ಯನ್ನು ಕಾಣಬಹುದು, ಇಲ್ಲವೇ 'ವಿವರ್ಣ
ನೀತಿ'ಯನ್ನು ಕಂಡು ನಾವೂ ಸಮಾಜವೂ ಮೆತ್ತನಾಗಬೇಕಾಗುವುದು.

ನಮ್ಮ ಸಮಾಜದ ಕೀಲುತ್ರಯಗಳಾದ ಮಠಾಧಿಪತಿಗಳು, ಶೆಟ್ಟರು
ಮತ್ತು ಯಜಮಾನರು ಇಂದಿನ ಜಾಗ್ರತ ಜಗತ್ತಿನ ಕಡೆಗೆ ತಮ್ಮ ದೃಷ್ಟಿ
ಯನ್ನು ಬೀರಲಿ. ಈ ಕೀಲುತ್ರಯದಿಂದ ಸಮಾಜವು ಇಳಿಗಾಲ ಇಲ್ಲವೇ
ಏಳಿಗೆಯನ್ನು ಪಡೆಯುವುದು. ಅತಏವ ಈ ಪುರುಷತ್ರಯರು ಸಮಾಜಕ್ಕೆ
ದಿವ್ಯ ಸ್ಫೂರ್ತಿಯನ್ನು ಕೊಟ್ಟು ನವನವ್ಯ ಕೀರ್ತಿಯನ್ನು ತರುವುದಕ್ಕೆ ಮನ
ಗೊಟ್ಟು ಕ್ರಿಯಾ ಶೂರರಾಗಲಿ. ಸಮಾಜದ ಆಗು ಹೋಗುಗಳಿಗೂ ಏಳು
ಬೀಳುಗಳಿಗೂ ಮೂಲ ಕಾರಣರು ಇವರೇ. ಒಮ್ಮೆ ಊರೊಂದರಲ್ಲಿ ಚಿನ್ನ
ದಂತಹ ಜನವು ಈ ಮಹಾ ತ್ರಿಮೂರ್ತಿ ಪುರುಷರಿಂದ ಗನ್ನಗತಕ್ಕೆ ಗುರಿ
ಯಾಗಿ ಗತಿಗೆಟ್ಟು ಪಾಳಾಗಿ ಹೋಯಿತು. ಈ ಪುರುಷತ್ರಯರು ಸಮಾಜದ

ಪ್ರತಿನಿಧಿಗಳು, ಭಾವೀ ಜಗತ್ತಿನಲ್ಲಿ ಜವಾಬ್ದಾರಿ ಸರ್ಕಾರವನ್ನು ಪಡೆಯುವ ಕಾಲದಲ್ಲಿ ಈ ಪ್ರಾತಿನಿಧ್ಯವನ್ನು ಸರಿಯಾಗಿ ನಡೆಯಿಸಿದರೆ ಅಂದು ಸೌಲಭ್ಯ ಸೌರಭವನ್ನು ಪಡೆಯಲು ನಮಗೆ ಸುಲಭ ಸೌಕರ್ಯವು ಒದಗುವುದು. ಎಲ್ಲಿಯ ವರೆಗೆ ಇವರು ಸಮಾಜದ ಸೇವಾನಿರತರೂ, ವಿನಯಾದಿ ಸದ್ಗುಣ ಪರರೂ ಆಗಿರುವರೋ ಅಲ್ಲಿಯ ವರೆಗೆ ಇವರು ಸಮಾಜದ ಮನ್ನಣೆ ಮರ್ಯಾದೆ ಗಳಿಗೆ ಪಾತ್ರರಾಗುತ್ತಾರೆ. ಸೇವಾಗಡಿಯಲ್ಲಿ ಅವಿವೇಕಾಹಂಕಾರಗಳಿಗೆ ಜಾಗವಿಲ್ಲ. ಆದರೆ ವಿನಯ ಸೌಜನ್ಯಗಳಿಗೆ ಮಾತ್ರ ಜಾಗವಿದೆ. ಸಮಯ ಬಂದಾಗ ಸಮಾಜಕ್ಕೆ ತಮ್ಮ ಜೀವವನ್ನೇ ಸಮರ್ಪಿಸಲು ಸಿದ್ಧರಾಗಬೇಕು. ಅಂದು ಅವರ ಜೀವನ ಚರಿತ್ರೆಯು ಸುವರ್ಣಾಕ್ಷರಗಳಿಂದ ಬರೆಯಲ್ಪಡುವುದು. ಅವರ ಸಂತತಿಯವರೂ ಅವರ ಸಮಾಜದವರೂ ಅವರನ್ನು ಪುನಃಪುನಃ ನೆನೆದಾರು. ಆಗಾಗ್ಗೆ ನಾಕಪತಿಗೆ ತಮ್ಮ ಹಿರಿಯರನ್ನು ಸನಿಹದಲ್ಲಿರಿಸಿಕೊಳ್ಳಿ ಎಂದು ಪ್ರಾರ್ಥನೆ ಮಾಡುವರು. ಸಮಾಜದ ದಪ್ಪುಸುಪ್ಪತೆಗಾಗಿ ಸೊಂಪು ಕಂಪಿಗಾಗಿ ಹಗಲಿರುಳು ದುಡಿದು ಯಶಸ್ಕಾಯಕರಾದ ಹಾನಗಲ್ಲ ಶಿವಯೋಗಿಗಳೂ, ಯಜಮಾನ ವೀರ ಸಂಗಪ್ಪನವರೂ, ಎಲಿ ಮಲ್ಲಪ್ಪಶೆಟ್ಟರೂ ತಮ್ಮೆಲ್ಲರ ಮನ ದಲ್ಲಿ ಹೊಳೆದಾಡಿ, ಬೆಳಗಾಡಿ, ಕೀಲುತ್ರಯದ ಬೆಲೆಯು ಸಕಲರಿಗೂ ಅರಿ ವಾಗಲಿ ಸಮಾಜದ ಈಗಿನ ಮುಂದಾಳುಗಳ ಅವ್ಯವಸ್ಥೆಯಿಂದ ಜನತೆಯೇ ಜಡವಾಗಿ ಹೋಗಿಬಿಟ್ಟಿದೆ. ಇದರ ಫಲ ಸಮಾಜದ ಮುಂದಿಯಲ್ಲಿ ವ್ಯಾಗೀಯ ಮತಿಯೂ, ಕರಾಳ ರಾಕ್ಷಸೀಯ ವರ್ತನಾಭಾವನೆಯೂ ಮನೆಮಾಡಿ ಬಿಟ್ಟಿವೆ. ಉಗುರಲ್ಲಿ ಆಗುವ ಕಾರ್ಯಕ್ಕೆ ಕೊಡಲಿಯನ್ನು ಹಾಕಿ ತಮ್ಮ ಕುಲನಾಶಕ್ಕೇ ಸಿದ್ಧರಾಗಿರುವರು. ಈಗೀಗ ನ್ಯಾಯಸ್ಥಾನಗಳಲ್ಲಿ ವೀರಶೈವರು ದ್ವಿತೀಯ ಸ್ಥಾನವನ್ನು ವಹಿಸಿಕೊಂಡಿದ್ದಾರೆ ಎಂಬ ಅಂಶವು ನ್ಯಾಯಸ್ಥಾನದಲ್ಲಿನ ತಖ್ತೆ ಯಿಂದ ಅರಿವಾಗಿರುವುದನ್ನು ನೋಡಿದರೆ ಈ ಮುಂದಿಯ ಪರಿಸ್ಥಿತಿಗಾಗಿ ಕನಿ ಕರ ಪಡಬೇಕಾದ್ದೇ ಸರಿಯು.

ಶಿಕ್ಷಣದಲ್ಲಿ ಮಠಗಳು ಪ್ರಧಾನ ಸ್ಥಾನವನ್ನು ತೆಗೆದುಕೊಳ್ಳಬೇಕು. ಮಠಾ ಧಿಪತಿಗಳು ಸಮಾಜದ ಪ್ರಗತಿಯ ಪ್ರಧಾನಚಾಲಕರು. ಮಠಾಧಿಪತಿಗಳು "ಮನಸ್ಸು ಮಾಡಿದರೆ ಅವರಿಗೆ ಬಗ್ಗದ ಸಗ್ಗದ ಕಾರ್ಯವು ಯಾವುದು ತಾನೇ ಇರುವುದು ? ಹಿಂದಿನ ಗುರುಕುಲದ ಪ್ರತೀಕಗಳು ಇಂದಿನ ಮಠಗಳಾಗಲಿ. ಕೊಡಗು ಧಾರವಾಡ, ಬದಾಮಿ, ಹಾನಗಲ್ಲು, ಯಾದವಗಿರಿ ಇತ್ಯಾದಿ ಸ್ಥಳ ಗಳಲ್ಲಿ ಇದು ಜರುಗುತ್ತಿದೆ. ಮಠಗಳು ಪರ್ಣಕುಟಿಗಳಾಗಿ ಶಾಂತಿಮಯ

ಸನ್ನಿವೇಶ ಸನ್ನಿಹಿತವಾಗಿಯೂ ಪ್ರಕೃತಿಗರ್ಭವಾಗಿಯೂ ಊರ ಹೊರಗೂ ಇರಬೇಕು. ಅಲ್ಲಿಗೆ ಹೆಜ್ಜೆಹಾಕಿದರೆ ಸಾಕು. ಮನಸ್ಸು ಪ್ರಶಾಂತವಾಗಬೇಕು. ಮತಿಯು ಮಂದ ಹಸಿತವಾಗಬೇಕು. ಬುದ್ಧಿಯು ಅಧ್ಯಾತ್ಮಿಕವಾಗಬೇಕು. ಭಾವನೆಗಳು ದೈವಿಕವಾಗಬೇಕು. ಅಂದೇ ಧಾರ್ಮಿಕ ಶಿಕ್ಷಣದ ಸ್ಫುರಣವು ಆ ವ್ಯಕ್ತಿಗೆ ದೊರಕುವುದು. ಯೋಚನೆ ಮಾಡಿ ದೂರಾಲೋಚನೆಯಿಂದ ಮಠಾಧಿಪತಿಗಳನ್ನು ಆರಿಸಬೇಕು. ಚಿಕ್ಕವಯಸ್ಸಿನ ಬಾಲಕರನ್ನು ಆರಿಸಿ ಬಾಲ್ಯದಿಂದಲೂ ಮಠಾಧಿಪತಿಯ ಯೋಗ್ಯ ಶಿಕ್ಷಣವನ್ನು ಕೊಡಬೇಕು. ಅದರಲ್ಲಿ ಜಯಪೂರ್ಣವಾದ ಅನಂತರ ಮಠಾಧಿಪತಿಯ ಸ್ಥಾನವನ್ನು ನೀಡಬೇಕು. ವಿದ್ಯಾರ್ಥಿಗಳ ಹೃದಯವನ್ನೂ, ಜನಗಳ ಚಿತ್ತವನ್ನೂ ಪ್ರವೇಶಿಸಿ ಅಲ್ಲಿನ ಗರ್ಭಪೀಠದ ಅಂತರಾಳವನ್ನು ಅರಿತುಕೊಳ್ಳುವಂತಹ ಕುಶಾಗ್ರಮತಿಯಿದ್ದರೇನೆ ಮಠಾಧಿಪತಿಯು ಮಾನವ ಸಮಾಜವನ್ನು ದೈವೀ ಸಮಾಜವಾಗಿ ಮಾಡಬಲ್ಲನು. ಮಠಾಧಿಪತಿಗಳನ್ನು ಬಹು ದೀರ್ಘಕಾಲ ಒಂದೇ ಸ್ಥಳದಲ್ಲಿ ನಿಲ್ಲಿಸಬಾರದು. ಅಲ್ಲಲ್ಲಿ ಆಗಾಗ್ಗೆ ಬದಲಾಯಿಸುತ್ತಿರಬೇಕು. ಈ ತೆರನ ಬದಲಾವಣೆಯ ಪ್ರಯುಕ್ತದಿಂದಲೇ ರಾಮಕೃಷ್ಣಾಶ್ರಮಗಳು ಇಡೀ ಜಗತ್ತಿನಲ್ಲಿ ಪ್ರಖ್ಯಾತಿಯನ್ನು ಪಡೆದಿರುತ್ತವೆ. ಒಂದು ಮಠದಿಂದ ಮತ್ತೊಂದು ಮಠಕ್ಕೆ ಬದಲಾಯಿಸುತ್ತಿದ್ದರೆ ಸ್ಥಳದ ವಿದ್ಯಮಾನಗಳು ಅರಿವಾಗಿ, ದೇಶಾನುಭವವು ದೊರಕುವುದು. ಅಂದು ತಮ್ಮ ಘನತೆಗೆ ಅನುಗುಣವಾಗಿ ನಡೆದು ಭವ ಭಕ್ತರಿಗೆ ಪ್ರಿಯರಾಗುವರು. ಭಕ್ತರಿಂದ ಬಂದ ಪ್ರತಿಯೊಂದು ವಸ್ತುವಿನ ಕಣವೂ ಅವರ ರಕ್ತತರ್ಪಣದಿಂದ ಉತ್ಪತ್ತಿಯಾಗಿದೆ. ಈ ಪರಿಯ ಶ್ರಮದಿಂದ ಬಂದದ್ದನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸದಿದ್ದರೆ ಅಂದು ತೋಂದರೆ ತೊಡಕು ಗಂಟಿಟ್ಟಂತೆಯೇ ಸರಿಯು. ಒಮ್ಮೆ ಮಠಾಧಿಪತಿಯೋರ್ವರು ಮಠದ ಆಸ್ತಿಯನ್ನು ಉಚಿತ ರೀತಿಯಲ್ಲಿ ಉಪಯೋಗಿಸದೆ ಅದನ್ನು ಪುಡಿ ಗಂಟಾಗಿರಿಸಲು ಯತ್ನಿಸಿದ ಕಾರಣ ಘನಸರ್ಕಾರವು ಅದನ್ನು ತನ್ನ ವಶಕ್ಕೆ ತೆಗೆದುಕೊಂಡುಬಿಟ್ಟಿತು. ಕೊನೆಕೊನೆಗೆ ಮಠಾಧಿಪತಿಗಳು ಕಣ್ಣು ಕಣ್ಣು ಬಿಟ್ಟು ಪೇಚಾಡುವ ಗತಿಯನ್ನು ಪಡೆದರು. ಆದ ಕಾರಣ ಮಠಾಧಿಪತಿಗಳು "ಕೆರೆಯ ನೀರನು ಕೆರೆಗೆ ಚೆಲ್ಲಿರೋ" ಎಂಬ ನುಡಿಯನ್ನು ತಮ್ಮ ಬಾಳಿನಲ್ಲಿ ಕ್ರಿಯಾ ಪೂರ್ಣಮಾಡಲಿ ಮಠಾಧಿಪತಿಗಳು ಶಿಷ್ಯರಿಗೆ ಧಾರ್ಮಿಕ ಜ್ಞಾನದಾಯಿಗಳಾಗಿಯೂ, ಸಮಾಜಕ್ಕೆ ಪ್ರಜ್ವಲಿತದೀಪ್ತಿಯಾಗಿಯೂ, ಮಕ್ಕಳಿಗೆ ಮಣಿಮಾಲಿಕೆಯಾಗಿಯೂ, ಅಪರಾಧಿಗಳಿಗೆ ನಿಷ್ಪಕ್ಷಪಾತ ನ್ಯಾಯಪತಿಗಳಾಗಿಯೂ ಪ್ರಕಾಶಿತವಾಗಲಿ.

ಪ್ರತಿಯೊಬ್ಬ ವ್ಯಕ್ತಿಯೂ ತನ್ನಿಂದ ತಾನು ಉದ್ಧಾರವಾಗುವುದನ್ನು ಅರಿತು ಅದರಂತೆ ಆಚರಿಸಬೇಕು. ಸಮಾಜಕ್ಕಾದ ಅವಮಾನವೇ ತನ್ನ ಅವಮಾನವು ಎಂದು ತಿಳಿದು ಸಮಾಜಕ್ಕೆ ಸತತವೂ ಶ್ರೇಯಸ್ಸಾಗುವಂತೆ ದುಡಿಯಬೇಕು. ಈ ಜಗತ್ತಿನ ಸಕಲ ನಾಡಿನವರೂ ಹಾಗೂ ಸಕಲ ಧರ್ಮದವರೂ ತಮ್ಮ ಸಮಾಜದ ಹಿತಕ್ಕಾಗಿ ಒಕ್ಕಟ್ಟಿನಿಂದ ದುಡಿಯುತ್ತಿರುವರು. ಪರಕೀಯ ಸಮಾಜಗಳು ಈ ಬಗೆಯಲ್ಲಿ ಒಗ್ಗಟ್ಟಿನಿಂದ ದುಡಿಯುತ್ತ ಮುಂಬರಿಯುತ್ತ ತಮ್ಮ ತಮ್ಮ ಬಲವನ್ನು ಹೆಚ್ಚಿಸಿಕೊಳ್ಳುವ ವೇಳೆಯಲ್ಲಿ ನಮ್ಮ ಸಮಾಜದಲ್ಲಿ ಒಗ್ಗಟ್ಟಿನ ಛಿದ್ರತೆಯು ಛಿಲ್ಲೆಂದು ಚಿಮ್ಮುತ್ತಿರುವುದು ವಿಷಾದಕರವೇ ಸರಿಯು. ಪರಸ್ಪರ ದ್ವೇಷಾಸೂಯೆಗಳು ಪ್ರಬಲವಾಗುತ್ತಲಿವೆ. ಎಲ್ಲೆಲ್ಲಿಯೂ ನಿರುತ್ಸಾಹ, ನಿರಭಿಮಾನ, ದುರಭಿಮಾನ, ಸ್ವಾರ್ಥ, ಕುಹಕಾದಿಗಳೇ ಬುಗ್ಗೆಯಂತೆ ಏಳುತ್ತಿವೆ. ಈ ಪರಿಸ್ಥಿತಿಗೆ ನಮಗೆ ನಾವೇ ಕಾರಣರೆಂದರೆ ಉತ್ಪ್ರೇಕ್ಷೆಯಾಗಲಾರದು. ಈ ವಿಷಯದಲ್ಲಿ ಎನಗೆ ನಾನೇ ಹಗೆ ನೋಡಯ್ಯಾ ಎನಗೆ ನಾನೇ ಕೆಳೆ ನೋಡಯ್ಯಾ. ನಿಮ್ಮ ಸದ್ಭಕ್ತರೊಡನೆ ವಿರೋಧ ಮಾಡಿದರೆ ಎನ್ನ ಕೊಲುವುದಾಗಿ ನಿಮ್ಮ ಪುರಾತನರಿಗಂಜಿ ಬೆಸಗೊಂಡಡೆ ಎನ್ನ ಕಾಯ್ವುದಾಗಿ ಅನ್ಯರು ಹಗೆಯಲ್ಲ ಕೆಳೆಯಲ್ಲ. ಬಾಗಿದ ತಲೆಯ ಮುಗಿದ ಕಯ್ಯಾಗಿರಿಸು ಕೂಡಲಸಂಗಮದೇವ" ಎಂಬ ಮಹಾನುಭಾವಿ ಬಸವಣ್ಣನವರ ವಚನವೇ ಸಾಕು. ಮಾನಹಾನಿಯು ಸಜ್ಜನರಿಗೆ ಸಾವಲ್ಲವೇ? ನಮ್ಮ ಸಮಾಜಕ್ಕೆ ಆಗಾಗ್ಗೆ ಅಲ್ಲಲ್ಲಿ ಒದಗುವ ಅವಮಾನಗಳು ಸಾವಿನ ಕುರುಹಲ್ಲವೇ? ಅಂದು ನಾವು ನಡೆಮೆಣಗಳಾಗುವುದರಲ್ಲಿ ಸಂದೇಹವಿಲ್ಲ. ಅದ ಕಾರಣ ಉನ್ನತಿಯನ್ನು ಪರರಿಂದ ಅಭಿಲಾಷಿಸದೆ ನಮ್ಮ ನಮ್ಮ ಕೈಯಲ್ಲಾದಷ್ಟು ಮಟ್ಟಿನ ದುಡಿಮೆಯಿಂದ ಸಮಾಜಕ್ಕೆ ಹಿತವನ್ನುಂಟು ಮಾಡುವುದು ಯೋಗ್ಯವು ಎಂದರಿತು ಸತತ ರೀತಿಯಲ್ಲಿ ಸಮಾಜಕ್ಕೆ ಸೇವೆಯನ್ನು ಸಮರ್ಪಿಸಬೇಕು.

ನಮ್ಮ ಧರ್ಮದ ತತ್ವಜ್ಞಾನ ಸಂಸ್ಕೃತ ಸಾಹಿತ್ಯ ಆಚಾರವಿಚಾರ ಇತಿಹಾಸಗಳ ರಕ್ಷಣೆಗೆ ನಮ್ಮ ಸಹಾಯವನ್ನು ನೀಡಬೇಕು. ಕೊಳ್ಳೆಗಾಲದತ್ತ ಒಂದು ಊರಿನಲ್ಲಿನ ವಾಚನಾಲಯದ ವ್ಯವಸ್ಥಾಪಕರ ಸಂಗಡ ವ್ಯವಹರಿಸುತ್ತಿರುವಲ್ಲಿ ಅಲ್ಲಿ ನಮಗೆ ಅತ್ಯಗತ್ಯವಾಗಿ ಬೇಕಾದ ಪುಸ್ತಕ ಪತ್ರಿಕೆಗಳು ಇಲ್ಲದಿರುವದನ್ನು ನೋಡಿ ನನಗೆ ನಾನೇ ವಿಷಾದಪಡುವಂತಾಯಿತು. ವೀರಶೈವ ಸಾಹಿತ್ಯ ಸಂಸ್ಕೃತಿಯ ಗಂಧವೂ ಸಹ ಅಲ್ಲಿಗೆ ಬರದಂತೆ ಸನ್ನಿವೇಶವು ಇದ್ದಿತು. ವೀರಶೈವರಿಂದ ಪ್ರಕಟವಾಗುತ್ತಲಿರುವ ಯಾವ ಪತ್ರಿಕೆಯೊಂದು

ಸಹ ನನ್ನ ಕಣ್ಣಿಗೆ ಬೀಳಲಿಲ್ಲ. ಪರಿಸ್ಥಿತಿಯು ಈ ತರವಿರುವಲ್ಲಿ ನಾವು
ಇಲ್ಲಿಯೇ ನಮ್ಮವರು ತಾವೇ ಅಭಿವೃದ್ಧಿಗೆ ಬರುವುದು ತಾನೇ ಎಂತು ?
ಒಮ್ಮೆ ವೀರಶೈವ ಪಂಗಡಕ್ಕೆ ಸೇರಿದ ಮಹಾಕವಿಯು ಜಯಂತಿಗಾಗಿ ಧನ
ಸಹಾಯಕ್ಕೆ ಗುರಿಕಾರ ಮನೆತನದ ಮಹಾಶಯನಲ್ಲಿಗೆ ಹೋಗಲಾಗಿ ಪರಕೀ
ಯರಿಗೆ, ಪರಸಂಸ್ಕೃತಿ ಮತ್ತು ಧರ್ಮಕ್ಕಾಗಿ ಹಣ ಚೆಲ್ಲುವ ಮಹನೀಯನು
ಧನಸಹಾಯವನ್ನು ಮಾಡಲು ತಿರಸ್ಕಾರವನ್ನಿತ್ತಿದ್ದಲ್ಲದೆ ಬೇಡಲಿಕ್ಕೆ ಹೋಗಿದ್ದ
ವ್ಯಕ್ತಿಗಳನ್ನು ಮುಖಭಂಗಿತವಾಗಿ ಕಳುಹಿಸಿದನು. ಈ ಬಗೆಯ ವ್ಯಕ್ತಿಗಳು
ಸಮಾಜದ್ರೋಹಿಗಳಲ್ಲದೆ ಮತ್ತೆ ವಿನಾ ಪುಣ್ಯಪುರುಷರಲ್ಲವು. ನಮ್ಮ ನಮ್ಮ
ಸಮಾಜವನ್ನು ಬಲ ಗಟ್ಟಿತವಾಗಿ ಬೆಳೆಯಿಸಲು ನಿಂತ ಮಹಾಶಯನೇ
ಪುಣ್ಯಶೀಲನು. ನಮ್ಮ ಸಮಾಜ ಸ್ವಾತಂತ್ರ್ಯ ಮತ್ತು ಸಮಾನತೆಯ ತಳ
ಹದಿಯ ಮೇಲೆ ರಚಿತವಾಗಿದೆ ಮಠಾಧಿಕಾರಿಗಳು ಧಾರ್ಮಿಕ ಸಂಘಟ
ನೆಯ ಮೂಲಕ ಸಮಾಜ ಸುಧಾರಣೆಗೆ ಕೈಹಚ್ಚಬೇಕು. ನಮ್ಮ ಸಮಾಜ
ದಲ್ಲಿ ವರ್ತಕ ಮತ್ತು ಒಕ್ಕಲತನವನ್ನು ಸುಧಾರಿಸಿ ಸಂಸ್ಕರಿಸಬೇಕು. ನಮ್ಮ
ಧನವು ಪರರ ಕೈಸೇರದಂತೆ ಮಾಡಲು ನಮ್ಮನಮ್ಮಲ್ಲಿಯೇ ಸಹಕಾರ ಸಂಘ
ಗಳನ್ನೂ ಬ್ಯಾಂಕುಗಳನ್ನೂ ಏರ್ಪಡಿಸಿಕೊಂಡು ಧನಸಂಚಯದ ಪದ್ಧತಿಯ
ಲ್ಲಿಯೂ ಮುನ್ನಡೆಯನ್ನು ಪಡೆಯಬೇಕು. ನಮ್ಮ ಸಾಹಿತ್ಯ ಸಂಸ್ಕೃತಿ ತತ್ವ
ಜ್ಞಾನಗಳ ಆಳವಾದ ವಿದ್ವತ್ ತುಲನಾತ್ಮಕವಾದ ಅಭ್ಯಾಸ, ವಿಚಾರ,
ಸತ್ಯಾನ್ವೇಷಣ, ಸ್ವಧರ್ಮಾಚರಣೆ, ಇವುಗಳನ್ನು ಬಹು ಪಟುತರದಿಂದ ಮುಂ
ದುವರಿಸಬೇಕು. ನಮ್ಮ ಸಮಾಜದ ಗತವೈಭವವನ್ನು ಮರಳಿ ತರಲು
ಸತತ ಯತ್ನವು ಸಕಲರಲ್ಲಿಯೂ ನಿಂತು ಊರ್ಜಿತವಾಗಲಿ. ಹಾಗಿಲ್ಲದ ಪಕ್ಷ
ದಲ್ಲಿ ಜಾಗ್ರತರಾದ ನಮಗೆ ಕೇಡು. "ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ಎಚ್ಚ
ರವಾಗದಿರ್ದಡೆ ಅಂಗೈಯಲ್ಲಿದ್ದ ಲಿಂಗ ಘಟಸರ್ಪ ಕಾಣಾ" "ಅರಿವುದೇ
ಜ್ಞಾನ, ಅರಿತಂತೆ ಆಚರಿಸುವುದೇ ಕ್ರಿಯೆ- ಅರಿತಂತೆ ಆಚರಿಸದಿರ್ದೊಡೆ
ನರಕ ಕಾಣಾ." ಶಿವಶರಣರ ಈ ಸೂಳ್ನುಡಿಗಳಂತೆ ಸತ್ಯಸಿದ್ಧವೇ ಸರಿಯು.
ನಾವೆಲ್ಲರೂ ಶ್ರದ್ಧೆಯನ್ನೂ ಸಹಕಾರ ಬುದ್ಧಿಯನ್ನೂ ಸಹನೆಯನ್ನೂ ಜಾಣ್ಮೆ
ಯನ್ನೂ ನಮ್ಮ ಸಮಾಜದ ಹಿತಸಾಧನೆಯ ಸಲುವಾಗಿ ಅಲ್ಪಮಟ್ಟಿಗಾದರೂ
ಅನುಷ್ಠಿಸುವುದಾದರೆ ನಮ್ಮನ್ನು ನಮ್ಮ ಮುಂದಿನವರು ನೆನೆದಾರು. ನಮ್ಮ
ಕೀರ್ತಿ ದೇಹವನ್ನು ಇನ್ನೂ ದಷ್ಟಪುಷ್ಟವಾಗಿ ಬೆಳಸಿಯಾರು. ಅಂದು ನಾವು
ಅಮರರಾದೇವು. ಈ ನಿಮ್ಮ ಸಂಘವು ಹೆಸರಿಗೆ ಅನುಗುಣವಾಗಿ ಬಾಳಲಿ.

ಮಳೆಗಾಲದಲ್ಲಿ ಕೆರೆಯ ತಡಿಯಲ್ಲಿ ಹೊಳೆಯ ಅಂಚಿನಲ್ಲಿ ವಟಪಟಗುಟ್ಟುವ ಕಪ್ಪೆಗಳ ಕ್ರಿಯೆಯಂತೆಯೇ ನಿಮ್ಮ ಕಾರ್ಯವು ಪರ್ಯವಸಾನ ಹೊಂದೀತು. ಗಾಳಿಗೆ ತೂರಿಹೋಗುವ ನೊರೆಯಾಗದಿರಲಿ. ನಿಮ್ಮ ಶ್ರದ್ಧೆಯು ನಿಮ್ಮ ಸಂಘದ ಕಾರ್ಯಕ್ರಮಗಳು ಬರೀ ಮಾತಿನಲ್ಲಿ ಸಂಪೂರ್ಣವಾಗದಿರಲಿ. ರಚನಾತ್ಮಕ ಕಾರ್ಯ ಚಟುವಟಿಕೆಗಳೇ ಈ ಸಂಘದ ತಿರುಳು ಹುರುಳಾಗಿರಲಿ.

---

## ಕಿತ್ತೂರ ಕಿಲ್ಲೆಯ ನೋಟ.

( ಶ್ರೀ ಆನಂದ ಕವಿಗಳು ಕುರಗುಂದ. )

(೧)

ಬಿತ್ತರದ ಕೋಟೆಯಿಂ ಕೊತ್ತಳದ ಸೊಬಗಿನಿಂ
ಸುತ್ತಲೂ ಹಬ್ಬಿರುವ ಹೆಸರಾಂತ ಅಗಳದಿಂ
ಭಿತ್ತಿ ಭಿತ್ತಿಯೊಳೆತ್ತಲುಂ ಹಸ್ತ ಕೌಶಲ್ಯದಿಂ
ಮೆರೆವ ಚಿತ್ರದಿಂದೆ ॥
ಉತ್ತರದ ಧ್ರುವನೋಳ್ಪ ಗಚ್ಚಿನಾ ಕೊಳವಿಯಿಂ
ಮುತ್ತುಮಾಣಿಕ ಪಚ್ಚರತ್ನಗಳ ಕೋಣೆಯಿಂ
ಕಿತ್ತೂರಿನರಮನೆಯು ಕರ್ನಾಟ ದೇಶದೋಳ್
ಕೀರ್ತಿಯಂ ಪೊಂದಿರುವದು.

(೨)

ಅರಮನೆಯ ಬೆಡಗಿನಿಂ ಆನೆಗಳ ವಿಭವದಿಂ
ಹಿರಿಕಿರಿಯ ಕಲಿಗಳಿಂ ಹೆಸರಾಂತ ಕವಿಗಳಿಂ
ಪರತರ ನಿಜಾನಂದದೊಳ್ನಲಿವ ಶಿವಯೋಗಿ
ಮಡಿವಾಳ ಸ್ವಾಮಿಯಿಂದೆ.

ಹಿರಿಯಮಠ ಕಲ್ಲಮಠ ರಣಗಟ್ಟಿ ಮಠಗಳಿಂ
ಪಿರಿದಾದ ಪಟ್ಟದಿಂ ಕೆಚ್ಚೆದೆ ಲಿಂಗದಿಂ
ಕರುಣಾಳು ಮಲಸರ್ಜನಾಳುತಿಹ ಕಿತ್ತೂರು
ಸಡಗರದಿ ಮೆರೆಯುತಿಹುದು

(೩)

ಗುರು ಸೋಮವಾರ ಪೇಟೆಗಳ ಕೂಟದಿಂ
ತರತರದ ಜರತರಿಯ ರೇಶಿಮೆಯ ವಸ್ತ್ರದಿಂ
ಹಿರಿಕಿರಿಯ ಜನಕೆಲ್ಲ ಹರುಷವನ್ನೀಯುತಿಹ
ಮಿಗಿಲಾದ ಖಾದಿಯಿಂದೆ
ಪರಿಪರಿಯ ಧಾನ್ಯದಿಂದಿಡಿಕಿರಿದ ಕಣಜದಿಂ
ಕರಿತುರಗ ಕಾಲಾಳು ಗೋ ವೃಷಭವೃಂದದಿಂ
ಧರಣಿಯೊಳ್ ಮಲಸರ್ಜನಾಳುತಿಹ ಕಿತ್ತೂರು
ರಮಣೀಯವಾಗಿರುವದು.

(೪)

ಭಂಡಾರದರ್ಥವಂ ಬಡವರಿಗೆ ತೂರಿ
ಭೂಮಂಡಲಕೆ ಮಿಗಿಲಾದ ಕೀರ್ತಿಯಂ ಪಡೆದಿರುವ
ಪುಂಡ ಪ್ರಚಂಡ ಭೋ! “ಶಮಶೇರ ಜಂಗ
ಬಾದ್ದೂರ ಮಲಸರ್ಜನಿಂದೆ”
ದೀನರಂ ಬಡವರನ್ನೆಡಬಿಡದೆ ಪೋಷಿಸುತೆ
ಸನ್ಮಾನ ಪ್ರೇಮದಿಂ ಪ್ರಜೆಗಳಂ ಪಾಲಿಸುತೆ
ತಾಯ್ನಾಡ ಸೇವೆಯೊಳ್ ಪ್ರಾಣವನ್ನೀಡಿರುವ
ವೀರ ಚನ್ನಮ್ಮನಿಂದೆ.

(೫)

ಪೊಡವಿಯಂ ನಡುಗಿಸುವ ಶೂರ ಸರದಾರರಿಂ
ಕುಡಿಮೀಸಿ ಕುಣಿಸುತಿಹ ವೀರ ಹುದ್ದಾರರಿಂ
ಗುಡುಗಿನೊಲು ಗರ್ಜನೆಯ ಹೊಡೆಯುತಿಹ
ರಣಧೀರ ರುದ್ರಪ್ಪನಾಯ್ಕರಿಂದೆ!

ಸರದಾರ ಸೆಟ್ಟರಿಂ ಹೆಸರಾದ ಭಟ್ಟರಿಂ
ಕರುನಾಡ ಕಲಿಗಳಿಂ ಕಾಳಗದ ಹುಲಿಗಳಿಂ
ಹಿರಿದ ಕತ್ತಿಯು ಚನ್ನ ರನ್ನ ರಾಯನ ಪ್ರಾಣ
ಗಟ್ಟಿದಾ ಗಜವೀರನಿಂದೆ.

(೬)

ಭಂಡಾಟದಾಳಿಕೆಗೆ ಕೆಂಡವುಂ ಕುಕ್ಕುತ್ತೆ
ಭಂಡಾರವುಂ ಸುಲಿದು ಬಡವರಿಗೆ ನೀಡುತ್ತೆ
ಚಂಡ್ಡಿಡಿದು ಆಂಗ್ಲರನು ಲಂಡನಕೆ
ಓಡಿಸುವ ರಾಷ್ಟ್ರಾಭಿಮಾನದಿಂದೆ
ಬಂಡಾಯ ಸಲೆಹೂಡಿ ಗರ್ಜನೆಯ ಹೊಡೆಯುವ
ಲೆಂಡ ಆಂಗ್ಲರ ಗಂಡ ಗಂಡುಗಲಿಗಳ ಮಿಂಡ
ಪುಂಡಪ್ರಚಂಡದೊಳ್ ಹೆಸರಾದ ಸಂಗೊಳ್ಳಿ
ಶೂರ ರಾಯಣ್ಣನಿಂದೆ

(೭)

ಧರಣಿಯೊಳ್ ಮೇಲಾದ ಚನ್ನಮ್ಮ ಕಿತ್ತೂರು
ಆರ್ಭಟಿಸಿ ಬೊಬ್ಬಿರಿದು ಕಾದುತಿಹ ವೀರರಾ
ಕರದೊಳಗೆ ಝಗಝಗಿಪ ಸ್ವಾತಂತ್ರ್ಯ
ಖಡ್ಗದೊಳು ರಾರಾಜಿಸುತ್ತಿರುವದು.
ದಾನದೊಳ್ ಶೌರ್ಯದೊಳ್ ಲೋಕದೊಳ್ ಹೆಸರಾದ
ಮಾನನಿಧಿ ಮುಲಸರ್ಜನಾಳುತಿಹ ಕಿತ್ತೂರು
ಕರ್ನಾಟ ಪ್ರಾಂತದೊಳ್ ರಾಷ್ಟ್ರೀಯ ಧ್ವಜ
ದಂತೆ ಪರಿಶೋಭಿಸುತ್ತಿರುವದು.

(೮)

ಘಾತಕರ ಸದೆಬಡೆದು ಪಾತಕರನುದ್ಧರಿಸಿ
ಧಾತ್ರಿಯೊಳ್ ಮಿಗಿಲಾದ ನೇತಾಜಿ ತಾನೆನಿಸಿ
ಸ್ವಾತಂತ್ರ್ಯ ಸಮರದೊಳ್ ಖ್ಯಾತಿಯುಂ
ಪಡೆದಿಹ ಸುಭಾಸನಂ ಮೋಲುತಿಹುದು

ಉನ್ನತದ ವಿಶ್ವದೊಳ್ ಮನ್ನಣೆಯ ಪಡೆದಿರುವ
ಚೆನ್ನಮ್ಮ ಕಿತ್ತೂರು ಸಂಗ್ರಾಮ ಶೌರ್ಯದೊಳ್
ಧನ್ಯತಮ ಭಾರತಾಂಬೆಯ ಪಣೆಯ
ಕಸ್ತೂರಿ ತಿಲಕದೊಳು ಹೊಳೆಯುತಿಹುದು.

(೯)

ತ್ಯಾಗದೊಳ್ ಭೋಗದೊಳ್ ಮಿಗಿಲಾದ ಕಿತ್ತೂರು
ಮೇಗಾವಿ ಬೈಲೂರು ಹೆಸರಾದ ತೋಲಗಿಯು
ತೇಗೂರು ತಿಗಡೊಳ್ಳಿ ಬಸವಪುರ ಮಲ್ಲಪುರ
ಹಿರಿನಂದಿ ಹಳ್ಳಿಗಳಿಗೆ

ಕುರುವಿಂದದಂತಿರುವ ಕುರುಗುಂದ ತುರಮರಿಯು
ಪರತರ ಸುಗಂಧಮಂ ಬೀರುತಿಹ ವ್ರೀಹಿಗಳು
ಸರಸಾಗಿ ಬೆಳೆಯುತಿಹ ಕಲಭಾವಿ ಕಡತಾಳ
ಮೊದಲಾದ ಗ್ರಾಮಗಳಿಗೆ

ಮಾಂಗಲ್ಯಕರವಾದ ಸತ್ಯೇಂದ್ರ ತಾನಾಗಿ
ಸಂಗೀತ ಸಾಹಿತ್ಯ ಶಾಸ್ತ್ರದೊಳ್ ಪಿರಿದೆನಿಸಿ
ಬಂಗಾರದಂತಿರುವ ಮಲಸರ್ಜ ಭೂಪನಿಂ
ಸಿಂಗಾರವಾಗಿರುವದು.

(೧೦)

ದರುಶನದ ಮಾತ್ರದೊಳ್ ದೋಷಮಂ ಪರಿಹರಿಸಿ
ಪರಶಿವನ ಪಾದಾರವಿಂದದೊಳ್ ಭಕ್ತಿಯಂ
ಕರುಣಿಸುವ ಮುನಿವಂದ್ಯ ಪಾವನ ಮಲಪ್ರಭೆಯ
ತೆಂಕಣದ ತೀರದೊಳಗೆ

ಪಿರಿದಾದ ಬೈಲಿನೊಳ್ ಮಾಕಂದ ಬನದೊಳಗೆ
ಸಿರಿವೆತ್ತು ಸಡಗರದಿ ಮೆರೆಯುತಿಹ ಕಿತ್ತೂರು
ಕರುನಾಡ ಕೀರ್ತಿಯಂ ನಾಡೊಳಗೆ ಹಬ್ಬಿಸುತೆ
ರಾರಾಜಿಸುತ್ತಿರುವದು.

# ಲೋಕಗಳ ವಿಚಾರ.

( ಲೇಖಕ—ಶ್ರೀಯುತ ಸಾಸನೂರ ಮಡಿವಾಳಪ್ಪನವರು.)
ಶಾಲಾಧ್ಯಾಪಕ—ಮು॥ ಸಾಸನೂರ ತಾ|| ಬಾಗೇವಾಡಿ

(ಎಪ್ರಿಲ ಸಂಚಿಕೆಯಿಂದ ಮುಂದುವರಿದುದು)

ಈ ಉತ್ತರ ಕುರುದೇಶವು ಪುಣ್ಯ ಭೂಮಿಯು ಮತ್ತು ಸಿದ್ಧ ಪುರುಷರ ವಾಸಭೂಮಿಯು. ಉತ್ತರ ಕುರುದೇಶವು ಈಗಿನ ಉತ್ತರ ಸೈಬೇರಿಯಾ ಅಥವಾ ಮೇರುದೇಶವೆಂದು ಸ್ಪಷ್ಟವಾಗಿ ಕಂಡುಬರುತ್ತದೆ. ಈಗ ಈ ಉತ್ತರ ಕುರುದೇಶದ ಸಂಬಂಧ ಇನ್ನಷ್ಟು ತಿಳಿಯುವದು ಅವಶ್ಯಕವು. ರಾಮಾಯಣ ಕಿಷ್ಕಿಂಧಾ ಕಾಂಡದಲ್ಲಿ ಇರುವದು:— ಸುಗ್ರೀವನು ಸೀತೆಯನ್ನು ಹುಡುಕುವದ ಕ್ಕೋಸುಗ ಶತಬಲ ಮೊದಲಾದ ಕೆಲವು ವಾನರರಿಗೆ ಉತ್ತರಕ್ಕೆ ಕಳಿಸಿದನು. ಆಗ ಸುಗ್ರೀವನು ವಾನರರಿಗೆ:— ವೈಖಾನಸ ಸರೋವರ ( ಬಾಲ್ಕಾಶ್ ಸರೋವರ ) ವಿರುವ ಪ್ರದೇಶವನ್ನು ದಾಟಿದ ಮೇಲೆ ಶೈಲೋದಾ ಎಂಬ ನದಿಯು ಹತ್ತುವದು. ಆದರ ಎರಡೂ ತೀರಗಳಲ್ಲಿ ಕೀಚಕವೆಂಬ ಬಿದುರಿನ ಗಿಡಗಳಿವೆ. ಸಿದ್ಧ ಪುರುಷರು ಅದೇ ಬಿದುರಿನ ನಾವನ್ನು ಮಾಡಿ ಆ ನದಿಯನ್ನು ದಾಟುತ್ತಿರುವರು. ನೀವು ಸಹ ಅದರಂತೆಯೇ ಆ ನದಿಯನ್ನು ದಾಟತಕ್ಕದ್ದು. ಆ ನದಿಯ ಆಚೆಯ ದಂಡೆಯಲ್ಲಿಯೇ (ಉತ್ತರ ದಂಡೆಯಲ್ಲಿ) ಅದೇ ಪುಣ್ಯಮಯ ಉತ್ತರ ಕುರುದೇಶವು. ಆ ಉತ್ತರ ಕುರುದೇಶದ ಉತ್ತರ ಭಾಗದಲ್ಲಿ, ಉತ್ತರ ಸಮುದ್ರದ ತೀರದಲ್ಲಿ ಸೋಮಗಿರಿಯು ಇರುತ್ತದೆ. ಆ ದೇಶವು ಸೂರ್ಯ ವಿಹೀನವಿದ್ದರೂ ಅರ್ಥಾತ್ ಅಲ್ಲಿ ಸೂರ್ಯನು ಅಸ್ತನಾಗಿದ್ದರೂ, ಒಂದು ಬಗೆಯ ಬೆಳಕು ಕಂಡುಬರುವದು. ( ಇದೇ ಈಗಿನ *Aurora Borealis* ). ಈ ದೇಶದಲ್ಲಿಯೇ ದೇವೇಶ ಬ್ರಹ್ಮನು ಬ್ರಹ್ಮರ್ಷಿಗಳಿಂದ ಪರಿವೇಷ್ಟಿತನಾಗಿ ವಾಸ ಮಾಡುತ್ತಾನೆ. ನೀವು ಈ ದೇಶದ ಉತ್ತರಕ್ಕೆ ಹೋಗಬೇಡಿರಿ. ಅಲ್ಲಿ ಸೂರ್ಯನಿಲ್ಲ. ಅಥವಾ ಯಾವ ಬಗೆಯ ಪ್ರಕಾಶವೂ ಇಲ್ಲ. ಅದು ಸೀಮಾ ವಿಹೀನವು. ಇದರ ಆಚೆಯಲ್ಲಿ ಮತ್ತೇನು ಇರುವದು ಎಂಬುವದು ನನಗೆ ಗೊತ್ತಿಲ್ಲ.

× " ಹೇಮಪುಷ್ಕರ ಸಂಛನ್ನಂ ತತ್ರ ವೈಖಾನಸಂ ಸರಃ ।
ತರುಣಾದಿತ್ಯ ಸಂಕಾಶೈರ್ಹಂ ಸೈರ್ವಿಚರಿತಂ ಶುಭೈಃ ॥

\+ \+ \+

ತಂ ತು ದೇಶಮತಿಕ್ರಮ್ಯ ಶೈಲೋದಾ ನಾಮ ನಿಮ್ನಗಾ ।
ಉಭಯೋಃ ತೀರಯೋಸ್ತಸ್ಯಾಃ ಕೀಚಕನಾಮ ವೇಣವಃ ॥
ತೇ ನಯನ್ತಿ ಪರಂ ತೀರಂ ಸಿದ್ಧಾನ್ ಪ್ರತ್ಯಾನಯನ್ತಿ ಚ ।
ಉತ್ತರಾಃ ಕುರವಸ್ತತ್ರ ಕೃತಪುಣ್ಯಾ ಪ್ರತಿಶ್ರಯಾಃ ॥

\+ + +

ತಮತಿಕ್ರಮ್ಯ ಶೈಲೇಂದ್ರಮುತ್ತರ ಪಯಸಾಂ ನಿಧಿಃ ।
ತತ್ರ ಸೋಮಗಿರಿರ್ನಾಮ ಮಧ್ಯೇ ಹೇಮಮಯೋ ಮಹಾನ್ ॥
ಸ ತು ದೇಶ ವಿಸೂರ್ಯೋಽಪಿ ತಸ್ಯಭಾಸಾ ಪ್ರಕಾಶತೇ ।
ಸೂರ್ಯಲಕ್ಷ್ಮ್ಯಾಭಿ ವಿಜ್ಞೇಯಸ್ತಪತೇ ವಿವಸ್ವತಾ ॥

\+ + +

ಬಹ್ಮಾವಸತಿ ದೇವೇಶೋ ಬ್ರಹ್ಮರ್ಷಿ ಪರಿವಾರಿತಃ ।
ನ ಕಥಂಚ ನ ಗಂತವ್ಯಂ ಕುರುಣಾಮುತ್ತರೇಣಚ ॥

\+ + +

ಸ ಹಿ ಸೋಮಗಿರಿರ್ನಾಮ ದೇವಾನಾಮಪಿ ದುರ್ಗಮಃ ।
ತಮಾಲೋಕ್ಯ ತತಃ ಕ್ಷಿಪ್ರಮುಪಾವರ್ತಿತುಮರ್ಹಥ ॥
ಏತಾವದ್ವಾನರೈಃ ಶಕ್ಯಂ ಗನ್ತುಂ ವಾನರ ಪುಂಗವಾಃ ।
ಅಭಾಸ್ಕರಮಮರ್ಯಾದಂ ನ ಜಾನೀಮಸ್ತತಃ ಪರಮ್ ॥”

—ರಾಮಾಯಣ ಕಿಷ್ಕಿಂಧಾಕಾಂಡ.

ಉತ್ತರ ಸೈಬೇರಿಯಾದ ಒಂದು ಭಾಗದಲ್ಲಿ ಹಾಗು ಗ್ರೀನಲ್ಯಾಂಡದಲ್ಲಿ, ಆರು ತಿಂಗಳು ಸೂರ್ಯನು ಉದಿತನಾಗುವದಿಲ್ಲ. ಹಾಗು ಒಮ್ಮೆ ಉದಿತನಾದರೆ ಆರು ತಿಂಗಳು ಅಸ್ತನಾಗುವದಿಲ್ಲ. ಅಲ್ಲಿ ಆರು ತಿಂಗಳು ಕೇವಲ ಚಂದ್ರನ ಪ್ರಕಾಶವು. ಅಲ್ಲಿ ಸೂರ್ಯ ಪ್ರಕಾಶದ ಆರು ತಿಂಗಳಲ್ಲಿ ಒಂದು ಹಗಲು ಹಾಗು ಚಂದ್ರ ಪ್ರಕಾಶದ ಆರು ತಿಂಗಳಲ್ಲಿ ಒಂದು ರಾತ್ರಿ. ಸುತರಾಂ ಬ್ರಹ್ಮನ ಒಂದು ಹಗಲು ಒಂದು ರಾತ್ರಿಯಲ್ಲಿ ನಮ್ಮ ಒಂದು ವರ್ಷವಾಗುವದು.

“ ಏತದ್ದೇವಾನಾಮಹಃ ಯತ್ ಸಂವತ್ಸರಃ ”

—ತೈತ್ತರೀಯ ಬ್ರಾಹ್ಮಣ.

" ದೈವೇ ರಾತ್ರ್ಯಹನೀವರ್ಷಂ ಪ್ರವಿಭಾಗಸ್ತಯೋಃ ಪುನಃ ।
ಅಹಸ್ತತ್ರೋದಗಯನಂ ರಾತ್ರಿಃ ಸ್ಯಾದ್ದಕ್ಷಿಣಾಯನಮ್ ॥

—ಮನುಸ್ಮೃತಿ ೧।೬೭

ಕಲ್ಲೂಕಭಾಷ್ಯಃ— ದೈವೇ ರಾತ್ರ್ಯಹನೀವರ್ಷಮಿತಿ । ಮನುಷ್ಯಾಣಾಂ ವರ್ಷಂ ದೇವಾನಾಂ ರಾತ್ರಿ ದಿನೇ ಭವತಃ । ತಯೋರಪ್ಯಯಂ ವಿಭಾಗಃ । ನರಾಣಾಮುದ್ಗಯನಂ ದೇವಾನಾಮಹಃ । ತತ್ರ ಪ್ರಾಯೇಣ ದೈವ ಕರ್ಮಣಾ ಮನುಷ್ಯಾನಂ ದಕ್ಷಿಣಾಯನಂ ತು ರಾತ್ರಿಃ ॥

ಅರ್ಥಾತ್ ದೇವತೆಗಳ ರಾತ್ರಿ ಹಾಗು ಹಗಲಿನಲ್ಲಿ ಮನುಷ್ಯರ ಒಂದು ವರ್ಷವಾಗುವದು. ಸೂರ್ಯನ ಉತ್ತರಾಯಣದಲ್ಲಿ ದೇವತೆಗಳ ಹಗಲು ಹಾಗು ದಕ್ಷಿಣಾಯನದಲ್ಲಿ ರಾತ್ರಿ. ಆದರೆ ಛಾಂದೋಗ್ಯ-ಉಪನಿಷತ್ತಿನಲ್ಲಿ ಬ್ರಹ್ಮಲೋಕದೊಳಗೆ ಸೂರ್ಯಾಸ್ತವಾಗುವದಿಲ್ಲೆಂದು ವರ್ಣಿತವಾಗಿದೆ. ಒಬ್ಬ ಋಷಿಯು ' ಬ್ರಹ್ಮಲೋಕದಲ್ಲಿ ಸೂರ್ಯನು ಎಲ್ಲ ಸಮಯದಲ್ಲಿಯೂ ಕಾಣುವನು. ' ಎಂದು ಪ್ರತಿಜ್ಞೆಮಾಡಿ ಹೇಳಿದ್ದಾನೆ.

" ಅಥ ತತ ಊರ್ಧ್ವ ಉದೇತ್ಯ ನೈವೋದೇತಾ ।
ನಾಸ್ತಮೇತೈಕಲ ಏವಮಧ್ಯೆಸ್ಥಾತಾ ।"

೩ । ೧೧ । ೧

" ತದೇವ ಶ್ಲೋಕಃ ನ ವೈ ತತ್ರ ನ ನಿಮ್ಲೋಚ ( *setting* )
ನೋದಿಯಾಯ ( *nor rising* ) ಕದಾಚನ ।
ದೇವಸ್ತೇನಾಹಂ ಸತ್ಯೇನ ಮಾ ವಿರಾಧಿಷಿ ಬ್ರಹ್ಮಣೈತಿ ।

೩ । ೧೧ । ೨

" ನಹವಾ ಅಸ್ಮೈ ಉದೇತಿ ನ ನಿಮ್ಲೋಚತಿ ಸಕೃದ್ದಿವಾ ।
ಹೈವಾಸ್ಮೈ ಭವತಿ ಯ ಏತಾಮೇವಂ ಬ್ರಹ್ಮೋಪನಿಷದಂ ವೇದ । "

೩-೧೧-೩

ಈ ಋಷಿಯು ಉತ್ತರ ರಾಮಾಯಣದಲ್ಲಿ ಬ್ರಹ್ಮಲೋಕಕ್ಕೆ ಹೋಗಿ ಪುನಃ ಅದೇ ಉತ್ತರ ರಾಮಾಯಣದಲ್ಲಿಯೇ ಅಲ್ಲಿಂದ ತಿರುಗಿದನೆಂಬುವದೇ ಹೆಚ್ಚು ಸಂಭವನೀಯವು. ಸುತರಾಂ ಅವನು ಆಗ ಕೇವಲ ಹಗಲನ್ನೆ ನೋಡಿ ಬಂದಿದ್ದನು. ಇರದಿದ್ದರೆ ಅವನಿಗಿಂತ ಮೊದಲು ಇದ್ದ ಮನುವು, ತನ್ನ ಸ್ಮೃತಿ

ಯಲ್ಲಿ ಉತ್ತರಾಯಣದಲ್ಲಿ ದೇವತೆಗಳ ಹಗಲು, ಹಾಗು ದಕ್ಷಿಣಾಯನದಲ್ಲಿ ರಾತ್ರಿ ಎಂದು ಏಕೆ ಬರೆಯುತ್ತಿದ್ದನು? ಮತ್ತು ರಾಮಾಯಣವು ಮೊದಲು ಹೇಳಿದಂತೆ ಏಕೆ ಬರೆಯುತ್ತಿತ್ತು? ಆದುದರಿಂದ ಬ್ರಹ್ಮಲೋಕವು ಇದೇ ಉತ್ತರ ಸೈಬೇರಿಯಾ ಅಥವಾ ಉತ್ತರ ಸಮುದ್ರತೀರದಲ್ಲಿಯು, ಉತ್ತರ ಮೇರು ದೇಶದಲ್ಲಿಯೇ ಇತ್ತು, ಎಂಬ ಬಗ್ಗೆ ನಿಸ್ಸಂದೇಹವಾಗಿ ತಿಳಿಯುವದು. ಕೆಲಕೆಲವರು ಪ್ರಶ್ನೆಮಾಡಬಹುದು. ಸಿದ್ಧಾಂತ ಶಿರೋಮಣಿ ಹಾಗು ಪುರಾಣಾದಿಗಳಿಂದ ಬ್ರಹ್ಮನು ಇಲಾವೃತವರ್ಷದಲ್ಲಿಯೇ ಜನಿಸಿ, ಅಲ್ಲಿಯೇ ವಾಸಮಾಡುತ್ತಿದ್ದನು. ಎಂದು ತಿಳಿಯುವದು. ಇದಕ್ಕೆ ಉತ್ತರವಾಗಿ— ಮೊದಲು ಬ್ರಹ್ಮಲೋಕವು ಇಲಾವೃತ ವರ್ಷದಲ್ಲಿಯೇ ಇತ್ತು. ಕಸ್ಯಪ ಪುತ್ರನಾದ ಬ್ರಹ್ಮ ಪ್ರಜಾಪತಿಯು ಮೊದಲು, ಈ ಇಲಾವೃತವರ್ಷದಲ್ಲಿಯೇ ಇರುತ್ತಿದ್ದನು. ಅನಂತರ ವೈಮಾತ್ರೇಯ ಭ್ರಾತೃದಾನವ ರಾಜನಿಂದ ಪಿತಾಡಿತನಾಗಿ ಎರಡನೇಕಡೆಗೆ ಹೊರಟು ಹೋದನು. ಪೂಜ್ಯ ಶ್ರೀಸ್ವಾಮೀಯೋಗಾನಂದ ಸರಸ್ವತಿಗಳವರು— ಈ ಘಟನೆಯ ತರುವಾಯ ಬ್ರಹ್ಮನು ಪೂರ್ವ ಉಪದ್ವೀಪಕ್ಕೆ ಹೊರಟು ಹೋದನು ಹಾಗು ಅಲ್ಲಿ ಒಂದು ರಾಜ್ಯ ಸ್ಥಾಪನೆ ಮಾಡಿದನು. ಇದರ ಹೆಸರು ಬ್ರಹ್ಮದೇಶವೆಂದಾಯಿತು. ಕೆಲವು ದಿವಸಗಳ ತರುವಾಯ ಕನಿಷ್ಠಭ್ರಾತೃವಾದ ವಾಮನ ವಿಷ್ಣುವಿನ ಕುಶಲತನದಿಂದ ದಾನವರು ರಾಜ್ಯವನ್ನು ಕಳಕೊಳ್ಳಲು ಬ್ರಹ್ಮನು ಪುನಃ ತನ್ನ ಮೊದಲಿನ ವಾಸಸ್ಥಳಕ್ಕೆ ಅರ್ಥಾತ್ ಇಲಾವೃತವರ್ಷಕ್ಕೆ ಹೊರಟುಹೋದನು. ಕೆಲಕಾಲದ ತರುವಾಯ ಬ್ರಹ್ಮನು ಕನಿಷ್ಠಭ್ರಾತೃವಾದ ಇಂದ್ರನ ಕೈಯಲ್ಲಿ ರಾಜ್ಯವನ್ನು ಅರ್ಪಿಸಿ, ಉತ್ತರ ಕುರು ದೇಶದಲ್ಲಿ ಹೋಗಿ ನೂತನ ರಾಜ್ಯವನ್ನು ಸ್ಥಾಪನೆ ಮಾಡಿದನು. ಹಾಗು ಅಲ್ಲಿ ಸ್ಥಾಯೀಭಾವದಿಂದ ವಾಸಮಾಡಹತ್ತಿದನು. ಇದೇ ತೃತೀಯ ಬ್ರಹ್ಮಲೋಕವು. ರಾಮಾಯಣ, ಮಹಾಭಾರತ, ಛಾಂದೋಗ್ಯೋಪನಿಷತ್, ಮನುಸ್ಮೃತಿಗಳಲ್ಲಿ ಈ ಬ್ರಹ್ಮಲೋಕದ ವಿಷಯವೇ ಹೇಳಲ್ಪಟ್ಟಿದೆ.‡

ಈಗ ಈ ಬ್ರಹ್ಮ ಲೋಕದ ಹೊರತು ಬೇರೆಬೇರೆ ಲೋಕಗಳ ವಿಷಯವು ಸಂಕ್ಷೇಪದಿಂದ ವರ್ಣಿಸಲ್ಪಡುವದು ಆವಶ್ಯಕವಾಗಿರುವದು.

---

‡ "ಏವಂ ತಸ್ಮೈವರಂ ದತ್ವಾ ಸರ್ವಲೋಕ ಪಿತಾಮಹಃ ॥
ಇಂದ್ರೇ ತ್ರೈಲೋಕ್ಯಮಾಧಾಯ ಬ್ರಹ್ಮಲೋಕಂ ಗತಃ ಪ್ರಭುಃ ॥
— ಮಹಾಭಾರತ--ಆದಿಪರ್ವ

ಹಿಮಾಲಯದ ದಕ್ಷಿಣಕ್ಕೆ ಹಬ್ಬಿದ ಭೂಭಾಗವು ಭಾರತವರ್ಷವು. ಪೂರ್ವಕಾಲದಲ್ಲಿ ಇದಕ್ಕೆ 'ಪೃಥಿವಿ' ಎಂಬ ಹೆಸರು, ಪೃಥುರಾಜ (ವೇನ ರಾಜನ ಮಗ) ನಿಂದ ಕೊಡಲ್ಪಟ್ಟಿತ್ತು. ಮಹಾಭಾರತದಲ್ಲಿ ಭಾರತವರ್ಷಕ್ಕೆ ದಕ್ಷಿಣ ಕುರುದೇಶವೆಂಬ ಹೆಸರೂ ಇರುವದು. ಆರ್ಯರು ಬರುವ ಮೊದಲು ಅಲ್ಲಿ ಅಸಭ್ಯ ಜನಾಂಗಗಳು ವಾಸವಾಡುತ್ತಿದ್ದವು. ಆರ್ಯರು ಮೊದಲು ಮನುವೇ ಭಾರತದಲ್ಲಿ ರಾಜ್ಯವನ್ನು ಸ್ಥಾಪನೆ ಮಾಡಿದನು. ಈ ಮನುವು. ವಿವಸ್ವಾನನ ಮಗನು. ಸುತರಾಂ ಬ್ರಹ್ಮ, ವಿಷ್ಣು ಇಂದ್ರ (ಶಕ್ರ) ಮೊದಲಾದವರ ಸಹೋದರ ಪುತ್ರನು. ಮನುವು ಶಕ್ರನಾದ ವಿಷ್ಣುವಿನ ಸಹಾಯದಿಂದ ಅಯೋಧ್ಯೆಯಲ್ಲಿ ರಾಜಧಾನಿಯನ್ನು ಸ್ಥಾಪಿಸಿದನು

" ಅಯೋಧ್ಯಾನಾಮ ನಗರೀ ತತ್ರಾಸೀತ್ ಲೋಕವಿಶ್ರುತಾ ।
ಮನುನಾ ಮಾನವೇಂದ್ರೇಣ ಯಾ ಪುರೀ ನಿರ್ಮಿತಾ ಸ್ವಯಮ್ ॥ "
—ರಾಮಾಯಣ--ಬಾಲಕಾಂಡ.

ಮನುವು ವಿವಸ್ವಾನನ ಮಗನೆಂದೂ, ಸೂರ್ಯವಂಶೀಯನೆಂದೂ ಪ್ರಸಿದ್ಧನಾಗಿರುತ್ತಾನೆ. ಮತ್ತು ಸ್ವರ್ಗದಿಂದ ಬಂದ ದೇವತೆಗಳಿಂದ ಈ ಅಯೋಧ್ಯಾಪುರಿಯು ನಿರ್ಮಿತವಾಗಿತ್ತೆಂದು ವೇದದಲ್ಲಿ 'ಅಯೋಧ್ಯೆ' ದೇವಪುರಿಯೆಂದು ಹೇಳಲ್ಪಟ್ಟಿದೆ.

" ದೇವಾನಾಂ ಪುರಮಯೋಧ್ಯಾ " — ಅಥರ್ವವೇದ.

ಮಹಾನುಭಾವನಾದ ಶ್ರೀ ರಾಮಚಂದ್ರನು ಈ ಸೂರ್ಯವಂಶದಲ್ಲಿಯೇ ಜನಿಸಿದನು. ಸೂರ್ಯವಂಶವು ಕ್ಷೀಣದೆಸೆಯನ್ನು ಹೊಂದಿದಾಗ ಭಾರತವರ್ಷದಲ್ಲಿ ಚಂದ್ರವಂಶೀಯ ರಾಜರು ಪ್ರಬಲರಾದರು. ಇವರು ಸಹ ಪ್ರಬಲ ಪ್ರತಾಪದಿಂದ ಹಲವು ಶತಮಾನಗಳವರೆಗೆ ದಿಲ್ಲಿಯ ಹತ್ತಿರ ರಾಜ್ಯಕ್ತವನ್ನು ಮಾಡಿದರು. ದುಷ್ಯಂತ, ನಹುಷ, ಯುಧಿಷ್ಠಿರ ಮೊದಲಾದ ಚಕ್ರವರ್ತಿಗಳು ಈ ಚಂದ್ರವಂಶೀಯರು. ಭಾರತವರ್ಷದ ಈಗಿನ ಹಲವು ರಾಜರು ಚಂದ್ರವಂಶ ಅಥವಾ ಸೂರ್ಯವಂಶದ ರಾಜರಾಗಿರುವರು. ಅಲ್ಲದೆ ಭಾರತೀಯ ಕೋಟ್ಯವಧಿ ಕ್ಷತ್ರಿಯರು ಈ ಚಂದ್ರ ಸೂರ್ಯ ವಂಶದವರೇ ಇರುವರು.

ಭಾರತ ವರ್ಷದ ಉತ್ತರದಲ್ಲಿ ಹಿಮಾಲಯ ಪರ್ವತವು. ಈ ಹಿಮಾಲಯದ ಉತ್ತರಾಂಶದಲ್ಲಿ ಕೈಲಾಸ ಪರ್ವತವು. ಕೈಲಾಸ ಪರ್ವತ ಹಾಗು ಅದರ ಹತ್ತಿರದ ಸ್ಥಾನಗಳನ್ನೊಳಗೊಂಡ ಭಾಗವು ಕಿಂಪುರುಷ ವರ್ಷವೆಂದು ಹೇಳಲ್ಪಡುತ್ತಿತ್ತು.

ಮಹಾಭಾರತದ ಸಭಾಪರ್ವದಲ್ಲಿ ಉಲ್ಲೇಖಿಸಿದ ಮೇರೆಗೆ–ಪರಮಯೋಗಿಯಾದ ಶಿವನು, ಈ ರಾಜ್ಯದ ನಿಜವಾದ ಒಡೆಯನಿದ್ದನು. ಆದರೆ ಅವನ ಕೋಶಾಧ್ಯಕ್ಷನಾದ ಕುಬೇರನ ಕೈಯಲ್ಲಿಯೇ ರಾಜ್ಯ ರಕ್ಷಣೆಯ ಭಾರವಿತ್ತು.

ಇದೇ ಸಭಾಪರ್ವದಲ್ಲಿ (ಅರ್ಜುನ ದಿಗ್ವಿಜಯಾಧ್ಯಾಯದಲ್ಲಿ) ಕೆಳಗೆ ಕಾಣಿಸಿದ ಸಂಗತಿಗಳು ವಿವರಿಸಲ್ಪಟ್ಟಿವೆ. ಅರ್ಜುನನು ಉತ್ತರ ದಿಕ್ಕನ್ನು ಜಯಿಸಲಿಕ್ಕೆ ಹೋಗಿ, ಹಿಮಾಲಯ ಪರ್ವತವನ್ನು ದಾಟಿ, ಶ್ವೇತ ಪರ್ವತದಲ್ಲಿ ಹೋದನು. ಯಾವಾಗಲೂ ತುಷಾರಾಚ್ಛನ್ನವಿದ್ದುದರಿಂದ ಕೈಲಾಸ ಪರ್ವತವೇ ಶ್ವೇತಪರ್ವತವೆಂದು ಹೇಳಲ್ಪಡುತ್ತದೆ. ಅರ್ಜುನನು ಶ್ವೇತಪರ್ವತಕ್ಕೆ ಹೊಂದಿದ ಉತ್ತರ ಭೂ ಭಾಗವನ್ನು, ದ್ರುಮಪುತ್ರ (ಕುಬೇರನ ಮಗ) ನಿಂದ ಪಾಲಿತವಾದ ಕಿಂಪುರುಷಾವಾಸವನ್ನು ಆಕ್ರಮಣಮಾಡಿ ಜಯಿಸಿದನು; ಹಾಗು ಅವನಿಂದ ಕಪ್ಪನ್ನು ತೆಗೆದುಕೊಂಡನು. ಕಿಂಪುರುಷ ವರ್ಷವು ಮಾನಸ ಸರೋವರದ ಹಾಗು ಅದಕ್ಕೆ ಹೊಂದಿದ ಭೂ ಭಾಗದವರೆಗೆ ವಿಸ್ತೃತವಾಗಿತ್ತು. ಈ ವಿಷಯವು ರಾಮಾಯಣದಲ್ಲಿ ಸುಗ್ರೀವನು ತನ್ನ ಅನುಯಾಯಿಗಳಿಗೆ ಹೇಳುವ ಮಾತುಗಳಿಂದ ಸ್ಪಷ್ಟವಾಗುತ್ತದೆ.

"ನೀವು ಶ್ವೇತವರ್ಣದ ಕೈಲಾಸ ಪರ್ವತವನ್ನು ನೋಡಿ, ಒಳ್ಳೇ ಹರ್ಷಿತರಾಗತಕ್ಕದ್ದು. ಅಲ್ಲಿಯೇ ವಿಶ್ವಕರ್ಮನಿಂದ ನಿರ್ಮಿತವಾದ, ಸ್ವರ್ಣಾಲಂಕೃತವಾದ, ಶುಭ್ರವರ್ಣ ಮೇಘಸದೃಶವಾದ, ಕುಬೇರನ ಸುರಮ್ಯವಾದ ಭವನವನ್ನು ನೋಡುವಿರಿ. ಆದರ ಹತ್ತರವೇ ಪ್ರಭೂತ ಪದ್ಮಪರಿಪೂರ್ಣ ವಿಶಾಲವಾದ ಒಂದು ಸರೋವರವನ್ನು ನೋಡುವಿರಿ. ಆ ಸರೋವರದಲ್ಲಿ ರಾಜಹಂಸಗಳೂ, ಅಪ್ಸರರೂ ಆಟವಾಡುತ್ತಿರುವರು. ಅಲ್ಲಿಯೇ ಯಕ್ಷರಾಜನಾದ ಕುಬೇರನು ಯಕ್ಷರಿಂದ ಪರಿವೃತನಾಗಿರುತ್ತಾನೆ." * ಇಲ್ಲಿ ವರ್ಣಿತವಾದ ಸರೋವರವು

---

* ಕೈಲಾಸಂ ಪಾಂಡುರಂ ಪ್ರಾಪ್ಯ ಹೃಷ್ಟಾಯೂಯಂ ಭವಿಷ್ಯಥ ॥
ತತ್ರ ಪಾಂಡುರ ಮೇಘಾಭಂ ಜಾಂಬೂನದ ಪರಿಷ್ಕೃತಮ್ ।
ಕುಬೇರಂ ಭವನಂ ರಮ್ಯಂ ನಿರ್ಮಿತಂ ವಿಶ್ವಕರ್ಮಣಾ ॥
ವಿಶಾಲಾನಲಿನೀ ಯತ್ರ ಪ್ರಭೂತ ಕಮಲೋತ್ಪಲಾ ।
ಹಂಸಕಾರಂಡ ವಾಕೀರ್ಣಾ ಅಪ್ಸರಸೋಗಣ ಸೇವಿತಾ ॥
ತತ್ರ ವೈಶ್ರವಣೋ ರಾಜಾ ಸರ್ವಲೋಕ ನಮಸ್ಕೃತಃ ।
ಧನದೋ ರಮತೇ ಶ್ರೀಮಾನ್ ಗುಹ್ಯಕೈಃ ಸಹ ಯಕ್ಷರಾಟ್ ॥
—ಕಿಷ್ಕಿಂಧಾಕಾಂಡ- ೩೪ ನೆಯ ಸರ್ಗ

ಮಾನಸ ಸರೋವರವೆಂಬುದನ್ನು ಎಲ್ಲರೂ ಬಲ್ಲರು. ಕೈಲಾಸ ಪರ್ವತದ ಉತ್ತರಕ್ಕೆ ಮಾನಸ ಸರೋವರವಿರುವದು. ಕವಿಕುಲ ಗುರು ಕಾಲಿದಾಸನೇ ಮೊದಲಾದ ಕವಿಗಳು, ಮಾನಸದ ರಾಜಹಂಸಗಳನ್ನು ವರ್ಣಿಸಿರುವರು. ಸುತರಾಂ ಕುಬೇರನ ಪ್ರಾಸಾದದ ಹತ್ತರ ಮಾನಸ ಸರೋವರವಿತ್ತು. ಈ ಪ್ರಾಸಾದವು ಮಾನಸದ ದಕ್ಷಿಣಕ್ಕೆ ಇತ್ತೆಂಬುವದು ಸ್ಪಷ್ಟವಾಗಿ ತಿಳಿಯುವದು.

ಈ ಕುಬೇರನ ರಾಜ್ಯವಾದ ಕಿಂಪುರುಷ ವರ್ಷದ ಉತ್ತರಕ್ಕೆ ಯಮನ ಮತ್ತು ಇಂದ್ರನ ರಾಜ್ಯಗಳಿದ್ದವು.

ವಿಷ್ಣು ಪುರಾಣದಲ್ಲಿ:—

"ಮಾನಸೋತ್ತರ ಶೈಲೇತು ಪರ್ವತೋವಾಸವೀ ಪುರೀ ।
ದಕ್ಷಿಣೇನ ಯಮಸ್ಯಾಸ್ಯಾ ಪ್ರತೀಚ್ಯಾಂ ವರುಣಸ್ಯ ಚ ॥"

ಅರ್ಥಾತ್ ಮಾನಸ ಸರೋವರದ ಉತ್ತರದ ಪರ್ವತದಲ್ಲಿ, ಅದರ ಪೂರ್ವಕ್ಕೆ ವಾಸವೀ ಪುರಿ (ಇಂದ್ರನ ಅರಮನೆಯಾದ ವೈಜಯನ್ತಿಯು) ಹಾಗು ಅದೇ ಪರ್ವತದ ದಕ್ಷಿಣದಲ್ಲಿ (ಮಾನಸ ಸರೋವರದ ಉತ್ತರದಲ್ಲಿ) ಯಮನ ಪಟ್ಟಣ; ಹಾಗು ಪಶ್ಚಿಮಕ್ಕೆ ವರುಣನ ಆಲಯವು ಇದ್ದವು.

ವಿಷ್ಣುಪುರಾಣದಲ್ಲಿ—ಮಾನಸದ ಉತ್ತರದಲ್ಲಿಯ ನಿಷಧ ಪರ್ವತದ ಪೂರ್ವಕ್ಕೆ ಈಗಿನ ಮಂಗೋಲಿಯಾದಲ್ಲಿ ಇಂದ್ರನ ಅರಮನೆಯು ದಕ್ಷಿಣಕ್ಕೆ ಅರ್ಥಾತ್ ನಿಜ ತಿಬೇಟ ಅಥವಾ ವೈದಿಕ-ಮಹಾಶಕ ದೇಶದಲ್ಲಿ ಯಮಪುರಿಯು ಇತ್ತು. ಹಾಗು ಇದರ ಪಶ್ಚಿಮಕ್ಕೆ ಅರಲಹೃದ (ವೈದಿಕ "ಅರ್‌ಹೃದ") ಹಾಗು ಕಾಸ್ಪಿಯನ ಸಮುದ್ರದ ಕಡೆಗೆ ವರುಣನ ಪುರಿಯು ಇತ್ತು.

ಈಗ ಇಂದ್ರಪುರಿ (ವೈಜಯಸ್ತೀಧಾಮ) ಸಂಬಂಧದಿಂದ ಹೇಳುವದು ಅವಶ್ಯಕವು. ದೇವತಾ–ಇಂದ್ರನು ಕಶ್ಯಪ ಮುನಿಯ ಎಲ್ಲಕ್ಕೂ ಚಿಕ್ಕಮಗನು. ಸುತರಾಂ ಇವನು ಬ್ರಹ್ಮ, ವಿಷ್ಣು, ವಿವಸ್ವಾನ್ ಮೊದಲಾದವರ ಚಿಕ್ಕ ಸಹೋದರನು. ಅವರ ರಾಜ್ಯದ ಜನರು ಸ್ವಲೋಕವೆಂದಿತ್ತು. ವೈದಿಕ ಯುಗದಲ್ಲಿ ಇದು ಇಲಾವೃತ ವರ್ಷವೆಂಬ ಹೆಸರಿನಿಂದ ಕರೆಯಲ್ಪಡುತ್ತಿತ್ತು. "ಇಲಃ ಪತಿರ್ಮಘವಾ" (ಋಗ್ವೇದ). ಮಘವಾ (ಇಂದ್ರನ ಒಂದು ಹೆಸರು) ಇವನು ಇಲ ಅಥವಾ ಇಲಾಭೂಮಿಯ ರಾಜನು. ಈ ಇಲಾವೃತ ವರ್ಷಕ್ಕೆ 'ಮಂಗದೇಶ'ವೆಂದೂ ಹೆಸರು ಇರುವದು. ಇದರಿಂದಲೇ ಈಗಿನ 'ಮಂಗೊ

'ಲಿಯಾ' ನಾಮದ ಉತ್ಪತ್ತಿಯಾಗಿದೆ. ವೈದಿಕ ಯುಗದಲ್ಲಿ ಮಂಗೋಲಿಯಾವು ಬ್ರಾಹ್ಮಣ ಪ್ರಧಾನ ಸ್ಥಾನವಾಗಿತ್ತು.

" ಮಂಗಾ ಬ್ರಾಹ್ಮಣ ಭೂಯಿಷ್ಠಾಃ "

—ಮಹಾಭಾರತ-ಭೀಷ್ಮಪರ್ವ ೧೧ನೇ ಅಧ್ಯಾಯ.

ಈ ಮಂಗೋಲಿಯಾ ಅಥವಾ ಇಲಾವೃತ ವರ್ಷದಲ್ಲಿ ಯಕ್ಷ, ಗಂಧರ್ವ ಅಪ್ಸರರು ವಾಸಮಾಡುತ್ತಿದ್ದಾರೆ; ಎಂಬ ವಿವರಣೆಯು ಈ ಮೊದಲೇ ಸಿದ್ಧಾಂತ ಶಿರೋಮಣಿ ಗ್ರಂಥದ ಆಧಾರದಿಂದ ಹೇಳಲ್ಪಟ್ಟಿರುತ್ತದೆ. ಇಂದ್ರನ ಸಭೆಯಲ್ಲಿ ದಿವ್ಯಸುಂದರಿಯರಾದ ಅಪ್ಸರೆಯರು ಯಾವಾಗಲೂ, ಗೀತ-ವಾದ್ಯ-ನೃತ್ಯಗಳಲ್ಲಿ ತೊಡಗುತ್ತಿದ್ದರು. ವೈದಿಕಯುಗದಲ್ಲಿ ಮುನಿಗಳೂ, ಋಷಿಗಳೂ ಕ್ಷತ್ರಿಯ ರಾಜರೂ ಇಂದ್ರಪುರಿಗೆ ಬರಹೋಗುವದನ್ನು ಮಾಡುತ್ತಿದ್ದರು. ಮಹರ್ಷಿ ಭರದ್ವಾಜನು ಇಂದ್ರಪುರಿಯಲ್ಲಿ ಆಯುರ್ವೇದವನ್ನು ಕಲಿಯುವದಕ್ಕೋಸುಗ, ಮುನಿಗಳಿಂದ ಪ್ರೇರಿತನಾಗಿ ಹೋಗಿದ್ದನೆಂದು, ಚರಕಸಂಹಿತೆಯಲ್ಲಿ ಸ್ಪಷ್ಟವಾಗಿ ಬರೆಯಲ್ಪಟ್ಟಿದೆ. ಹಲವು ವ್ಯಾಪಾರಿಗಳೂ ಭಾರತವರ್ಷದಿಂದ ವ್ಯಾಪಾರದ ಸರಕುಗಳನ್ನು ತೆಗೆದುಕೊಂಡು, ಹೆಚ್ಚು ಲಾಭದ ಆಶೆಯಿಂದ ಇಂದ್ರಾಲಯ ಮೊದಲಾದವುಗಳಲ್ಲಿ ವ್ಯಾಪಾರ ಮಾಡಲು ಹೋಗುತ್ತಿದ್ದರು. ಅಥರ್ವ ವೇದದಲ್ಲಿ—ಒಬ್ಬ ಭಾರತೀಯ ವ್ಯಾಪಾರಿಯು ತನ್ನ ಸರಕುಗಳನ್ನು ಮಾಸಕ ಹಾಗು ಇಲಾವೃತ ವರ್ಷಗಳಲ್ಲಿ ನಿರಾಪದದಿಂದ ತಕ್ಕೊಂಡು ಹೋಗುವದಕ್ಕೋಸುಗ ಇಂದ್ರನ ಸಹಾಯ ಪ್ರಾರ್ಥನೆ ಮಾಡಿ ಹೇಳುತ್ತಾನೆ. " ಎಲೈ ಇಂದ್ರನೇ ನೀನು ಮಹಾನ್ ವ್ಯಕ್ತಿಯು. ನೀನು ಮಾರ್ಗದಲ್ಲಿಯ ಎಲ್ಲ ವೈರಿ ಹಾಗು ಹಿಂಸ್ರ ಜಂತುಗಳ ಕೈಯಿಂದ ರಕ್ಷಣೆ ಮಾಡಿ, ನಮ್ಮ ವ್ಯಾಪಾರಕ್ಕೆ ಅನುಕೂಲತೆಯನ್ನು ಮಾಡಿಕೊಡು. " ‡

ದಶರಥ ಮಹರಾಜನು ದೇವಾಸುರ ಯುದ್ಧದಲ್ಲಿ ಇಂದ್ರನಿಗೆ ಸಹಾಯ ಮಾಡುವದಕ್ಕೋಸುಗ ಸ್ವರ್ಗಕ್ಕೆ ಹೋಗಿದ್ದನು ಎಂದು ರಾಮಾಯಣದಲ್ಲಿ

---

‡ " ಇಂದ್ರಮಹಂ ವಣಿಜಂ ಚೋದಯಾಮಿ ।
ಸೂದನಂ ಅರಾತಿಂ ಪರಿಪಂಥಿನಂ ಮೃಗಮ್ ।
ಸ ಈಶಾನೋ ಧನದಾ ಅಸ್ತು ಮಹ್ಯಮ್ । "

—ಅಥರ್ವವೇದ.

ಬರೆದಿದೆ. ಅರ್ಜುನನು ವ್ಯಾಸಮುನಿಯ ಪರಾಮರ್ಶದಂತೆ ದಿವ್ಯಾಸ್ತ್ರ ವಿದ್ಯೆಯನ್ನು ಕಲಿಯುವದಕ್ಕೋಸುಗ ಇಂದ್ರಾಲಯಕ್ಕೆ ಹೋಗಿ, ಅಲ್ಲಿ ಐದು ವರ್ಷಕಾಲ ವಾಸಮಾಡಿ ಹಲವು ದಿವ್ಯಾಸ್ತ್ರಗಳನ್ನು ಕಲಿತು, ಭಾರತಕ್ಕೆ ತಿರುಗಿ ಬಂದನು ಎಂದು ಮಹಾಭಾರತದಲ್ಲಿ ಹೇಳಿದೆ. ಇಂದ್ರನಿಗೆ ದೇವರಾಜನೆಂಬ ಹೆಸರು ಇತ್ತು. ಇವನು ಕ್ಷಮತ್ವದಲ್ಲಿಯೂ, ವಿದ್ವತ್ತೆಯಲ್ಲಿಯೂ, ಅನ್ಯರಿಗಿಂತ ಶ್ರೇಷ್ಠನಿದ್ದನೆಂದೇ ಸ್ವರ್ಗಭೂಮಿಯ ರಾಜನಾಗಿ ಮಾಡಲ್ಪಟ್ಟಿದ್ದನು. "ಇಂದ್ರ" ಎಂಬುದು ಯಾವದೊಂದು ವ್ಯಕ್ತಿವಿಶೇಷದ ಹೆಸರು ಅಲ್ಲ. ಇದು ಒಂದು ಉಪಾಧಿಯು. ಎಲ್ಲರಿಗಿಂತ ಶ್ರೇಷ್ಠನಾದ ವ್ಯಕ್ತಿಗೆ ಮಾತ್ರ ಈ ಉಪಾಧಿಯು ಕೊಡಲ್ಪಡುತ್ತಿತ್ತು. ಇಂದ್ರನು ದೇವಸೇನಾಪತಿ ಇದ್ದನು. ಮೊದಲು ಇವನಿಗೆ 'ಶಕ್ರ' ನೆಂದು ಹೆಸರು ಇತ್ತು. 'ಇಂದ್ರ' ಎಂಬುದು, ಉಪಾಧಿವಿಶೇಷವಾಗಿರುವದೆಂಬ ವಿಷಯವು ಚಂದ್ರವಂಶೀಯನಾದ 'ನಹುಷ' ಚಕ್ರವರ್ತಿಯ ಇಂದ್ರತ್ವ ಪ್ರಾಪ್ತಿಯ ಘಟನೆಯಿಂದಲೇ ಕಂಡುಬರುವದು. ನಗರ ಚಕ್ರವರ್ತಿಯು ಅಶ್ವಮೇಧ ಯಜ್ಞವನ್ನು ಮಾಡಿ, ಇಂದ್ರನಾಗುವ ಪ್ರಯತ್ನವನ್ನು ಮಾಡಿದ್ದನು. ಸರ್ವಶ್ರೇಷ್ಠ ರಾಜನೇ ಅಶ್ವಮೇಧ ಯಜ್ಞವನ್ನು ಮಾಡಲು ಸಮರ್ಥನು. ಅಂತೇ ಸರ್ವಶ್ರೇಷ್ಠನೇ ಇಂದ್ರನಾಗುತ್ತಿದ್ದನು.

ಈಗ ಯಮಪುರಿಯ ವಿಷಯವು ಹೇಳಲ್ಪಡುವದು:—

ಯಮನು ಕಶ್ಯಪಮುನಿಯ ಮೊಮ್ಮಗನು; ಹಾಗು ವಿವಸ್ವಾನನ ಮಗನು. ವಿವಸ್ವಾನ (ಸೂರ್ಯ) ನಿಗೆ ಯಮ, ಶನಿ, ಮನು, ಎಂಬ ಮೂವರು ಮಕ್ಕಳಿದ್ದರು. ಯಮನು ಮನುವಿನ ಮಲತಾಯಿಯ ಮಗನು. ಸುತರಾಂ ಅವನೂ ಮನುಷ್ಯನಿದ್ದನೆಂಬಲ್ಲಿ ಆಶ್ಚರ್ಯವೇನು? ಮಾಶಕದೇಶ ಅಥವಾ ಈಗಿನ ತಿಬೇಟವೇ ಯಮನ ರಾಜ್ಯವೆಂದು ಮೊದಲೇ ಹೇಳಿದ್ದೇವೆ. ವೇದ ಪಾಠದಿಂದ ಗೊತ್ತಾಗುವದೇನಂದರೆ- ದೇವತೆಗಳ ಮಲತಾಯಿಯ ಮಕ್ಕಳಾದ ಅಸುರರು ಮೊದಲು ಅಲ್ಲಿ ವಾಸಮಾಡುತ್ತಿದ್ದರು. ಕೆಲ ಕಾಲದ ತರುವಾಯ ದೇವಾಸುರರ ಯುದ್ಧದಲ್ಲಿ ಅಸುರರು ಸೋತು, ತಮ್ಮ ರಾಜ್ಯವನ್ನು ಬಿಟ್ಟು ಬೇರೆ ಕಡೆಗೆ ಹೊರಟು ಹೋದರು. ಆ ಕಾಲದಲ್ಲಿ ಈ ಪ್ರದೇಶವು ವಡವಾನಲದಿಂದ ಕೂಡಿಕೊಂಡಿದ್ದು, ಒಂದು ದೊಡ್ಡ ಸುಡುವ ಭೂಮಿಯಂತೆ ಇದ್ದು, ಬಹಳೇ ಅನಾರೋಗ್ಯಕರವಾಗಿತ್ತು. ಇದಕ್ಕೋಸುಗವೇ ಇದಕ್ಕೆ 'ನರಕ' ವೆಂಬ ಹೆಸರು ಕೊಡಲ್ಪಟ್ಟಿತ್ತು.

"ವಸನ್ತಿ ಮೇರೌ ಸುರಸಿದ್ಧ ಸಂಘಾ ಔರ್ವೇ ಚ
ಸರ್ವೇ ನರಕಾ ಸ ದೈತ್ಯಾಃ"
—ಸಿದ್ಧಾಂತ ಶಿರೋಮಣಿ–ಭುವನಕೋಷಾಧ್ಯಾಯ

'ಔರ್ವ' ಎಂದರೆ ವಡವಾನಲದಿಂದ ಕೂಡಿದ ಸ್ಥಳವು. ಈ ನರಕ ದೇಶವು ಮಾನಸ ಸರೋವರದ ಉತ್ತರ ತೀರದಿಂದಲೇ ಆರಂಭವಾಗಿತ್ತು. ಈಗ ಸಹ ಮಾನಸದ ಉತ್ತರ ತೀರವು ಅತೀವ ಅಸ್ವಾಸ್ಥ್ಯಕರವು. ಪ್ರವಾಸಿಗಳು ಪ್ರಾಣ ಭಯದಿಂದ ಮಾನಸದ ಉತ್ತರ ತೀರಕ್ಕೆ ಹೋಗುವದಿಲ್ಲ.

ರಾಜ್ಯದ ಸುಶಾಸನದ ನಿಮಿತ್ತವಾಗಿ ಯಮನು ಈ ನರಕ ಪ್ರದೇಶದಲ್ಲಿ ಒಂದು ಪಟ್ಟಣವನ್ನು ಕಟ್ಟಿಸಿದ್ದನು. ಅದರ ಹೆಸರು ಸಂಯಮನೀ ಪುರವು. ಇದೇ ನರಕದ ರಾಜಧಾನಿಯು. ವಾಯು ಪುರಾಣದಲ್ಲಿ, ಮಾನಸದ ಉತ್ತರಕ್ಕೆ ಸಂಯಮನೀ ಪುರದಲ್ಲಿ ವೈವಸ್ವತ ಯಮನು ವಾಸಮಾಡುತ್ತಾನೆಂದು ಹೇಳಿದೆ. †

"ಯತ್ರ ರಾಜಾ ವೈವಸ್ವತೋ, ಯತ್ರ ಅವರೋಧನಂ ದಿವಃ "(ಋಗ್ವೇದ). ಯಮನು ತನ್ನ ವಾಸಸ್ಥಾನದ ಹತ್ತರ ಒಂದು ಅವರೋಧವನ್ನು ಕಟ್ಟಿಸಿದ್ದನು. ದುಷ್ಟರನ್ನು ಶಿಕ್ಷಿಸುವದರ ಸಲುವಾಗಿಯೇ ಈ ಕಾರಾಗೃಹವು ನಿರ್ಮಿತವಾಗಿತ್ತು. ಯಮನು ದೊಡ್ಡ ಅಪರಾಧಕ್ಕೆ, ಅಪರಾಧಿಗಳಿಗೆ ಪ್ರಾಣದಂಡನೆಯನ್ನು ಸಹ ವಿಧಿಸುತ್ತಿದ್ದನು. ಅವನು ಅತ್ಯಂತ ನ್ಯಾಯವಂತನು. ಅವನು ಎಂದೂ ಅನ್ಯಾಯ ಅಥವಾ ಅಧರ್ಮದ ಪಕ್ಷಪಾತಿಯಾಗಿದ್ದಿಲ್ಲ. ಅಂತೇ ಅವನು ಧರ್ಮಾವತಾರ, ಧರ್ಮ, ಎಂದು ಕರೆಯಲ್ಪಡುತ್ತಾನೆ. ವೈವಸ್ವತ ಯಮನು ದೊಡ್ಡ ಅಪರಾಧಿಗಳಿಗೆ ಪ್ರಾಣದಂಡದ ಆಜ್ಞೆಯನ್ನು ಕೊಡುತ್ತಿದ್ದನೆಂದು ವೇದದಲ್ಲಿ ಕೆಲ ಕೆಲವು ಸ್ಥಳಗಳಲ್ಲಿ "ಮೃತ್ಯು" ಎಂಬ ಹೆಸರಿನಿಂದಲೂ ಕರೆಯಲ್ಪಡುತ್ತಾನೆ. ಸ್ವರ್ಗ ರಾಜ್ಯದ ಎಲ್ಲ ಜನರ ವಿಚಾರವೂ ಅವನ ತತ್ವಾವಧಾನದಲ್ಲಿಯೇ ಆಗುತ್ತಿತ್ತೆಂಬುವದು ಹೆಚ್ಚು ಸಂಭವನೀಯವು. ಅವನ ಚರರು (ಈಗಿನ ಪೋಲೀಸ, ಗುಪ್ತ ಪೋಲೀಸ ಮೊದಲಾದ) ಅಪರಾಧಿಗಳನ್ನು ಶೋಧಿಸಿ, ಅವರನ್ನು ಯಮನ ಹತ್ತರ ತಕ್ಕೊಂಡು ಬರುತ್ತಿದ್ದರು.

---

† "ದಕ್ಷಿಣೇನ ಪುನರ್ಮೇರೋ ರ್ಮಾನಸಸ್ಯೈವ ಮೂರ್ಧನಿ ।
ವೈವಸ್ವತೋ ನಿವಸತಿ ಯಮಃ ಸಂಯಮನೇ ಪುರೇ ||"
—ವಾಯು ಪುರಾಣ, ೪೫ನೆಯ ಅಧ್ಯಾಯ."

ಅದೇ ಸ್ವರ್ಗದ ಪರಿಷ್ಠ ಕೋರ್ಟ (*High Court*). ಅವನೇ ಮುಖ್ಯ ನ್ಯಾಯಾಧೀಶ (*Chief Justice*) ನಾಗಿದ್ದನು. ಯಮನೇ ಸರ್ವ ಜೀವಿಗಳಿಗೂ ಸಾವನ್ನು ತರುವನೆಂದೂ, ಅವನು ಇನ್ನೂ ಬದುಕಿರುವನೆಂದೂ, ನಮ್ಮಲ್ಲಿಯ ಬಹು ಜನರು ನಂಬಿರುವದು ಅತ್ಯಂತ ಅಸಮಂಜಸವಾದ ಸಂಗತಿಯು. ವೇದ ಪುರಾಣಾದಿಗಳನ್ನು ಓದಲು ಈ ತಿಳುವಳಿಕೆಯು ಉಳಿಯುವದಿಲ್ಲವೆಂಬದನ್ನು ಹೇಳಲಿಕ್ಕೆ ಬೇಡ. ಯಮನ ಸಂಬಂಧದ ಈ ತಪ್ಪು ತಿಳುವಳಿಕೆಯು ಇಂದಿನದಲ್ಲ. ಎಷ್ಟೋ ದಿನಗಳಿಂದ ನಡೆದು ಬಂದಿರುತ್ತದೆ.

ವೈದಿಕ ಯುಗದ ಕೊನೆಯ ಭಾಗದಲ್ಲಿ ಯಾವಾಗ ಜನರು ಕ್ರಮೇಣ ವೇದವಿದ್ಯಾ ವಿಹೀನರಾಗಲು ಆರಂಭಿಸಿದರೋ ಅಂದಿನಿಂದಲೇ ಸಾಮಾನ್ಯ ಜನರ ಮನದಲ್ಲಿ 'ಯಮನೇ ಮೃತ್ಯುವಿನ ಕರ್ತನೆಂದು ಅರ್ಥಾತ್ ಅವನೇ ಎಲ್ಲ ಮಾನವರಿಗೆ ಹಾಗು ಪ್ರಾಣಿಗಳಿಗೆ ಮರಣವನ್ನು ತರುವನು, ಎಂಬ ವಿಶ್ವಾಸವು ಹುಟ್ಟಹತ್ತಿತು. ವಾಸ್ತವಿಕವಾಗಿ ಈ ಯಮನು ಮೃತ್ಯುವಿನ ಕರ್ತನೂ ಇದ್ದಿಲ್ಲ; ಹಾಗು ಮಾನವನು ಸತ್ತ ಮೇಲೆ ಎಲ್ಲಿಗೆ ಹೋಗುತ್ತಾನೆಂಬದನ್ನೂ ಅವನು ತಿಳಿದಿದ್ದಿಲ್ಲ. ಈ ವಿಷಯವು ಯಜುರ್ವೇದೀಯ ಕಠೋಪನಿಷತ್ತಿನಲ್ಲಿ "ಯಮ--ನಚಿಕೇತ" ಸಂವಾದದಲ್ಲಿ ವಿಶದವಾಗಿ ವರ್ಣಿತವಾಗಿರುತ್ತದೆ. ನಚಿಕೇತನು ಈ ಯಮನ ಅರಮನೆಗೆ ಹೋಗಿ ಮೂರು ರಾತ್ರಿ ವಾಸಮಾಡಿದನು. ಆಗ ಯಮನು ಅರಮನೆಯಲ್ಲಿ ಇದ್ದಿಲ್ಲ. ಅನಂತರ ಯಮನು ಅರಮನೆಗೆ ಬಂದು, ನಚಿಕೇತನಿಗೆ ನಮಸ್ಕರಿಸಿ— "ನೀವು ದೊಡ್ಡವರು; ನಮ್ಮ ಮನೆಗೆ ಬಂದು ಮೂರು ರಾತ್ರಿ ಉಪವಾಸ ಇರುವಿರಿ. ಅದಕ್ಕೋಸುಗ ನಮ್ಮ ಕಡೆಯಿಂದ ಮೂರು ವರಗಳನ್ನು ತಕ್ಕೊಳ್ಳಿರಿ." ಎಂದು ಹೇಳಿದನು. ನಚಿಕೇತನು ಮೂರನೆಯ ವರವನ್ನು ಬೇಡಿದನು.— "ಭಗವನ್ ಮಾನವರಿಗೆ ಆತ್ಮವು ಅಗೋಚರವೆಂದು ಕೆಲವರು ಹೇಳುವರು. ಆತ್ಮವು ಇರುವದೆಂದು ಕೆಲವರು, ಇರುವದಿಲ್ಲವೆಂದು ಹಲವರು ಹೇಳುವರು. ಇದರ ಸತ್ಯತೆಯನು ನನಗೆ ಅನುಗ್ರಹ ಪೂರ್ವಕವಾಗಿ ತಿಳಿಸತಕ್ಕದ್ದು. ಇದೇ ನನ್ನ ಪ್ರಾರ್ಥನೀಯ ತೃತೀಯ ವರವು." ಈ ಪ್ರಶ್ನಕ್ಕೆ ಉತ್ತರವಾಗಿ ಯಮನು— "ಪೂರ್ವಕಾಲದಲ್ಲಿ ದೇವತೆಗಳೂ (ಬ್ರಹ್ಮ, ವಿಷ್ಣು, ಶಿವ, ಇಂದ್ರ ಮೊದಲಾದವರು) ಆತ್ಮವನ್ನು ತಿಳಿಯಲು ಸಮರ್ಥರಾಗಲಿಲ್ಲ. ಮುಂದಿನ ಕಾಲದಲ್ಲಿಯೂ, ಈ ಆತ್ಮ ವಿದ್ಯೆಯು ಅವರಿಗೆ ಸುಜ್ಞೇಯವಾಗುವದಿಲ್ಲ. ಅಂದ ಮೇಲೆ ನಾನ್ನು

ಎಷ್ಟರವನು ? ಇದು ಬಹು ಬಿಗಿಯಾದ ಪ್ರಶ್ನೆ. ನಚಿಕೇತಾ, ನೀನು ಬೇರೆ ವರವನ್ನು ಬೇಡು. †

' ಮನುಷ್ಯನು ಸತ್ತಮೇಲೆ ಯಮನ ಮನೆಗೆ ಹೋಗುವನು. ' ಎಂಬೀ ಮಾತು ಸಂಪೂರ್ಣವಾಗಿ ಸುಳ್ಳಿರುವದೆಂದು ಈ ಘಟನೆಯಿಂದ ಗೊತ್ತಾಗುವದು. ಒಂದು ವೇಳೆ ಮನುಷ್ಯನು ಸತ್ತು ಯಮನ ಮನೆಗೆ ಹೋಗುತ್ತಿದ್ದರೆ, ಯಮನು ಜೀವಗಳ ಪರಿಗಣನೆಯನ್ನು ಅವಶ್ಯವಾಗಿ ಇಡುತ್ತಿದ್ದನು. ಹಾಗು ಈ ಮಾತು ಸತ್ಯವಾಗಿದ್ದರೆ ಬ್ರಹ್ಮ, ವಿಷ್ಣು, ಶಿವ ಪ್ರಭೃತಿ ದೇವತೆಗಳಿಗೂ ಜೀವಗಳ ಅವಸ್ಥೆಯ ವಿಚಾರದ ಗೊಂದಲದಲ್ಲಿ ಬೀಳಬೇಕಾಗುತ್ತಿದ್ದಿಲ್ಲ. ಮತ್ತು ಯಮನು ಸಹ ನಚಿಕೇತನನ ಪ್ರಶ್ನಕ್ಕೆ ಸ್ಪಷ್ಟವಾಗಿ ಉತ್ತರ ಹೇಳಲು ಸಮರ್ಥನಾಗಿದ್ದನು ಜನರು ಪಿತೃಭೂಮಿ—ಇಲಾವೃತ ವರ್ಷದಿಂದ ಭಾರತ ವರ್ಷದಲ್ಲಿ ಬಂದು ವಸಾಹತುಗಳನ್ನು ಸ್ಥಾಪಿಸುತ್ತಾರೆ. ಹಾಗು ವೃತ್ರ್ಯದಂಡದ ಆಜ್ಞಾಕಾರಿಯಾದ ಯಮನು ಅವರ ವಂಶದ ಒಬ್ಬ ಮನುಷ್ಯನು. ಸುತರಾಂ ಅವನೂ ಮರಣಾಧೀನನು. ಅಂದಮೇಲೆ ಅವನು ಜನರ ಮೃತ್ಯುವಿನ ಕರ್ತನಾಗುವದು ಹೇಗೆ ? ಜನರು ಮರವಿನಿಂದಲೇ ಈ ಅವಾಸ್ತವ ಕಲ್ಪನೆಯ ಸೃಷ್ಟಿಯನ್ನು ಮಾಡಿರುತ್ತಾರೆ. ಪಿತೃಲೋಕವಾಸಿಗಳಾದ ದೇವತಗಳು ಯಮನನ್ನು ರಾಜನನ್ನಾಗಿ ಮಾಡಿದರು. ( ತಸ್ಮಾತ್ ಯಮಃ ಪಿತೃಣಾಂ ರಾಜಾ ) ಈ ಕಾರಣದಿಂದಲೇ ಯಮನು ಪಿತೃಲೋಕದ ರಾಜನಾದನು.

---

† ನಚಿಕೇತ ಉವಾಚಃ—

" ಯೇಯಂ ಪ್ರೇತೆ ವಿಚಿಕಿತ್ಸಾ ಮನುಷ್ಯೇಽಸ್ತಿತ್ಯೇಕೇ
ನಾಯ ಮಸ್ತೀತಿ ಚೈಕೇ, ಏತಾ ವಿದ್ಯಾಮನುಶಿಷ್ಟ ।
ಸ್ತಯಾಹಂ ವರುಣಾಮೇಷ ವರಸ್ತೃತೀಯಃ ॥ "

—ಕಠೋಪನಿಷತ್ ೨೦ ನೆಯ ಮಂತ್ರ

ಯಮ ಉವಾಚಃ—

ದೈವೇರತ್ರಾಪಿ ವಿಚಿಕಿತ್ಸಿತಂ ಪುರಾ, ನಹಿಸುಜ್ಞೇಯ
ಮನುರೇಷ ಧರ್ಮಃ । ಅನ್ಯಂ ವರಂ ನಚಿಕೇತೋ
ವೃಣೀಷ್ವ... ಇತ್ಯಾದಿ.

—ಕಠೋಪನಿಷತ್ ೨೧ ನೆಯ ಮಂತ್ರ

ಎಂದು ವೇದವಲ್ಲಿ ಹೇಳಿರುವದು. ಈ ಪಿತೃಲೋಕವು ಪ್ರೇತಲೋಕವಲ್ಲ. ಮಹರ್ಷಿ ದೇವಲನು - "ನ ಪ್ರೇತಾಃ ಪಿತರಃ ಸ್ಮೃತಾಃ" ಅರ್ಥಾತ್ ಪ್ರೇತ ಗಣವು, ಎಂದೂ ಪಿತೃಪದ ವಾಚ್ಯವಾಗಲು ಶಕ್ಯವಾಗುವದಿಲ್ಲ. ಅತ ಏವ ಯಮನು ಎಂದೂ ಪ್ರೇತಲೋಕದ ರಾಜನಾಗಲು ಶಕ್ಯವಾಗುವದಿಲ್ಲ. ಜನರ ಈ ತಿಳುವಳಿಕೆಯು ಭ್ರಮಾತ್ಮಕವಾದುದು. ಯಮನು ವೈದಿಕ 'ಮಾಶಕ' ದೇಶದ ನರಕ ಭೂಮಿಯಲ್ಲಿಯೇ ರಾಜ್ಯವಾಳುತ್ತಿದ್ದನು.

ಈ ಯಮಪುರಿಯ ಸ್ಥಿತಿಯ ಸಂಬಂಧ ಮಹಾಭಾರತದ ಸಭಾ ಪರ್ವ ದಲ್ಲಿ ಹೀಗೆ ಬರೆದಿರುವದು-"ಆ ಸ್ಥಾನವು ನಾತಿ ಶೀತೋಷ್ಣವು. ಮತ್ತು ಯಮನು ಅದರ ಸಂಯಮನೀ ಪುರಿಯಲ್ಲಿ ರಾಜರ್ಷಿ-ಬ್ರಹ್ಮರ್ಷಿಗಳಿಂದ ಪರಿ ವೇಷ್ಟಿತನಾಗಿ ವಾಸಮಾಡುತ್ತಾನೆ. ಆ ಸ್ಥಾನದಲ್ಲಿ ಹಲವು ಬಗೆಯ ರುಚಿ ಕರ ಖಾದ್ಯಗಳು ದೊರೆಯುವವು. ಅಲ್ಲಿ ಗಂಧರ್ವ, ಕಿನ್ನರ, ಹಾಗು ಅಪ್ಸ ರರು ಗೀತ ವಾದ್ಯಗಳಿಂದ ಸುಖದಲ್ಲಿ ಕಾಲ ಕಳೆಯುತ್ತಾರೆ. ಹಾಗು ಸಾಧು ಗಳು, ಸನ್ಯಾಸಿಗಳು, ಪುಣ್ಯವಂತ ವ್ಯಕ್ತಿಗಳು, ಧರ್ಮಾವತಾರನಾದ ಯಮ ನನ್ನು ನೋಡಲಿಕ್ಕೆ ಹೋಗುವರು." ಆಶ್ಚರ್ಯದ ವಿಷಯವೇನಂದರೆ:— ಈ ವರ್ಣನೆಯಲ್ಲಿ ಶ್ರಾದ್ಧ ಮಂತ್ರದಲ್ಲಿ "ಯಮದ್ವಾರೆ ಮಹಾಘೋರೆ ತಪ್ತಾ ವೈತರಣೀ ನದೀ" ಎಂದು ವರ್ಣಿತವಾದ ನದಿಯ ಉಲ್ಲೇಖವಿಲ್ಲ. ಯಾಕೆ ಇಲ್ಲವೆಂಬದನ್ನು ವಿಚಾರವಂತ ವಾಚಕರಿಗೆ ಹೇಳುವ ಅವಶ್ಯಕತೆಯಿಲ್ಲ.

---

# ಮಹಾನುಭಾವಿ ಬಸವಣ್ಣನ ಸ್ತುತಿ.

( ಮ ರಾ. ರಾ. ಶಿವಪ್ಪ ಅಡಿವೆಪ್ಪ ತುಪ್ಪದ ಮು. ಗದಗ ಇವರು ಕಳಿಸಿದ್ದು )

ಬಸವ ನಿಮ್ಮಯ ಮಹಿಮೆ ಉಸುರಲೆನ್ನಳವಲ್ಲ
ಪಶುಪತಿಯೆ ತಾ ಬಲ್ಲ ಸಿದ್ಧಲಿಂಗ ।

ಬಸವ ಭಾಗ್ಯದ ನಿಧಿಯೆ ಬಸವ ಪರುಷದ ಕಣಿಯೆ
ಬಸವ ಚಿಂತಾಮಣಿಯೆ ನೀ ಎನ್ನ ಧನಿಯೆ ।

ಬಸವಯ್ಯ ನಿಮ್ಮಿಂದೆ ಬದುಕಿದೆನು ಬಾಳಿದೆನು
ಪಶುಪತಿಯ ಪಾದವನು ಕಂಡೆ ದೇವಾ ।

ನೀ ಮಾಡಿದುಪಕಾರ ನಾನೆಷ್ಟು ಪೇಳಲಿ
ತಾನು ಬಲ್ಲನು ಗುರುವೆ ಸಿದ್ಧಲಿಂಗ ।

ನಿಮ್ಮ ಪಾದವ ಸೋಂಕಿ ಬ್ರಹ್ಮಲಿಖಿತಳುಕಿತ್ತು
ಹಮ್ಮು ಬಿಟ್ಟೋಡಿತ್ತು ನಿಮ್ಮ ಕಂಡು ।

ಗುರುಲಿಂಗ ಜಂಗಮದ ವರಭಕ್ತಿ ತಿಳಿಸಿದಿರಿ
ಪರವಸ್ತು ನೀವೆನ್ನ ಪ್ರಾಣವಾಗಿ ।

ಪರಿಪರಿಯ ವಚನದಲಿ ಪರಮಾಮೃತವ ತುಂಬಿ
ಪರಿಣಾಮ ತೋರಿದಿರಿ ಮನಸಿನಲ್ಲಿ ।

ಎನ್ನವನು ಇವನೆಂದು ಮನ್ನಿಸುತ ಕರೆದೆನಗೆ
ಚನ್ನಾಗಿ ಪೇಳಿದಿರಿ ಗುರುಸ್ವಾಮಿಯೆ ।

ಎತ್ತ ಹೋದರು ಬೆನ್ನಹತ್ತಿ ಬರುವೆನು ಗುರುವೆ
ನಿತ್ಯ ನಿತ್ಯದಿ ಶಿಕ್ಷೆ ಮಾಡು ಕಂಡ್ಯಾ ।

ಚಿತ್ತದೊಲ್ಲಭ ಗುರುವೆ ಸತ್ಯ ಶಿವಶರಣರಿಗೆ
ಒತ್ತೊತ್ತಿ ಕರೆದೆನ್ನ ಒಪ್ಪಿಸಯ್ಯ ।

ಸಿದ್ಧನಾ ಕರುಣದಲಿ ಬುದ್ಧಿಯನು ಕಲಿಸಿದಿರಿ
ಶುದ್ಧ ಶಿವಾಚಾರದ ಮಾರ್ಗ ಹಿಡಿದು ।
ಗುದ್ದಾಟವೇಕಯ್ಯ ಗುರುಪಾದ ದೊರಕಿರಲು
ಮಧ್ಯಾಹ್ನ ಬಿಸಲಂತೆ ಭೋಗವೆಲ್ಲ
ಸಿದ್ಧನಾಮವ ಜಪಿಸಿ ಗೆದ್ದೆ ನಾ ಭವದುಃಖ
ಬುದ್ಧಿವಂತರು ನೀವು ಕೇಳಿರಣ್ಣಾ ।
ಸಿದ್ಧಬಸವನ ಪ್ರಾಣ ಇದ್ದದ್ದು ಕಲ್ಯಾಣ
ಮುದ್ದು ಬಸವನ ಚರಣ ಎನ್ನಹರಣ ।
ನಮ್ಮಪ್ಪ ಬಸವಣ್ಣ ನಮ್ಮವ್ವ ನೀಲವ್ವ
ನಮ್ಮಯ್ಯ ಪ್ರಭುರಾಯ ಚನ್ನಬಸವ ।
ಇನ್ನುಳಿದ ಶರಣರಾ ಚರಣಕ್ಕೆ ನಮೋ ಎಂದು
ಧನ್ಯನಾದೆನು ಗುರುವೆ ಯೋಗಿನಾಥಾ ।
ಆರು ಎನಗೆಂದು ಕೇಳಿದರೆ ಮಾರಹರ ಶಿವ-
ಶರಣರಾ ಮನೆಯ ಮಗನಾದೆ ನಾ ।
ನಮ್ಮಪ್ಪ ಬಸವಣ್ಣ ನಮ್ಮವ್ವ ನೀಲವ್ವ
ನಮ್ಮ ಬಂಧು ಬಳಗ ಶಿವಶರಣರು ।
ನಮ್ಮವರು ಕಳುಹಿದರು ನಾ ಬಂದೆ ಮರ್ತ್ಯಕ್ಕೆ ಹಿಂ-
ದೆ ಮಾಡಿದ ಸಾಲ ತಿದ್ದುವುದಕೆ ।
ತಿಂದ ರೊಕ್ಕದ ಸಾಲ ತಿದ್ದಿ ಋಣಗಳೆದು ನಾ-
ಬಂದೆ ನೋಡಪ್ಪ ಸೆಟ್ಟಿಯರ ಬಳಿಗೆ ।
ಸಾಕು ಲೋಕದ ಭೋಗ ಸಾಕು ದುಷ್ಟರ ಸಂಗ
ಸಾಕಿನ್ನು ಹುಟ್ಟುವದು ಭವ ಉಂಡೆ ದೇವಾ ।
ಲೋಕ ರಕ್ಷಿಪ ನಮ್ಮ ಗುರುಸಿದ್ಧ ದಯವಿರಲಿ
ಯಾಕೆ ನಮಗೆ ಹಲವು ಚಿಂತೆಗಳು ಮನಕೆ ।

ಟೀಪು:— ಹೆಚ್ಚಿಗೆ ಪ್ರತಿಗಳು ಸಿಗದ ಕಾರಣ ನಮಗೆ ದೊರಕಿದ ಪ್ರತಿಯಂತೆಯೇ ಅಚ್ಚು ಮಾಡಿಸಲಾಗಿದೆ. ಯಾರಾದರೂ ತಮ್ಮ ಪ್ರತಿಗಳನ್ನು ಕಳಿಸಿಕೊಟ್ಟರೆ ಈಗಿನದನ್ನು ಸರಿಪಡಿಸಲಾಗುವದು.

ಬಸವೇಶ್ವರನು ಬ್ರಾಹ್ಮಣ ಕುಲದಲ್ಲಿ ಹುಟ್ಟಿದವನು. ಆದರೆ ದೇವರ ದಾಸಿಮಯ್ಯನು ನೆಯ್ಗೆ ಕೆಲಸ ಮಾಡುವವನಾದರೂ ಕೂಡ ಅವನು ನಡೆಯಲ್ಲಿ ತನ್ನಕಿಂತ ಶ್ರೇಷ್ಠನಾದುದರಿಂದ ತಾನು ಜಾತಿಯಲ್ಲಿ ಬ್ರಾಹ್ಮಣನಾಗಿದ್ದರೂ ದಾಸಿಮಯ್ಯನು ತನ್ನ ಮನೆಯಲ್ಲಿ ಮಾಡಿದ ಶಿವದಾನ ಎಂದರೆ ಮಜ್ಜಿಗೆಯನ್ನು ಸಹ ನನಗೆ ಕೊಡುವದಿಲ್ಲೆಂದು ಒಂದು ವಚನದಲ್ಲಿ ಹೇಳಿದ್ದಾನೆ! ಆ ವಚನವು ಯಾವದೆಂದರೆ—

'ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸದಿರಯ್ಯ! ಕಕ್ಕಯ್ಯನೊಕ್ಕುದನಿಕ್ಕ ನೋಡಯ್ಯಾ. ದಾಸಯ್ಯ ಶಿವದಾನವನೆರೆಯ ನೋಡಯ್ಯ. ಮನ್ನಣೆಯ ಚನ್ನಯ್ಯನೆನ್ನುವ ಮನ್ನಿಸ. ಉನ್ನತ ಮಹಿಮ ಕೂಡಲಸಂಗಮದೇವ ಶಿವಧೋ, ಶಿವಧೋ.
(ನಂ॥ ೫೬೭)

ಬಸವೇಶ್ವರನು ದೇವರ ದಾಸಿಮಯ್ಯನ ಹೆಂಡತಿಯಾದ ದುಗ್ಗಳೆಗೋಸ್ಕರ ಸಹ ಪೂಜ್ಯಭಾವವನ್ನು ತಾಳಿದ್ದಾನೆ.ಅವನು ಕೆಳಗಿನ ವಚನದಲ್ಲಿ ಅವಳ ಭಕ್ತಿಯನ್ನು ಹೊಗಳಿದ್ದಾನೆ.

'ನೆರೆನಂಬೋ, ನೆರೆನಂಬೋ ದರದುರವಿಲ್ಲದೆ ಸಾಮವೇದಿಗಳಂತೆ. ನೆರೆನಂಬೋ, ನೆರೆನಂಬೋ ದಾಸ ದುಗ್ಗಳೆಯಂತೆ. ನೆರೆನಂಬೋ, ನೆರೆನಂಬೋ ಸಿರಿಯಾಳ ಚಂಗಳೆಯಂತೆ, ನೆರೆನಂಬೋ, ನೆರೆನಂಬೋ ಸಿಂಧುಬಲ್ಲಾಳನಂತೆ. ನಂಬಿದೆಯಾದರೆ ತನ್ನನೀವ ಕೂಡಲಸಂಗಮದೇವ.
(ನಂ॥ ೪೩)

ಇದರಿಂದ ದುಗ್ಗಳೆಯು ಭಕ್ತಿಗೋಸ್ಕರ ಒಂದಿನ ಕಾಲದಲ್ಲಿ ಬಹು ಪ್ರಸಿದ್ಧಳಾಗಿದ್ದಳೆಂಬುದು ಗೊತ್ತಾಗುತ್ತದೆ.

ಕೆಳಗಿನ ವಚನದಲ್ಲಿ ಬಸವೇಶ್ವರನು ದಾಸಿಮಯ್ಯನ ಭಕ್ತಿಯ ಮುಂದೆ ತನ್ನದೇನೂ ಅಲ್ಲ, ಅವನಿಂದ ತಾನು ಕಲಿಯತಕ್ಕದು ಬಹಳ ಇದೆ ಎಂದು ಹೇಳಿಕೊಂಡಿದ್ದಾನೆ! ಅದು ಯಾವದೆಂದರೆ—

'ಭಕ್ತಿ ಇಲ್ಲದ ಬಡವ ನಾನಯ್ಯ. ಕಕ್ಕಯ್ಯನ ಮನೆಯಲು ಬೇಡಿದೆ. ದಾಸಯ್ಯನ ಮನೆಯಲು ಬೇಡಿದೆ. ಚನ್ನಯ್ಯನ ಮನೆಯಲು ಬೇಡಿದೆ. ಎಲ್ಲಾ ಪುರಾತನರು ನೆರೆದು ಭಕ್ತಿ ಭಿಕ್ಷವನಿಕ್ಕಿದರೆ ಎನ್ನ ಪಾತ್ರೆ ತುಂಬಿತ್ತು ಕೂಡಲಸಂಗಮದೇವಾ. (ನಂ.– ೫೯೩)

ಬಸವೇಶ್ವರನು ತನ್ನ ಇನ್ನೊಂದು ವಚನದಲ್ಲಿ ದಾಸಿಮಯ್ಯನು ತನುಮನಧನದಲ್ಲಿ ವಂಚನೆಯನ್ನು ಮಾಡಲು ಅರಿಯನೆಂದು ಹೇಳಿದ್ದಾನೆ. ಇದರಿಂದ ಬಸವೇಶ್ವರನಿಗೆ ಅವನ ಚರಿತ್ರೆಯಲ್ಲಿಯ ಅಂಶಗಳು ನಮ್ಮಕಿಂತಲೂ ಹೆಚ್ಚಾಗಿ ಗೊತ್ತಿರಬಹುದೆಂಬು ತೋರುತ್ತದೆ. ಆ ವಚನವು ಅವುದೆಂದರೆ—

'ಸೋಲಬಲ್ಲರು ಅವರು ಗೆಲಲರಿಯರಯ್ಯಾ! ತನುಮನಧನದಲ್ಲಿ ವಂಚನೆಯನರಿಯರಯ್ಯ ದಾಸಯ್ಯ ಸಿರಿಯಾಳನವರು. ಕೂಡಲಸಂಗನ ಶರಣರು ಉಪಚಾರವನರಿಯರಯ್ಯ. (ನಂ॥ ೬೫೮)

ಬಸವೇಶ್ವರನು ದಾನಶೂರನೆಂದು ಅವನ ಕೀರ್ತಿಯು ಬಹಳ ಇದೆ. ಆದರೆ ಅವನು ತನ್ನ ಒಂದು ವಚನದಲ್ಲಿ ತನ್ನಕಿಂತಲೂ ದೇವರ ದಾಸಿಮಯ್ಯನೇ ಇದರಲ್ಲಿ ಹೆಚ್ಚಿನವನೆಂದು ಹೇಳಿಕೊಂಡಿದ್ದಾನೆ!

" ಬಾಣಮಯೂರನಂತೆ ಬಣ್ಣಿಸಬಲ್ಲೆನೇ ? ಸಿರಿಯಾಳನಂತೆ ಉಣಲಿಕ್ಕ ಬಲ್ಲೆನೇ ? ದಾಸಿಮಯ್ಯನಂತೆ ಉಡಕೊಡಬಲ್ಲೆನೇ ? ಉಂಡುಟ್ಟು ಕೊಟ್ಟರೆ, ಮುಯ್ಯಿಗೆ ಮುಯ್ಯಿ ಎನಿಸಿತ್ತು. ಎನಗೆ ಕೊಟ್ಟರೆ ನಿಮ್ಮಧರ್ಮ ಕೂಡಲಸಂಗಮದೇವ. (ನಂ.—೬೮೪)

ಈ ಪ್ರಕಾರ ಬಸವೇಶ್ವರನು ದಾಸಿಮಯ್ಯನ ಉಜ್ವಲಭಕ್ತಿ, ಅವನ ಕಾಪಟ್ಯರಹಿತ ವರ್ತನೆ, ಅವನ ಔದಾರ್ಯ, ಅವನ ದಾಸೋಹದ ನಡೆ, ಇವುಗಳನ್ನು ಅತ್ಯಂತವಾಗಿ ಹೊಗಳಿದ್ದಾನೆ.

ಬಸವೇಶ್ವರನು ಯಾವಾಗಲೂ ಸತ್ಯವನ್ನು ನುಡಿಯುವವನು ಇಂಥವನು ದೇವರ ದಾಸಿಮಯ್ಯನ ಮತ್ತು ಅವನ ಹೆಂಡತಿಯ ವಿಷಯವಾಗಿ ಹೀಗೆ ಹೇಳಿದುದರ ಮೇಲಿಂದ ಈ ಉಭಯತರು ಹಿಂದಿನ ಕಾಲದಲ್ಲಿ ಎಂಥ ಉಚ್ಚ ಸ್ಥಾನವನ್ನು ಹೊಂದಿದ್ದರೆಂಬುದನ್ನು ನಾವು ಊಹಿಸಬಹುದು. ಬಸವೇಶ್ವರನು ಅವರನ್ನು ತನ್ನ ವಚನಗಳಲ್ಲಿ ಹದಿನಾಲ್ಕು ಸಲ ನಾನಾವಿಧವಾಗಿ ಹೊಗಳಿದ್ದಾನೆ. ದೇವರದಾಸಿಮಯ್ಯನ ವಿಷಯವಾಗಿ ಪುರಾತನ ಕಾಲದಲ್ಲಿ ಜನರು ಎಷ್ಟು ಪೂಜ್ಯಭಾವವನ್ನು ತಾಳಿದ್ದರೆಂಬುದನ್ನು ತಿಳಿಯಲು ಬಸವೇಶ್ವರನ ಈ ಉಕ್ತಿಗಳೇ ನಮಗೆ ಬಲವಾದ ಆಧಾರಗಳಾಗಿವೆ. ಆದ್ದರಿಂದ ಅವನ ಶಬ್ದಗಳಿಂದಲೇ ನಾವು ದೇವರ ದಾಸಿಮಯ್ಯನ ಯೋಗ್ಯತೆಯನ್ನು ಇಲ್ಲಿ ನಿರೂಪಿಸಿದ್ದೇವೆ.

ದೇವರ ದಾಸಿಮಯ್ಯನು ಜನರಿಗೆ ಬೋಧಿಸುತ್ತಿದ್ದ ತತ್ವಗಳಾವನೆಂಬುದನ್ನು ಅವನು ರಚಿಸಿದ ವಚನಗಳಲ್ಲಿ ನಾವು ಸ್ಪಷ್ಟವಾಗಿ ಕಂಡು ಹಿಡಿಯಬಹುದು. ಅವುಗಳಲ್ಲಿ ವೀರಶೈವ ಮತದ ಶುದ್ಧ ತತ್ವಗಳೇ ನಿರೂಪಿತವಾಗಿವೆ. ಅವುಗಳಲ್ಲಿ ಷಟ್ ಸ್ಥಲಗಳು, ಅಷ್ಟಾವರಣಗಳು, ಮೂವತ್ತಾರು ತತ್ವಗಳು, ನೂರೊಂದು ಸ್ಥಲಗಳು ಇವುಗಳ ವಿವರಣೆಗಳು ಇವೆ. ಅವು ಬಹು ಸೊಗಸಾದ ಕನ್ನಡದಲ್ಲಿ ಬಹು ಅಮೋಘವಾದ ರೀತಿಯಿಂದ ಹೇಳಲ್ಪಟ್ಟಿವೆ. ಅವನ ವಚನಗಳು ಕನ್ನಡ ವಾಙ್ಮಯದಲ್ಲಿ ಶಾಶ್ವತವಾಗಿ ಉಳಿಯುವಂಥವುಗಳಿರುತ್ತವೆ.

ಅವನು ತನ್ನ ೧೩೧ ನೇ ವಚನದಲ್ಲಿ ಆರು ಮೂವತ್ತಾರು ಸ್ಥಲಗಳನ್ನು ಉಲ್ಲೇಖಿಸಿದ್ದಾನೆ. ೧೩ ನೇ ವಚನದಲ್ಲಿ ನೂರೊಂದು ಸ್ಥಲಗಳ ರೀತಿಯನ್ನು ಹೇಳಿದ್ದಾನೆ. ೧೪ ನೇ ಮತ್ತು ೧೫ ನೇ ವಚನಗಳಲ್ಲಿ ಗುರುವಿನ ಕಾರ್ಯಗಳನ್ನೂ ೧೬ ನೇ, ೨೧ ನೇ ವಚನಗಳಲ್ಲಿ ಗುರು ಮತ್ತು ಲಿಂಗ ಇವುಗಳ ಸ್ವರೂಪನ್ನೂ ೫೧ ನೇ ವಚನದಲ್ಲಿ ಜಂಗಮನೊಡನೆ ಇರತಕ್ಕ ರೀತಿಯನ್ನೂ ೯೧ ನೇ, ೯೨ ನೇ ವಚನಗಳಲ್ಲಿ ಪ್ರಸಾದದ ಸ್ವರೂಪನ್ನೂ ೭೦ ನೇ, ೩೯ ನೇ ವಚನಗಳಲ್ಲಿ ವಿಭೂತಿ, ರುದ್ರಾಕ್ಷಿಗಳ ಉಪಯೋಗವನ್ನೂ ೪೦ ನೇ, ೪೧ ನೇ ವಚನಗಳಲ್ಲಿ ಅನುಭಾವವೇನೆಂಬುದನ್ನೂ ಬಹು ಮಾರ್ಮಿಕವಾಗಿ ಹೇಳಿದ್ದಾನೆ. ದೇವರ ದಾಸಿಮಯ್ಯನು ವೇದಾಗಮೋಪನಿಷತ್ತುಗಳನ್ನೂ ಪುರಾಣಗಳನ್ನೂ ಚನ್ನಾಗಿ ಬಲ್ಲವನಾಗಿದ್ದನೆಂಬುದು ಇವುಗಳಲ್ಲಿ ಹೊರಪಡುತ್ತಿದೆ ಅವನು ಸಂಸ್ಕೃತವನ್ನು ಚನ್ನಾಗಿ ಬಲ್ಲವನಾಗಿದ್ದನೆಂಬುದು ಅವನ ೨೭ ನೇ ವಚನದಿಂದ ತಿಳಿದುಬರುತ್ತಿದೆ. ಅವನಲ್ಲಿ ಜಾತಿ, ಕುಲ ಭೇದಭಾವಗಳೆಂಬುವು ಏನೂ ಇರಲಿಲ್ಲ. ಎಲ್ಲ ಶಿವಶರಣರಂತೆ ಅವನು ಬಹು ವಿಶಾಲ ಹೃದಯಿಯು. ಕೆಳಗೆ ಬಿದ್ದ ಕಾಡು ಜನರನ್ನು ಸನ್ಮಾರ್ಗಕ್ಕೆ ಹಚ್ಚಿದ್ದಾನೆ. ಸಂಸ್ಕಾರರಹಿತರಾದವರನ್ನು ಸುಸಂಸ್ಕೃತರನ್ನಾಗಿ ಮಾಡಿದ್ದಾನೆ. ಈ ರೀತಿ ಅವನು ಮುದುನೂರಿನಲ್ಲಿ ವರ್ತಿಸುತ್ತ ಬಂದಿದ್ದರಿಂದ ವೀರಶೈವ ಧರ್ಮವು ಅವನಿದ್ದ ಈ ಪ್ರಾಂತದಲ್ಲೆಲ್ಲ ಅಂದರೆ ಈಗಿನ ಕಲಬುರ್ಗಿ ಮತ್ತು ವಿಜಾಪುರ ಜಿಲ್ಲೆಗಳಲ್ಲಿ ಬಹಳ ಪ್ರಸಾರ ಹೊಂದಿತೆಂದು ಊಹಿಸಲು ಯಾವ ಅಭ್ಯಂತರವೂ ಇರಲಾರದು.

ದೇವರ ದಾಸಿಮಯ್ಯನು ಹೀಗೆ ಧರ್ಮೋದ್ಧಾರ ಕಾರ್ಯಗಳಲ್ಲಿ ತೊಡಗಿದವನಾಗಿದ್ದರೂ ಅವನು ತನ್ನ ನಿತ್ಯದ ನೆಯ್ಗೆಯ ಕಾಯಕವನ್ನು ಬಿಟ್ಟಿರಲಿಲ್ಲ. ಇದು ಪುರಾತನ ಶಿವಶರಣರ ಪದ್ಧತಿಯು. ಅವನು ತನ್ನ ಕಾಯಕದಲ್ಲಿ ಬಹು ನಿಷ್ಣಾತನಾಗಿದ್ದನು. ಅನೌಲ್ಯವಾದ ವಸ್ತ್ರಗಳನ್ನು ಅವನು ಸಿದ್ಧಪಡಿಸುವನು. ಅವನು ನೇಯುತ್ತಿದ್ದ ಸ್ಥಾನಗಳನ್ನು ಈಗಲೂ ಮುದನೂರು ಗ್ರಾಮದ ಜನರು ಬಹಳ ಹೆಮ್ಮೆಯಿಂದ ಅಲ್ಲಿ ತೋರಿಸುತ್ತಾರೆ. ಅವನು ತನ್ನ ಕಾಯಕವನ್ನು ಶಿವಶರಣರ ರೀತಿಯಂತೆ ಶಿವಾರ್ಪಿತ ಭಾವದಿಂದ ಮಾಡುತ್ತ ಅದರಿಂದ ಬಂದುದನ್ನು ಗುರು ಲಿಂಗ ಜಂಗಮದ ದಾಸೋಹ ಕಾರ್ಯಗಳನ್ನು ಜರಿಗಿಸುತ್ತ ಮುದನೂರು ಗಾಮದಲ್ಲಿ ಅನೇಕ ವರ್ಷಗಳನ್ನು ಕಳೆದನು.

ಹೀಗಿರಲು ಅವನು ಪರಮಾತ್ಮನ ಸೇವೆ ಎಂದು ಒಂದು ಅಗಾಧವಾದ ಪಾಗನ್ನು (ರುಮಾಲು) ನೇಯಲಿಕ್ಕೆ ಪ್ರಾರಂಭಿಸಿದನು. ಅವನು ಅದರಲ್ಲಿ ಧವಲ ವರ್ಣವನ್ನಿಟ್ಟು, ಈ ವರ್ಣದಲ್ಲಿ ಅನೇಕ ಚಿತ್ರ ವಿಚಿತ್ರ ತರವಾದ ಬಣ್ಣಗಳನ್ನು ಹಾಕಿ ಅದನ್ನು ನೇಯಲಿಕ್ಕೆ ತೊಡಗಿದನು. ಅವನು ಅದನ್ನು ಅತ್ಯಂತ ಪರಿಶ್ರಮಪೂರ್ವಕವಾಗಿ ದಿನಾಲು ಸ್ವಲ್ಪ ಸ್ವಲ್ಪ ನೇಯುತ್ತ ಹೋಗಲು, ಅದು ೩೬೦ ಮೊಳ ಉದ್ದವಾದರೂ ಅದು ಗಾತ್ರದಲ್ಲಿ ಅತ್ಯಂತ ಸೂಕ್ಷ್ಮತರವಾದದ್ದಾಯಿತು. ಇದಕ್ಕೆ ಅನೇಕ ವರ್ಷಗಳು ಅವನಿಗೆ ಹಿಡಿದವು. ಅವನು ಶಿವಾರ್ಪಿತ ಬುದ್ಧಿಯುಳ್ಳವನಾಗಿ ಈ ಕಾರ್ಯವನ್ನು ಮಾಡುತ್ತ ಬಂದುದರಿಂದ ಈ ಪಾಗು ಅತ್ಯಂತ ಆಶ್ಚರ್ಯಕರವಾದ ಮತ್ತು ಸುಂದರವಾದ ವಸ್ತ್ರವಾಯಿತು. ದೇವರದಾಸಿಮಯ್ಯನು ಅದನ್ನು ಮಾರಬೇಕೆಂದು ಬೆಳವಲು ದೇಶದಲ್ಲಿ ಆಗ ಒಂದು ಮುಖ್ಯ ಪಟ್ಟಣವಾಗಿದ್ದ ಸಿದ್ದಾಪುರ ಎಂಬ ಗ್ರಾಮದ ಸಂತೆಗೆ ಹೋದನು. ಸಂತೆಯಲ್ಲಿ ಅದನ್ನು ಮಾರಲು ಕುಳಿತಿರಲು ಅಲ್ಲಿಯ ಜನರು ಅದರ ಸೌಂದರ್ಯವನ್ನು ನೋಡಿ ಬೆರಗಾದರು. ಅದನ್ನು ನೋಡಬೇಕೆಂದರೆ ಅವರ ಕಣ್ಣುಗಳು ಕುಕ್ಕಿದವು. ಅಲ್ಲಿಯ ಹರದಿಗರು ಅದನ್ನು ಮುಟ್ಟಿ ನೋಡಲು ಸಹ ಹಿಂಜರಿದರು. ರಾಜಕುಮಾರರು ಅದನ್ನು ನೋಡಿ ನೋಡಿ ಬೆಲೆಗಟ್ಟದೆ ಹೋದರು.

ಹೀಗಿರುವಲ್ಲಿ ನೆರೆದವರಲ್ಲಿ ದುರಾಚಾರಿಯೂ ಭವಿಯೂ ಆದವನೊಬ್ಬನು ಅಲ್ಲಿಗೆ ಬಂದು ಆ ವಸ್ತ್ರವನ್ನು ಮುಟ್ಟಲು, ಆಕ್ಷಣವೇ ಅದರೊ

ಳಗಿಂದ ಒಂದು ಚಕ್ರವು ಹೊರಬಿದ್ದು ಅವನ ಕಯ್ಯನ್ನು ಗಾಯುಗೊಳಿಸಿತು. ಅದನ್ನು ನೋಡಿ ಜನರು, ಈ ವಸ್ತ್ರವನ್ನು ನೆಯ್ದವನು ಒಬ್ಬ ಶಿವ ಶರಣನು, ಶಿವಾರ್ಪಣ ಬುದ್ಧಿಯಿಂದ ಇದನ್ನು ನೆಯ್ದಿದ್ದಾನೆ, ಇದು ಪವಿತ್ರವಾದ ವಸ್ತ್ರವು, ಇಂಥದನ್ನು ನಾವು ಅಲ್ಪ ಮನಸ್ಸಿನವರು ಮುಟ್ಟಬಾರದೆಂದು ಭಾವಿಸಿ ಅಲ್ಲಿಯ ಜನರು ಭಯುಗ್ರಸ್ತರಾದರು. ಆ ವಸ್ತ್ರವನ್ನು ಯಾರೂ ತೆಗೆದುಕೊಳ್ಳಲಿಲ್ಲ. ಆದ್ದರಿಂದ ದೇವರದಾಸಿಮಯ್ಯನು ಅದನ್ನು ಅಲ್ಲಿ ಮಾರುವದನ್ನು ಬಿಟ್ಟುಕೊಟ್ಟು ತನ್ನ ಗ್ರಾಮಕ್ಕೆ ಹಿಂದಿರುಗಿದನು.

ದೇವರದಾಸಿಮಯ್ಯನು ಹಿಂದಿರುಗಿ ಬರುತ್ತಿರಲಾಗಿ ಪರಮಾತ್ಮನು ಶಿವಾರ್ಪಣಬುದ್ಧಿಯಿಂದ ಮಾಡಿದ ಅವನ ಕಾಯಕದ ಮಹಿಮೆಯನ್ನು ಜನರಿಗೆಲ್ಲರಿಗೂ ತೋರಬೇಕೆಂದು ಅಪೇಕ್ಷೆಬಟ್ಟು ಒಬ್ಬ ವೃದ್ಧ ಜಂಗಮನ ವೇಷವನ್ನು ಧಾರಣಮಾಡಿ ದಾಸಿಮಯ್ಯನ ಇದಿರಿಗೆ ಬಂದು ಅವನಿಗೆ ಆಶೀರ್ವಾದವನ್ನು ಮಾಡುತ್ತ, ದಾಸಿಮಯ್ಯನೇ ನೀನು ನೆಯ್ದ ಈ ವಸ್ತ್ರವನ್ನು ನನಗೆ ಕೊಡು, ನಾನು ಚಳಿಯಿಂದ ನಡಗುತ್ತಿದ್ದೇನೆ, ನನಗೆ ಹೊದಿಯಲಿಕ್ಕೆ ಏನೂ ಇಲ್ಲ, ಎಂದು ಎನ್ನಲು ದಾಸಿಮಯ್ಯನು-ನಾನು ಶಿವಭಕ್ತರ ಮನೆಯ ದಾಸನು, ಎಂದು ನುಡಿಯುತ್ತ ಆ ದಿವ್ಯಾಂಬರವನ್ನು ಅವನ ಕಯ್ಯಲ್ಲಿಟ್ಟನು. ಆಗ ಆಜಂಗಮನು ಅದರ ಚಿತ್ರತರವಾದ ಬಣ್ಣಗಳನ್ನು ನೋಡಿ ಗಹಗಹಿಸಿ ನಕ್ಕು, ಅದನ್ನು ದಾಸಿಮಯ್ಯನ ಇದಿರಿಗೆ ಪರಪರನೆ ಹರಿದು ಹಾಕಿ ಬಿಟ್ಟನು! ಹೀಗೆ ಹರಿದು ಅದರ ಒಂದು ತುಣುಕನ್ನು ತನ್ನ ಶಿರಕ್ಕೆ ಸುತ್ತಿದನು. ಮತ್ತೊಂದನ್ನು ಹೊದೆಯಲು ತನ್ನ ವಸನವನ್ನಾಗಿ ಮಾಡಿಕೊಂಡನು. ಇನ್ನೊಂದನ್ನು ತನ್ನ ಪಾದದಲ್ಲಿದ್ದ ಹುಣ್ಣಿಗೆ ಕಟ್ಟಿದನು. ಉಳಿದದ್ದನ್ನು ಸಣ್ಣಸಣ್ಣ ಚೂರು ಮಾಡಿ ತನ್ನ ದಂಡಕೋಲಿಗೆ ಸುತ್ತಿದನು. ಮಿಕ್ಕಾದುದನ್ನು ತನ್ನ ಹಸ್ತಪಾವುಡ ಮಾಡಿಕೊಂಡನು. ದೇವರದಾಸಿಮಯ್ಯನು ಜಂಗಮನು ಅದನ್ನು ಹರಿದು ಹೀಗೆ ಮಾಡಿದ್ದನ್ನು ನೋಡಿ, ಎಷ್ಟುಮಾತ್ರವೂ ಕೋಪವನ್ನು ತಾಳಲಿಲ್ಲ. ಅವನು ಈ ಪದಾರ್ಥವು ನಿಮ್ಮದು, ನಿಮ್ಮಿಚ್ಛೆಗೆ ಬಂದಂತೆ ಅದನ್ನು ಮಾಡಬಹುದು, ಎಂದು ನುಡಿಯುತ್ತ ಅವನನ್ನು ವಂದಿಸಿ, ಅವನನ್ನು ತನ್ನಮನೆಗೆ ಕರೆದುಕೊಂಡು ಬಂದನು! ಅಲ್ಲಿ ಅವನು ತನ್ನ ಹೆಂಡತಿಗೆ ಆದ ಸಂಗತಿಗಳನ್ನು ಹೇಳಲಾಗಿ, ಆ ಸಾಧ್ವಿಯು ಎಷ್ಟು ಮಾತ್ರವೂ ಕೋಪ

ವನ್ನು ತಾಳದೆ, ಆ ಜಂಗಮನಿಗೆ ಸಕಲ ಪದಾರ್ಥಗಳನ್ನು ನೀಡಿ ಅವನನ್ನು ತೃಪ್ತಿಬಡಿಸಿದಳು !!

ಶಿವನು ದಾಸದುಗ್ಗಳೆಯರು ನಡಿಸುತ್ತಿದ್ದ ಪ್ರಪಂಚದ ಈ ರೀತಿ ಮತ್ತು ಅವರ ನಡೆ ಇವುಗಳನ್ನು ನೋಡಿ ಅತ್ಯಂತ ಪ್ರೀತನಾಗಿ ಇಂಥವರಿಗೆ ಬಡತನವೆಂಬುದಿರಬಾರದು ಎಂದೆನ್ನುತ್ತ, ಅವನು ದುಗ್ಗಳೆಗೆ-ನೀನು ಮಹಾಪತಿವ್ರತೆಯು, ಪತಿಯು ಅಪ್ಪಣೆಯನ್ನು ಯಾವಾಗಲೂ ಪಾಲಿಸುತ್ತ ಬಂದಿರುವಿ, ಇಕೋ ನಾನು ಕೊಡುವ ಈ ಹಿಡಿ ಧಾನ್ಯವನ್ನು. ಇದನ್ನು ನೀನು ನಿನ್ನ ಮನೆಯೊಳಗಿನ ಧಾನ್ಯ ಸಂಗ್ರಹದಲ್ಲಿ ಶಿವಮಂತ್ರವನ್ನು ಉಚ್ಚರಿಸುತ್ತ ಕೂಡಿಸಿಬಿಡು. ಆಗ ನಿನ್ನ ಆ ಧಾನ್ಯವು ಅಕ್ಷಯುವಾಗುವದು. ನಾನು ಕೊಟ್ಟುದು ಇದು ತವನಿಧಿಯು. ಹೀಗೆ ಹೇಳಿ ದೇವರದಾಸಿಮಯ್ಯನಿಗೆ—ನಿನ್ನಂತೆ ಯಾರು ಕಾಯಕ ಮಾಡುತ್ತ ಅಷ್ಟಾವರಣ ನಿರತರಾಗಿರುವರೋ, ಅವರಲ್ಲಿ ಯಾರು ಸತ್ಯ ಸದಾಚಾರವುಳ್ಳವರಾಗಿ ಸಮಸ್ತ ಪ್ರಾಣಿಗಳಲ್ಲಿ ಸಮದೃಷ್ಟಿಯುಳ್ಳವರಾಗಿರುವರೋ, ಯಾರು ಇಷ್ಟಲಿಂಗ ಪೂಜೆಯಲ್ಲಿ ಆಸಕ್ತರೋ, ಯಾರು ಪಂಚಾಕ್ಷರೀ ಮಂತ್ರವನ್ನು ಅಹೋರಾತ್ರಿ ಸ್ಮರಿಸುವರೋ, ಅವರಲ್ಲಿ ಈ ತವನಿಧಿಯು ಸ್ಥಿರವಾಗಿ ಉಳಿಯುವದು. ಆದರೆ ಯಾವಾಗ್ಗೆ ಅವರಲ್ಲಿ ಅಹಂಕಾರವು ತೋರುವದೋ, ಆ ಕ್ಷಣವೇ ಅದು ಮಾಯವಾಗುತ್ತದೆ. ಅವರಲ್ಲಿ ಧಾನ್ಯದ ಕೊರತೆಯುಂಟಾಗಿ ಅವರು ಕಷ್ಟಕ್ಕೆ ಈಡಾಗುವರು, ಎಂದು ಹೇಳಿ ಶಂಕರನು ಅಲ್ಲಿಯೇ ಮಾಯವಾದನು.

ಶಿವಾರ್ಪಣ ಬುದ್ಧಿಯಿಂದ ಕಾಯಕ ಮಾಡುವವರಲ್ಲಿ ಬಡತನವೆಂದಿಗೂ ಇರಲಾರದು. ಕಾಯಕದ ತತ್ವಗಳಂತೆ ಆಚರಿಸುವವರಲ್ಲಿ ತವನಿಧಿಯು ಯಾವಾಗಲೂ ಇರುತ್ತದೆ. ಈ ಸಂಗತಿಯನ್ನು ಪರಮಾತ್ಮನು ಈ ಪವಾಡದ ಮೂಲಕ ಜಗತ್ತಿಗೆ ತೋರಿಕೊಟ್ಟಿದ್ದಾನೆ.

ದೇವರ ದಾಸಿಮಯ್ಯನ ಈ ಪವಾಡದಲ್ಲಿ ಶಿವಾನುಭವದ ಅನೇಕ ಮಹತ್ವದ ತತ್ವಗಳು ಅಡಕವಾಗಿರುತ್ತವೆ. ಆದ್ದರಿಂದ ಈ ಪವಾಡವು ಶಿವಶರಣರ ಚರಿತ್ರೆಗಳಲ್ಲಿ ಬಹು ಪ್ರಸಿದ್ಧವಾಗಿರುತ್ತದೆ. ಬಸವೇಶ್ವರನು ಇದನ್ನು ತನ್ನ ವಚನಗಳಲ್ಲಿ ಆಗಿಂದಾಗ್ಗೆ ಉಲ್ಲೇಖಿಸುತ್ತಾನೆ. ಅವುಗಳಲ್ಲಿ ಕೆಲವುಗಳನ್ನು ಮಾತ್ರ ನಾವು ಇಲ್ಲಿ ಕೊಡುತ್ತೇವೆ.

(೧) ದಾಸ ದೇವ ತನ್ನ ವಸ್ತ್ರವನಿತ್ತು ತವನಿಧಿಯ ಪ್ರಸಾದವ ಪಡೆದ. ಸಿರಿಯಾಳ ತನ್ನ ಮಗನನಿತ್ತು ಪ್ರಾಣ ಪ್ರಸಾದವ ಪಡೆದ. ಬಲ್ಲಾಳ ತನ್ನ ವಧುವನಿತ್ತು ಸಮತೆ ಪ್ರಸಾದವ ಪಡೆದ. ಇವರೆಲ್ಲರು ತಮ್ಮತಮಗೆ ಮಾಡಿ ಹಡೆದರು ಸಮ್ಯಕ್ ಪದವಿಯ. ನಾನೇನು ಅರಿಯದ ಭಕ್ತಿಯ ಬಡವಂಗೆ ಕರುಣಿಸು ಕೂಡಲ ಸಂಗಮದೇವಾ.

(ನಂ॥ ೩೩೯)

(೨) ಎಲ್ಲಿ ಹೊಕ್ಕಲ್ಲಿ ನಿಮ್ಮ ವಿಕಾರವ ಮಾಣೆ. ಇದೊಂದು ಗರುವತನವೇ? ದಾಸನ ವಸ್ತ್ರವ ಬೇಡುವುದೊಂದು ಗರುವತನವೇ? ಸಿರಿಯಾಳನ ಮಗನ ಬೇಡುವುದೊಂದು ಗರುವತನವೇ? ಕೋಡಗನ ಹುಲ್ಲಲ್ಲಿ ಮುಸುಕಿಟ್ಟಂತೆ ಕೂಡಲ ಸಂಗಮದೇವ ನಿಮ್ಮ ಪರಿ ಬೇರೆ.

(ನಂ॥ ೬೨೭)

(೩) ದಾಸನ ವಸ್ತ್ರವ ಬೇಡದ ಮುನ್ನ ತವನಿಧಿಯನಿತ್ತಡೆ ನಿಮ್ಮ ದೇವರೆಂಬೆ. ಸಿರಿಯಾಳನ ಮಗನ ಬೇಡದ ಮುನ್ನ ಕಾಂಚಿಯ ಪುರವ ಕೈಲಾಸಕೊಯ್ದರೆ, ನಿಮ್ಮ ದೇವರೆಂಬೆ. ಬಲ್ಲಾಳನ ವಧುವ ಬೇಡದ ಮುನ್ನ ಸ್ವಯಲಿಂಗವ ಮಾಡಿದರೆ, ನಿಮ್ಮ ದೇವರೆಂಬೆ. ದೇಹಿ ನೀನು, ವ್ಯಾಪಾರಿಗಳು ನಮ್ಮವರು. ಬೇಡು ಕೂಡಲಸಂಗಮದೇವಾ ಎಮ್ಮವರ ಕೆಯ್ಯಲು. (ನಂ॥ ೩೭೨)

(೪) ದೇವನಿಂತವನೆಂದು ತೋರಿಕೊಡುವೆನು ಗಣಂಗಳಿಗೆ. ಬಲ್ಲಾಳನ ವಧುವ ಬೇಡಿದಾತ ನೀ ದೇವಾ! ದೇವನಿಂತವನೆಂದು ತೋರಿಯೆ ಕೊಡುವೆನು ಗಣಂಗಳಿಗೆ. ದಾಸನ ವಸ್ತ್ರವ ಬೇಡಿದಾತ ನೀ ದೇವಾ! ದೇವನಿಂತವನೆಂದು ತೋರಿಕೊಡುವೆನು ಗಣಂಗಳಿಗೆ. ಸಿರಿಯಾಳನ ಮಗನ ಬೇಡಿದಾತ ನೀ ದೇವಾ. ಕೂಡಲಸಂಗಮದೇವ ಜಂಗಮ ಮುಖ ಲಿಂಗವಾಗಿ ಕಾಡಿನೋಡುವ, ಬೇಡಿನೋಡುವ. (ನಂ॥ ೪೪೬)

ಈ ಪವಾಡದ ಉಲ್ಲೇಖಗಳು ೬೮೫, ೪೫೦, ೪೫೯, ೬೫೪ ಈ ವಚನಗಳಲ್ಲಿಯೂ ಕೂಡ ಇರುತ್ತವೆ. ವಿಸ್ತಾರ ಭಯಕ್ಕಾಗಿ ನಾವು ಅವುಗಳನ್ನು ಇಲ್ಲಿ ಉದಹರಿಸಿಲ್ಲ.

ದೇವರ ದಾಸಿಮಯ್ಯನು ತವನಿಧಿಯನ್ನು ಪಡೆದ ಬಳಿಕ ಅವನ ದಾಸೋಹದ ಕಾರ್ಯಗಳು ನಾಡಿನಲ್ಲಿ ಮತ್ತಿಷ್ಟು ಭರದಿಂದ ಸಾಗಿದವು.

ಅವನ ಪೊವಾಡಗಳೂ ಕೂಡ ಹೆಚ್ಚುತ್ತ ಹೋದವು. ಇದರಿಂದ ಅವನ ಶಿಷ್ಯ ಜನರ ಸಂಖ್ಯೆಯೂ ಬೆಳೆಯುತ್ತ ಹೋಯಿತು. ಹೀಗಿರಲು ಒಂದು ದಿವಸ ಭಕ್ತರಲ್ಲೊಬ್ಬರ ಮನೆಯಲ್ಲಿ ಮದುವೆಯ ಕಾರ್ಯವು ಉಂಟಾಗಲು ಅವನು ಮದುವೆಗೆ ಬರಬೇಕೆಂದು ದೇವರ ದಾಸಿಮಯ್ಯನಿಗೆ ಬಿನ್ನಹ ಮಾಡಲು ದಾಸಿಮಯ್ಯನು ಭಕ್ತ ತಿಂಥಣಿಯೊಡಗೂಡಿ ಹೋಗುವಾಗ, ಮಾರ್ಗದಲ್ಲಿ ಗೌತಮಿ ನದಿಯು ಕಟ್ಟಿ ಹರಿಯುತ್ತಿರಲು, ಅವನು ಅದಕ್ಕೆ ಅಪ್ಪಣೆ ಮಾಡಲು, ಅದು ಇಬ್ಭಾಗವಾಗಿ ಅವನಿಗೆ ದಾರಿಯನ್ನು ಕೊಟ್ಟಿತು. ಹೀಗೆ ಹಾದಿಯನ್ನು ಬಿಡಿಸಿ ಮದುವೆಗೆ ಹೋಗಿ ಶಿವಗಣ ದರುಶನದಿಂದ ಅಲ್ಲಿ ಮದುವೆಯ ಕಲ್ಯಾಣವನ್ನು ಮುಗಿಸಿ, ಅಲ್ಲಿ ಕೆಲ ಕಾಲ ಶಿವಾನುಭವ ಸದ್ಗೋಷ್ಠಿಯಲ್ಲಿದ್ದು, ತಿರುಗಿ ಮುದುನೂರಿಗೆ ಬಂದನು.

ಈ ಕಾಲದಲ್ಲಿ ಮುದನೂರು ಚಾಲುಕ್ಯ ರಾಜನಾದ ಜಯಸಿಂಹ ರಾಜ - ಜಗದೇಕಮಲ್ಲನ ರಾಜ್ಯದಲ್ಲಿ ಸೇರ್ಪಡೆಯಾಗಿತ್ತು. ಈ ರಾಜನು ಚಾಲುಕ್ಯ ರಾಜರಲ್ಲಿ ಬಹು ಪ್ರಬಲನು, ಅತ್ಯಂತ ಬಲಶಾಲಿಯು. ಅವನು ಚೋಳ ಮೊದಲಾದ ವೈರಿಗಳ ರಾಜ್ಯಗಳನ್ನು ಗೆದ್ದವನಾಗಿದ್ದನು. ಅವನು ಆರಂಭದಲ್ಲಿ 'ಬಲಿಪುರ' ಎಂದರೆ ಈಗಿನ ಬಳ್ಳಿಗಾವಿಯನ್ನೂ ಆ ಮೇಲೆ 'ಏತಗಿರಿ' ಎಂದರೆ ಈಗಿನ ಯಾತಗಿರಿಯನ್ನೂ ಕಡೆಗೆ ಪೊಟ್ಟಲ ಕೆರೆಯನ್ನೂ ತನ್ನ ರಾಜಧಾನಿಯ ಸ್ಥಳಗಳನ್ನಾಗಿ ಮಾಡಿಕೊಂಡು ಆಳುತ್ತ ಬಂದನು. ಅವನು ಕ್ರಿ-ಶ. ೧೦೦೮ ರಿಂದ ೧೦೪೦ ರ ವರೆಗೆ ಅತ್ಯಂತ ವೈಭವದಿಂದ ರಾಜ್ಯವಾಳಿದನು. ಪೊಟ್ಟಲ ಕೆರೆಯು ಅವನ ಕಾಲದಲ್ಲಿ ಬಹು ವಿಸ್ತಾರವಾದ ಪಟ್ಟಣವಾಗಿ ಬೆಳೆದಿತ್ತು. ಇದರಲ್ಲಿ ೭೦೦ ಜೈನ ಬಸದಿಗಳೂ ೨೦ ಸಾವಿರ ಜೈನರೂ ಇದ್ದದ್ದಲ್ಲದೆ ಅಸಂಖ್ಯ ವೈದಿಕರೂ, ಶಾಕ್ತರೂ, ವೈಷ್ಣವರೂ, ಇನ್ನೂ ಅನೇಕ ಧರ್ಮೀಯರೂ ವಾಸವಾಗಿದ್ದರೆಂದು ಇತಿಹಾಸದಿಂದ ತಿಳಿದುಬರುತ್ತದೆ.

ಈ ಪುರ ನಿವಾಸಿಗಳಲ್ಲಿ ಜೈನರೇ ಬಹು ಸಂಖ್ಯಾಕರೂ ಬಲಾಢ್ಯರೂ ಆಗಿದ್ದರು. ಅರಸನಾದ ಜಯಸಿಂಹನೂ ಕೂಡ ಅವರ ಜೈನ ಮತವನ್ನೇ ಅವಲಂಬಿಸಿದ್ದನು. ಅವನ ಹೆಂಡತಿಯ ಹೆಸರು ಸುಗ್ಗಲೆಯು. ಇವಳ ತವರು ಮನೆಯವರು ಶಿವಾರ್ಚಕರಾಗಿ ಶಿವಭಕ್ತಿಯುಳ್ಳವರು.

From,
Shivanubhava
Office
Bijapur.

BOOK-POST.

R. N. B. 255






ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ|| ಬ|| ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರ ವಾಂವಗಿ ಮನೆ ನಂ. ೧೩೭೮ ರಲ್ಲಿರುವ ತಮ್ಮ ಹಿತಚಿಂತಕ ಪ್ರಿಂ. ಪ್ರೆ.ನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.



ವರ್ಷ ೨೧ ] ಜುಲೈ ೧೯೪೭ [ ಸಂಚಿಕೆ ೧೦

# ವಿಷಯಾನುಕ್ರಮಣಿಕೆ.


೧ ರಾಘವಾಂಕನ ಸಿದ್ಧರಾಮ ಚರಿತ್ರ— ಪ್ರೊ॥ ಆರ್. ಸಿ. ಹಿರೇಮಠ ೧೮೯
ಎಮ್. ಎ., ಬಸವೇಶ್ವರ ಕಾಲೇಜ
ಬಾಗಲಕೋಟ

೨ ಶಿವಶರಣರ ಚರಿತ್ರೆಗಳು ಭಾಗ—೩. ೩೭—೫೨
—ರಾ॥ ಬ॥ ಫ. ಗು. ಹಳಕಟ್ಟಿ ವಿಜಾಪುರ

(೧) ದೇವರದಾಸಿಮಯ್ಯ.

# ಶಿವಶರಣರ ಚರಿತ್ರೆಗಳು.

## ಭಾಗ ೨

( ಪುಟಗಳು ೪೫೮ ಬೆಲೆ ೬-೮-೦ )

ಈ ಭಾಗವು ಪುಸ್ತಕ ರೂಪದಿಂದ ಈಗ ಪ್ರಸಿದ್ಧವಾಗಿದ್ದು ಇದರಲ್ಲಿ ೬೩ ಜನ ಶಿವಶರಣ, ಶರಣೆಯರ ಚರಿತ್ರೆಗಳು ಬಂದಿವೆ. ಇವರಲ್ಲಿ ೩೪ ಜನ ವಚನಕಾರರಿದ್ದಾರೆ. ಅವರ ಚರಿತ್ರೆಗಳನ್ನು ಐತಿಹಾಸಿಕ ದೃಷ್ಟಿಯಿಂದ ಸಂಶೋಧಿಸಿ ಗ್ರಂಥವನ್ನು ಸಿದ್ಧಪಡಿಸಿದ್ದಾಗಿದೆ. ಇಂಥ ಪ್ರಯತ್ನವು ಈ ವರೆಗೆ ಆದದ್ದು ಇದೇ ಮೊದಲನೆಯದೆಂದು ಹೇಳಬಹುದು. ಈ ಚರಿತ್ರೆಗಳಿಂದ ವೀರಶೈವ ಧರ್ಮ ಪ್ರಸಾರ ಕಾರ್ಯಗಳು ಆರಂಭದಲ್ಲಿ ಹೇಗೆ ನಡೆದವೆಂಬುದನ್ನು ವಾಚಕರು ಸ್ಪಷ್ಟವಾಗಿ ಅರಿಯಬಹುದಾಗಿದೆ. ಇದರ ವಿವರಣೆಗಳು ಪ್ರಸ್ತಾವನೆಯಲ್ಲಿ ಬಹು ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ. ಪ್ರಸ್ತಾವನೆಯು ೮೮ ಪುಟವುಳ್ಳದಾಗಿದೆ. ಗ್ರಂಥದ ಪ್ರತಿಗಳ ಸಂಖ್ಯೆಯು ಬಹಳ ಸ್ವಲ್ಪ ಇದ್ದು ಗ್ರಾಹಕರು ಇದನ್ನು ಅವಶ್ಯವಾಗಿ ಸಂಗ್ರಹಿಸಬೇಕೆಂದು ನಮ್ಮ ಸೂಚನೆ ಇದೆ.

# ಶಿವಾನುಭವ

| ವರ್ಷ ೨೧ | ಜುಲೈ ೧೯೪೭ | ಸಂಚಿಕೆ ೧೦ |
|---|---|---|

## ರಾಘವಾಂಕನ 'ಸಿದ್ಧರಾಮ ಚರಿತ್ರ'

( ಲೇಖಕರು:— ಪ್ರೊ|| ಆರ್. ಸಿ. ಹಿರೇಮಠ. ಎಮ್. ಎ. ಬಸವೇಶ್ವರ ಕಾಲೇಜ—ಬಾಗಲಕೋಟ )



ಕನ್ನಡ ಸಾಹಿತ್ಯದಲ್ಲಿ ರಾಮಾಯಣ ಮಹಾಭಾರತಗಳ ಗಲಭೆ ಹೆಚ್ಚು. ಅಂತೆ ಕವಿ ಕುಮಾರವ್ಯಾಸನು 'ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ' ಎಂದು ಉಸುರಿದನು. ಪುರಾಣಗಳಾಗಿ ಕಾವ್ಯಗಳಾಗಿ ರಾಮಾಯಣ ಮಹಾಭಾರತಗಳು ಬಗೆ ಬಗೆಯ ರೂಪದಿಂದ ನಮ್ಮ ಸಾಹಿತ್ಯವನ್ನು ಪ್ರವೇಶಮಾಡಿವೆ. ವೈದಿಕ ಧರ್ಮದಿಂದ ಭಿನ್ನರೆನಿಸಿದ ಜೈನರಿಗೂ ಸಹ ರಾಮಾಯಣ ಮಹಾಭಾರತಗಳನ್ನು ಬಿಡುವುದಾಗದೆ ಅವುಗಳನ್ನು ಅವರು ತಮ್ಮ ದೃಷ್ಟಿಯಲ್ಲಿ ನೋಡಿ ಬದಲಾವಣೆ ಮಾಡಿಕೊಳ್ಳಬೇಕಾಯಿತು. ಪಂಪನ ವಿಕ್ರಮಾರ್ಜುನ ವಿಜಯ, ರನ್ನನ ಗದಾಯುದ್ಧ, ನಾಗಚಂದ್ರನ 'ರಾಮಚಂದ್ರ ಚರಿತ ಪುರಾಣ' ಇವು ಈ ಮಾತಿಗೆ ನಿದರ್ಶನ. ರಾಮಾಯಣ ಮಹಾಭಾರತಗಳಿಂದ ನಮ್ಮ ಸಾಹಿತ್ಯಕ್ಕೆ ಸಾಕಷ್ಟು ಪುಷ್ಟಿ ದೊರೆತಿದ್ದರೂ ವಸ್ತುವಿನಲ್ಲಿ ವೈವಿಧ್ಯ ಕಡಿಮೆಯಾಗಿದೆಯೆಂಬುದನ್ನು ಎಲ್ಲರೂ ಒಪ್ಪಲೇ ಬೇಕಾಗಿದೆ. ಕನ್ನಡ ಸಾಹಿತ್ಯಕ್ಕಿದ್ದ ಈ ಕೊರತೆಯನ್ನು ದೂರ ಮಾಡಿದವರು ವೀರಶೈವ ಕವಿಗಳು. ಶಿವಶರಣರ ವಚನವಾಙ್ಮಯಾವತಾರವಾದ ಮೇಲೆ ಕನ್ನಡದ ಕಾವ್ಯ ಪ್ರಪಂಚದಲ್ಲಿ ಕ್ರಾಂತಿಯನ್ನೆಬ್ಬಿ

ಸಿದವರು ಹರಿಹರದೇವ ಮತ್ತು ರಾಘವಾಂಕ. ಸತ್ವದಲ್ಲಿ ರೂಪದಲ್ಲಿ ವಸ್ತುವಿನಲ್ಲಿ ಎಲ್ಲ ದೃಷ್ಟಿಯಿಂದಲೂ ಕನ್ನಡ ಸಾಹಿತ್ಯದಲ್ಲಿ ಅವರು ಮಾಡಿದ ಕ್ರಾಂತಿ ಚಿ-ಸ್ಮರಣೀಯವಾಗಿದೆ. ಹಳೆಯ ಪುರಾಣಗಳನ್ನೇ ತಿದ್ದಿ ತೀಡದೆ ಕನ್ನಡನಾಡಿನಲ್ಲಿ ಹುಟ್ಟಿ ಬೆಳೆದ ಶಿವಶರಣರನ್ನು ಕಾವ್ಯ ಕ್ಷೇತ್ರಕ್ಕೆ ತಂದರು. ತಾವು ಕಂಡು ಕೇಳಿದ, ಜನಜೀವನದ ಮನ ಸ್ಸನ್ನೆಲ್ಲ ವ್ಯಾಪಿಸಿ, ಅವರನ್ನು ಉದ್ಧರಿಸಲು ಹೆಣಗಿದ, ಶಿವಶರಣರ ಜೀವನವನ್ನು ತಮ್ಮ ಪ್ರತಿಭೆಯ ಕನ್ನಡಿಯಲ್ಲಿ ಪಡಿಮೂಡಿಸಿದರು. ಮಾನವ್ಯದ ಮಂದಾರ ಪುಷ್ಪದಂತಿದ್ದ ಸಿದ್ಧರಾಮನ 'ಚಾರಿತ್ರ'ವು ವಸ್ತು, ರೂಪ, ಸತ್ವ ಎಲ್ಲ ದೃಷ್ಟಿಯಿಂದಲೂ ಕ್ರಾಂತಿಯನ್ನೊಳಗೊಂಡು ಕನ್ನಡ ಸಾಹಿತ್ಯಕ್ಕೆ ವೈವಿಧ್ಯವನ್ನು ನೀಡಿದ ಕಾವ್ಯವಾಗಿದೆ. ಇಲ್ಲಿ ವಿಮರ್ಶೆಮಾಡಬೇಕಾಗಿರುವುದು ಈ ಕಾವ್ಯವನ್ನೇ.

ಗಂಧರ್ವ ದಂಪತಿಗಳು ಶಿವನ ಸಭೆಗೆ ಬಹ ಭೃಂಗಿಯಂ ಕಂಡು ನಸುನಕ್ಕುದರ ದೆಸೆಯಿಂದ ನರಜನ್ಮದೊಳು ಬಂದು ಭುವಿ ಸತಿ-ಪತಿಗ ಳಾಗಬೇಕೆಂದು ಶಾಪವನ್ನು ಪಡೆಯುವರು. 'ತಂದೆ ಕರುಣಿಸು ವಿಶಾ ಪವ'ನೆಂದು ಅವರು ಬಾಯಿಡಲು ಭೃಂಗೀಶನು 'ಎವೆಯಿಕ್ಕದುಸಿರಿಕ್ಕ ದುಣ್ಣದ ಜೀತೇಂದ್ರಿಯತ್ವವ ತಳೆದ ನಿರ್ಮಾಯನೆನಿಸುವ ಶಿವಜ್ಞಾನಿ ನಿಮಗೆ ಮಗನಾಗಿ ಪುಟ್ಟಲು ವಿಶಾಪವು' ಎಂದು ನುಡಿದು ಅವರನ್ನು ಕಳುಹುವನು. ಶಿವನ ನಂಬುಗೆ ಪಡೆದು ಆ ಗಂಧರ್ವದಂಪತಿಗಳು ಮೊರಡಿಯ ಮುದ್ದ ಸುಗ್ಗವ್ವೆಯರಾಗಿ ಜನಿಸುವರು. ಶಿವಶರಣರ ಜನ ನಕ್ಕೆ ಹರಿಹರ ದೇವನು ಕಲ್ಪಿಸುವ ಕಥೆಗಳು ಇದೇ ತೆರನಾಗಿವೆ. 'ವನಾಂತರದ ಕೊಳನೊಳಗೆ ಮರಿದುಂಬಿಯಂ ಸಣ್ಣ ನನೆಯಂ ಬೆಳವವೋಲ್ ಬೆಳೆದರು' ಎಂದು ಅವರ ಬಳವಿಯನ್ನು ಬಣ್ಣಿಸಿ ರಾಘ ವಾಂಕನು ಕೃತಕೃತ್ಯನಾಗಿರುವನು. ಸತಿ-ಪತಿಗಳು ಸಮಕಳಾ ಸಂಪ ತ್ತಿನಿಂದ ಕೆಲವು ದಿನಗಳನ್ನು ಕಳೆಯಲು 'ವನಿತೆ ತನ್ನ ತನುವಿನ್ನೈದಾ ಅವಗುಣಂಗಳಂ ಗೆಲಿದಂತೆ ಐದಾಱು ಸೂಲಂ ಗೆಲಿದಳು. ಜನನ ಮರಣದ ಸೂತಕಂ ಕೆಡುವ ತೆಱದಿ ಕೆಟ್ಟವು ಹೊಲೆಗಳು. ಮಹಾ ಯೋಗಿಯು ಮುಂಬರುವುದನ್ನು ಕವಿಯು ಇಲ್ಲಿ ಸೂಚ್ಯವಾಗಿ ತಿಳಿ ಸುತ್ತಾನೆ. ಮುಂದೆ 'ಅಪ್ರತಿಮ ಗುರು ರೇವಣಾಚಾರ್ಯನಾವೂರ (ಸೊನ್ನಲಿಗೆಯ) ಸೀಮೆಯೊಳು ದಂಡಿಗೆಯನೊಲಿದಿಳಿದು' ಪಾದಚಾರಿ

ಯಾಗಿ ಬಂದು 'ಸುಗ್ಗವ್ವೆಯುದರಮಂ ಮುಟ್ಟಿ ಅಪ್ರತಿಮ ಶಿವಯೋಗಯುತ ನಿಮಗೆ ಪುತ್ರನಾದಪನೆಂದನು.' ಸಿದ್ಧರಾಮ ಶಿವಯೋಗಿಯ ಜನನದ ಮುನ್ನ ನಡೆದು ಹೋದ ಈ ಸಂಗತಿಯು ಜೈನ ಪುರಾಣಗಳಲ್ಲಿ ಬರುವ ಪ್ರಥಮ ಕಲ್ಯಾಣದ ವರ್ಣನೆಯನ್ನು ನೆನಪಿಗೆ ತಂದು ಕೊಡುತ್ತಿದೆ. ಅಲ್ಲಿ ತೀರ್ಥಂಕರರ ಜನನಿಯ ಗರ್ಭಶೋಧನೆಯಾದರೆ ಇಲ್ಲಿಯೂ ಗುರುರೇವಣನ ಹಸ್ತಸ್ಪರ್ಶದಿಂದ ಸಿದ್ಧರಾಮೇಶನ ತಾಯಿಯ ಗರ್ಭ ಪರಿಶುದ್ಧಿಯಾಗುತ್ತದೆ. ಜೈನ ಪುರಾಣಗಳಲ್ಲಿ ಕಂಡು ಬರುವ ಈ ಪ್ರಥಮ ಕಲ್ಯಾಣದ ವರ್ಣನೆಯ ಸೊಗಸು ಕನ್ನಡದಲ್ಲಿ ಒಂದು ಆದರ್ಶ ಪುರಾಣವನ್ನು ಬರೆಯ ಹೊರಟ ಕವಿಯ ಮನವನ್ನು ಸೂರೆಗೊಂಡಿರಬಹುದು. ಅಂತೆ ರಾಘವಾಂಕನೂ ಈ ಸನ್ನಿವೇಶವನ್ನು ಬಹು ಸೊಗಸಾಗಿ ಚಿತ್ರಿಸುತ್ತಾನೆ. ಶಿವಯೋಗಿಯು ನಿನಗೆ ಮಗನಾದಪನೆಂಬ ಗುರುರೇವಣರ ನುಡಿಯನ್ನು ಕೇಳಿದೊಡನೆ ಸುಗ್ಗವ್ವೆ

'ಎನ್ನ ಹರೆಯಂ ಬಿಟ್ಟು ಜರೆವಟ್ಟು ಹೊಲೆಗೆಟ್ಟು
ಕೆನ್ನನರೆದೊಟ್ಟು ಶಿಥಿಲತ್ವವಳವಟ್ಟು ನೆಱಿ
ಮುನ್ನಿನಂಗ ವಿಕಾರಮಂ ಬಿಟ್ಟು ಹೋಗಿ ಧಾತುಗಳು ಪಲ್ಲಟವಾದವು
ಇನ್ನು ನಾನೆತ್ತ ಮಗನಂ ಹಡೆವುದೆತ್ತಲಾ
ತಂ ನೆಱಿದು ಕುಲವಳಿದು ಯೋಗಿಯಹುದೆತ್ತ ಲೋ
ಕಂ ನಗುವ ಮಾತನಾಡಿದಿರಿ ಹುಟ್ಟುವಡೆ ಹುಟ್ಟನೆ ಹಿಂದೆ'

ಎಂದು ಕೇಳುವಳು. ಆಗ ಗುರು ರೇವಣರು

'ಪುರುಷರೆಲ್ಲಂ ಕಂಡು ಕೂಡಲೆಳಸುವ ನಿನ್ನ
ಹರೆಯದೊಳು ಹೊಲೆಗೆ ನೆಲೆಯಪ್ಪ ಋತು ಕಾಲದೊಳು
ಪರಮ ದಂಪತಿಗಳ ವಿಕಾರದನುಭವದ ಹೇಯದ ಶುಕ್ಲಶೋಣಿತದೊಳು
ಬೆರಸಿ ಜನಿಯಿಸಲಾರ್ಪನೇ ಮರುಳೆ'

ಎಂದು ಮರುಮಾತುಗೊಡುವರು. ಯೌವನದ ನೈಜ ಚಿತ್ರವನ್ನು ಇದಕ್ಕಿಂತಲೂ ಹೆಚ್ಚು ಸ್ಫುಟವಾಗಿ ಕೊಡುವುದು ಸಾಧ್ಯವಿಲ್ಲವೆಂದೇ ಹೇಳಬಹುದು. ಆರ್ಯನ ಪುಣ್ಯ ಸೂಚನೆಯನ್ನು ಮಾನಿನಿ ಮರೆತಿ

ದ್ದರೂ ಅಭವನು ತನ್ನ ಸುತ್ತುಮುತ್ತು ಸೇವಿಸುತಿರ್ಪ ಸಮತೆಯಂ, ಸತ್ವಮಂ, ತೃಪ್ತಿಯಂ, ದಯೆಯಂ, ಅತುಳ ಭಕ್ತಿಜ್ಞಾನ ವೈರಾಗ್ಯಮಂ, ಎತ್ತಿ ಸದ್ಗುಣ ಶತವನಾಯ್ದು ಕೊಂಡೊಂದು ಕಿಱು ಪುತ್ತಳಿಯ ಮಾಡಿ ನಿಜಸಾಮರ್ಥ್ಯ ಸಂಕುಳವನಿತ್ತು ಸುಗ್ಗವ್ವೆಯುದರದೊಳು ತಂದಿರಿಸು ವನು. ಐದನೆಯ ತಿಂಗಳಲ್ಲಿ ಸಿದ್ಧನ ಜನನವಾಗುವುದು. ಗಿರಜೆ ಬಿಜಯಂಗೈದು ಜೋಗುಳವ ಪಾಡಿಸುವಳು. ಹಸುಳೆ ಹೊಸ ಅಂದ ದಿಂದ ಬೆಳೆದು ಮನೆಯೊಳಗೆ ಮರುಳಂತೆ ಮೂಗುವಟ್ಟಿರ್ಪನು. ತಂದೆ ಮಕ್ಕಳುಗಳೊಡನೆ ದನಕಾಯ ಕಳಿಸುವನು. ಸಿದ್ಧರಾಮನು ಮಾಮ ರದಡಿಯ ಮಲ್ಲಿಕಾಮಂಟಪದ ತಳೆದ ತಣ್ಣೆಳಲ ತಿಳಿಗೊಳನ ಪುಳಿನ ಸ್ಥಳದಿ ಮೆಱೆಯುತ್ತಿರ್ದ ಶಿವಲಿಂಗ ಪೂಜೆಮಾಡಿ ಸೊಲ್ಲಿಸಲು ಬಾರ ದಾನಂದದಿಂದಾಡಿ ಪಾಡುವನು. ಒಂದು ದಿನ ಜಂಗಮಾಕಾರದಿ ಶಿವನು ಅಡವಿಯಲ್ಲಿ ಸಿದ್ಧರಾಮನ ಬಳಿಗೆ ಬರುವನು. ಕಣ್ಣಾರಿಯ ದಿರ್ದೊಡಂ ಕರುಳರಿದು ಕುಣಿದು ಸಿದ್ಧರಾಮನು ಆ ಜಂಗಮನ ಪದ ರಜದೊಳು ಹೊರಳುವನು. ಶಿವನು ನಿಜಮೂರ್ತಿಯ ತೋರಿಸುವನು. 'ಘನಮೇಘಮಂ ಕಂಡ ನವಿಲಂತೆ. ದೇವರಾಯನ ನಿಜಕೆ ಬೆಳಗಾಗು ತುಸಿರಲಮೃದ ಸುಖವನನುಭವಿಸಿ' 'ತಳಿರೆತ್ತ ಬಿಸಿಲೆತ್ತ ಹಂಸೆ ಶಿಶು ವೆತ್ತ ಕಲುಮೊರಡೆಯೆತ್ತ ನೆನಹು ನಿಲುಕದ ಸಹಜ ಸುಕುಮಾರ ನೀ ಯೆತ್ತಲನಿಮಿತ್ತಮೀಯೆಡೆಗೆ ಬರವೆತ್ತ ನೀನಾರು ಮನೆಯಲ್ಲಿ ಹೆಸರಾ ವುದಾವನಾದವನು' ಎಂದು ಕೇಳುವನು. ರಾಘವಾಂಕನು ಮಾನವ ಹೃದಯವನ್ನು ಸೂಕ್ಷ್ಮದೃಷ್ಟಿಯಿಂದ ನೀರಿಕ್ಷಿಸಿ ಅದನ್ನು ಚಿತ್ರಿಸುವ ಬಗೆ ಯನ್ನು ನೋಡಬೇಕು. ಅತೀ ಆನಂದವಾದ ಸಮಯದಲ್ಲಿ ಉತ್ತರಿ ಸುವವರಿಗೆ ಅವಧಿ ದೊರೆಯದಂತೆ ಕೇಳುವವರು ಹತ್ತೆಂಟು ಪ್ರಶ್ನಗ ಳನ್ನು ಒಂದರ ಹಿಂದೊಂದು ಕೇಳುವುದು ಎಲ್ಲರ ಅನುಭವಕ್ಕೆ ಬಂದ ಮಾತು. ಸಿದ್ಧರಾಮನ ಮನದ ಇಂತಹ ಅವಸ್ಥೆಯನ್ನು ರಾಘವಾಂ ಕನು ಒಳ್ಳೇ ಸುಂದರವಾಗಿ ಚಿತ್ರಿಸುವನು. 'ಪತಿತ ಪಾವನ ಪರ್ವತಾ ಶ್ರಮದಲಿಪ್ಪೆನುನ್ನತ ಮಲ್ಲಿನಾಥನೆಂದೆನ್ನ ನಾಮಂ ನಿನ್ನನತಿ ನೇಹದಿಂ ನೋಡಿ ಹರಿಜಕ್ಕಿಯಂ ಬೇಡಿ ಮೊಲಬಂದೆನೆಂದು' ಶಿವನು ನುಡಿವನು. 'ಕಲ್ಪಭೂಜವನು ಚಿಂತಾಮಣಿಯ ಚಿಣ್ಣನುಪಚರಿಸುವಂತೆ' ಅವಬ ನಿತ್ತು ಉಪಚರಿಸುವನು. ಪರಶಿವನು ತಣಿದು 'ಅಳಿಯಂಬಕಳಕೆ

ಮನವೆಳಸಿತ್ತು ತಂದುದುಂಟೆ?' ಎಂದು ಕೇಳುವನು. 'ಇಲ್ಲ'ವೆನ್ನಲು ನಿಳಯದಿಂ ತಂದಪಾ' ಎಂದು ಬೆಸಸುವನು. ಇಲ್ಲಿ ನಡೆದ ಸಂಭಾಷಣೆಯು ಸೊಗಸು ನಿಜವಾಗಿಯೂ ಸವಿಯುವಂತಹದಿದೆ. 'ತಂದಪಾ' 'ತಾಪೋಗಟ' ಎಂಬಲ್ಲಿ ಮಗುವಿನ ಮೇಲಣ ನೇಹವು ಹೊನಲಾಗಿ ಹರಿಯುವಂತಹದಿದೆ. 'ಹುಲಿಯುಂಟು ಕರಿಡಿಯುಂಟವ್ಯಾವು ಉಂಟಲ್ಲಿ ಖಳಮೂರ್ಖ ಚೋರರುಂಟೆಂತಿರಿಸಿ ಪೋಪೆನೆಂದಳವಳಿಯುತಿರಲು ಎನ್ನ ದೆಸೆಗಂಜಬೇಡ ಹೋಗು ಎಂದು ಹೇಳುವನು. ಸಿದ್ಧರಾಮನ ಬಾಲ್ಯದ ಮುಗ್ಧಭಕ್ತಿಯು ಅಳವನ್ನು ನೋಡಬೇಕಿಲ್ಲಿ. ಹುಲಿ ಕರಡಿಗಳನ್ನು ಹುಟ್ಟಿಸಿದಾತನೇ ಅವುಗಳಿಗೆ ಅಂಜುವನೆಂಬ ಭಯವುಂಟಾಗಿದೆ ಸಿದ್ಧರಾಮನಿಗೆ. ಕಣಮಾಡಿದ ಸ್ಥಳದೊಳಗೆ ಮಳೆಗಾಲದ ಆರಂಭದಲ್ಲಿ ಬೆಳೆದು ನಳಿನಳಿಸುವ ಸಸಿಗಳಂತೆ ಸಿದ್ಧರಾಮನ ಬಾಲ್ಯದ ಮುಗ್ಧಭಕ್ತಿ ಹೊಳೆಯುತ್ತಿದೆ. ಆದರೆ ಅಲ್ಲಿ ಫಲ ಬೆಳೆಯಬೇಕಾದರೆ ಅದನ್ನು ಉತ್ತಿ ಬಿತ್ತಬೇಕಲ್ಲವೇ? ಪರಶಿವನು ಬಂದಿರುವುದು ಅದಕ್ಕಾಗಿಯೇ. ಆದರೆ ಪರೀಕ್ಷೆಯು ಒರೆಗಲ್ಲಿಗೆ ಹತ್ತದ ಮುನ್ನ ಹಸಾದದ ಹೊನಲನ್ನು ಆತ ಹರಿಸಲಾರ. ಅಂತೆ ಇಲ್ಲಿ ಪರೀಕ್ಷೆ ನಡೆದಿದೆ. ಸಿದ್ಧರಾಮನು ಇರಲಾರದಗಲಲಾರದೆ--ವಂದಿಸಿ ಪೋಗಿ ಪೋಗಲಾರದೆ ತಿರುಗಿ ಬಂದೋವಿ ಬಳ್ವಿನಿಂದ ತಿರುಗಿ ನೋಡುತ್ತ ಬಾಡುತ್ತ ಕಣ್ಮರೆಯಾಗೆ ಮರಳಿ ನೋಡುತ್ತ ಮಳೆ ಮರೆಯಾಗೆ ಮರುಗುತ್ತ ಹರಿದು ಜನನಿಯನಪ್ಪಿ ಬೇಡಿ ಭುಲ್ಲವಿಸಿ ಲಲ್ಲೆಗರೆದನು. ನುಡಿಸೆ ನುಡಿಯದ ಮಗನು, ತಾನಾಗಿಯೇ ಬಂದು ಕೇಳಿದುದಕ್ಕೆ ತಾಯಿ ಹಿಗ್ಗಿ ಕಡೆದ ತಾರೆಗಳ ತಿರುಳ ಚಂದದೋಗರವನ್ನು ಕಟ್ಟಿಕೊಡುವಳು. ಮರುಳಿ ಬಂದು ಮಲ್ಲಿಕಾರ್ಜುನನನ್ನು ಕಾಣದೆ ಮಮ್ಮಲ ಮರುಗುವನು. ಶ್ರೀ ಶೈಲಕ್ಕೆ ಹೋಗುವ ಪರುಷೆಯೊಡನೆ ಹೋಗಿ ಮಲ್ಲಿಕಾರ್ಜುನನನ್ನು ಕಾಣದೆ ಹುಡಿಯಲ್ಲಿ ಬಿದ್ದು ಹೊರಳಿ ಅಳುವನು. ಈ ಸಂದರ್ಭದಲ್ಲಿ ರಾಘವಾಂಕನು ಹರಿಸಿದ ಕರುಣ ರಸವನ್ನು ಮುಂದೆ ವಿಚಾರಿಸಲಾಗುವುದು. ಕಡೆಗೆ ಮಲ್ಲಿಕಾರ್ಜುನನು ದರ್ಶನವಿತ್ತು ಆತನಿಗೆ ತಾನೇ ಗುರುವಾಗಿ ದೀಕ್ಷೆಕೊಡುವನು. 'ಭೂತದಯಾ ವಿಚಾರವಂ ನೇಮವುಂ ಕೊಟ್ಟು ನೋಡಿದೊಡೆ ಕನ್ನಡಿಗೆ ಕನ್ನಡಿ ದೋರುದಂತೆಬಿಡನಳಿದೊಂದು ವಿಡಿದಿರ್ದ ಅಗಲಲಾರದ ಸಿದ್ಧರಾಮನಿಗೆ ಲಿಂಗ

ರೂಪದಲ್ಲಿ ಬರುವೆನೆಂಬ' ಅಭಿವಚನವಿತ್ತು ಸೊನ್ನಲಿಗೆಗೆ ಕಳುಹುವನು. ಅಭಿವಚನದಂತೆ ಮುಂದೆ ಮಲ್ಲಿಕಾರ್ಜುನನು ಲಿಂಗ ರೂಪದಿಂದ ಸಿದ್ಧರಾಮನಿಗೆ ಪ್ರಾಪ್ತನಾಗುವನು. ಮನೆ ದೈವವಹ ಧೂಳಿ ಮಾಕಾಳನಂ ನೋನಲೆಂದು ತಂದೆತಾಯಿಗಳುದ್ಯೋಗಿಸಿದಡೆ ಸಿದ್ಧರಾಮನು ಮನೆ ಬಿಟ್ಟು ಹೊರಡುವನು. ಶಿವನಿಳಯವನ್ನು ಕಟ್ಟಿಸಿ ಹದಿನಾಱು ಲಿಂಗಗಳನ್ನು ಪ್ರತಿಷ್ಠಾಪಿಸಿದನು. ಬಳಿಕ ಲೋಕೈಕ ಗುರುಸಿದ್ಧರಾಮನು ದಾನಧರ್ಮವಮಂ ಮಾಡಲುದ್ಯೋಗಿಸಿದನು. ಒಂದು ಸತ್ರಮಂ ಪರಿಕಲ್ಪಿಸಿ ಅಣು ಮೊದಲಿಱುವೆ ಪಶು ಪಕ್ಷಿಗಳಿಗೆ ಉಚಿತಾಹಾರಮಂ ಕೊಡಲನುವಾದನು. ಉತ್ತಮರೆಂಬ ಭೇದವಿಲ್ಲದೆ ಕನ್ಯಾದಾನ, ವಸ್ತ್ರದಾನ ಮೊದಲಾದ ಮಹಾದಾನಗಳನ್ನು ಮಾಡುವನು. ಕಡೆಗೆ ಪಶುಪಕ್ಷಿ ಕ್ರಿಮಿಕೀಟಕಾವಳಿಗಳಱಿತು ನೀರ್ಗುಡಿಯೆ ಭವ ವಳಿವಂಥ ಕೆರೆಕಟ್ಟಿಸುವನು. ಗಂಗೆ, ತುಂಗಭದ್ರೆ, ಮಲಪ್ರಹಾರಿಣಿಯರೆಲ್ಲ ಮೂರ್ತಿಮತ್ತಾಗಿ ಬಂದು ಅಲ್ಲಿ ನೆಲಸುವರು. ಸಿದ್ಧರಾಮನ ಕಥೆ ಇಲ್ಲಿಯ ವರೆಗೆ ತುಂಬಿ ಹರಿಯುವ ತುಂಗಭದ್ರೆಯಂತೆ ನಿಧಾನವಾಗಿ ಸಾಗುತ್ತದೆ. ಸಿದ್ಧರಾಮನ ಜೀವನದಷ್ಟೆ ಕಥಾ ಪ್ರವಾಹವೂ ಆಳವಾಗಿದೆ. ಆದರೆ ಇಲ್ಲಿಂದ ಮುಂದೆ ನಿರರ್ಗಳ ಕಥಾಪ್ರವಾಹಕ್ಕೆ ತಡೆಯುಂಟಾಗಿದೆ. ಇಲ್ಲಿ ಕವಿಯು ಅನೇಕ ಪವಾಡಗಳನ್ನು ಪೋಣಿಸಿದಂತಿದೆ. ಸಿದ್ಧನು ಸಮಾಧಿಯಲ್ಲಿದ್ದಾಗ ಜಿಂಕೆಯೊಂದು ಬಂದು ತನ್ನ ಕೊಂಬಿನಿಂದ ಆತನ ಮೈಯೊರಿಸಲು ಆತನು ಕಣ್ಣು ತೆರೆಯುವನು. ಕೂಡಲೆ ಜಿಂಕೆ ದೇವತೆಯ ರೂಪ ದಳೆದು ತನ್ನ ಕಥೆಯನ್ನು ವಿಸ್ತರಿಸುವುದು. ಮತ್ತೊಮ್ಮೆ ಜಿಂಕೆಯೊಂದು ಸಗಣಿಯಲ್ಲಿ ಬೀಳಲು ಅದನ್ನು ಕೊಂಬುಹಿಡಿದು ಮೇಲಕ್ಕೆತ್ತಲು ಗಂಧರ್ವನ ಆಕಾರ ತಾಳಿ ತನ್ನ ಕಥೆಯನ್ನು ಹೇಳುತ್ತದೆ. ಮೀನಿನ ಹೊಲಸುನಾತದಿಂದ ಎಲ್ಲರನ್ನೂ ಮೂಗು ಮುಚ್ಚಿಸಿದವನೊಬ್ಬನು ಬಂದು ಸಿದ್ಧನಿಗೆ ವಂದಿಸಿ ಕೆರೆಯಲ್ಲಿ ಸ್ನಾನಮಾಡಿ ಶಾಪವಿಮುಕ್ತನಾಗುವನು. ಹೀಗೆ ಸಿದ್ಧನು ಅನೇಕ ಪವಾಡಗಳನ್ನು ಎಸಗುವನು. ಕೊನೆಗೆ ಪ್ರಭುದೇವರು ಸಂದರ್ಶನವಿತ್ತು 'ಮಾನವರ ನಡುವಿರಲುಬೇಡ' ಎಂದು ಹೇಳುವರು. ಕಡೆಗೆ ಸಿದ್ಧನು ಗೋಪೆಯನ್ನು ಪ್ರವೇಶಿಸುವನು.

'ಸಿದ್ಧರಾಮನ ಚಾರಿತ್ರ' ಬರೆಯಲು ರಾಘವಾಂಕ ಕವಿಗೆ ಪ್ರೇರಣೆ ಯನ್ನಿತ್ತುದು ಸಿದ್ಧನ ಉದಾತ್ತ ಜೀವನ. ಸಿದ್ಧರಾಮನ ಕಥೆ 'ಸೊಗ ಸಿನ ಸುಗ್ಗಿ ರಸದ ಮಡು' ಎಂಬುದು ಕವಿಗೆ ಪೂರ್ತಿಯಾಗಿ ಮನ ವರಿಕೆಯಾಗಿದೆ. ಆದುದರಿಂದಲೇ

'ನೆರೆದ ಸೊಗಸಿನ ಸುಗ್ಗಿ ರಸದ ಮಡು ಪುಣ್ಯದಾ
ಗರ ವೆನಿಪ ಸಿದ್ಧರಾಮನ ಕಥೆಗೆ ಕಾವ್ಯಮಂ
ವಿರಚಿಸುವಡಷ್ಟಾದಶಸ್ಥಲವ ಪೊಗಳಲೇಕೆ'

ಎಂದು ಕಾವ್ಯದ ಆದಿಯಲ್ಲಿಯೇ ನುಡಿದಿರುವನು. ಕನ್ನಡ ಕಾವ್ಯಗ ಳೆಲ್ಲಲ್ಲ ಅಷ್ಟಾದಶಸ್ಥಲದ ಬಣ್ಣನೆ ತಾಂಡವ ನೃತ್ಯವಾಡುತ್ತ ನಿಂತಂತಿದೆ. ವರ್ಣನೆಯನ್ನು ವಿಸ್ತರಿಸಿ ಕಥೆಯನ್ನು ಹದಗೆಡಿಸಿದ ಕವಿಗಳೂ ಉಂಟು. ಈ ನಿಟ್ಟಿನಲ್ಲಿ ಸಂಸ್ಕೃತ ಸಾಹಿತ್ಯದ ಅನುಕರಣ ಹೆಚ್ಚಾಗಿ ಕನ್ನಡ ಕಾವ್ಯ ಅಧೋಗತಿಗಿಳಿಯುವ ಸಮಯ ಬಂದಾಗ ರಾಘವಾಂಕನು ಈ ರೀತಿ ಪ್ರತಿಜ್ಞೆಗೆಯ್ದಿರುವುದು ಗಮನಾರ್ಹವಾಗಿದೆ. ನುಡಿದಂತೆ ತನ್ನ ಕಾವ್ಯವನ್ನು ನಡೆಸಿ ತೋರಿಸಿರುವುದು ಸ್ತುತ್ಯವಾಗಿದೆ. ಸಿದ್ಧರಾಮನ ಕಥೆಯನ್ನು ಸಾದ್ಯಂತವಾಗಿ ಪರಿಶೀಲಿಸಿದರೆ ಪರಂಪರೆಯಿಂದ ಬಂದ ಹದಿನೆಂಟು ವರ್ಣನೆಗಳು ಅಲ್ಲಿ ಬಂದಿಲ್ಲವೆಂಬುದು ಎಲ್ಲರಿಗೂ ಮನ ವರಿಕೆಯಾಗುವುದು. ಅಲ್ಲಲ್ಲಿ ಬಂದ ವರ್ಣನೆಗಳಲ್ಲಿ ವಿನೂತ್ನವಾದ ಪ್ರತಿಭೆಯಡಗಿದೆ; ಔಚಿತ್ಯಜ್ಞಾನ ತುಂಬಿ ತುಳುಕುತ್ತದೆ.

'ಅಂಬಿಕಾಪತಿ ಲೋಕಮಂ ಸಾಕಲೊಗೆದನೆಂ
ದೆಂಬುದಂ ತನ್ನ ದಶ ಶತ ಕರದಿ ಗಗನ ವೆಂ
ದೆಂಬ ಜೇಗಟೆಯಿಂದ ಧರೆಗೆ ಡಂಗುರ ವೊಯ್ಯಲೆಂದಂದು ನಿಂದಿರ್ದನೋ
ಎಂಬಂತೆ ರವಿಯುದಯ ಗಿರಿಗೆ ಬಂದಂ'

ಇದು ರಾಘವಾಂಕನ ಸೂರ್ಯೋದಯದ ವರ್ಣನೆ. ಸಿದ್ಧರಾ ಮನ ಜನನವಾದೊಡನೆ ಸೂರ್ಯೋದಯದ ವರ್ಣನೆಯನ್ನು ತಂದಿರು ವುದು ಆತನ ಔಚಿತ್ಯ ಜ್ಞಾನದ ದ್ಯೋತಕವಾಗಿದೆ. ಅಂಬಿಕಾ ಪತಿಯು ಲೋಕವನ್ನು ಸಾಕಲೊಗೆದನೆಂಬುದನ್ನು ತನ್ನ ಸಹಸ್ರ ಕೈಗಳಿಂದ ಗಗ

ನವೆಂಬ ಜೇಗಟೆ ಬಾರಿಸಿ ಧರೆಗೆ ಡಂಗುರ ಹೊಯ್ವನೆಂಬ ಕಲ್ಪನೆ ನಿಜವಾಗಿಯೂ ಅದ್ವಿತೀಯವಾಗಿದೆ. ವರ್ಣನೆಯಲ್ಲಿ ಸೂಕ್ಷ್ಮದರ್ಶನ ವಿದೆ, ನಯವಿದೆ. ಉತ್ಪ್ರೇಕ್ಷೆಯ ಚರಮಸೀಮೆಯಿದೆ. ಎಲ್ಲಕ್ಕೂ ಮಿಗಿ ಲಾಗಿ ಸಿದ್ಧರಾಮನ ಜನನದ ಸಂದರ್ಭದಲ್ಲಿ ಈ ವರ್ಣನೆಯನ್ನು ತಂದು ಅದನ್ನು ಅರ್ಧಷಟ್ಪದಿಯೊಳಗೆ ಮುಗಿಸಿರುವಲ್ಲಿ ಔಚಿತ್ಯವಿದೆ. ಆ ರುಚಿರ ವನನಿಧಿಯನ್ನು ಗತಾನುಗತಿಕವಾದ ರೀತಿಯಲ್ಲಿ ಬಣ್ಣಿಸಿ ದರೂ ಅದು ಒಂದು ಷಟ್ಪದಿಗಿಂತ ಮುಂದೆ ಸಾಗಿಲ್ಲ. ದಿಗಂಬರ ವೀರನು ಸಿದ್ಧರಾಮನಿಗೆ

'ನಡುವೆ ಗಿಡಗಳನು ಹಾಡುವ ಪಕ್ಷಿವೃಕ್ಷವುಂ
ನುಡಿವ ಮಳೆಗಳನು........ಉತ್ತರಂ
ಗೊಡುವ ಗುಹೆಗಳನು'

ತೋರಿಸಿದನೆಂದು ಕವಿಯು ಬಣ್ಣಿಸುವನು. ನುಡಿಗೆ ನಿಲುಕದ ರಾಘ ವಾಂಕನ ಕಾವ್ಯ ಶಕ್ತಿಯನ್ನು ಅನುಭವಿಸಿ ಅರಿಯಬೇಕು. ಶ್ರೀಶೈಲದ ವರ್ಣನೆ ಸುದೀರ್ಘವಾಗಿದ್ದರೂ ಆ ವರ್ಣನೆಯಲ್ಲಿ ಒಂದೆರಡು ಕಡೆಗೆ ಬರುವ ಇಂತಹ ಪ್ರತಿಭೆಯ ಮಿಂಚಿನ ಹೊಳಪು ಎಲ್ಲರನ್ನೂ ಮುಗ್ಧ ಗೊಳಿಸುತ್ತದೆ. ಅಂಗಜನು ಸಿದ್ಧರಾಮನನ್ನು ಗೆಲಿಯಲು ಹೊರಡುವ ಮುನ್ನವೇ ಚೈತ್ರ ಪರಿವ ರೀತಿಯಿದು.

'ಹೊಸ ಮಾಗಿ ಮದವಾಱೆ ಮಾವಂ ಕುರಂದೋಱೆ
ಯಸುಗೆ ತಳಿರಂಬೀಱೆ ಲತೆ ನನೆಗಳಂ ಪೇಱೆ
ಕುಸುಮರಜಮಂ ತೂಱೆ ತುಂಬಿ ಸುತ್ತಂ ಪಾಱೆ
ತಂಗಾಳಿ ತಂಪ ಬೀಱೆ
ಸಸಿಗೆ ಕಳೆಯೇಱೆ ಕೋಕಿಳರವಂ ಮೀಱೆ ಕಾ
ಮಶಿರಂಗಳೂಱೆ ವಿರಹಿಗಳ ಬಾಯಾಱೆ ಮಾ
ಮಸಕದಿಂ ಬಂದನು ವಸಂತನು ವಿಯೋಗಿ ಹೃತ್ಕುಂತನು
ಸುಖಶ್ರಾಂತನು.

ರಾಘವಾಂಕನ ವರ್ಣನಾ ವೈಖರಿಯನ್ನು ನೋಡಬೇಕಿಲ್ಲಿ. ಜೀವ ಕದಲ್ಲಿ ಕಂಡು ಉಂಡ 'ವಸಂತ'ಗಳ ಸೊಗಸನ್ನು ಕಾವ್ಯವಾಗಿ ಹರಿಸಿ

ದ್ದಾನೆ. ಕಬ್ಬಿನ ಮೇಲೆ ಜೇನಿಟ್ಟಂತೆ ಒಳಗಿನ ಸುಂದರವಾದ ದರ್ಶನವನ್ನು ರಮಣೀಯವಾದ ರೀತಿಯಲ್ಲಿ ಪ್ರದರ್ಶಿಸಲಾಗಿದೆ. ಜೈಮಿನಿ ಭಾರತ, ಚೆನ್ನಬಸವ ಪುರಾಣಗಳಲ್ಲಿ ಅನೇಕ ಕಡೆಗೆ ಇಂತಹ ವರ್ಣನೆಗಳ ಛಾಯೆ ಬರುವುದನ್ನು ನಾವು ಗಮನಿಸಬೇಕು. ಶ್ರೀಶೈಲ, ನರಕ, ತುಪ್ಪದಭಿಷೇಕ ಈ ವರ್ಣನೆಗಳು ನಮಗೆ ಬೇಸರವನ್ನುಂಟು ಮಾಡುವಂತಿವೆ. ರಾಘವಾಂಕನು ವರ್ಣನೆಗಳ ಸ್ಥಾನಮಾನಗಳನ್ನು ಅರಿತವನೆಂಬುದು ಇದರಿಂದ ವಿದಿತವಾಗುವದು. ಅಷ್ಟಾದಶ ವರ್ಣನೆಗಳೇ ರಸಪ್ರವಾಹಕ್ಕೆ ಸಾಧನಗಳೆಂಬುದನ್ನು ಅನೇಕರು ನಂಬಿದ್ದರು. ರಾಘವಾಂಕನು ಅದನ್ನು ಒಪ್ಪದ ಕವಿಯು. ಆತನ ಕಾವ್ಯದಲ್ಲಿ ಹದಿನೆಂಟು ವರ್ಣನೆಗಳೂ ಬಾರದಿದ್ದರೂ ಅಲ್ಲಿ ರಸಸ್ವಾದನೆಗೆ ಕೊರತೆಯಿಲ್ಲ. ಸಿದ್ಧರಾಮನ ಕಥೆಯೇ 'ರಸದ ಮಡು'ವಾಗಿದೆ. ರಾಘವಾಂಕನ ಕಾವ್ಯವೂ 'ರಸದ ಹೊನಲಾ'ಗಿರುವುದನ್ನು ನಾವು ಕಾಣಬಹುದು.

ತಾಯಿ ಕೊಟ್ಟ ಅನ್ನವನ್ನು ಕೊಂಡು ಬಪ್ಪಾಗ ಸಿದ್ಧರಾಮನಿಗೆ ಎಡದ ಭಾಗಂ ಕೆತ್ತುವುದು. ಎನ್ನಯ ತಂದೆ ಹುಲಿ ಕರಡಿಗಳು ಕಚ್ಚಿ ನೊಂದನೋ, ಹಸಿದು ಬೆಂಡಾದನೋ, ಹೋದನೋ ಎನ್ನುತ್ತ ಒಂದೊಂದನೆಣಿಸುತ್ತ ಬಂದು ನೋಡುವನು. ಕರುಣೆಯ ಸೆಲೆ ಇಲ್ಲಿ ಪ್ರಾರಂಭವಾಗುತ್ತದೆ. ಶಿವನಿಲ್ಲದ ಸ್ಥಾನ 'ಇಂದು ತೊಲಗಿದ ರಾತ್ರಿಯಂತೆ ಒಪ್ಪವಳಿದಿರುತ್ತದೆ' 'ನಮ್ಮ ಕೆಯ್ಯಾಹುದೋ ಅಲ್ಲವೊ' ಎಂಬ ಸಂಶಯ ಬರುತ್ತದೆ ಸಿದ್ಧರಾಮನಿಗೆ ನಮ್ಮ ನಚ್ಚಿನದೊಂದು ವಸ್ತುವು ಆವುದೊಂದು ತಾಣದಲ್ಲಿರುವರೆಂದು ನಂಬಿ ಬಂದರೆ ಅಲ್ಲಿ ಅದನು ಕಾಣದಿರಲು ಆ ಸ್ಥಾನದ ಬಗೆಗೇ ಮೊದಲು ನಮಗೆ ಸಂಶಯ ಬರುತ್ತದೆ. ಇದು ಎಲ್ಲರ ಅನುಭವಕ್ಕೆ ಬಂದ ಮಾತು. 'ನಮ್ಮ ಕೆಯ್ಯಹುದೋ ಅಲ್ಲವೋ' ಎಂಬ ಮಾತನ್ನು ಕೇಳಿದೊಡನೆ ಅನೇಕ ಸಲ ನಮ್ಮ ಜೀವನದಲ್ಲಿ ಇಂತಹ ಪ್ರಸಂಗಗಳು ನಡೆದು ಹೋದಾಗ ನಾವು ಉಸುರುಗರೆದ ಮಾತಿನ ನೆನಪಾಗುತ್ತದೆ. ನಮ್ಮ ಮಾತುಗಳನ್ನೇ ಕವಿಯು ಆಡುತ್ತಿರುವನೆಂಬಂತೆ ಭಾಸವಾಗುತ್ತದೆ. ನಮ್ಮ ಅನುಭವಗಳನ್ನೆ ಕವಿ ನಿರೂಪಿಸುತ್ತಿರುವಂತೆ ಕಂಡುಬರುತ್ತದೆ. ರಾಘವಾಂಕನು ಮಾನವ ಹೃದಯವನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ ಅದನ್ನು ಸ್ಫುಟವಾಗಿ ಚಿತ್ರಿಸ

ಬಲ್ಲನೆಂಬುದಕ್ಕೆ ಈ ಚಿಕ್ಕ ಮಾತು ಉತ್ತಮ ನಿದರ್ಶನವಾಗಿದೆ. ಸುತ್ತಲೂ ನೋಡಿ 'ಹಾವುಗೆಯ ಹೆಜ್ಜೆಯಿವೆ' ಇಲ್ಲಿ ನಿಂದಿರ್ದಂ ಕುಳ್ಳಿರ್ದಂ ಎಂದು ಸುತ್ತು ತಿರುಗಿ ಸಿದ್ಧರಾಮನು ಮಲ್ಲಿಕಾರ್ಜುನನನ್ನು ಅರಸುವನು. ಆತನನ್ನು ಕಾಣದೆ ಕೆನ್ನೆಯಲ್ಲಿ ಕೈಯಿಟ್ಟು ಬಿಕ್ಕಿ ಬಿಕ್ಕಿ ಬಾಯ್ಬಿಟ್ಟೊರಲುವನು.

'ಚೆನ್ನಮಲ್ಲಯ್ಯ. ಮಲ್ಲಯ್ಯ ಬಾ ಬಾ ಕಾಡ
ದೆನ್ನ ಮಲ್ಲಯ್ಯ ಎನ್ನಯ್ಯ ಮಲ್ಲಯ್ಯ ಬಾ
ಹೊನ್ನ ಮಲ್ಲಯ್ಯ ಬಾ......'

ಅಳುವ ಸನ್ನಿವೇಶ ಬಂದಲ್ಲಿ ಅಲಂಕಾರಗಳ ಸುರಿಮಳೆ ಸುರಿಸಿ ಕಾವ್ಯಕ್ಕೆ ಕೃತ್ರಿಮತೆಯ ತೊಡವನ್ನಿಟ್ಟವರೂ ಉಂಟು. ೧ ರಾಘವಾಂಕನಾದರೋ ಅಳುವನ್ನು ಅನುಭವಿಸಿ ಬರೆಯುತ್ತಿರುವನು. ಆದುದರಿಂದಲೇ 'ಮಲ್ಲಯ್ಯ' 'ಬಾ' ಎಂಬ ಎರಡು ಶಬ್ದಗಳನ್ನು ಬಿಟ್ಟು ಮೂರನೆಯದನ್ನು ಆತನು ಇಲ್ಲಿ ಉಪಯೋಗಿಸಲಾರನು. ಶ್ರೀಶೈಲಕ್ಕೆ ಹೋಗುವ ಜಂಗಮರ ಪರುಷೆ ಹುಡಿಯೊಳಗೆ ಹೊರಳಾಡುವ ಬಾಲಕನನ್ನು ಕರೆದುಕೊಂಡು ಹೋಗುವರು. ಇತ್ತ ಮಗು ಮನೆಗೆ ಬಾರದಿರಲು ತಾಯಿ ಮರುಗತೊಡಗುವಳು.

'ಎನ್ನಣುಗನಡವಿಯೊಳು ಹೊಲಗೆಟ್ಟನೋ. ಸರ್ಪನಗಿಯಿತ್ತೋ. ಪೆರ್ಬುಲಿಗೆ ವೈ ಗೊಟ್ಟನೋ ......' ಎಂದು ಚಿಂತೆಗೊಳಗಾಗಿ

'ಮುಂದೇನು ಸುಳಿದೊಡಂ ಸಿದ್ಧರಾಮಾ ಎಂದು
ಹಿಂದೆ ಹುಲುಗಿಱಿಕೆನಲು ಸಿದ್ಧರಾಮಾ ಎಂದು
ಅಂದು ಮಾದಾರಿಯೊಳಃ ಬಪ್ಪರಂ ಸಿದ್ಧರಾಮಾ'

ಎಂದು ಕರೆಯುವಳು. ಏನು ಸುಳಿದರೂ, ಗಾಳಿ ಗಿರಿಕೆಂದರೂ ಸಿದ್ಧರಾಮನೇ ಬಂದನೆಂದು ಬಗೆಯುವಲ್ಲಿ ಹೃದಯದ ನೈಜಭಾವವಿದೆ.[೨] ಹರಿಶ್ಚಂದ್ರ ಕಾವ್ಯದಲ್ಲಿ ಚಂದ್ರಮತಿಯು ಮಗುವಿಗಾಗಿ ಮರುಗುವ ದೃಶ್ಯದ ನೆನಪಾಗುತ್ತದೆ.

---

೧ ಜೈಮಿನಿ ಭಾರತ ಸಂಧಿ ೧೯ ಪದ್ಯ ೨೨ ನೋಡಿರಿ.
ರಾಮಚಂದ್ರ ಚರಿತ ಪುರಾಣ ಆಶ್ವಾಸ ೯, ಪ ೧೧೮ ನೋಡಿರಿ.

ಇಲ್ಲಿ

'ಗಿರಿಶನರ್ಧಾಂಗಿ ಕೊಂಡಾಡಿದೆನ್ನಂ ನಿರಾ
ಕರಿಸಿ ಕಱುಗಾಯುಲಟ್ಟಿದರೆಂದು ಮುನಿದೆಯೋ'

ಎಂದು ತಾಯಿ ಹಂಬಲಿಸುವಳು. ಹಿಂದೆ ಕನಸೆಂದು ನಂಬಿದುದನ್ನು ಹೃದಯ ಈಗ ನನಸೆಂದು ತಿಳಿಯುತ್ತಿದೆ. ಹಿಂದಿನದನ್ನು ನೆನಿಸಿ ನೆನಿಸಿ ಅಳುವುದು ತಾಯಿಗೆ ತೀರ ಸಹಜವಾಗಿದೆ.

'ಎಂತು ಮರೆವೆನೊ ಬೆಣ್ಣೆಯಿಕ್ಕಿ ಮೊಲೆಯೂಡಿ ಪ್ರೈ
ಯಂ ತೊಳೆದುವುಣಲಿಕ್ಕಿದುದನು' ಎಂದು ಕೇಳುವಳು.

ನಿಜವಾಗಿಯೂ ಕರುಣರಸ ಇಲ್ಲಿ ಮಡುಗಟ್ಟುತ್ತಿದೆ. ಆ ಸಿಫ್ರುವಂ ನೋಡಲಾರದೀಶ್ವರನೊಬ್ಬ ಮಾನವನ ರೂಪಿನಿಂ ಬಂದು ನಿಜ ಸಂಗತಿಯನ್ನರುಹುವನು.

ಶ್ರೀಶೈಲದಲ್ಲಿ ತೋರಿದ ಲಿಂಗವನ್ನು ನಂಬದೆ ಮತ್ತೆ ಸಿದ್ಧರಾಮನು ಮರುಗ ತೊಡಗುವನು.

'ಸುತ್ತಿದಳಿಗಿಳಿ ಕೋಗಿಲೆಯ ಸೊಗಸುತಿಹ ನಾದ
ದತ್ತಲಿರ್ದಪನೆಂದು ಹೋಗಿ ಬಾಯಿ
ಬತ್ತಲೊಜಲಿದನು'

ಚಿತ್ತಬಿದಿರಿಡಿದಡಿಸಿ ಬೆಳೆದ ಮೆಳೆಗಳ ನಡುವೆ
ಹುತ್ತಡರ್ದಿರಿಯದ ಸಮಾಧಿ ನಿಷ್ಠುರ ಚಿತ್ತ
ಹತ್ತಿದಡೆ ಸಿಲುಕಿ ನಿಂದೆಯೊ ಏಕೆ ಓ ಎನ್ನೆ'

ಎಂದು ಅಳುವಲ್ಲಿ ತಿಳುವಿನ ಹೊಳಪಿದೆ. ಆದರೂ ಶೋಕ ಇಮ್ಮಡಿ ಮುಮ್ಮಡಿಯಾಗುತ್ತದೆ. 'ತರುಗುಲ್ಮಲತೆಗಳೆದ್ದು ಅಳುತಿಹವು.'

'ಕರಕರೆದು ಗಹ್ವರದ ಮಾರ್ದನಿಗಳಂ ಕೇಳ್ದು
ಗಿರಿಶನೋಯೆಂದೆಯ್ದಿ ಕಣ್ಮುಚ್ಚುವನು'

ಹೃತ್‌ಸರಸಿಜದೊಳಿರ್ದ ರೂಪಮಂ ಕಂಡು ಕಣ್ದೆರೆದು ನೋಡಿ ಕಾಣದೆ ಮರುಗುವನು. ಕೊನೆಗೆ ಮಲ್ಲಿಕಾರ್ಜುನನ ಸಂದರ್ಶನವಾಗುವುದು. ಆತನನ್ನು ಸಂತೈಸಿ ದೀಕ್ಷಾನಾಮವನ್ನು ಕೊಟ್ಟು 'ಎಲೆ ಸಿದ್ಧರಾಮಯ್ಯ

ನಿನ್ನ ಮನದಣಿಕೆ ಫಲಿಸಿದತ್ತು ಇನ್ನೇಳು ನಿನ್ನ ನೆಲೆಗೆ ಪೋಗು' ಎನ್ನುವನು. ಆ ನುಡಿ 'ಕಾದ ಕಬ್ಬುನದ ಕೂರಂಬನುಚಿ ಕಿವಿಯಲಿ ಸಲಿಸಿದಂತಾಗುವುದು. ಸಿದ್ಧರಾಮನ ಭಕ್ತಿಯೇ ಅಂತಹದು. 'ಏಕೆನ್ನ ತೊಲಗಿಸಲ್ ಮನದಂದೆ ತಂದೆ' ಎಂದು ಕೇಳಲು ಮಲಮುಂ ಮರುಗುವರು ಮಾತೆ ಪಿತರು ಏಗೆಯ್ದೊಡಂ ಹೋಗಬೇಕು' ಎನ್ನುವನು.

'ಕಡು ವಿಚಾರಿಪಡೆನಗೆ ಮಾತೆ ಪಿತರುಂಟೆ ನಿ
ಮ್ಮಡಿಗಳಲ್ಲದೆ............ಕೊಂದಡೆ ಕೊಲುವೆ
ಯಲ್ಲದೆ ಆ ನಡಿಯಿಡುವನಲ್ಲ'

ಎಂದು ಭಕ್ತನು ನಿಷ್ಠೆಯ ನುಡಿಯಾಡುವನು.

'ಧರೆಯ ಬೇಸಜನಳಿದು ದೋಷಮಂ
ಹುಡಿಗುಟ್ಟಲೆಂದು ನಿನ್ನನಾನಿಲ್ಲ ಮಡುಗುವೆನೆ?'

ಎಂದು ಕೇಳುವನು.

'ಎಂತಾದೊಡಂ ಹೊಗಳ್ದು ಹೋಗವೇಳ್ಕೆಂದಡಾ
ನೆಂತುವುಂ ಹೋಗೆನ್.........
ಪಿಂತೆ ಜೀವವನಿರಿಸಿ ತನು ಮುಂದೆ ಹೋದುದುಂಟೆ?'

ಎಂದು ತಿರುಗಿ ಕೇಳುವನು.

'ಕಂದಕೇಳ್ ಕಡೆಗೆನ್ನನಗಲಲಾಱದ ನೇಹ
ದಿಂದೈಸಲೇ ನುಡಿದಿಯಾ ನುಡಿಗೆ ತಕ್ಕಂತು
ಹಿಂದುಗೊಂಡೇ ಬಂದು ನೀಂ ಹಿಡಿದುದಂ ಹಿಡಿದು ಬಿಟ್ಟುದಂ ಬಿಟ್ಟು ಕಳೆದು

ನಿಂದಲ್ಲಿ ನಿಂದು ನಡೆದಡೆ ನಡೆದು ಕರೆದಡೋ
ಯೆಂದು ಬೇಡಿತನಿತ್ತು ಕೊಟ್ಟುದಂ ಕೊಂಡು ನೀ
ನೆಂದಂತೆ ಮಾಳ್ಪೆನುಮ್ಮಳಿಸಬೇಡಂಜಬೇಡೆಂದು'

ನಂಬುಗೆ ಇತ್ತು ಕಳುಹುವನು.

ವಿಶ್ವಸಾಹಿತ್ಯದಲ್ಲಿ ವಿರಹದ ವ್ಯಥೆ ಅನೇಕ ಕಡೆಗೆ ಬರುತ್ತದೆ. ಸತಿಯನ್ನು ಕಳೆದುಕೊಂಡ ರಾಮನು ಶೋಕಿಸುವನು; ಪತಿಯಿಂದ

ಪರಿತ್ಯಕ್ತಳಾದ ಸೀತೆಯು ಶೋಕಿಸುವಳು; ಹೀಗೆ ಲೌಕಿಕರ ವಿರಹ ವ್ಯಥೆಯನ್ನು ಮಹಾಕವಿಗಳು ರಸವತ್ತಾಗಿ ಬಣ್ಣಿಸಿರುವರು. ಶಾಕುಂತಲ ನಾಟಕದಲ್ಲಿ ಶಕುಂತಲೆಯನ್ನು ಪತಿಗೃಹಕ್ಕೆ ಕಳುಹಿಸುವಲ್ಲಿ ಕಣ್ವ ಋಷಿಗಳ ಮನೋವೈಕ್ಲವ್ಯವನ್ನು ಕವಿಕುಲಗುರು ಕಾಳಿದಾಸನು ನಿರೂಪಿಸಿರುವ ರೀತಿಗೆ ಮೆಚ್ಚದ ಸಹೃದಯರಿಲ್ಲ.

'ಕಾವ್ಯೇಷು ನಾಟಕಂ ರಮ್ಯಂ ತತ್ರಾಪಿ ಚ ಶಕುಂತಲಾ ।
ತತ್ರಾಪಿ ಚ ಚತುರ್ಥೋಂಕಸ್ತತ್ರಶ್ಲೋಕ ಚತುಷ್ಟಯಮ್ ॥'

ಎಂದು ಅಂದಿನಿಂದಲೇ ಈ ದೃಶ್ಯ ವಿಮರ್ಶಕರ ಮನವನ್ನು ಸೂರೆಗೊಂಡಿದೆ. ಕಣ್ವರಂತಹ ತಪಸ್ವಿಗಳು ಮಗಳನ್ನು ಪತಿಗೃಹಕ್ಕೆ ಕಳಿಸುವಲ್ಲಿ ಅನುಭವಿಸಿದ ದುಃಖವನ್ನು ಕಾಳಿದಾಸನು ನಿರೂಪಿಸುವನು. ಹರಿಹರ, ರಾಘವಾಂಕರು, ಬಸವಣ್ಣನವರೋ, ಸಿದ್ಧರಾಮನೋ ಕೂಡಲಸಂಗಮ ಮಲ್ಲಿಕಾರ್ಜುನರನ್ನು ಬಿಟ್ಟಗಲಲಾರದೆ ಅನುಭವಿಸುತ್ತಿರುವ ವಿರಹತಾಪವನ್ನು ಬಣ್ಣಿಸುವರು. ಸಿದ್ಧರಾಮನು ಮಗು; ಲೌಕಿಕರ ದೃಷ್ಟಿಯಿಂದ ಸಾಧಕ ಬಸವಣ್ಣನವರೂ ಅಂತೆಯೆ; ಜೀವದೇವನಿಗಾಗಿ ಹಂಬಲಿಸುತ್ತಿರುವುದನ್ನು ಇಲ್ಲಿ ನೋಡುತ್ತೇವೆ. ಎರಡರಲ್ಲಿಯೂ ಶೋಕರಸ ಮಡುಗಟ್ಟಿ ನಿಂತಿದೆ. ಕಾಳಿದಾಸನ ಈ ಪದ್ಯಗಳನ್ನು ಓದಿದಾಗ ನಾವು ತಲೆದೂಗುವೆವು. ರಸಾಸ್ವಾದನೆ ಮಾಡುವೆವು. ಆನಂದ ಪಡುವೆವು. ಬಸವಣ್ಣ ಸಿದ್ಧರಾಮರು ಕಣ್ಣೀರಿನ ಕಾಲುವೆಯನ್ನು ಹರಿಸುವ ದೃಶ್ಯಗಳಾದರೋ ಈ ಕಾರ್ಯವನ್ನು ಮಾಡುವುದಲ್ಲದೆ ಸಹೃದಯರನ್ನು ಅಂತರ್ಮುಖಿಗಳನ್ನಾಗಿ ಮಾಡುತ್ತವೆ. ಕರುಣರಸದಿಂದ ಪರಿಶುದ್ಧವಾದ ಹೃದಯದಲ್ಲಿ ಕರುಣೆಯೊಡನೆಯೇ ಹರಿಯುತ್ತಿರುವವು. ಭಕ್ತಿ ಬಂದುದು ಮಡಗಟ್ಟಿ ನಿಂತಂತಾಗುತ್ತದೆ. ತಿದ್ದಿತೀಡಿ ಜನಜೀವನವನ್ನು ಉದಾತ್ತ ಜೀವನವನ್ನಾಗಿ ಮಾಡುವುದು. ಸಾಹಿತ್ಯದ ಗುರಿಯೊಂದು ತಿಳಿದರೆ–ತಿಳಿಯುವದು ವಿಹಿತ– ನಿಜವಾಗಿಯೂ 'ಬಸವರಾಜದೇವರ ರಗಳೆ' ಸಿದ್ಧರಾಮ ಚಾರಿತ್ರ'ಗಳಲ್ಲಿ ಬರುವ ಈ ಸನ್ನಿವೇಶಗಳೇ ಹೆಚ್ಚು ಸಾರ್ಥಕವಾಗಿವೆಯೆಂದು ಹೇಳಬಹುದು.

ಸಿದ್ಧರಾಮ ಚಾರಿತ್ರದಲ್ಲಿ ಕಥಾವಸ್ತುವನ್ನೂ ಅಲ್ಲಿ ಬಂದಿರುವ ವರ್ಣನೆಗಳನ್ನೂ ರಸನಿರೂಪಣೆಯನ್ನೂ ನೋಡಿದುದಾಯಿತು. ರಾಘ

ವಾಂಕನು ಹರಿಹರನ 'ವರಸುತ'ನಾದುದರಿಂದ ಆತನ ಛಾಯೆ ರಾಘ ವಾಂಕನ ಮೇಲಾಗುವುದು ಸ್ವಾಭಾವಿಕ. ಸಿದ್ಧರಾಮನು ಮಲ್ಲಿಕಾರ್ಜು ನನನ್ನು ಅಗಲಲಾರನೆಂಬುದೂ, ಮಲ್ಲಿಕಾರ್ಜುನನು ಸಿದ್ಧರಾಮನಿಗೆ 'ನೀನು ನಿಂದಲ್ಲಿ ನಿಂದಪೆಂ, ಬಂದಲ್ಲಿ ಬಂದಪೆ'ನೆಂಬುದೂ ಹರಿಹರನು ಬಸವರಾಜ ದೇವರ ರಗಳೆಯಲ್ಲಿ ಬಸವಣ್ಣನವರು ಕೂಡಲಸಂಗಮನಾ ಥನನ್ನು ಬಿಟ್ಟು ಅಗಲಲಾರದ ದೃಶ್ಯವನ್ನು ಚಿತ್ರಿಸುತ್ತಿರುವುದನ್ನು ನೆನಪಿಗೆ ತರುತ್ತದೆ. ಹರಿಹರನ ಅನೇಕ ರಗಳೆಗಳಲ್ಲಿ ಸಿದ್ಧರಾಮನ ಸಂದರ್ಭ ಬರುತ್ತದೆ. ರಾಘವಾಂಕನಿಗೆ ಅವುಗಳ ಪರಿಚಯವಿದ್ದಿತು. ಇದಲ್ಲದೆ ಈ ಹೊತ್ತಿಗೆ ಸಿದ್ಧರಾಮನ ಕಥೆ ಜನರಲ್ಲಿ ಒಳ್ಳೇ ಪ್ರಚಲಿತವಾಗಿದ್ದು ಆತನ ಬಗೆಗೆ ಅನೇಕ ಕಥೆ ಉಪಕಥೆಗಳನ್ನು ಅವರು ಹೆಣದಿರಬಹುದು. ಎಲ್ಲಕ್ಕೂ ಮಿಗಿಲಾಗಿ ಸಿದ್ಧರಾಮನ ವಚನಗಳಿಂದ ರಾಘವಾಂಕನು ಆತನ ದಿವ್ಯ ವ್ಯಕ್ತಿತ್ವವನ್ನು ಕಂಡುಕೊಂಡಿದ್ದನು. ಹೀಗೆ ಉಪಲಬ್ಧ ವಿದ್ದ ಮೂರು ಸಾಧನಗಳ ಸಹಾಯವನ್ನು ತೆಗೆದುಕೊಂಡು ತನ್ನ ಪ್ರತಿಭೆಯ ಎರಕ ಹೊಯ್ದು ಕವಿಯು ಈ ಕಾವ್ಯದ ಕಥಾ ವಸ್ತುವನ್ನು ನಿರ್ಮಿಸಿರುವನು. ಹರಿಹರನ ರಗಳೆಯಲ್ಲಿ ಏಕಾಂತ ರಾಮಯ್ಯನ ತಲೆ ಸಿದ್ಧರಾಮನನ್ನು ಕಂಡ ವಿಷಯ ಬರುತ್ತದೆ. ಅನಾವಶ್ಯಕವೆನಿಸಿಸಿದು ದರಿಂದ ರಾಘವಾಂಕನು ಅದನ್ನು ಬಿಟ್ಟು ಬಿಟ್ಟಿರುವನು. ಪ್ರಭುದೇವರ ರಗಳೆಯಲ್ಲಿ ಪ್ರಭು ಸಿದ್ಧರಾಮರ ಸಂದರ್ಶನ ಎರಡು ಚರಣಗಳಲ್ಲಿ ಮುಗಿದಿದೆ. ರಾಘವಾಂಕನಾದರೋ ತನ್ನ ನಾಟಕೀಯ ಪ್ರತಿಭೆಯಿಂದ ವಿಸ್ತರಿಸಿ ಪ್ರಭು ಸಿದ್ಧರಾಮರ ಜೀವನಾದರ್ಶವನ್ನು ಸ್ಪಷ್ಟಪಡಿಸಿರುವನು. ಅಲ್ಲದೆ ಒಂದೆರಡು ಕಡೆಗೆ ವ್ಯತ್ಯಾಸವನ್ನು ಮಾಡಿರುವನು. ಉಪಕ ಥೆಗಳ ಸಂಖ್ಯೆ ಬಹಳವಾಗಿರುವುವದರಿಂದ ಬೇಸರಿಕೆಯುಂಟಾಗುವಂತಿದೆ. ಕೆಲವನ್ನು ರಾಘವಾಂಕನು ಬಿಟ್ಟು ಬಿಡಬಹುದಾಗಿದ್ದಿತು. ಆದರೂ ಆ ಕಾಲದಲ್ಲಿ ಜನಸಾಮಾನ್ಯರು ಅವುಗಳನ್ನು ಪೂರ್ತಿಯಾಗಿ ನಂಬಿ ರಬಹುದಾದುದರಿಂದ ಕವಿಗೆ ಅವುಗಳನ್ನು ಹೇಳದೇ ಗತ್ಯಂತರವಿಲ್ಲದಾ ಗಿದೆ. ಉಪಕಥೆಗಳಿಂದ ಮೂರು ಉದ್ದೇಶಗಳು ಸಫಲವಾದಂತಿವೆ. 'ಸಿದ್ಧರಾಮ ಚಾರಿತ್ರ'ವು ಒಂದು ಆದರ್ಶಪುರಾಣವಾಗಬೇಕೆಂಬ ಆಶಯ ವಿದ್ದುದರಿಂದ ಜನಸಾಮಾನ್ಯರಿಗೆ ಸಿದ್ಧರಾಮನ ವ್ಯಕ್ತಿತ್ವದ ಪ್ರಭಾವ ವನ್ನು ತೋರಿಸಿ ಕೊಡುವ ಅವಶ್ಯಕತೆಯಿದ್ದಿತು. ಅದನ್ನು ಅವರ

ರೀತಿಯಿಂದಲೇ ಮಾಡುವುದು ಉಚಿತ. ಸಾಮಾನ್ಯ ಜನರ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡಲು ಕಥೆಗಳು, ಪವಾಡಗಳು ಉತ್ತಮ ಸಾಧನವೆಂಬುದನ್ನು ಎಲ್ಲರೂ ಒಪ್ಪುವರು. ಈ ದೃಷ್ಟಿಯಿಂದ ಉಪಕಥೆಗಳು ರಾಘವಾಂಕನ ಉದ್ದೇಶವನ್ನು ಪೂರ್ತಿಯಾಗಿ ಸಫಲಗೊಳಿಸಿವೆ.

ಇಲ್ಲಿ ಬರುವ ಉಪಕಥೆಗಳಿಗೆಲ್ಲ ಒಂದೇ ಗುರಿಯಿದೆ. ಯಾವ ಕಥೆ ಬಂದರೂ ಸಿದ್ಧರಾಮನ ಒಂದೊಂದು ದೊಡ್ಡ ಗುಣವನ್ನು ಎತ್ತಿ ತೋರಿಸುತ್ತವೆ. ಕವಿಕಲ್ಪಿಸಿದ ಸಿದ್ಧರಾಮನ ವ್ಯಕ್ತಿತ್ವವನ್ನು ವಿವರಿಸಲು ಉಪಕಥೆಗಳು ಸಹಾಯ ಮಾಡುತ್ತಿವೆ.

ಉಪಕಥೆಗಳನ್ನು ಕವಿಯು ತಾನೇ ಹೇಳದೆ ಅಲ್ಲಿ ಬರುವ ಪಾತ್ರಗಳ ಬಾಯಿಂದ ಹೇಳಿಸಿರುವುದರಿಂದ ಕವಿಯ ಕಥನ ಕೌಶಲ್ಯವು ಸಹಜವಾಗಿ ವ್ಯಕ್ತವಾಗುತ್ತದೆ. ಹೀಗೆ ಪೂರ್ವಾರ್ಧದಲ್ಲಿ ಕಥೆಯ ಪ್ರವಾಹವು ಗಂಭೀರವಾಗಿ ಸಾಗಿದರೆ ಉತ್ತರಾರ್ಧದಲ್ಲಿ ಅದು ಒಳ್ಳೇ ತ್ವರಿತಗತಿಯಿಂದ ಮುಂದುವರಿಯುತ್ತದೆ. ಎಲ್ಲೆಲ್ಲಿಯೂ ಭಕ್ತಿ, ಜ್ಞಾನ, ವೈರಾಗ್ಯಗಳಿಂದ ಕೂಡಿದ ಸಿದ್ಧನ ವ್ಯಕ್ತಿತ್ವ, ಶಾಂತಿರಸ, ಇವೆಲ್ಲವುಗಳಿಂದ ಸಿದ್ಧರಾಮ ಚಾರಿತ್ರದ ಕಥಾವಸ್ತು ಚಿತ್ತಾಕರ್ಷಕವಾಗಿದೆ.

ರಾಘವಾಂಕನ ಮನಸ್ಸನ್ನು ಸೂರೆಗೊಂಡುದು ಸಿದ್ಧರಾಮನ ದಿವ್ಯ ವ್ಯಕ್ತಿತ್ವ, ಪುರಾಣ ರೂಪದ ಕಾವ್ಯದಿಂದ ಅದನ್ನು ಬಿತ್ತರಿಸಬೇಕೆಂಬುದು ಕವಿಯ ಆಶಯ. ಇತಿಹಾಸದ ಸಿದ್ಧರಾಮನು ಕರ್ಮಮಾರ್ಗದಲ್ಲಿ ನಿರತನಾಗಿ ಮುಂದೆ ಪ್ರಭುದೇವ, ಚೆನ್ನಬಸವಣ್ಣನವರ ಉಪದೇಶ ಪಡೆಯುವನು. ಮೊದಮೊದಲು ಏರಿಳಿತದ ಹೊಯ್ದಾಟಕ್ಕೆ ಸಿಲುಕಿದ ಸಿದ್ಧರಾಮನು ದೀಕ್ಷೆಪಡೆದು ಮೋಕ್ಷಪಥವನ್ನು ಕಾಣುವನು. ರಾಘವಾಂಕನ ಸಿದ್ಧರಾಮನಾದರೋ ಮಾನವ್ಯದ ಮಂದಾರ ಪುಷ್ಪ. ಕಾರಣ ಪುರುಷ. ತನ್ನ ಆದರ್ಶ ಪುರಾಣ ರೂಪದ ಕಾವ್ಯಕ್ಕೆ ಹೊಂದುವಂತೆ ಆ ಪಾತ್ರವನ್ನು ನಿರ್ಮಾಣಮಾಡಿರುವನು.

'ಸಿದ್ಧರಾಮನಾಥಂ ಮನುಜನಲ್ಲ ಕಾರಣ ರುದ್ರ'ನೆಂದು ಕವಿಯ ಮತ. 'ಶಿವಸಿದ್ಧರಾದಿತ್ಯ'ನಾದ ಸಿದ್ಧರಾಮನ ಚರಿತ್ರವನೆಯ್ದೆ ಪೊಗ

ಳಲಾನೆನಿತಜವನು' 'ಎಂದು ಕವಿಗೆ ಭಯ ಆದರೂ ಆತನ 'ಮಹಿಮೆಯು ಸರ್ವರರಿಯಲು ನಟ್ಟಕಲ್ಲೆನಿಸದಿಳೆಯೊಳಗೆ ಸುಳಿವ ಶಾಸನವೆನಿಸುವಂತೆ ಸತ್ಕೃತಿಯುನ್ನು ಹೇಳಬೇಕೆಂಬ ಭಕ್ತಿ.' ಭಕ್ತಿಯೇ ಮೊದಲಾದುದರಲ್ಲಿ ಆದ ಸಂಶವೂ ಇಲ್ಲ. ಸಿದ್ಧರಾಮನ ಜನನವಾಗುವುದು ಅಲೌಕಿಕ ರೀತಿಯಲ್ಲಿ ಎಂಬುದನ್ನು ಹಿಂದೆ ನೋಡಲಾಗಿದೆ. ಇದು ಪುರಾಣವಾದುದರಿಂದ ರಾಘವಾಂಕನು ಹಾಗೆ ಕಲ್ಪಿಸಲೇಬೇಕಾಯಿತು. ಭೃಂಗೀಶನೆಂದಂತೆ ಎವೆಯಿಕ್ಕದುಸಿರಿಕ್ಕದುಣ್ಣದ ಜಿತೇಂದ್ರಿಯತ್ವವ ತಳೆದ ಶಿವಜ್ಞಾನಿಯೇ ಈಗ ಮಗನಾಗಿ ಹುಟ್ಟಿರುವನು. ಆದುದರಿಂದ 'ಉಸಿರಿಲ್ಲ ಕರಣಂಗಳಲುಗುತಿವೆ; ಎವೆ ಮಱಿದು ಮಿಸುಕವು?' ಒಟ್ಟಿನಲ್ಲಿ ಹಸುಳೆಯ ಅಂದವೇ ಹೊಸತಾಗಿರುವುದು. ಬಾಲ್ಯದಿಂದಲೂ ಶಿವಲಿಂಗಾರ್ಚನೆಯಲ್ಲಿಯೇ ಆತನಿಗೆ ಅಭೀಷ್ಟೆ. ಮಲ್ಲಿಕಾರ್ಜುನನು ದೀಕ್ಷಾನಾಮವಿತ್ತು 'ಭೂತದಯಾವಿಚಾರಮಂ ನೇಮಮಂ' ಕೊಡುವನು. ಇದುವೇ ಸಿದ್ಧನ ಜೀವನಾದರ್ಶವಾಗುವುದು. 'ಸಾಕಾರ ನಿಷ್ಠೆ ಭೂತಂಗಳೊಳಗನುಕಂಪೆ' ಇವು ತನ್ನ ಜೀವನ ಆದರ್ಶವೆಂದು ಸಿದ್ಧರಾಮನೇ ಸ್ಪಷ್ಟವಾಗಿ ನುಡಿದಿರುವನು. ಈ ಆದರ್ಶವನ್ನಿಟ್ಟುಕೊಂಡುದರಲ್ಲಿ ಒಂದು ಸ್ವಾರಸ್ಯವಿದೆ. ಕಾರಣ ರುದ್ರನೆನಿಸಿದ ಸಿದ್ಧರಾಮನಿಗೆ ಯಾವ ಆದರ್ಶದ ಅವಶ್ಯಕತೆಯೂ ಇರಲಿಲ್ಲ. ಮಲ್ಲಿಕಾರ್ಜುನನ ದರ್ಶನವಾಗಿದೆ. 'ಉಸಿರು ಪರಿಮಳವಾಗಿರುವುದರಿಂದ ಬೇರೆ ಬೆಲೆಗೊಂಬ ಹೂವಿನ ಅವಶ್ಯಕತೆ ಅವನಿಗಿಲ್ಲ. ಆದರೂ ಸಿದ್ಧರಾಮನು 'ಈ ಜೀವರ ಪುಣ್ಯದೊದವಿಂಗೆ ಕೈಕೊಂಡ ಮೂರ್ತಿ.' ತನ್ನ ಆತ್ಮಕಲ್ಯಾಣದೊಡನೆ ಲೋಕದ ಉದ್ಧಾರವಾಗಬೇಕೆಂದು ಆತನ ಬಯಕೆ. ' ನೆರೆಯುವರಿಗತ್ತು ಕಣ್ಣು ಹೋಹಂದ ನಿಮಗೆಂದು ಪ್ರಭು ನುಡಿದರೆ 'ದೊರಕಿದಾತಂ ಸವಿಯ ಬೇಹುದೆ. ಮತ್ತಾರ್ಗೆ ದೊರಕೊಳುವುಪಾಯಕ್ಕೆ ಸೋಹೆಯಂ ಕೊಡಲಾಗದೇ ಜಗಜ್ಜನದ ಕೃಪೆಗೆಂದು' ಎಂದು ಸಿದ್ಧರಾಮನು ಮರಳಿ ಕೇಳುವನು. 'ಜಡರ ನಡುವಿರಲವರ ಸಂಗದಿಂ ಕಾಯಗುಣವಿಡಿದು ಬಳಲುವರು' ಎಂದು ಪ್ರಭು ಉಸುರಿದರೆ 'ಗಾಳಿಯಂ ಹುಡಿ ಹಿಡಿವುದೇ? ರಸನೆ ಹೆಡಸಹುದೆ.' ಎಂದು ಕೇಳುವ ಆತ್ಮಸ್ಥೈರ್ಯವೂ ಉಂಟು. ಈ ಯುಗದ ಜೀವರ ಪುಣ್ಯದೊದವಿಂಗೆ ಕೈಕೊಂಡ ಮೂರ್ತಿಯಾಗಿರುವುದರಿಂದಲೇ ಆತನು ಸಾಕಾರ

ರದಲ್ಲಿ ನಿಷ್ಠೆಯಿಡಬೇಕಾಗಿದೆ. ಮೋಕ್ಷವನ್ನು ಕಂಡುಕೊಳ್ಳಲು ಭಕ್ತಿ ಮಾರ್ಗವೇ ಸುಲಭೋಪಾಯವೆಂದು ಹೇಳುವರು.

'ರಾಜವಿದ್ಯಾರಾಜಗುಹ್ಯಂ ಪವಿತ್ರಮಿದಮುತ್ತಮಂ
ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಂ
— ಅ. ೯ - ಶ್ಲೋ–೨

ಎಂದು ಭಗವದ್ಗೀತೆಯಲ್ಲಿ ಭಕ್ತಿಯೋಗದ ಮಹಿಮೆ ಉಕ್ತವಾಗಿದೆ. ಉಪಾಸಕನಿಗೆ ಉಪಾಸ್ಯದೇವತೆಯು ಪ್ರತ್ಯಕ್ಷವಾಗಿರುವುದರಿಂದಲೇ ಭಕ್ತಿ ಯೋಗವು ಜನಸಾಮಾನ್ಯರಿಗೆ ಸುಲಭವಾಗಿದೆ. ಇದನ್ನರಿತು ಸಿದ್ಧ ರಾಮನು ಸಾಕಾರದಲ್ಲಿ ನಿಷ್ಠೆಯಿಡುವನು.

'ಯದ್ಯದಾಚರತಿ ಶ್ರೇಷ್ಠ ಸ್ತತ್ ತದೇವೇತರೋ ಜನಃ
ಸ ಯತ್ ಪ್ರಮಾಣಂ ಕುರುತೆ ಲೋಕಸ್ತದನುವರ್ತತೆ'

ಎಂಬ ನುಡಿಯಲ್ಲಿ ಸಿದ್ಧರಾಮನಿಗೆ ಪೂರ್ಣ ನಂಬುಗೆಯಿದ್ದಂತೆ ಕಂಡು ಬರುತ್ತದೆ. ಆದುದರಿಂದ ಮಲ್ಲಿಕಾರ್ಜುನನನ್ನು ಲಿಂಗವಾಗಿ ಬರಿಸಿಕೊಂಡು ಅದನ್ನು ನಿತ್ಯ ಪೂಜಿಸುವನು. ಶಿವಾಲಯಗಳನ್ನು ಕಟ್ಟಿಸುವನು. ಲಿಂಗ ಪ್ರತಿಷ್ಠಾಪನೆ ಮಾಡಿಸುವನು. ಅಭಿಷೇಕ ನಡಿಸುವನು. ದಾನ ಧರ್ಮ ಮಾಡುವನು. 'ಶಿವಯೋಗಿಯ ಶರೀರಂ ವೃಥಾ ಸವೆಯ ಲಾಗದು' ಎಂದು ನಿತ್ಯವೂ ಈ ಕಾರ್ಯದಲ್ಲಿ ತೊಡಗುವನು. ಕೊನೆಗೂ ಕ್ಷೇತ್ರಬಿಟ್ಟು ಕದಲದಿರಲು ಕಲುಗೆಲಸಕ್ಕೆ ಜಾರದಿರಲೂ ವ್ರುಡನಿಷ್ಠೆ ಯನ್ನೂ ಬಿಡದಿರಲೂ ಆಜ್ಞಾಪಿಸುವನು. ಹೀಗೆ ನಡೆವುದರಿಂದಲೇ 'ಪರಮಸುಖವಳವಟ್ಟು ದುರ್ನೀತಿ ಬಿಟ್ಟು ಶಂಕರ ಭಕ್ತಿ ನೆಲೆಗೊಳ್ಳು ವದೆಂ'ದು ಸಿದ್ಧನ ಉಪದೇಶ. ಸಾಕಾರ ನಿಷ್ಠೆಗೆ ಸಿದ್ಧನ ಜೀವನದ ಲ್ಲಿದ್ದ ಸ್ಥಾನಮಾನಗಳನ್ನು ಜನಸಾಮಾನ್ಯರ ಮನಸ್ಸಿನ ಮೇಲೆ ಪರಿ ಣಾಮಕಾರಿಯಾಗುವಂತೆ ತಿಳಿಸುವ ಅವಶ್ಯಕತೆಯಿದ್ದಿತು. ಅವರಲ್ಲಿ ನಂಬುಗೆ, ನಿಷ್ಠೆ, ಭಕ್ತಿ ಇವು ಸಹಜವಾಗಿ ಒಡಮೂಡಬೇಕೆಂದು ಕವಿಯ ಇಚ್ಛೆ. ಶ್ರೀಶೈಲದ ವರ್ಣನೆ, ತುಪ್ಪದಭಿಷೇಕದ ವರ್ಣನೆ ಇವುಗಳನ್ನು ಬೆಳಸಿದುದರ ಕಾರಣವು ಇದೇ. ಶ್ರೀಶೈಲದ ಮಹಾತ್ಮೆ ಜನರಿಗೆ ತಿಳಿದು ಮಲ್ಲಿಕಾರ್ಜುನನಲ್ಲಿ ಭಕ್ತಿ ಹುಟ್ಟಲಿ. ದೇವಾಲಯ ಗಳನ್ನು ಕಟ್ಟಿ ಲಿಂಗಪ್ರತಿಷ್ಠಾಪನೆ ಮಾಡಿ ಕ್ಷೇತ್ರಗಳನ್ನು ಪರಿಕಲ್ಪಿಸಿ

ಲಿಂಗಾಭಿಷೇಕ, ತುಪ್ಪದಭಿಷೇಕಗಳನ್ನು ಮಾಡಿ ಮಾಡಿ ಮುಕ್ತಿಯನ್ನು ಪಡೆಯಬೆಂದು ಅವುಗಳ ವಿಧಾನವನ್ನೆಲ್ಲ ಸ್ಪಷ್ಟವಾಗಿ ವಿವರಿಸುವನು. ನರಕದ ರೌರವವನ್ನು ಅರಿತು ಆ ಹಾದಿಯಿಂದ ದೂರಾಗಲೆಂದು ಅದರ ವರ್ಣನೆಯನ್ನೂ ಸ್ವಲ್ಪ ಹೆಚ್ಚು ಮುಂದುವರಿಸಿದನು. ಮೇಲು ನೋಟಕ್ಕೆ ಬೇಸರಿಕೆಯನ್ನುಂಟುಮಾಡುವಂತೆ ಕಾಣುವ ಈ ವರ್ಣನೆಗಳು ಪುರಾಣ ಕಾವ್ಯದಲ್ಲಿ ಕವಿಯ ಉದ್ದೇಶವನ್ನರಿತಾಗ ಅವು ಅವಶ್ಯವೆಂದೆನಿಸುತ್ತವೆ.

'ಅಡಿಯಿಟ್ಟ ಧರೆಯನ್ನು ಮಹಾಕ್ಷೇತ್ರವನ್ನಾಗಿ ಮಾಡಬಲ್ಲ ಸಿದ್ಧರಾಮನು ಸಾಕಾರದಲ್ಲಿ ನಿಷ್ಠೆಯಿಟ್ಟುದು ಭೂತಂಗಳ ಮೇಲಿನ ಅನುಕಂಪೆಗಾಗಿ. ಅವನ ಅನುಕಂಪೆ ಅದ್ವಿತೀಯವಾದುದು.

'ಹೀನರಿವರುತ್ತಮರ ಪಾತ್ರ ಸತ್ಪಾತ್ರವೆಂಬಾ ನೋಟವಿಲ್ಲ. ಸರ್ವರಿಗೆ ಭೂದಾನ ಗೋದಾನ ಕನ್ಯಾದಾನ ವಸ್ತ್ರದಾನಂ ಅನ್ನದಾನ ಮಾಡಿ ತಣಿಸುವನು. ಮನುಷ್ಯ ಮಾತ್ರಕ್ಕೆತ್ತನೆಂದಡೇನಹುದಖಿಳ ಮುಖದ ಜೀವಾಳಿಗಳಿಗೆಂದುವುಂ ತಪ್ಪದಂತೀವೆನೆಂದನು. ಗೈದು ಸತ್ರಮಂ ಪರಿಕಲ್ಪಿಸಿ ಅಣುವೊದಲಿರುಹೆ ಪಶುಪಕ್ಷಿ ಮೃಗವಾನೆಯೊಂದವಕ್ಕಲಸದು-ಚಿತಾಹಾರಮಂ ಕಟ್ಟಿಕೊಟ್ಟನು. ಕೊನೆಗೆ 'ಪಶುಪಕ್ಷಿ ಕ್ರಿಮಿಕೀಟಕಾವಳಿಗಳಱತು.' ನೀರ್ಗುಡಿಯೆ ಭವವಳಿವಂತು ಕೆರೆಯ ಕಟ್ಟಿಸುವನು. ಇವೆಲ್ಲ ಭೂತಂಗಳೊಳಗಿದ್ದ ಆತನ ಅನುಕಂಪೆಯನ್ನು ಸೂಚಿಸುತ್ತವೆ. ಸಿದ್ಧರಾಮನೊಂದು ದಿವಸ ಸಮಾಧಿಸ್ಥನಾಗಿರಲು ಒಂದು ಎರಳೆ ಬಂದು ಕೋಡಿನಿಂದ ಸಿದ್ಧೇಶನಂಗವನ್ನೊರಿಸುವುದು. ಭಾವದಚ್ಚಳಿದು ಸಮಾಧಿ ಸಂಚಳಿಸುವುದು. ಮುನಿಗಳಿಗೆ ಕೋಪವು ಮುಗುದುದಿಯಲ್ಲಂತೆ. ಕೋಪದಿಂದ ನಡುಗಣ್ಣು ತೆರೆದಿದ್ದರೆ ಶಿವನ ತಪಸ್ಸನ್ನು ಕೆಡಿಸಲು ಬಂದ ಕಾಮನ ಅವಸ್ಥೆ ಎರಳೆಗಾಗಬಹುದಿತ್ತು. ಆದರೆ ಸಿದ್ಧರಾಮನ ಸೈರಣೆ ಅಮಿತವಾದುದು. ಅಮೋಘವಾದುದು. ಕೋಪಿಸುವದಕ್ಕೆ ಪ್ರತಿಯಾಗಿ ಮರುಕದಿಂದ

'ಶಿವನೇ ಎನ್ನ ಮಱೆದು ನಿಮ್ಮಂ ಕೂಡಿ ಪರಿಣಮಿಸಿ

ಎಂದಿಪ್ಪೆನೋ ಕಪಿಲ ಸಿದ್ಧಮಲ್ಲಯ್ಯ' ಎಂದು ಗುರುವಚನ ಹಾಡುವನು. ತಿರುಗಿ ನೋಡದ ಮುನ್ನ ಮೃಗತನಹಾಂ ಮೋಘಚೂಡನೆಂಬ

ವಿದ್ಯಾಧರನಾಗುವನು. ಮತ್ತೊಂದು ಸಲ ಎರಳೆ ಸಗಣಿಯಲ್ಲಿ ಬಿದ್ದಾಗ ಅದನ್ನು ಮೇಲಕ್ಕೆತ್ತುವನು; ಸಿದ್ಧರಾಮನ ಕೃಪೆಯಿಂದ ಅದು ಗಂಧರ್ವನ ಆಕಾರವನ್ನು ತಾಳುವುದು. ಸ್ವಯಂಭು ಲಿಂಗವನ್ನು ತರುವ ಸಮಯದಲ್ಲಿ ಎತ್ತುಗಳು ಸಾಯಲು 'ಗೀತವುಂ ಹಾಡಿ' ಪ್ರಾಣ ತರುವನು. ಸಿದ್ಧರಾಮನು ಮಾಡುತ್ತಿದ್ದ ನಿತ್ಯ ಹೋಮವನ್ನು ಕೆಡಿಸಲು ಬಂದ ಖರ್ಪರನ ಪರಿವಾರವನ್ನು ಹಣೆಗಣ್ಣಿಗೆ ಬೆಸನಿತ್ತು ಸುಡುವಲ್ಲಿ ಹಿಂಸೆಗೆ ಹೇಸಿ ಕಾರುಣ್ಯ ತುಂಬಿದ ಕಣ್ಣಿಂದ ನೋಡಿ ಅವನನ್ನು ಕಾಪಾಡುವನು. ಕಪಟ ನಾಟಕ ಹೂಡಿ ನರಕಕ್ಕೆ ಹೋದ ಬಿಲ್ಲೇಶ ಬೊಮ್ಮಯ್ಯನು ನರಕದಲ್ಲಿ ಸಿದ್ಧರಾಮನ ನಾಮಸ್ಮರಣೆ ಮಾಡಲು ಆತನೊಡನೆ ಅಸಂಖ್ಯಾತ ನಾರಕಿಗಳನ್ನು ಉದ್ಧರಿಸುವನು. ಮಗುವನ್ನು ಕಳೆದುಕೊಂಡ ತಾಯಿಗೆ ಪುತ್ರನನ್ನು ಬದುಕಿಸಿಕೊಡುವನು. ಹೀಗೆ ದೇವನಾರಕ ತಿರ್ಯಙ್ಮನುಷ್ಯರೆಲ್ಲರ ಕಷ್ಟಗಳು ಸಿದ್ಧರಾಮನ ಕೃಪೆಯಿಂದ ದೂರಾಗುತ್ತವೆ. ಕೆಲವೇ ಕಥೆಗಳನ್ನಾಯ್ದು ಸಿದ್ಧರಾಮನ ದಯೆಯನ್ನು ಎತ್ತಿ ತೋರಿಸಿದ್ದರೆ ಹೆಚ್ಚು ಉಚಿತವೆನಿಸಬಹುದಿತ್ತು. ಆದರೆ ಇದು ಪುರಾಣವಾದುದರಿಂದ ಸಿದ್ಧರಾಮನ ಪವಾಡಗಳನ್ನು ಎಷ್ಟು ಬಣ್ಣಿಸಿದರೂ ಜನತೆಗೆ ಸಾಕಾಗದೆಂಬುದನ್ನು ಕವಿಯು ಅರಿತಿದ್ದನು. ತನ್ನ ಕಾಲದ ಜನತೆಯ ಆಶೆ ಆಕಾಂಕ್ಷೆಗಳನ್ನು ಪೂರಯಿಸುವದು ಕವಿಯ ಗುರಿ; ಅಂತೆ ಉಪಕಥೆಗಳ ಮಾಲೆ ಸ್ವಲ್ಪ ಉದ್ದವಾಗಿದೆ.

'ಹೀಗೆ ಸಾಕಾರನಿಷ್ಠೆ'ಯಿಂದ ಆತ್ಮಕಲ್ಯಾಣವನ್ನೂ ಭೂತಂಗಳೊಳಗನುಕಂಪೆಯಿಂದ ಲೋಕ ಕಲ್ಯಾಣವನ್ನೂ ಸಾಧಿಸಿ ಸಿದ್ಧರಾಮೇಶನು ಮಾನವ್ಯದ ಮಂದಾರ ಪುಷ್ಪವಾಗಿದ್ದಾನೆ. ಹರಿಹರ ದೇವರ ರಗಳೆ ಸಿದ್ಧರಾಮೇಶ್ವರನ ವಚನ ಜನಜನಿತವಾಗಿ ಬಂದ ಉಪಕಥೆಗಳ ಸಾರವನ್ನು ಕವಿಯು ಹೀರಿ ದಿವ್ಯವ್ಯಕ್ತಿತ್ವವನ್ನು ಪರಿಕಲ್ಪಿಸಿ ಅದನ್ನು ಸುಂದರವಾಗಿ ನಿರೂಪಿಸಿದ್ದಾನೆ. ಸಿದ್ಧರಾಮೇಶನ ಜನನ. ಆತನಿಗೆ ಮಲ್ಲಿಕಾರ್ಜುನನ ದರ್ಶನ. ಸಿದ್ಧರಾಮೇಶನು ಗೆಯ್ದ ಅನಂತ ಪವಾಡ ಇವೆಲ್ಲವುಗಳನ್ನು ಪರಿಶೀಲಿಸಿದರೆ ಪುರಾಣದ ವಾತಾವರಣವೇ ಮೊದಲಿನಿಂದ ಕೊನೆಯ ವರೆಗೆ ಗೋಚರವಾಗುತ್ತದೆ. 'ಸಿದ್ಧರಾಮ ಚಾರಿತ್ರ'ವು ಪುರಾಣವೆಂಬ ಮಾತಿಗೆ ಕಾವ್ಯದ ಕೊನೆಗೆ ಬರುವ 'ಶ್ರೀಮತ್ ಸಿದ್ಧರಾಮ

ಪುರಾಣದೊಳು ನವಮೋ ಸಂಧಿ' ಎಂಬುದು ಪುಷ್ಟಿಯನ್ನು ಕೊಡುತ್ತದೆ. ಪುರಾಣಕ್ಕೆ ಹೊಂದಿಕೊಳ್ಳುವ ರೀತಿಯಲ್ಲಿಯೇ ಕವಿಯು ಸಿದ್ಧರಾಮನ ನಿಲವನ್ನು ಬಣ್ಣಿಸುವ ರೀತಿಯನ್ನು ನೋಡಿರಿ.

'ನಡೆಗೆ ಹೆಜ್ಜೆಗಳಿಲ್ಲ ತನುಗೆ ನೆಳಲಿಲ್ಲ ನೀ
ರ್ಗುಡಿಯನುಣ್ಣಂ ಮಱಿಯನಲಸನಾಗುಳಿಸನಾ
ವೆಡೆಯೊಳಂ ವಿಣ್ ಮೂತ್ರಮುಂ ವಿಸರ್ಜಿಸ
ಬೆಮರನೆವೆಯಿಕ್ಕನುಸಿರಿಕ್ಕನು

ನುಡಿದುದೇ ಮಂತ್ರ ಹೆಸರಿಟ್ಟುದೇ ದೈವವಿ
ದ್ದೆಡೆ ಮಹಾಕ್ಷೇತ್ರ ಕಂಡವನೆ ಜೀವನ್ಮುಕ್ತ
ಹಿಡಿದುದೇ ಕಾರ್ಯ ಸಿದ್ಧೇಶ್ವರಂಗೆ'

ಒಟ್ಟಿನಲ್ಲಿ ಸಿದ್ಧರಾಮನು ಸ್ಥಿತ ಪ್ರಜ್ಞನು; ಜೀವನ್ಮುಕ್ತನು. ಭಗವದ್ಗೀತೆಯಲ್ಲೆಲ್ಲ ಸ್ಥಿತ ಪ್ರಜ್ಞನು ಕರ್ಮ ನಿರತನಾಗಬೇಕು ಕರ್ಮ ಸನ್ಯಾಸ ಮಾಡಬೇಕೆ? ಎಂಬುದು ಜಟಿಲ ಸಮಸ್ಯೆಯಾಗಿದೆ. ಈ ಒಗಟವನ್ನೇ ಒಡೆಯಲು ಆಚಾರ್ಯತ್ರಯರು ತುಂಬಾ ಹೆಣಗಿರುವರು. ಸಿದ್ಧರಾಮನ ಜೀವನವನ್ನು ನೋಡಿದರೆ ಈ ಸಮಸ್ಯೆಗೆ ಸರ್ವೋತ್ಕೃಷ್ಟವಾದ ಉತ್ತರ ದೊರೆಯುತ್ತದೆ.

ಸಿದ್ಧರಾಮ ಚಾರಿತ್ರವನ್ನು ವಿಮರ್ಶಿಸುತ್ತ ಅದು ಪುರಾಣ ಕಾವ್ಯವೆಂಬ ನಿರ್ಣಯಕ್ಕೆ ಬಂದುದಾಗಿದೆ. ನಿಟ್ಟಿಸಿ ನೋಡಿದರೆ ಅದು ಒಂದು ಆದರ್ಶ ಪುರಾಣವೆಂಬುದು ಸ್ಪಷ್ಟವಾಗುವುದು. ಇಲ್ಲಿ 'ಪುರಾಣ' ವೆಂಬುದನ್ನು ವಿಶಿಷ್ಟಾರ್ಥದಲ್ಲಿ ಉಪಯೋಗಿಸಲಾಗಿದೆ. 'ಪುರಾಣ' ವೆಂಬುದು ಮೂಲ ಅರ್ಥವನ್ನು ಕಳೆದುಕೊಂಡು ಇಂದು ಸ್ವಾರಸ್ಯವಿಲ್ಲದ ಶಬ್ದವಾಗಿದೆ. ಪುರಾಣಗಳ ಮೂಲ ಕಲ್ಪನೆಯೂ ಮಾಯವಾಗಿ ವಿಶ್ವಕೋಶಗಳಾಗಿವೆ. ಲಿಂಗ ಪುರಾಣ, ಶಿವ ಪುರಾಣ, ವಿಷ್ಣು ಪುರಾಣ, ಸ್ಕಂದ ಪುರಾಣ ಇವೇ ಮೊದಲಾದವುಗಳನ್ನು ನೋಡಿದರೆ ಈ ಮಾತಿನ ಸತ್ಯಾಂಶ ದೊರೆಯುತ್ತದೆ. ಆದುದರಿಂದ ಲಾಕ್ಷಣಿಕರು 'ಸರ್ಗಶ್ಚ ಪ್ರತಿ ಸರ್ಗಶ್ಚ ವಂಶೋಮನ್ವಂತರಾಣಿ ಚ। ವಂಶಾನುಚರಿತಂ' ಎಂದು ಪುರಾಣದ ಪಂಚ ಲಕ್ಷಣಗಳನ್ನು ಹೇಳುವರು. ಸೃಷ್ಟಿಯ ಸ್ಥಿತಿ, ಲೋಕ

ವಿಸ್ತಾರ, ವಂಶಾನುಚರಿತೆಗಳು ಬರುವವಲ್ಲದೆ ದೇವರ ಶಕ್ತಿ ಪ್ರತಿಪಾದನೆಯೊಡನೆ ಅನಂತ ವಿಷಯಗಳೂ ಅಲ್ಲಿ ಬಂದು ಹೋಗುತ್ತವೆ. ಅಶ್ವಶಾಸ್ತ್ರ, ಗಜಶಾಸ್ತ್ರ, ವೈದ್ಯಶಾಸ್ತ್ರ, ಜ್ಯೋತಿಷ್ಯಶಾಸ್ತ್ರ ಇವೇ ಮೊದಲಾದ ವಿಷಯಗಳು ಬಂದು ಹೋಗುತ್ತವೆ. ಒಟ್ಟಿನಲ್ಲಿ ಪುರಾಣಗಳೆಂದರೆ ವಿಶ್ವಕೋಶಗಳಾಗಿವೆ. ಆದುದರಿಂದ ಗದುಗಿನ ಭಾರತ, ಜೈಮಿನಿ ಭಾರತ ಇವು ಮುಖ್ಯವಾಗಿ ಪುರಾಣಗಳೇ ಕಾವ್ಯಗಳೇ ಎಂಬ ಸಮಸ್ಯೆ ಒಡಮೂಡಿ ಅನೇಕರು ಇದಕ್ಕೆ ಉತ್ತರ ಕೊಡಲು ಪ್ರಯತ್ನಮಾಡಿರುವರು. ಅವು ಮುಖ್ಯವಾಗಿ ಕಾವ್ಯಗಳೆಂದು ಅವರು ಸಿದ್ಧಮಾಡಲು ಹೆಣಗಿದರೂ ಮೇಲೆ ಹೇಳಿದ ಪುರಾಣಗಳನ್ನು ನಾವು ಗದುಗಿನ ಭಾರತದಲ್ಲಿ ಕಾಣುವೆವು.

ಸಿದ್ಧರಾಮ ಚಾರಿತ್ರವನ್ನು 'ಪುರಾಣ'ವೆಂದು ಕರೆವರೂ ಲಾಕ್ಷಣಿಕರು ಹೇಳುವ ಯಾವ ಪುರಾಣ ಲಕ್ಷಣಗಳೂ ಅಲ್ಲಿ ಕಂಡುಬರುವುದಿಲ್ಲ. ಆದರೂ ಅದನ್ನು ಪುರಾಣವೆನ್ನುವದೇಕೆ? ಇದಕ್ಕೆ ಸಮಂಜಸವಾದ ಉತ್ತರ ದೊರೆಯುಬೇಕಾದರೆ ಪುರಾಣಗಳ ಮೂಲ ಉದ್ದೇಶವನ್ನು ಅರಿಯುಬೇಕಾಗುವುದು. ಗಹನವಾದ ತತ್ತ್ವವನ್ನೂ ಜೀವನದ ರಹಸ್ಯವನ್ನೂ, ವಿಶ್ವದ ಗುಟ್ಟನ್ನೂ ತಿಳಿದುಕೊಳ್ಳಲು ಜನಸಾಮಾನ್ಯರಿಗೆ ಎಷ್ಟೋ ಸಲ ಕಠಿನವಾಗುವುದು. ಇವುಗಳನ್ನು ವಿವರಿಸಲು ಅನುಕೂಲವಾಗುವದಕ್ಕೆ ಕಥೆ ಉಪಕಥೆಗಳನ್ನು ಕಲ್ಪಿಸಿ ಹೇಳುವುದು ಒಂದು ಕಾಲಕ್ಕೆ ಪ್ರಾರಂಭವಾಯಿತು. ಅಲ್ಲಿಂದಲೇ ಪುರಾಣಯುಗದ ಪ್ರಾರಂಭ. ಬೇರೆ ಬೇರೆ ದೇವರಲ್ಲಿ ಭಕ್ತಿ ವಿಶ್ವಾಸಗಳನ್ನು ಹುಟ್ಟಿಸುವುದು ಪುರಾಣಗಳ ಮುಖ್ಯ ಉದ್ದೇಶವಾಗಿತ್ತು. ಈ ದೃಷ್ಟಿಯಿಂದ ನೋಡಿದರೆ 'ಸಿದ್ಧರಾಮ ಚಾರಿತ್ರ' ನಿಜವಾಗಿಯೂ ಒಂದು ಆದರ್ಶ ಪುರಾಣ. ಸಿದ್ಧರಾಮ ಚಾರಿತ್ರದ ತಳಹದಿಯಲ್ಲಿ ಒಂದು ದೊಡ್ಡ ತತ್ತ್ವವಿದೆ. ಶ್ರೀಯುತ ಡಿ. ಎಲ್. ನರಸಿಂಹಾಚಾರ್ಯರು ಹೇಳುವಂತೆ 'ಸಾಕಾರ ನಿಷ್ಠೆಯಿಂದ ಬರುವ ಆತ್ಮಕಲ್ಯಾಣವೂ ಭೂತಾನುಕಂಪೆಯಿಂದ ದೊರೆಯುವ ಲೋಕಕಲ್ಯಾಣವೂ ಅಹಮಹಮಿಕೆಯಿಂದ ವೃದ್ಧಿಗೊಂಡಾಗ ಅವು ಸಮಸ್ತ ಸನ್ಮಂಗಳ ಸ್ವರೂಪಿಯಾದ ಪರಬ್ರಹ್ಮ' ಈ ತತ್ವವನ್ನು ವಿವರಿಸಲು ಸಿದ್ಧರಾಮನ ಕಥೆಯನ್ನು ಕವಿಯು ಕಟ್ಟಿದನೆನ್ನುವುದಕ್ಕಿಂತ ಸಿದ್ಧರಾಮನ ಜೀವನ

ದಲ್ಲಿ ಈ ತತ್ವದ ತಿರುಳನ್ನು ಕಂಡುಕೊಂಡು ಅದು ಸ್ಪಷ್ಟವಾಗಲು ಅನುಕೂಲವಾಗುವ ಕಥೆ ಉಪಕಥೆಗಳನ್ನು ಸಿದ್ಧನ ಸುತ್ತು ಹೆಣೆದು ಕಾವ್ಯಮುಖದಿಂದ ಹಾಡಿದನು. ಮೇಲಿನ ತತ್ವದ ಸೊಗಸನ್ನು ಕವಿಯ ಪ್ರತಿಭೆ ಕಾವ್ಯೋಚಿತವಾದ ವರ್ಣನೆಗಳಿಂದ ವಿವರಿಸುವುದರಿಂದ ಇದೊಂದು ಉತ್ತಮ ಕಾವ್ಯವೂ ಆಗಿದೆ. ಜನತೆಗೆ ಆದರ್ಶ ಪುರಾಣವೂ ಎನಿಸುತ್ತದೆ.

ಕನ್ನಡವಲ್ಲಿ ಜೈನ, ವೀರಶೈವ, ವೈಷ್ಣವ ಪುರಾಣಗಳು ಹೇರಳವಾಗಿವೆ. ಜೈನ ಪುರಾಣಕ್ಕೆ ಪ್ರಾಜ್ಞರು ಕೆಲವು ಕಟ್ಟುಗಳನ್ನು ಎಂದೋ ಹಾಕಿ ಬಿಟ್ಟಿರುವರು. (೧) ಲೋಕಾಕಾರ ಕಥನ (೨) ದೇಶನಿವೇಶೋಪದೇಶ (೩) ನಗರಸಂಪತ್ ಪರಿವರ್ಣನೆ (೪) ರಾಜ್ಯರಮಣೀಯಕಾಖ್ಯಾನ (೫) ತೀರ್ಥಮಹಿಮ ಸಮರ್ಥನೆ (೬) ಚತುರ್ಗತಿ ಸ್ವರೂಪ ನಿರೂಪಣ (೭) ತಪೋದಾನ ವಿಧಾನ ವರ್ಣನೆ (೮) ತತ್ಫಲಪ್ರಾಪ್ತಿ ಈ ಅಷ್ಟಾಂಗಗಳು ಜೈನ ಪುರಾಣದಲ್ಲಿ ಬರಲೇಬೇಕು. ಮೇಲಾಗಿ ಪಂಚಕಲ್ಯಾಣದ ವರ್ಣನೆ ಯಾರು ಹೇಳಿದರೂ ಜೈನ ಪುರಾಣದಲ್ಲಿ ತಪ್ಪಿದುದಲ್ಲ. ಇದಕ್ಕೆ ಕಳಸವಿಡುವಂತೆ ಭಾವಾವಳಿಯ ವರ್ಣನೆ. ಜೈನ ತತ್ವದಲ್ಲಿ, ಧರ್ಮದಲ್ಲಿ, ಅಸಂಖ್ಯ ಪರಿಭಾಷೆಗಳು, ಕೂದಲು ಶೀಳಿಕೆಯ ವಿಭಾಗಗಳೂ ಇವೆಲ್ಲ ಅಲ್ಲಿ ಬರಲೇಬೇಕು. ಹೀಗಾಗಿ ಜೈನ ಪುರಾಣಗಳಲ್ಲಿ ಕವಿಗೆ ಸ್ವಾತಂತ್ರ್ಯ ಬಹಳ ಕಡಿಮೆ. ತೀರ್ಥಂಕರರ ಜೀವನ ಚರಿತೆಯಲ್ಲಿಯೂ ವಿಶೇಷ ವ್ಯತ್ಯಾಸ ಕಂಡುಬಾರದಿರುವುದರಿಂದ ಜೈನ ಪುರಾಣಗಳೆಲ್ಲ ಒಂದೇ ಪಡಿಯಚ್ಚಿನಲ್ಲಿ ತೆಗೆದಂತಾಗಿವೆ. ಭವಾವಳಿಯ ಅಸಂಖ್ಯ ಕಥೆಗಳು ಬಂದರೂ ಆ ಕಥೆಗಳಿಗೂ ಆ ತೀರ್ಥಂಕರನ ಜೀವನಕ್ಕೂ ಇರುವ ಸಂಬಂಧವನ್ನು ತಿಳಿದುಕೊಳ್ಳುವುದೇ ಕಠಿನವಾಗುತ್ತದೆ. ಆದಿಪುರಾಣವನ್ನೋದುವವರಿಗೆ ಈ ಮಾತು ಮನವರಿಕೆಯಾಗದಿರದು. ಅಲ್ಲಿ ಏಕಸೂತ್ರತೆಯಿಲ್ಲದಂತೆ ಭಾಸವಾಗುತ್ತದೆ. 'ನೆಗಟ್ದಾದಿ ಪುರಾಣದೊಳಱಿವುದು ಕಾವ್ಯಧರ್ಮಮಂ ಧರ್ಮಮುಮಂ' ಎಂದು ಮಹಾಕವಿ ಪಂಪನು ಹೇಳಿದ್ದರೂ ಜೈನಧರ್ಮ, ಕಾವ್ಯ ಧರ್ಮಗಳ ಹಾಸುಹೊಕ್ಕಾದ ಸುಂದರ ಹೆಣಿಕೆ ಅಲ್ಲಿ ಕಂಡು ಬಾರದು. ಕಾವ್ಯ ಧರ್ಮ ಬಂದಲ್ಲಿ ಔನ್ನತ್ಯವೂ ಜೈನಧರ್ಮ ತತ್ವಗಳ ನಿರೂಪಣೆ ಬಂದಲ್ಲಿ ನೀರಸತೆಯೂ ಅನೇಕ ಕಡೆಗೆ ಕಂಡು ಬರುತ್ತವೆ. ಆದುದ

ರಿಂದ ಜೈನ ಪುರಾಣಗಳಲ್ಲಿ ಸರ್ವಸಾಮಾನ್ಯತ್ವವು ಕಡಿಮೆಯೆಂದೇ ಹೇಳಬೇಕು. ವೈಷ್ಣವ ಪುರಾಣಗಳ ಮಾದರಿಯೆಂದು 'ಜಗನ್ನಾಥ ವಿಜಯವನ್ನೋ' ಚಾಟುವಿಠಲನ 'ಭಾಗವತ' ಪುರಾಣವನ್ನೋ ಇಲ್ಲವೆ ಮೇಲೆ ಹೇಳಿದ ಸಮಸ್ಯೆಯಂತಹ ಪುರಾಣಗಳೆಂದು ತಿಳಿದು ಗದುಗಿನ ಭಾರತ, ಜೈಮಿನಿ ಭಾರತಗಳನ್ನೋ ತೆಗೆದುಕೊಂಡರೆ ಅಲ್ಲಿಯೂ ಹಿಂದೆ ಹೇಳಿದ ಆದರ್ಶಪುರಾಣದ ಲಕ್ಷಣಗಳನ್ನು ಕಾಣೆವು. 'ಕಥೆ ವಿಷ್ಣು ಪುರಾಣಂ' ಎಂದು ಹೇಳಿ ಜಗನ್ನಾಥ ವಿಜಯ ಬರೆಯ ಹೊರಟ ರುದ್ರಭಟ್ಟನು ಅಷ್ಟೊಂದು ಪ್ರತಿಭಾವಂತ ಕವಿಯಲ್ಲವಾದುದರಿಂದ ಅದು ಉತ್ತಮ ಕಾವ್ಯವೂ ಆಗಲಿಲ್ಲ. ಆದರ್ಶಪುರಾಣವೂ ಆಗಲಿಲ್ಲ. ನೀರಸವಾದ ಯುದ್ಧದ ವರ್ಣನೆಗಳ ಸಮೂಹವಾಗಿದೆ. ಗದುಗಿನ ಜೈಮಿನಿ ಭಾರತಗಳ ದೃಷ್ಟಿಯೇ ಬೇರೆ. ಅವು ವಿವಿಧ ರೀತಿಯ ಸಂಗಮವಾಗಿ ಜನಪ್ರಿಯವಾಗಿದ್ದರೂ ಮೇಲೆ ಹೇಳಿದ ಆದರ್ಶಪುರಾಣದ ಲಕ್ಷಣಗಳು ಅಲ್ಲಿ ಕಡಿಮೆ; ಇದ್ದರೂ ಆ ಕೀರ್ತಿ ಈ ಕಾವ್ಯಗಳಿಗೆ ಮೂಲ ಮಾತೃಕೆಗಳಾದ ಸಂಸ್ಕೃತ ಕೃತಿಗಳಿಗೆ ಸಲ್ಲುತ್ತದೆ. ಈ ಮಾತಿಗೆ ಪುಷ್ಟಿಕೊಡುವುದಕ್ಕಾಗಿ 'ಮೂಲ ಭಾರತ'ವು ಸರ್ವಸಮ್ಮತವಾದ ಸಾಹಿತ್ಯವಾದುದರಿಂದ ಆದರ್ಶಪ್ರಭಾವವು ಅನುವಾದಕನ ಕೃತಿಯ ಮೇಲೆ ಆಗುವುದು ಸಹಜವಾಗಿದೆ! ಎಂಬ ಪ್ರೊ॥ ಬಸವನಾಳರವರ ಹೇಳಿಕೆಯನ್ನು ಉದ್ಧರಿಸಬಹುದು. ಅಲ್ಲದೆ ಲಾಕ್ಷಣಿಕರು ಹೇಳುವ ಪುರಾಣದ ಲಕ್ಷಣಗಳೂ ಆ ಭಾರತದಲ್ಲಿ ಕಂಡು ಬರುತ್ತವೆ. ಆದುದರಿಂದ ಕನ್ನಡದಲ್ಲಿದ್ದ ವೈಷ್ಣವ ಸಾಹಿತ್ಯದಲ್ಲಿ ಆದರ್ಶಪುರಾಣ–ಕಾವ್ಯವನ್ನು ಎತ್ತಿ ತೋರಿಸುವುದು ಕಠಿನವಾಗಿದೆ. ವೀರಶೈವರಲ್ಲಿಯೂ ಪುರಾಣಗಳೆಂದೇ ಬರೆದ ಚೆನ್ನಬಸವ ಪುರಾಣದ ತಹ ಗ್ರಂಥಗಳೆಲ್ಲ ಹಳೆಯ ಮಾದರಿಯ ಪುರಾಣಗಳೇ. ಚೆನ್ನಬಸವಣ್ಣನವರ ಕಥೆ ನಿಮಿತ್ತ ಮಾತ್ರಕ್ಕೆ; ಕಾವ್ಯದ ಬಹುಭಾಗವೆಲ್ಲ ಅಷ್ಟಾವರಣ, ಪಂಚಾಚಾರ್ಯ, ಷಟ್‌ಸ್ಥಲೋಪದೇಶ, ಇಷ್ಟಲಿಂಗ ಧಾರಣೆ, ಅಷ್ಟಾದಶಸ್ಥಲದ ವರ್ಣನೆ ಇವುಗಳಿಗಾಗಿಯೇ ಮೀಸಲಾಗಿರಿಸಲಾಗಿದೆ. ಲಂಬವಾದ ವರ್ಣನೆ, ಅನಾವಶ್ಯಕವಾದ ಉಪಕಥೆಗಳೇ ಬಹಳ.

ಜೈನ, ವೀರಶೈವ, ವೈಷ್ಣವ ಪುರಾಣಗಳ ದೋಷವನ್ನು ಕಣ್ಣು ಮುಂದಿಟ್ಟುಕೊಂಡು ಸಿದ್ಧರಾಮ ಪುರಾಣವನ್ನು ನೋಡಿದರೆ ಆದರ

ಘನತೆ ಕನ್ನಡಿಯೊಳಗಣ ಬಿಂಬದಂತೆ ಸ್ಪಷ್ಟವಾಗಿ ಕಾಣುತ್ತದೆ. ಅದು ದರಿಂದಲೇ ಅದು ಕನ್ನಡದಲ್ಲಿ ಒಂದು ಆದರ್ಶಪುರಾಣ. ಆದಿಯಿಂದ ಅಂತ್ಯದ ವರೆಗೂ ಒಂದೇ ಒಂದು ವ್ಯಕ್ತಿ ಒಡೆದು ಕಾಣುತ್ತದೆ. ಆತನ ಜೀವನವು ವಿಶ್ವಸಮ್ಮತವಾದ ಒಂದು ತತ್ವದ ತಳಹದಿಯಾದುದನ್ನು ಹಿಂದೆ ನೋಡಿದ್ದೇವೆ. ಆ ಪಾತ್ರವನ್ನು ಪೋಷಣೆ ಮಾಡದ ಉಪಕಥೆ ಗಳಿಲ್ಲ. ಧರ್ಮ, ತತ್ವ, ನೀತಿಗಳ ನೀರಸವಾದ ಚರ್ಚೆಗೆ ಆಸ್ಪದವಿಲ್ಲ. 'ಪ್ರಭು ಸಿದ್ಧರಾಮರ ಸಂದರ್ಶನದ ಸಮಯದಲ್ಲಿ ಇಂತಹ ಕ್ರಿಯೆಗೆ ಆಸ್ಪದವಿದ್ದರೂ ಔಚಿತ್ಯವನ್ನರಿತ ಕವಿಯು ತನ್ನ ಸಂಭಾಷಣೆಯ ಕಲೆ ಯಿಂದ ಆ ಚರ್ಚೆಯನ್ನು ಬೇಗಮುಗಿಸಿ ಅಲ್ಲಿ ತನ್ನ ಪಾಂಡಿತ್ಯ, ಆದರ್ಶ, ಕಲೆ ಇವೆಲ್ಲವನ್ನೂ ವ್ಯಕ್ತಮಾಡಿದ್ದಾನೆ. ಅನಾವಶ್ಯಕವಾದ ವರ್ಣನೆಗಳಿಲ್ಲದಿರುವುದನ್ನೂ ನೋಡಲಾಗಿದೆ. ಸಿದ್ಧರಾಮ ಪುರಾಣ ವನ್ನು ಓದಿದರೆ ಸಿದ್ಧರಾಮನ ದಿವ್ಯ ವ್ಯಕ್ತಿತ್ವದ ಸೊಗಸನ್ನು ಸವಿಯು ವಾಗ ಬೇರೆ ವರ್ಣನೆ ಮುಂದೆ ಬಂದು ರಸಭಂಗವಾಗುವುದಿಲ್ಲ. ಸಮತೆಗೆ ತವರಾದ ಸಿದ್ಧರಾಮನ ಜೀವನ ನೌಕೆ ಶಾಂತಿ ಸಾಗರದಲ್ಲಿ ತೇಲಿ ಮುಕ್ತಿಯ ಮಂದಿರವನ್ನು ಮುಟ್ಟುತ್ತದೆ. ಸಾವಿರ ಜನರನ್ನು ಮುಂದೆ ಕುಳ್ಳಿರಿಸಿಕೊಂಡು ಸಿದ್ಧರಾಮನ ಪುರಾಣ ಓದಿದರೆ ಅವರ ಜೀವನವನ್ನು ಸಂಸ್ಕಾರಗೊಳಿಸಿ ಭಕ್ತಿಯ ಬೀಜವನ್ನು ಅವರ ಹೃದಯದಲ್ಲಿ ಸಹಜ ವಾಗಿ ಬಿತ್ತಬಹುದು. ಭವ್ಯವಾದ, ದಿವ್ಯವಾದ ಆದರ್ಶವನ್ನು ಜನ ತೆಯ ಕಣ್ಣೆದುರು ತಂದಿಡುವುದು. ಒಟ್ಟಿನಲ್ಲಿ ಸಿದ್ಧರಾಮ ಪುರಾಣವು ಕರುಣ, ಭಕ್ತಿ, ಶಾಂತಿ ಇವುಗಳ ಮಡು. ಕಥಾ ಕುಸುಮದ ಗುಚ್ಛ; ಮಾನವ್ಯದ ಮಂದಾರ ಪುಷ್ಪವನ್ನರಳಿಸಿದ ಮಹಾಕಾವ್ಯ. ವಸ್ತು, ರೂಪ, ಸತ್ವ ಎಲ್ಲ ದೃಷ್ಟಿಯಿಂದಲೂ ಕ್ರಾಂತಿಯನ್ನೆಬ್ಬಿಸಿದ ಸ್ವತಂತ್ರ ಕಾವ್ಯ.

---

ಆದರೂ ಅವರು ಪ್ರಬಲ ಚಕ್ರವರ್ತಿಯಾದ ಜಯಸಿಂಹ ರಾಜನಿಗೆ ಸುಗ್ಗಳೆಯನ್ನು ಕೊಟ್ಟು ಲಗ್ನ ಮಾಡಿದ್ದರು. ಆದರೆ ಅವಳು ಶಿವಭಕ್ತರ ಮನೆಯಲ್ಲಿ ಹುಟ್ಟಿ ಬೆಳೆದವಳಾದ್ದರಿಂದ ಅವಳು ಜೈನನಾದ ತನ್ನ ಪತಿಯ ಮತದಲ್ಲಿ ವಿಶ್ವಾಸವುಳ್ಳವಳಾಗಿರದಿದ್ದರೂ ಹಿಂದಿನ ಕಾಲದ ಅನೇಕ ಶಿವಶರಣೆಯರು ವರ್ತಿಸಿದಂತೆ ಶಿವನಲ್ಲಿ ಗುಪ್ತಭಕ್ತಿಯುಳ್ಳವಳಾಗಿ ಆಚರಿಸುತ್ತ ಬಂದಳು.

ಹೀಗೆ ಕೆಲಕಾಲ ಕಳೆದ ಬಳಿಕ ಅವಳಲ್ಲಿ ಲಿಂಗ ದೀಕ್ಷೆಯನ್ನು ಹೊಂದಬೇಕೆಂಬ ಉತ್ಕಟೇಚ್ಛೆಯು ಉಂಟಾಯಿತು. ಆಗ ಒಂದು ದಿವಸ ಅವಳ ಕನಸಿನಲ್ಲಿ ರಾಮೇಶ್ವರನು ಬಂದು ಅವಳಿಗೆ – ನಿನ್ನ ಅಭೀಷ್ಟವನ್ನು ನೆರವೇರಿಸಲು ಮುದುನೂರಿನಲ್ಲಿದ್ದ ದೇವರ ದಾಸಿಮಯ್ಯನೇ ಸಮರ್ಥನು, ಅವನು ಕೇವಲ ಶಿವಾನುಭವಿಯು, ಅವನಿಂದ ನೀನು ಲಿಂಗ ದೀಕ್ಷೆಯನ್ನು ಹೊಂದು ಎಂದು ಸ್ವಪ್ನವಾಯಿತು. ಆಗ ಅವಳು ಅವನನ್ನು ಬರಮಾಡಿಕೊಳ್ಳಲು ಒಬ್ಬ ಚಾರನನ್ನು ಮುದುನೂರಿಗೆ ಕಳಿಸಿದಳು.

ಹೀಗಾದ ರಾತ್ರಿಯಲ್ಲಿಯೇ ದೇವರ ದಾಸಿಮಯ್ಯನು ನಿದ್ರೆ ಹೋದಾಗ್ಗೆ ರಾಮನಾಥನು ಅವನ ಸ್ವಪ್ನದಲ್ಲಿ — ನೀನು ಪೊಟ್ಟಲಕೆರೆಗೆ ಹೋಗು, ಅಲ್ಲಿ ರಾಣಿಯಾದ ಸುಗ್ಗಳಾದೇವಿಯು ಲಿಂಗಧಾರಣೆಯನ್ನು ಹೊಂದಲು ಬಯಸುತ್ತಿದ್ದಾಳೆ, ನೀನು ಅವಳಿಗೆ ಲಿಂಗೋಪದೇಶವನ್ನು ಮಾಡು, ಎಂದು ಹೇಳಿದನು. ಆ ಮೇಲೆ ದೇವರ ದಾಸಿಮಯ್ಯನು ತನ್ನನ್ನು ಕರೆಯಲಿಕ್ಕೆ ಬಂದ ಚಾರನೊಂದಿಗೆ ಪೊಟ್ಟಲಕೆರೆಗೆ ಹೋಗಿ, ಅಲ್ಲಿ ಮೊದಲಿಗೆ ತಾನು ಶ್ರೀಶೈಲದಿಂದ ತಿರುಗಿ ಬರುವಾಗ್ಗೆ ಭಕ್ತರು ಕಟ್ಟಿಸಿಕೊಟ್ಟಿದ್ದ ಮಠದಲ್ಲಿ ಬಂದು ಇರಹತ್ತಿದನು.

ದೇವರ ದಾಸಿಮಯ್ಯನು ರಾಜಧಾನಿಗೆ ಬಂದ ಬಳಿಕ ಸುಗ್ಗಳೆಯು ಅವನನ್ನು ತನ್ನಲ್ಲಿ ಬರಮಾಡಿಕೊಂಡು ತನಗೆ ಲಿಂಗ ದೀಕ್ಷೆಯನ್ನು ಕೊಡಬೇಕೆಂದು ಪ್ರಾರ್ಥಿಸಿಕೊಂಡಳು. ಆಗ ಅವನು ಅವಳಿಗೆ ಅಷ್ಟಾವರಣಗಳ ವಿವರಗಳನ್ನು ಸವಿಸ್ತಾರವಾಗಿ ಬೋಧಿಸಿ ವೀರಶೈವ ದೀಕ್ಷೆಯನ್ನು ಕೊಟ್ಟನು.

ದೇವರ ದಾಸಿಮಯ್ಯನು ಈ ಪ್ರಕಾರ ರಾಣಿಗೆ ಲಿಂಗದೀಕ್ಷೆಯನ್ನು ಮಾಡಿದ್ದು ಪರವಾದಿಗಳಿಗೆ ತಿಳಿಯಲು ಅವರು ಬಹಳ ಖತಿಗೊಂಡರು. ಅವರು ದಾಸಿಮಯ್ಯನೊಡನೆ ವಾದಿಸಲು ಮುಂದೆ ಬರಹತ್ತಲು ಅವನು ಅವರಿಗೆ—ಶಿವನೇ ದೈವವು, ಶಿವಮಂತ್ರವೇ ಮಂತ್ರವು, ಶಿವನು ಜಗನ್ಮಯನು, ಲಿಂಗಾಚಾರವೇ ಆಚಾರವು ಎಂಬುದನ್ನು ನಿರೂಪಿಸುತ್ತ ತ್ರಿಲಿಂಗಗಳಾದ ಇಷ್ಟ, ಪ್ರಾಣ, ಭಾವ ಲಿಂಗಗಳ ತತ್ವಗಳನ್ನು ಸಮರ್ಥಿಸುವನು. ಪಟ್ಟಣದಲ್ಲಿದ್ದ ಶಾಕ್ತ, ವೈಷ್ಣವ, ಜೈನ ಮೊದಲಾದ ಅನೇಕ ಮತಸ್ತರ ಮತಗಳನ್ನು ಅವನು ಖಂಡಿಸುತ್ತ ಅವರನ್ನು ನಿರುತ್ತರವಮಾಡುವನು.

ಒಂದು ದಿವಸ ಜೈನರು ಅವನಲ್ಲಿಗೆ ಬಂದು— ದಾಸಯ್ಯಗಳೇ, ನೀವು ರಾಮನಾಥನು ಸರ್ವವ್ಯಾಪಿಯು ಎಂದೆನ್ನುತ್ತೀರಿ. ಹಾಗಿದ್ದರೆ, ನೀವು ಅಶುದ್ಧವಾದ ಮಲಮೂತ್ರಗಳನ್ನು ಎಲ್ಲಿ ಬಿಡುವಿರಿ? ಅವುಗಳಿಗೆ ಸ್ಥಾನವಾವುದು? ಎಂದು ಹಾಸ್ಯಮಾಡಿ ನುಡಿಯಲು, ದಾಸಿಮಯ್ಯನು ಒಬ್ಬ ಜೈನನನ್ನು ಮುಂದೆ ಕರೆದು ಅವನಿಗೆ— ನಿನ್ನ ಜಿಹ್ವೆಯಲ್ಲಿ ಶಿವನುಂಟೇ ಎಂದು ಕೇಳಲು, ಅವನು — ಇಲ್ಲ ಎಂದೆನ್ನಲು, ಹಾಗಾದರೆ ಅಲ್ಲಿಯೇ ನಾನು ನನ್ನ ಮಲಮೂತ್ರಗಳನ್ನು ಬಿಡುವೆನೆಂದು ಹೇಳಿದನು.

ಮತ್ತೊಂದು ದಿನ ಜೈನರು ಒಂದು ಕೃತಕವನ್ನು ನೆನೆದು, ಒಂದು ಮರದ ಹೊಟ್ಟೆಯಲ್ಲಿ ಒಬ್ಬ ಬಾಲಕನನ್ನು ಇರಿಸಿ, ಅವನಿಗೆ ಹೇಳತಕ್ಕದ್ದನ್ನು ಹೇಳಿ, ದೇವರದಾಸಿಮಯ್ಯನಲ್ಲಿಗೆ ಬಂದು ಅವನಿಗೆ— ನೀನು ಶಿವನು ವಿಶ್ವವ್ಯಾಪಿ ಎಂದೆನ್ನುತ್ತೀ. ಇದು ಸುಳ್ಳು. ಜಿನನೇ ದೈವವು. ಜಿನನೇ ವಿಶ್ವವ್ಯಾಪಿಯು. ಇದೇ ಸತ್ಯವಾದುದು. ಇದನ್ನು ನಾವು ಸಿದ್ಧಪಡಿಸಬೇಕೆಂದು ನೀನು ಇಚ್ಛಿಸಿದಲ್ಲಿ, ಮರದಲ್ಲಿ ಜಿನನಿದ್ದಾನೆಂಬುದನ್ನು ತೋರಿಸಿಕೊಡುವೆವು ಎಂದು ಹೇಳಿದರು. ಆಮೇಲೆ ಅವರು ದೇವರ ದಾಸಿಮಯ್ಯನನ್ನು ಬಾಲಕನನ್ನು ಅಡಗಿಸಿಟ್ಟ ಮರದಲ್ಲಿಗೆ ಕರೆದುಕೊಂಡು ಬಂದು— ಜಿನೇಶ್ವರನೇ, ನೀನು ವಿಶ್ವವ್ಯಾಪಿಯಾದರೆ ನೀನು ಇಲ್ಲಿ ನುಡಿಯು ಎಂದು ಒತ್ತಿ ಹೇಳಲು, ಅದರಲ್ಲಿದ್ದ ಬಾಲಕನು ತನಗೆ ಕಲಿಸಿದಂತೆ 'ಓ' ಎಂದೆನ್ನದೆ ಅಲ್ಲಿ ಶಬ್ದವಾಗದೆ ಇರಲು

-ಒಳಗೆ ಹೋಗಿ ನೋಡುತ್ತಾರೆಯೋ ಅಲ್ಲಿ ಅವನು ಗತಪ್ರಾಣನಾಗಿ ಬಿದ್ದಿದ್ದನು. ಆಗ ಅವನ ತಾಯಿಯು ಅಲ್ಲಿಗೆ ಬಂದು ಅವರಿಗೆ— ನಿಮ್ಮ ವಾದ ಹಾಳಾಗಿ ಹೋಗಲಿ. ನನ್ನ ಮಗನನ್ನು ಕೊಂದಿರಿ. ಅವನ ಪ್ರಾಣವನ್ನು ನನಗೆ ಕೊಡಿಸಿರಿ ಎಂದು ರೋದಿಸುತ್ತ ದೇವರ ದಾಸಿಮಯ್ಯನ ಪಾದಕ್ಕೆರಗಿದಳು. ಆಗ ಅವನು ಹಾಗೆಯೇ ಆಗಲೆಂದು ಎನ್ನಲು ಆ ಬಾಲಕನು ಚೇತರಿಸಿಕೊಂಡು ಎದ್ದು ನಿಂತನು.

ಜೈನರು ಇದನ್ನು ನೋಡಿ ಮತ್ತಿಷ್ಟು ಕೆರಳಿದವರಾಗಿ ದೇವರ ದಾಸಿಮಯ್ಯನನ್ನು ಕೊಂದುಹಾಕಬೇಕೆಂದು ಹೊಂಚುಹಾಕಹತ್ತಿದರು. ಅವರು ಮಂತ್ರ ತಂತ್ರಗಳನ್ನು ಮಾಡುವಲ್ಲಿ ಬಹಳ ನಿಪುಣರು, ಸಿದ್ಧಿಗಳನ್ನು ಮಾಡಬಲ್ಲರು. ಅವರು ಅವುಗಳ ಪ್ರಯೋಗವನ್ನು ದೇವರ ದಾಸಿಮಯ್ಯನ ಮೇಲೆ ಮಾಡಲು ಪ್ರಾರಂಭಿಸಿದರು. ಆದರೆ ಶಿವಶರಣನು ಮಂತ್ರ ಶರೀರಿಯು, ಶಿವನ ಮಹಾಮಂತ್ರವನ್ನು ತನ್ನಲ್ಲಿ ಅಳವಡಿಸಿಕೊಂಡವನು. ಇಂಥವನನ್ನು ಇಂಥ ಮಂತ್ರ ತಂತ್ರಗಳು ಏನೂ ಮಾಡಬಲ್ಲವು? ಆದ್ದರಿಂದ ಜೈನರು ದಾಸಿಮಯ್ಯನ ಪ್ರಾಣಕ್ಕೆ ಯಾವ ಅಪಾಯವನ್ನು ಮಾಡಲಿಕ್ಕೆ ಶಕ್ತರಾಗಲಿಲ್ಲ. ಇಷ್ಟೇ ಅಲ್ಲ, ಅವನಲ್ಲಿ ನೆಲೆಗೊಂಡಿದ್ದ ಲಿಂಗತತ್ವದ ಮೂಲಕ ಜೈನರ ತಂತ್ರಗಳು ಅವರ ಮೇಲೆಯೇ ಹಿಂದಿರುಗಿ ಬಂದು ಅವರ ಶರೀರಗಳಲ್ಲಿ ಉರುಪು ಹುಟ್ಟಿಸಹತ್ತಿದವು. ಆಗ ಅವರು ತಮ್ಮ ಮಂತ್ರ ತಂತ್ರಗಳ ಪ್ರಯೋಗವನ್ನು ಅವನ ಮೇಲೆ ಮಾಡುವದನ್ನು ಬಿಟ್ಟು ಕೊಟ್ಟರು.

ಈ ಪ್ರಕಾರ ದೇವರ ದಾಸಿಮಯ್ಯನನ್ನು ಅವರು ಬಾಧಿಸಲಾರದೆ ಹೋಗಲು ಅವನನ್ನು ಘಾತಿಸಲಿಕ್ಕೆ ಉಪಾಯಗಳನ್ನು ಯೋಚಿಸಹತ್ತಿದರು. ಅವರು ಕಶ್ಮಲದ ಮೂಲಕ ಅತ್ಯಂತ ವಿಷಮಯವಾಗಿದ್ದ ಒಂದು ಜಲಾಶಯಕ್ಕೆ ಬಂದು ಅಲ್ಲಿಗೆ ದೇವರ ದಾಸಿಮಯ್ಯನನ್ನು ಬರಮಾಡಿಕೊಂಡು ಅವನಿಗೆ— ನೀನು ಇದರ ನೀರನ್ನು ಕುಡಿಯಬೇಕು. ಕುಡಿದು ಜೀವದಿಂದ ನೀನು ಉಳಿದರೆ ನಿನ್ನ ಮತವು ಸತ್ಯವಾದುದೆಂದು ಒಪ್ಪುತ್ತೇವೆ ಎಂದೆನ್ನಲು, ದೇವರದಾಸಿಮಯ್ಯನು ನಕ್ಕು- ಈ ಜಲವು ಶಿವನ ವಾಮದೇವ ಮುಖದಿಂದಾದುದು. ಅದರ ತತ್ವವು ನನ್ನಲ್ಲಿರುವದರಿಂದ ಅದು ನನ್ನನ್ನು ಏನೂ ಮಾಡಲಾರದು ಎಂದು ನುಡಿದು ಶಿವನನ್ನು ನೆನೆ

ಯುತ್ತ ಆ ನೀರನ್ನು ಮುಟ್ಟಲು ಅದು ಶುದ್ಧವಾಯಿತು ಮತ್ತು ಅದರಲ್ಲಿದ್ದ ವಿಷವೆಲ್ಲವೂ ಸುಟ್ಟು ಹೋಯಿತು. ಅಂಥ ನೀರಿನಿಂದ ಲಿಂಗಾರ್ಚನೆಯನ್ನು ಮಾಡಿ ಅದನ್ನು ಸೇವಿಸಲು ಅದು ಅವನಿಗೆ ಆವ ಬಾಧೆಯನ್ನೂ ಮಾಡಲಿಲ್ಲ. ಇಷ್ಟೇ ಅಲ್ಲ, ಸಮೀಪದಲ್ಲಿದ್ದ ಜನರೂ ಕೂಡ ಸೇವಿಸಲು ಅವರಿಗೂ ಏನೂ ಆಗಲಿಲ್ಲ. ಆಗ ದೇವರದಾಸಿಮಯ್ಯನು ಷಡ್ಲಿಂಗಗಳನ್ನು ಸಾಧಿಸಿದ ಮಹಾತ್ಮನಿಗೆ ಜಗತ್ತಿನಲ್ಲಿಯ ಇಂಥ ಯಾವ ವಸ್ತುವೂ ಬಾಧಿಸಲಾರದು ಎಂದು ಹೇಳಿದನು.

ಇಷ್ಟಾದರೂ ಜೈನರು ದೇವರ ದಾಸಿಮಯ್ಯನ ಸಾಮರ್ಥ್ಯವನ್ನು ತಿಳಿಯದೆ ಹೋದರು. ಅವರು ಅವನನ್ನು ಕೊಂದು ಹಾಕಬೇಕು, ಇಲ್ಲವೆ ಊರ ಬಿಡಿಸಿ ಅವನನ್ನು ಹೊರಗೆ ಹಾಕಬೇಕು, ಎಂದು ಬಗೆದರು.

ಆಗ ಅವರು ಈ ಕಾರ್ಯವನ್ನು ಅರಸನಾದ ಜಯಸಿಂಹನ ಕಡೆಯಿಂದಲೇ ಮಾಡಿಸಬೇಕೆಂದು ಯೋಚಿಸಿ, ಸರ್ವಜ್ಞಮುನಿ ಎಂಬವನು ಪಟ್ಟಣದಲ್ಲಿದ್ದ ಜೈನರಿಗೆಲ್ಲ ಗುರುವಾಗಿದ್ದು ಅವರು ಅವನನ್ನು ಮುಂದಿಟ್ಟುಕೊಂಡು ಅರಸನಲ್ಲಿಗೆ ಬಂದು ಅವನಿಗೆ — ದೇವರ ದಾಸಿಮಯ್ಯನೆಂಬೊಬ್ಬನು ನಿಮ್ಮ ರಾಜ್ಯದಲ್ಲಿ ಬಂದು ಬಹಳ ಅನಾಹುತಗಳನ್ನು ಮಾಡಹತ್ತಿದ್ದಾನೆ. ಅವನ ಮೂಲಕ ಅನೇಕ ಜಿನ ಮಂದಿರಗಳು ಲಿಂಗಾಲಯಗಳಾದವು. ಅವನು ಈಗ ನಿಮ್ಮ ರಾಣಿಯವರಿಗೆ ಲಿಂಗದೀಕ್ಷೆಯನ್ನು ಮಾಡಿದ್ದಾನೆ. ಇದರಿಂದ ರಾಣಿಯವರು ಅರಮನೆಯನ್ನು ಬಿಟ್ಟು ಬೇರೊಂದೆಡೆಯಲ್ಲಿ ವಾಸಮಾಡಹತ್ತಿದ್ದಾರೆ. ಸತಿಯು ಪತಿಯ ಆಜ್ಞೆಯಂತೆ ನಡೆಯಬೇಕಲ್ಲವೇ? ನಡೆಯದಿದ್ದರೆ ರೌರವ ನರಕವು. ಇದರಿಂದ ಸತಿಯ ಪಾಪವು ಪತಿಗೂ ಹತ್ತುತ್ತದೆ. ರಾಜ್ಯದಲ್ಲಿ ಇಂಥ ಅನಾಚಾರಗಳು ನಡೆಯಹತ್ತಿದರೆ, ಮಳೆಬೆಳೆಗಳು ಎಂತಾಗುವವು? ಪ್ರಜೆಗಳು ಹೇಗೆ ಸುಖಿಯಾಗಿ ಬಾಳಿಯಾರು? ಎಂದು ನುಡಿಯಲು, ಅರಸನು ಸುಗ್ಗಲೆ ಇದ್ದಲ್ಲಿಗೆ ಹೋಗಿ ಅವಳಿಗೆ— ಸತಿಗೆ ಪತಿಯೇ ದೈವವು ಹೀಗಿರಲು, ನೀನು ಈ ದಾಸಿಮಯ್ಯನನ್ನು ಹೇಗೆ ಗುರುವನ್ನಾಗಿ ಮಾಡಿಕೊಂಡೆ? ನನ್ನ ಆಜ್ಞೆಯನ್ನು ಹೀಗೆ ಮೀರಿದರೆ ನಿನಗೆ ಅಕ್ಷಯ ನರಕವು ಎಂದನು. ಅದನ್ನು ಕೇಳಿ ಸುಗ್ಗಲಾದೇವಿಯು ಕುಪಿತಳಾಗಿ— ಅರಸನೇ, ನನಗೆ ಮೃಡನೇ ದೈವವು. ವೇದಾಗಮ

ಪುರಾಣಗಳು ಇದನ್ನೇ ಸಾರುತ್ತವೆ. ನನಗೆ ಲಿಂಗವೇ ಪತಿಯು. ನೀನು ಲಿಂಗವನ್ನು ಧರಿಸಬೇಕು. ಅಂದರೆ ಮಾತ್ರ ನಿನ್ನಂಗನೆಯು ನಾನು. ನೀನು ಧರಿಸದಿದ್ದರೆ ನಿನಗೆ ನಾನು ಸತಿಯು ಹೇಗಾಗುವೆನು? ಇದು ನನ್ನ ನಿರ್ಧಾರವು ಎಂದು ನಿಷ್ಠುರವಾಗಿ ನುಡಿಯಲು ಅರಸನು— ನಾನು ಜಿನ ಮತವನ್ನು ಬಿಟ್ಟು ಬಡ ಮತವನ್ನು ಹೇಗೆ ಆಶ್ರಯಿಸುವೆನು? ಬಸದಿಯಲ್ಲಿಯ ಜಿನಭಜನೆಯನ್ನು ಬಿಟ್ಟು ವೃಢನನ್ನು ಪೂಜಿಸುವೆನೇ? ಜಗದೊಡೆಯನಾದ ಸರ್ವಜ್ಞಮುನಿಯನ್ನು ಬಿಟ್ಟು ಕೊಟ್ಟು ಒಂದು ಕ್ಷುದ್ರಮತದವನ ಅಡಿಗೆರಗುವೆನೇ? ಇದು ಆಗದು, ಎಂದು ನುಡಿಯಲು ಅದಕ್ಕೆ ಸುಗ್ಗಳಾದೇವಿಯು– ನಿನ್ನ ಮುನಿಯು ಜಿನ ಮತವೇ ಘನವೆಂದು ಶಾಸ್ತ್ರಮುಖದಲ್ಲಿ ಸಿದ್ಧಮಾಡಿ ತೋರಿಸಲಿ. ಆಗ ಮಾತ್ರ ನಾನು ಜಿನಮತವನ್ನು ಸ್ವೀಕರಿಸಿ ನಿನ್ನ ಕೂಡ ಇರುವೆನು. ಇದೇ ನನ್ನ ಭಾಷೆಯು, ಎಂದು ನುಡಿದಳು. ಅರಸನು ಇದಕ್ಕೆ ಒಪ್ಪಿ ತನ್ನ ಓಲಗಕ್ಕೆ ಬಂದನು.

ಜಯಸಿಂಹ ರಾಜನು ರಾಣಿಯಾದ ಸುಗ್ಗಳಾದೇವಿಯು ಬಯಸಿದಂತೆ ರಾಜಧಾನಿಯಲ್ಲಿ ಯಾರಾದರೂ ದೇವರ ದಾಸಿಮಯ್ಯನ ಕೂಡ ವಾದವಿವಾದ ಮಾಡಲು ಬಯಸಿದರೆ, ಅವರು ಓಲಗಕ್ಕೆ ಬರಬೇಕೆಂದು ಎಲ್ಲ ಕಡೆಗೆ ಸಾರಿಸಿದನು. ದೇವರ ದಾಸಿಮಯ್ಯನು ಈ ವರೆಗೆ ಪಟ್ಟಣದಲ್ಲಿ ನಡೆಸಿದ ಚಳವಳಿಯ ಮೂಲಕ ಬಹು ಜನರು ವೀರಶೈವ ಮತವನ್ನು ಅನುಸರಿಸಹತ್ತಿದ್ದರಿಂದ ಎಲ್ಲ ಮತಸ್ತರೂ ಅವನಿಗೆ ವಿರೋಧಿಗಳಾಗಿದ್ದರು. ಆದ್ದರಿಂದ ಇವರೆಲ್ಲರೂ, ಅವನನ್ನು ಸೋಲಿಸಿ ತಮ್ಮ ಅನುಯಾಯಿಗಳು ಧರ್ಮಾಂತರ ಮಾಡುತ್ತಿರುವದನ್ನು ನಿಲ್ಲಿಸಬೇಕೆಂದು ಅಪೇಕ್ಷಿಸಿ ಬಹಿರಂಗವಾಗಿ ಅವನನ್ನು ವಾದದಲ್ಲಿ ಸೋಲಿಸಬೇಕೆಂದು ಅವರು ಬಹು ಸಂಖ್ಯೆಯಿಂದ ಓಲಗಕ್ಕೆ ಬರಹತ್ತಿದರು. ಆ ದಿವಸ ಅರಸನ ಸೇನಾಪತಿಗಳೂ ಸಾಮಂತರೂ ರಾಜ್ಯಾಧಿಕಾರಿಗಳೂ ಕುತೂಹಲವುಳ್ಳವರಾಗಿ ವಾದಗಳನ್ನು ಕೇಳಬೇಕೆಂದು ಸಭೆಯಲ್ಲಿ ಕಿಕ್ಕಿರಿದು ನೆರೆದರು. ಸುಗ್ಗಲಾದೇವಿಯೂ ಅವಳ ಪರಿವಾರದವರೂ ಕೂಡ ಸಭಾಸ್ಥಾನವನ್ನು ಅಲಂಕರಿಸಿದವರಾಗಿದ್ದರು.

ಆ ಮೇಲೆ ಅರಸನು ದೇವರದಾಸಿಮಯ್ಯನಿಗೆ ಹೇಳಿ ಕಳುಹಲು ಅವನು ಇಂದುಧರನನ್ನು ಮನದಲ್ಲಿ ನೆನೆಯುತ್ತ, ಪಂಚಾಕ್ಷರೀ ಮಂತ್ರ

ವನ್ನು ಜಪಿಸುತ್ತ, ಈ ಸಮಯದ ಮಹತ್ವವನ್ನು ಅರಿತವನಾಗಿ ಶಿವಗಣಂಗಳು ತನ್ನ ಸುತ್ತಲೂ ಶಿವತತ್ವಗರ್ಭಿತ ಪದ್ಯಗಳನ್ನು ಘೋಷಿಸುತ್ತಿರಲು ಸಭಾಸ್ಥಳಕ್ಕೆ ಬಂದನು. ಆಗ ಅವನನ್ನು ಅರಸನು ಆದರಿಸಿ ಉಚಿತಾಸನದಲ್ಲಿ ಕುಳ್ಳಿರಿಸಿದನು.

ಆಗ ಪರವಾದಿಗಳು—ರಾಜನೇ ಈ ದೇವರ ದಾಸಿಮಯ್ಯನು ಹೊಟ್ಟಲ ಕೆರೆಯನ್ನು ಹೊಲೆಗೆಡಿಸಿದ್ದಾನೆ. ಅವನಿಗೆ ಜಾತಿ, ರೀತಿ, ನೀತಿ, ಆಚರಣೆಗಳೆಂಬುವೇನೂ ಇಲ್ಲ. ಅವನು ನಿನ್ನ ಹೆಂಡತಿಯನ್ನು ಸಹ ಹೇಗೋ ಮರುಳು ಮಾಡಿ ಅವಳಿಗೆ ಲಿಂಗ ಧಾರಣೆ ಮಾಡಿದ್ದಾನೆ. ಈತನು ಭೂತಗಳ ಅಧಿಪತಿಯಾದ ಶಿವನನ್ನು ಭಜಿಸುವವನು. ಈ ಶಿವನು ಹುಲಿ ಕರಿಗಳ ಚರ್ಮವನ್ನು ಹೊದೆಯುವವನು. ಅವನು ಬೂದಿಯನ್ನೂ ಹೂಸಿಕೊಂಡಿದ್ದಾನೆ. ಹಾವುಗಳನ್ನು ಸುತ್ತಿಕೊಂಡಿದ್ದಾನೆ. ಅವನು ಮನೆಮನೆಗೆ ಹೋಗಿ ತಿರಿದುಣ್ಣುತ್ತಾನೆ. ತನ್ನ ಅಂಗದ ಅರ್ಧವನ್ನು ಒಬ್ಬ ತರುಣಿಗೆ ಕೊಟ್ಟಿದ್ದಾನೆ. ಅವನಿಗೆ ಮಸಣವೇ ವಾಸವು. ಅವನು ವಿಷಮ ಮುಖನು, ವಿಷಮಾಕ್ಷನು. ಇಂಥ ದೇವನನ್ನು ಭಜಿಸುವ ಇವನು ಹೇಗೆ ಹೆಚ್ಚಿನವನಾಗುವನು ಎಂದು ಗರ್ಜಿಸಿದರು.

ಆಗ ದೇವರದಾಸಿಮಯ್ಯನು ಅವರಿಗೆ— ನಿಮಗೆ ಪರಶಿವನಾರು, ಅವನು ಲಿಂಗರೂಪಾಗಿ ಹೇಗೆ ಜಗತ್ತಿನಲ್ಲಿ ವ್ಯವಹರಿಸುತ್ತಾನೆ, ಎಂಬುದನ್ನು ಅರಿಯರಿ. ಪರಶಿವನು ಲಿಂಗರೂಪಾಗಿ ವಿಶ್ವದಲ್ಲೆಲ್ಲ ವಾಸ ಮಾಡುತ್ತಾನೆ. ಅವನು ಅಖಂಡನು, ಅದ್ವಯನು, ವಿರಾಟರೂಪನು, ವಿಶ್ವಮಯನು, ವಿಶ್ವಗರ್ಭನು. ಆದರೂ ಅವನು ಅಂತರ್ಯಾಮಿಯು. ಅವನೇ ವಿಶ್ವವನ್ನು ಸೃಷ್ಟಿಸುವನು, ರಕ್ಷಿಸುವನು, ಸಂಹರಿಸುವನು. ಆದರೂ ಅವನು ಭಕ್ತಚಿತ್ತವಾಸನಾಗಿದ್ದಾನೆ. ವಿಶ್ವದಲ್ಲೆಲ್ಲ ರಾಮನಾಥನ ಹೊರತು ಬೇರೊಂದಿಲ್ಲ. ಪರಮಾತ್ಮನು ಏಕಮೇವ ನ ದ್ವಿತೀಯನಾಗಿದ್ದಾನೆ. ಹೀಗೆ ಶ್ರುತಿಗಳು ಸಾರುತ್ತವೆ. ಜಗತ್ತಿನಲ್ಲಿ ಲಿಂಗವನ್ನು ಬಿಟ್ಟು ಬೇರೊಂದಿಲ್ಲ. ನೀರಿನಲ್ಲಿ ಪದ್ಮಪತ್ರವು ಇದ್ದರೂ ಅದರಿಂದ ಅದು ಹೇಗೆ ಅಲಿಪ್ತವಾಗಿ ಉಳಿಯುತ್ತದೆಯೋ ಹಾಗೆಯೇ ಪರಮಾತ್ಮನು ಜಗತ್ತಿನಲ್ಲೆಲ್ಲ ವಾಸಮಾಡುತ್ತಾನೆ. ಇಂಥ ಶಿವನಲ್ಲಿ ಬೆರೆಯುವದೇ ಲಿಂಗಾಂಗಿಯ ಇರವು. ಇದುವೇ ಅವನ ಧರ್ಮವು.

ಇದನ್ನು ನಾವು ಪುರಾಣಾಗಮನಿಗಮಸರ್ವಪ್ರಮಾಣಗಳಿಂದ ರೂಪಿಸಲು ಸಂಸಿದ್ಧರಿಂದು ದೇವರದಾಸಿಮಯ್ಯನು ಓಲಗದಲ್ಲಿ ಉದ್ಘೋಷಿಸಿ ನುಡಿದನು.

ಆಗ ವೇದಾಂತಿಯು ವಾದಕ್ಕೋಸ್ಕರ ಮುಂದೆ ಬಂದು ನಿಂತು, ದೇವರದಾಸಿಮಯ್ಯನಿಗೆ– ನೀನನ್ನುವದು ತಪ್ಪು. ಸಕಳ ವೇದಗಳ ಶಿರಸ್ಸುಗಳ ಮೇಲಿರುವದು ನಮ್ಮ ವೇದಾಂತ ಮತವು. ನರಸುರಾದಿ ವಸು ನಿಕರ ಪ್ರಪಂಚವೆಲ್ಲವೂ ಪರಬ್ರಹ್ಮವು. ಆದರೆ ಮಾಯೆಯ ಮೂಲಕ ಮಾತ್ರ ಅದು ಭಿನ್ನವಾಗಿ ತೋರುತ್ತದೆ, ಎಂದೆನ್ನಲು ಅದಕ್ಕೆ ದಾಸಿಮಯ್ಯನು— ಹೀಗೆ ಅಸುವೇ ಪರಬ್ರಹ್ಮವಾದರೆ ಅದು ಷಡ್ಭ್ರಮೆಗಳಲ್ಲಿ ತೊಳಲಾಡಲೇಕೆ? ಪ್ರಾಣಿಗಳು ಪರಸ್ಪರ ವೈರಭಾವವನ್ನು ತಾಳಿ ತಮ್ಮತಮ್ಮನ್ನು ಗಾಸಿ ಮಾಡುವುದೇಕೆ? ಜೀವಿಗಳು ವಿಷಯ ವ್ಯಸನ ಮೋಹ ಭಯ ಹುಸಿ ಕಳವು ಮಾಡುತ್ತ ಬಹು ಯೋನಿಗಳಲ್ಲಿ ಜನಿಸಿ ಸಾಯುತ್ತವೆ. ಇಂಥವುಗಳು ಬ್ರಹ್ಮನು ಹೇಗೆ? ಆದ್ದರಿಂದ ವೇದಾಂತಿಗಳ ಮತವು ತಪ್ಪು. ಪರಮಾತ್ಮನು ಧರ್ಮಿಷ್ಠರಲ್ಲಿ ಇರುತ್ತಾನೆಯೇ ಹೊರ್ತು ಬೇರೆ ಕಡೆಗೆ ಇರುವದಿಲ್ಲ. ಮಾಯೆಯ ಬಗ್ಗೆ ನೀನು ಹೇಳುವ ವಿಚಾರಗಳು ಶಾಸ್ತ್ರದಲ್ಲಿಲ್ಲ, ಎಂದು ಹೇಳಿ ಅವನು ಅನೇಕ ವೇದೋಪನಿಷದ್ವಾಕ್ಯಗಳನ್ನು ನುಡಿಯುತ್ತ ವೇದಾಂತಿಯ ಮತವನ್ನು ಖಂಡಿಸಿದನು.

ಆ ಮೇಲೆ ವೈಷ್ಣವನು ಮುಂದೆ ಬಂದು—ವಿಷ್ಣುವೇ ದೈವವು, ಅವನು ಪುರುಷರೊಳಗುತ್ತಮನು, ರಕ್ಷಕನು, ಪರಹಿತನು, ಸರ್ವವ್ಯಾಪಿಯು ಎಂದು ವಾದಿಸಿದನು. ಅದಕ್ಕೆ ದೇವರ ದಾಸಿಮಯ್ಯನು, ಹಾಗಾದರೆ ವಿಷ್ಣುವಿಗೆ ಮರಣವೆಂಬುದೇಕೆ? ಅವನಿಗೆ ಹುಟ್ಟು ಸಾವುಗಳೇಕೆ? ಶಿವನಿಗೆ ಇವುಗಳಿಲ್ಲ. ವಿಷ್ಣುವು ರಕ್ಷಕನಾಗಿದ್ದರೆ ಅವನು ತನ್ನ ಮಗನನ್ನು ಏಕೆ ರಕ್ಷಿಸಲಾರದೆ ಹೋದನು? ಎಲ್ಲವೂ ವಿಷ್ಣುಮಯವಾಗಿದ್ದರೆ, ರಾವಣನು ಅವನ ಹೆಂಡತಿಯನ್ನು ಕೊಂಡೊಯ್ಯುವಾಗ ಅವನೆಲ್ಲಿದ್ದನು? ವೇದಾಗಮಗಳು 'ಏಕೋ ರುದ್ರನೆಂ'ತಲೂ, 'ವಿಶ್ವಾಧಿಕೋ ರುದ್ರನೆ'ಂತಲೂ ಸಾರುತ್ತವೆ ಎಂದು ಉತ್ತರ ಕೊಟ್ಟನು.

ಆ ಮೇಲೆ ಗಾಣಪತ್ಯನು ಮುಂದೆ ಬಂದು– ಗಣಪತಿಯೇ ದೈವವು. ಅವನು ಸಕಲ ವಿಘ್ನಗಳನ್ನು ಪರಿಹರಿಸುತ್ತಾನೆ. ಅವನು ಸಕಲ ವಿದ್ಯೆಗೆ

ಮಿತ್ರನು. ಸುರರ ಸಮೂಹಕ್ಕೆ ಅಧಿಪತಿಯು. ಆದ್ದರಿಂದ ಅವನು ಗಣಪತಿ ಎಂದೆನಿಸಿಕೊಳ್ಳುತ್ತಾನೆ. ಸತ್ಕೃತ್ಯಗಳನ್ನು ಪ್ರಾರಂಭಿಸುವಲ್ಲಿ ಅವನನ್ನು ಎಲ್ಲರೂ ಮೊದಲು ಪೂಜಿಸುತ್ತಾರೆ. ಆದ್ದರಿಂದ ಅವನೇ ದೇವನೆಂದು ವಾದಿಸಿದನು. ಅದಕ್ಕೆ ದೇವರ ದಾಸಿಮಯ್ಯನು — ಹಾಗಾದರೆ ಯಜ್ಞ ಪ್ರಾರಂಭದಲ್ಲಿ ದಕ್ಷನು ಗಣಪತಿಯನ್ನು ಪೂಜಿಸಿದ್ದರೂ, ಅವನ ಯಜ್ಞವು ಹಾಳಾಗಿ, ಅವನು ಕುರಿದಲೆಯಾದನೇಕೆ? ವೀರಭದ್ರನು ಬಡಿವಾಗ ಅವನೆಲ್ಲಿದ್ದನು? ಅವನು ವಿದ್ಯೆಗಳಿಗೆಲ್ಲ ಗುರುವಾಗಿದ್ದರೆ ಅಸುರರು ಶ್ರುತಿಗಳನ್ನು ಒಯ್ಯುವಾಗ ಅವನೆಲ್ಲಿದ್ದನು? ಅವನನ್ನು ಪೂಜಿಸುವ ಭಕ್ತರಲ್ಲಿ ಕೆಲವರು ದಡ್ಡರು, ಕೆಲವರು ವಿದ್ವಾಂಸರೇಕೆ? ಅವನು ದೇವನಾದರೆ, ಜನರು ಸಗಣಿಯಲ್ಲಿ ಅವನನ್ನು ಪೂಜಿಸಿ ಕಡೆಗೆ ಜಲದಲ್ಲಿ ಅವನನ್ನು ಮುಳುಗಿಸುವರೇಕೆ? ಇಂಥವನು ದೇವನಾಗಲಾರನು ಎಂದು ಉತ್ತರ ಕೊಟ್ಟನು.

ಆ ಮೇಲೆ ಕಾಪಾಲಿಕನು ಮುಂದೆ ಬಂದು ಅವನು— ನಮ್ಮ ಮತವು ಶ್ರೇಷ್ಠವಾದುದು. ಅದನ್ನು ಪಾಲಿಸಿದಲ್ಲಿ ಅಷ್ಟಸಿದ್ಧಿಗಳು ದೊರೆಯುವವು. ಎಂದು ಹೇಳಿ ಭೈರವನ ಚರಿತ್ರೆಯನ್ನು ಉದಹರಿಸುತ್ತ ತಾವು ಮಾಡುವ ಯಜ್ಞದ ತರಹ, ಪೂಜಾರ್ಚನಾದಿಗಳನ್ನು ವಿವರಿಸಿದನು. ಆದ್ದರಿಂದ ನಮ್ಮ ಕಾಪಾಲಿಕ ಮತವು ಶ್ರೇಷ್ಠವಾದುದು ಎಂದನು. ಅದಕ್ಕೆ ದೇವರದಾಸಿಮಯ್ಯನು— ನಿಮ್ಮ ಮತವು ಹೇಯವಾದುದು. ಅದರ ರೀತಿಯನ್ನು ಹೀಗೆ ಹೇಳಲು ನಿಮಗೆ ನಾಚಿಕೆಯಾಗುವದಿಲ್ಲವೋ? ನೀವು ಹಿಂಸಾಚಾರಿಗಳು, ಕ್ರೂರರು, ಸುರಾಪಾನಿಗಳು, ನೀತಿಭ್ರಷ್ಟರು. ನೀವು ಮಾಡುವ ಹೋಮವು ಭ್ರಷ್ಟವಾದುದು. ಇಂಥ ನೀತಿವಿರಹಿತವಾದ ಆಚರಣೆಗಳಿಂದ ತುಂಬಿದ ನಿಮಗೆ ಸಿದ್ಧಿಗಳು ಹೇಗೆ ದೊರೆಕೊಳ್ಳುವವು ಎಂದು, ನುಡಿದನು.

ಆ ಮೇಲೆ ಶಾಕ್ತನು ಮುಂದುವರಿದು— ಶಿವನು ತ್ರಿಪುರಸಂಹಾರ ಕಾಲದಲ್ಲಿ ಅವನ ಲಲಾಟದಲ್ಲಿ ಬೆವರು ಬಿಂದುವು ಉಂಟಾಗಲು ಅದನ್ನು ಒರಿಸಲು ಅದೇ ಶಕ್ತಿಯಾದಳು. ಈ ಸಚರಾಚರ ಜಗತ್ತೆಲ್ಲ ಶಕ್ತಿಮಯವಾಗಿದೆ. ಮದಿರೆಯನ್ನು ಭಕ್ತಿಯಿಂದ ಪೂಜಿಸಿ ಉಂಟೆದಲ್ಲಿ ಕಾಲಜ್ಞಾನವು ಉಂಟಾಗುತ್ತದೆ. ಶಕ್ತಿಮಂತ್ರದಿಂದ ಮದಿರೆಯು

ಉಚ್ಛಿಷ್ಟವು ಹೋಗುತ್ತದೆ. ಅದರಿಂದ ಇಷ್ಟಾರ್ಥಸಿದ್ಧಿಯಾಗುತ್ತದೆ. ಆದ್ದರಿಂದ ಶಕ್ತಿಯೇ ದೇವರು ಎಂದು ನುಡಿದನು. ಅದಕ್ಕೆ ದೇವರದಾಸಿಮಯ್ಯನು ಬೆವರಿಂದಾದ ಹೆಣ್ಣು ದೇವರು ಹೇಗೆ? ನೀವು ಮೂತ್ರದ ಕುಳಿಯನ್ನು ಪೂಜಿಸುವಿರಿ. ಇಂಥ ನೀತಿಭ್ರಷ್ಟರಿಗೆ ಇಷ್ಟಸಿದ್ಧಿಯು ಹೇಗೆ ದೊರಕೀತು? ಈ ರೀತಿ ನೀವು ನಡೆದಲ್ಲಿ ನಿಮಗೆ ನರಕವು ನಿಶ್ಚಯವು ಎಂದು ನುಡಿಯಲು ಅವನು ನಾಚಿ ಹಿಂದಿರುಗಿದನು.

ಆ ಮೇಲೆ ಸೌರನು ಅಂದದ್ದು:-- ಸೂರ್ಯನೇ ಘನತರವಾದ ದೈವವು. ಅವನು ಕರ್ಮಕ್ಕೆಲ್ಲ ಸಾಕ್ಷಿಯಾಗಿದ್ದಾನೆ. ಅವನಿಂದಲೇ ಕಾರ್ಯಗಳು ನಡಿಯುತ್ತವೆ ಎಂದೆನ್ನಲು ದೇವರ ದಾಸಿಮಯ್ಯನು— ಸೂರ್ಯನು ಹರಭಕ್ತನು. ಶಿವನ ಆಜ್ಞೆಯಲ್ಲಿರುವನು. ಮೇರು ಪರ್ವತವನ್ನು ಆಧಾರವಾಗಿ ಇಟ್ಟುಕೊಂಡು ಅಲ್ಲಿಯೇ ತಿರುಗುವನು. ಇಂಥ ಪರಾವಲಂಬಿಯು ದೇವರೆಂದೆನಲಾಗದು ಎಂದು ಹೇಳಿದನು.

ಬಳಿಕ ಕಾಲವಾದಿಯು ಮುಂದೆ ಬಂದು ಅಂದದ್ದು— ಕಾಲವೇ ಮಹತ್ತರವಾದದ್ದು. ಕಾಲವೆಂಬ ಸಮುದ್ರದಲ್ಲಿ ಅಜಾಂಡಗಳು ಉದಯಿಸಿ, ಅಲ್ಲಿಯೇ ಲಯವಾಗುತ್ತವೆ. ಫಲ, ಕುಸುಮ, ಲತಾದಿಗಳು ಕಾಲವನ್ನು ಮೀರದೆ ಕಾಲಕ್ಕನುಸರಿಸಿ ಫಲ ಕೊಡುತ್ತವೆ. ಆದ್ದರಿಂದ ಕಾಲದಿಂದ ಅಧಿಕವಾದ ದೈವವಿಲ್ಲ ಎಂದು ನುಡಿದನು. ಅದಕ್ಕೆ ದೇವರ ದಾಸಿಮಯ್ಯನು— ಪ್ರಾಣಿಗಳ ಜನನವು ಕೇವಲ ಕಾಲದಲ್ಲಾಗದೆ, ಬೆವರು, ಮಾಂಸ, ಮಂತ್ರಸಾಮರ್ಥ್ಯ ಇವುಗಳಿಂದಲೂ ಆಗುವದುಂಟು. ಅಂದಬಳಿಕ ಕಾಲದ ಮಹತ್ವವೆಲ್ಲಿ ಎಂದು ಉತ್ತರ ಕೊಟ್ಟನು.

ಆ ಮೇಲೆ ಕರ್ಮವಾದಿಯು ವಾದಿಸಿದ್ದು ಏನೆಂದರೆ— ಶುಭಾಶುಭಕರ್ಮಗಳಿಂದ ಉತ್ಪತ್ತಿ ಸ್ಥಿತಿ ಲಯಗಳಾಗುತ್ತವೆ. ಕರ್ಮವು ಇಷ್ಟು ಘನತರವಾದದ್ದು. ಜಪ ತಪ ತೀರ್ಥ ದಾಸೋಹ ಮಂಗಲಕಾರ್ಯಗಳನ್ನು ಮಾಡಿದಲ್ಲಿ ಇಹಪರದಲ್ಲಿ ಸುಖವಾಗುತ್ತದೆ. ಹಿಂಸಾಕರ್ಮದಿಂದ ಅಶುಭವಾಗುತ್ತದೆ. ಆದ್ದರಿಂದ ಕರ್ಮವೇ ಶ್ರೇಷ್ಠವಾದುದು. ಅದೇ ದೈವವು ಎಂದು ನುಡಿದನು. ಅದಕ್ಕೆ ದೇವರದಾಸಿಮಯ್ಯನು— ನೀವು ಹೇಳುವ ಕರ್ಮವು ಅಚೇತನವಾದದ್ದು. ಕರ್ಮದಲ್ಲಿ ತೊಡಗಿದ್ದ ದಕ್ಷನನ್ನು ಕರ್ಮವು ಏಕೆ ರಕ್ಷಿಸಲಿಲ್ಲ? ಆದರೆ ತಂದೆಯನ್ನು ಕೊಂದ

ಚಂಡೇಶನಿಗೆ ಶಿವನಿಂದ ನಿಜಪದವು ಏಕೆ ದೊರೆಯಬೇಕು? ಆದ್ದರಿಂದ ಶಿವನಿಗಲ್ಲದೆ ಕರ್ಮಕ್ಕೆ ಹಿರಿಯತನವಿಲ್ಲ ಎಂದು ಉತ್ತರ ಕೊಟ್ಟನು.

ಆ ಮೇಲೆ ವೇದವಾದಿಯು ಹೇಳಿದ್ದು— ಜಗತ್ತಿನಲ್ಲಿ ನಡೆಯುವ ಎಲ್ಲ ಕೃತ್ಯಗಳ ರೀತಿಯನ್ನು ವೇದದಿಂದ ಅರಿಯುವದು ಧರ್ಮವಾಗಿದೆ. ವೇದಗಳೆಲ್ಲ ಪುರಾಣ ಶಾಸ್ತ್ರಗಳಿಗೆ ಮಾತೃಸ್ಥಾನದಲ್ಲಿವೆ. ಆದ್ದರಿಂದ ವೇದಗಳು ಪ್ರತ್ಯಕ್ಷ ದೈವತವು ಎಂದು ನುಡಿದನು. ಅದಕ್ಕೆ ದೇವರ ದಾಸಿಮಯ್ಯನು – ವೇದಗಳೇ ದೇವರಾದರೆ ಅವು ಶುನಕನ ರೂಪನ್ನು ತಾಳಿ ಏಕೆ ದೈತ್ಯರಿಂದ ಪಾರಾಗಿ ಹೋಗಬೇಕಾಯಿತು? ಅವು ಒಮ್ಮೆ ಹಿಂಸೆಯನ್ನು ಹೇಳುತ್ತವೆ ಮತ್ತೊಮ್ಮೆ ಅಹಿಂಸೆಯನ್ನು ಹೇಳುತ್ತವೆ. ದೇವರಲ್ಲಿ ಹೀಗೆ ಒಮ್ಮೆ ಹುಸಿ, ಒಮ್ಮೆ ನಿಜವು ಇರಬಹುದೇ? ಆದ್ದರಿಂದ ವೇದಗಳು ದೇವರಲ್ಲ ಎಂದು ಹೇಳಿದನು.

ಆ ಮೇಲೆ ಗ್ರಹವಾದಿಯು ಮುಂದೆ ಬಂದು— ನವಗ್ರಹಗಳ ಮೂಲಕವೇ ಜಗತ್ತಿನ ಕಾರ್ಯಗಳು ನಡಿಯುತ್ತವೆ. ಸಿರಿ, ಭೋಗ, ಸುಖದುಃಖಗಳನ್ನು ಕೊಡುವಂಥವು ಅವೇ. ಜನನ ಸ್ಥಿತಿ ಲಯಗಳು ಗ್ರಹಗಳ ಮೂಲಕವೇ ಉಂಟಾಗುತ್ತವೆ. ಆದ್ದರಿಂದ ಗ್ರಹಗಳೇ ದೈವವೆಂದು ವಾದಿಸಿದನು. ಅದಕ್ಕೆ ದೇವರದಾಸಿಮಯ್ಯನು— ಒಂದೇ ಲಗ್ನದಲ್ಲಿ ಜನಿಸಿದವರಲ್ಲಿ ಒಬ್ಬನು ಪಾಪಿಷ್ಠನು, ಇನ್ನೊಬ್ಬನು ಸುಕೃತಿಯು ಏಕಾಗಬೇಕು? ಎಲ್ಲರೂ ಪೂರ್ವಕರ್ಮಫಲವನ್ನು ಅನುಭವಿಸಲೇಬೇಕು. ಅಂದಬಳಿಕ ಈ ಗ್ರಹಗಳು ದೈವವೆಂಬುದು ಹೇಗೆ? ಎಂದು ಉತ್ತರವಿತ್ತನು.

ತರುವಾಯ ಪಂಚಭೂತಗಳೇ ದೈವವೆಂದು ಹೇಳುವವನು ಮುಂದೆ ಬಂದು, ಜಗತ್ತೆಲ್ಲ ಪಂಚಭೂತಗಳಿಂದ ಆಗಿದೆ. ಅವುಗಳು ವಸ್ತುಗಳ ನಿರ್ಮಾಣಕ್ಕೆ ಕಾರಣವಾಗಿವೆ. ಆದ್ದರಿಂದ ಅವುಗಳೇ ದೈವವೆಂದು ನುಡಿದನು. ಇದಕ್ಕೆ ದೇವರದಾಸಿಮಯ್ಯನು— ಪಂಚಭೂತಗಳು ಶಿವನ ಐದುಮುಖಗಳಿಂದ ಉಂಟಾಗಿರುತ್ತವೆ. ಹೀಗೆ ಉಂಟಾದವುಗಳಿಗೆ ದೈವತ್ವವು ಹೇಗೆ ಪ್ರಾಪ್ತವಾಗಬಹುದು? ಶಿವನೇ ದೈವವೆಂದು ಉತ್ತರ ಕೊಟ್ಟನು.

ಆ ಮೇಲೆ ಚಾರ್ವಾಕನು ಮುಂದೆ ಬಂದು ನುಡಿದದ್ದೇನಂದರೆ– ಯಾವನು ಕೊಲ್ಲುತ್ತಾನೋ ಅವನೇ ರುದ್ರನು. ಯಾವನು ಕಾಯು

ತ್ತಾನೋ ಅವನೇ ವಿಷ್ಣುವು. ಯಾವನು ಸಂಗ್ರಹಿಸುತ್ತಾನೋ ಅವನೇ ಬ್ರಹ್ಮನು. ಬ್ರಹ್ಮ, ವಿಷ್ಣು, ರುದ್ರರೆಂಬವರು ತನ್ನಿಂದ ಬೇರಿಲ್ಲ. ತನಗೆ ತಿಳಿದಂತೆ ಇರುವದೇ ಪುರಾಣ. ತಾನು ನಡೆದುದೇ ಶಾಸ್ತ್ರ. ಬಲ್ಮತಿಯೇ ವೇದಗಳು. ಧನವೆಂಬುದೇ ಜ್ಞಾನ. ನಿರುತ ಸುಖವೇ ಸ್ವರ್ಗ. ದುಃಖವೇ ನರಕ. ದೇಹವೇ ಆತ್ಮ. ಮರಣವೇ ಮುಕ್ತಿ ಎಂದು ಹೇಳುತ್ತ ಆಶ್ರಿತರನ್ನು ಸಂರಕ್ಷಿಸಿದರೆ ತಾನೇ ಒಡೆಯು. ತಾನೇ ದೈವ. ತನ್ನಿಂದ ಬಿಟ್ಟು ಬೇರೆ ದೈವವೆಂಬುದಿಲ್ಲ. ಹೀಗೆ ಚಾರ್ವಾಕನು ಅಥವಾ ಪಾಖಂಡಿಯು ನುಡಿದನು. ಅದಕ್ಕೆ ದೇವರದಾಸಿಮಯ್ಯನು ಗಡಿಗೆಯನ್ನು ಮಾಡಲು ಹೇಗೆ ಕುಂಬಾರನು, ಆಭರಣಗಳನ್ನು ಮಾಡಲು ಹೇಗೆ ಅಕ್ಕಸಾಲಿಗನು ಅವಶ್ಯವಾಗಿರುವರೋ ಹಾಗೆ ಕ್ರಿಯೆಗೆ ಒಬ್ಬ ಕರ್ತನು ಬೇಕೇಬೇಕು. ಹಿಂದಿನ ಜನ್ಮದಲ್ಲಿ ತಪಸ್ಸು ಮಾಡಿದರೆ ಸಿರಿಯು. ಆದರೆ ಮತ್ತನಾಗಿ ವರ್ತಿಸಿದರೆ ನರಕವು ಪ್ರಾಪ್ತವಾಗುತ್ತವೆ. ಹೀಗೆ ಕ್ರಿಯೆಗೆ ಕರ್ತನು ಬೇಕೇ ಬೇಕು. ಮೂಲ ಕರ್ತನೇ ದೇವರು ಎಂದು ಉತ್ತರ ಕೊಟ್ಟನು.

ಕಡೆಗೆ ಜೈನನು ಮುಂದೆ ಬಂದು— ನಮ್ಮ ಧರ್ಮವು ಪವಿತ್ರವಾದುದು. ಅಹಿಂಸೆಯೇ ನಮ್ಮ ಪರಮ ಧರ್ಮವು. ನಾವು ಕ್ರಿಮಿಕೀಟಕಗಳನ್ನು ಹಿಂಸೆ ಮಾಡುವದಿಲ್ಲ. ನೀವು ರಾಮನಾಥನು ವಿಶ್ವಕರ್ತನೆಂತಲೂ ಎಲ್ಲೆಡೆಯಲ್ಲಿರುವನೆಂತಲೂ ವಾದಿಸುತ್ತಾ ಇದ್ದೀರಿ. ಶಿವನು ಹೀಗಿರುವದು ಅಸಂಭವವು. ಹಾಗಿದ್ದರೆ ಅವನು ಜೀವಿಗಳಿಗೆ ಅಂಗವಾಗಿರುವನೋ ಅಥವಾ ತಾನೇ ಅವುಗಳಿಗೆ ಆತ್ಮನಾಗಿರುವನೋ, ಎಂಬುದನ್ನು ನೀವು ವಿಶದ ಪಡಿಸಬೇಕು ಎಂದು ವಾದಿಸಿದನು.

ಅದಕ್ಕೆ ದೇವರದಾಸಿಮಯ್ಯನು— ರಾಷ್ಟ್ರವನ್ನಾಳುವವನು ರಾಜನಲ್ಲವೇ? ಆ ರಾಜನು ಎಲ್ಲ ಕಡೆಗೆ ಇರದಿದ್ದರೂ ಅವನ ವರ್ಚಸ್ಸು ರಾಷ್ಟ್ರದಲ್ಲೆಲ್ಲ ಇದ್ದು ಎಲ್ಲ ಕಾರ್ಯಗಳು ಅವನಿಂದಲೇ ಸಾಗುತ್ತವೆ. ಹಾಗೆಯೇ ಅವನ ರಾಜ್ಯದಲ್ಲಿ ಕಿರಾತರೂ ಅನೇಕ ಬಗೆಯ ಅನಾಮಿಕರೂ ವಾಸ ಮಾಡುತ್ತಾರೆ. ಆದರೆ ಅವರು ರಾಜರಾಗಬಲ್ಲರೇ? ಅವರಿಗೆ ರಾಜನಲ್ಲಿರಬೇಕಾಗುವ ಶಕ್ತಿಯೂ ಜ್ಞಾನವೂ ಇರುವದಿಲ್ಲಾದ್ದರಿಂದ ಅವರು ರಾಜರು ಹೇಗಾಗುವರು? ಹಾಗೆಯೇ ದೇವರು ಎಲ್ಲರೊಳಗೆ ಇದ್ದು, ಅವನ ಸಾಮರ್ಥ್ಯದಿಂದಲೇ ಈ ಜಗತ್ತು ನಡೆಯುತ್ತದೆ.

ಚಂದ್ರನು ಜಗತ್ತಿನಲ್ಲಿರುವ ಎಲ್ಲ ವಸ್ತುಗಳ ಮೇಲೆಯೂ ತನ್ನ ಪ್ರಕಾಶವನ್ನು ಕೆಡಹುತ್ತಾನೆ. ಅವನ ಈ ಪ್ರಕಾಶವು ಚಂದ್ರಕಾಂತದ ಮೇಲೆ ಬೀಳಲು ಅದರಲ್ಲಿ ನೀರೊಡೆಯುತ್ತಿದೆ. ಯಾಕಂದರೆ ಚಂದ್ರ ಕಾಂತಕ್ಕೂ ಚಂದ್ರನಿಗೂ ಅಂಥ ನಿಕಟಸಂಬಂಧವಿದೆ. ಆದರೆ ಆ ಪ್ರಕಾಶವು ಇತರ ಶಿಲೆಗಳ ಮೇಲೆ ಬಿದ್ದರೆ ಅವು ಕರಗುವದಿಲ್ಲ. ಹಾಗೆಯೇ ಶಿವನು ಸಕಲದಲ್ಲಿದ್ದರೂ ಶರಣನ ಹೃದಯವು ಮಾತ್ರ ಅವನಲ್ಲಿ ಕರಗುವದೇ ಹೊರ್ತು ಉಳಿದ ಕರ್ಮಿಗಳ ಹೃದಯಗಳು ಕರಗಲಾರವು. ಶರಣನಲ್ಲಿ ಲಿಂಗವಿದೆ. ಆದ್ದರಿಂದ ಅವನು ಶರಣನಲ್ಲಿ ಹೀಗೆ ಬೆರೆಯುತ್ತಾನೆ.

ಅವನು ಪುನಃ ಹೇಳಿದ್ದೇನೆಂದರೆ—

ಧರೆಯ ಮೇಲೆ ಸ್ವಾತಿ ನಕ್ಷತ್ರದಲ್ಲಿ ಮಳೆ ಸುರಿಯಲು ಅದರ ಹನಿಗಳು ಶಿಂಪಿನಲ್ಲಿ ಬಿದ್ದಲ್ಲಿ ಅವು ಗಟ್ಟಿಯಾಗಿ ಅದರಲ್ಲಿ ಮುತ್ತುಗಳಾಗುತ್ತವೆ. ಹಾಗೆಯೇ ಭಕ್ತನಲ್ಲಿ ಅರಿವು ಉಂಟಾದ್ದರ ಮೂಲಕ ಅವನಲ್ಲಿ ಪರಮಾತ್ಮನ ಕಳೆಯು ತೋರಲು ಆ ಅರಿವು ಅವನಲ್ಲಿ ಗಟ್ಟಿಗೊಂಡು ಲಿಂಗರೂಪಾಗಿ ತೊಳಗಹತ್ತುತ್ತದೆ. ಇದೇ ಲಿಂಗಾಂಗಿಯ ಪಥವು. ಭ್ರಾಂತರುಗಳಿರಾ, ಈ ಶಿವಪಥದ ಸುಖವು ನಿಮಗೆ ಹೇಗೆ ದೊರೆಕೊಂಬುವದು ? ಅದು ನಿಮಗೆ ದೊರೆಯಲಾರದು ಎಂದನು.

ಆ ಮೇಲೆ ಜೈನರು ದೇವರದಾಸಿಮಯ್ಯನಿಗೆ— ಹೀಗೆ ಸಮರಸವಾಗುವಂತಹವು ಯಾವವು ? ಅವು ಅಂಗವೋ, ಜೀವನೋ, ತದಾತ್ಮನೋ, ಎಂದು ಪ್ರಶ್ನೆ ಮಾಡಿದರು. ಅದಕ್ಕೆ ದೇವರದಾಸಿಮಯ್ಯನು— ಅಂಗವೆಂಬುದು ಪೂರ್ವಕರ್ಮಸಂಗಶೇಷವು. ಅದು ಪುಣ್ಯಪಾಪಗಳಿಗೆ ಕಾರಣಗಳಾದ ಸುಕೃತ ಮತ್ತು ದುಷ್ಕೃತಗಳಿಗೆ ಆಶ್ರಯವು. ಆದ್ದರಿಂದ ಅಂಗವು ಶಿವನಲ್ಲ. ಜೀವನು ಶಿವನೆಂದರೆ ಅವನು ಅತಿ ಮಲಿನನು. ಆದರೆ ಶಿವನು ನಿರ್ಮಳನು. ಜೀವನು ದುಷ್ಕರ್ಮಿ, ಶಿವನು ನಿಷ್ಕರ್ಮಿಯು. ಜೀವನು ಸಕಳನು, ಶಿವನು ನಿಷ್ಕಳನು. ಜೀವನು ಭವಪಾಶಬದ್ಧನು, ಶಿವನು ಭವವಿಲ್ಲದವನು. ಜೀವನು ಸಂಸಾರಿ, ಶಿವನು ಅಸಂಸಾರಿ. ಜೀವನು ಮೃತನಾಗುತ್ತಾನೆ. ಆದರೆ ಶಿವನು ಅಮೃತನು. ಆದ್ದರಿಂದ ಜೀವನು ಶಿವನಲ್ಲ. ಹಾಗೆಯೇ ಆತ್ಮವೂ ಪರಮಾತ್ಮನಲ್ಲ. ಆತ್ಮವು ಪಂಚಭೂತಾತ್ಮಕವು ಮತ್ತು ಪಂಚೇಂದ್ರಿಯಾತ್ಮಕವು. ಆದ್ದರಿಂದ ಆತ್ಮವು ಶಿವನಾಗಲಾರನು.

ಆದರೆ ಸೂತ್ರಧಾರನು ಕಪಟನಾಟಕವನ್ನು ಪಾತ್ರಗಳ ಮೂಲಕ ಹೇಗೆ ಆಡಿಸುತ್ತಾನೋ ಹಾಗೆ ಶಿವನು ಚರಾಚರದಲ್ಲಿದ್ದುಕೊಂಡು ಅನಂತ ಪರಿಯಲ್ಲಿ ತೆರಹುಗೊಡದೆ 'ಮಹತೋ ಮಹೀಯಾನ್, ಅಣೋರಣೀಯಾನ್' ಈ ರೀತಿಯಾಗಿ ವಾಸಿಸುತ್ತಾ ತಿಲದೊಳಗಿರುವ ತೈಲದಂತೆ, ಇಂಧನದಲ್ಲಿರುವ ಪಾವಕನಂತೆ, ಕನ್ನಡಿಯೊಳಗಿರುವ ನೆಳಲಂತೆ, ಹಾಲೊಳಗಿರುವ ತುಪ್ಪದಂತೆ, ಬೀಜದೊಳಗಿರುವ ವೃಕ್ಷದಂತೆ, ಉಲಿವ ಶಬ್ದಗಳಲ್ಲಿರುವ ಅರ್ಥದಂತೆ, ಮಣಿಗಳೊಳಗಿರುವ ದಾರದಂತೆ, ಪರ್ವತ ಪ್ರದೇಶಗಳಲ್ಲಿ ಉಂಟಾಗುವ ಪ್ರತಿಧ್ವನಿಯಂತೆ, ಎಲ್ಲೆಡೆಯೊಳು ಸರ್ವಗತನಾಗಿ ತಾನೇ ತಾನಾಗಿರುತ್ತಾನೆ, ಎಂದು ವಿವರಿಸಿ ಹೇಳಿದನು. ಇದೇ ಜೀವ, ಲಿಂಗ, ಆತ್ಮ, ಶಿವ ಇವರಲ್ಲಿರುವ ಪರಸ್ಪರ ಸಂಬಂಧವೆಂದು ಹೇಳಿದನು.

ಅದಕ್ಕೆ ಜೈನರು— ನೀವು ಶಿವನು ನಿತ್ಯನು, ಜೀವಿಗಳು ಅನಿತ್ಯವೆಂದು ಹೇಳಿದರೂ ಶಿವನು ಸರ್ವಗತನಾಗಿದ್ದಾನೆಂದು ಅನ್ನುತ್ತೀರಿ. ಆದರೆ ನಾವು ಜೀವಿಗಳಲ್ಲಿ ಒಬ್ಬನಾದರೂ ಕೂಡ ಶಿವನ ಗುಣವುಳ್ಳವನಿರುವದು ಕಾಣುವದಿಲ್ಲವಲ್ಲಾ, ಎಂದು ಆಕ್ಷೇಪಿಸಿದರು. ಅದಕ್ಕೆ ದೇವರದಾಸಿಮಯ್ಯನು— ಸುಗಂಧವುಳ್ಳ ತೈಲದಲ್ಲಿ ಸುಗಂಧವಿರುವದೇ ಹೊರ್ತು, ಆ ಗುಣವು ಎಳ್ಳೊಳಗೆ ಇರುವದೇ? ಎಣ್ಣೆ ಹಾಕಿದಲ್ಲಿ ದೀಪ ಉರಿಯುತ್ತಿದೆಯೇ ಹೊರ್ತು, ಎಳ್ಳು ಹಾಕಿದರೆ ಆ ದೀಪ ಉರಿಯುಬಲ್ಲುದೇ? ಅದು ಉರಿಯಲಾರದು. ಇಷ್ಟರಿಂದ ಎಳ್ಳಲ್ಲಿ ಎಣ್ಣೆ ಇಲ್ಲವೆಂದು ನಾವು ಹೇಳಬಹುದೇ? ಹಾಗೆಯೇ ಪರಮಾತ್ಮನು ಎಲ್ಲ ಕಡೆಗೂ ಇದ್ದರೂ ಕ್ರಿಯೆಯ ಮೂಲಕ ಹೇಗೆ ಎಳ್ಳಿನೊಳಗಿಂದ ಎಣ್ಣೆ ಹೊರಡುತ್ತದೋ, ಹಾಗೆ ಕ್ರಿಯಾಮಥನದಿಂದ ಜೀವನು ಪರಿಪಕ್ವನಾಗಲಾಗಿ ಅವನಲ್ಲಿ ಶಿವಾಂಶವು ತಲೆದೋರಹತ್ತುತ್ತದೆ. ಆದರೆ ಶಿವನು ನಿರ್ಮಲ ಮತಿಗೆ ತೋರುತ್ತಾನೆಯೇ ಹೊರ್ತು, ಮಲಿನ ಮತಿಗೆ ತೋರಲಾರನು. ಈ ಪರಿಯಲ್ಲಿ ಅಭವನು ಜಗತ್ತಿನಲ್ಲಿ ಅಖಿಳವ್ಯಾಪಕನಾಗಿ ಇದ್ದಾನೆ. ಇದು ಪುರಾಣಾಗಮ ಸರ್ವಪ್ರಮಾಣಗಳಿಂದ ರೂಪಿಸಲು ಸಂಸಿದ್ಧವೆಂದು ಉತ್ತರಗೊಟ್ಟನು.

ಆಮೇಲೆ ದೇವರ ದಾಸಿಮಯ್ಯನು ಹೇಳಿದ್ದೇನೆಂದರೆ—ಜೈನರುಗಳಿರಾ, ನೀವು ಶಿವನಿಲ್ಲವೆಂದೆನ್ನುತ್ತೀರಿ. ಆದರೆ ಶಿವನಿಲ್ಲದ ಠಾವು

ಜಗತ್ತಿನಲ್ಲಿ ಎಲ್ಲಾದರೂ ಉಂಟೇ ? ಅವನು ಸಕಲವೂ ತಾನಾಗಿರುತ್ತ, ಸಕಲವನ್ನು ಹೊಂದದೆ ಇದ್ದ ನಿರ್ಗುಣಿಯಾಗಿದ್ದಾನೆ. ಸಕಲವನ್ನು ಹುಟ್ಟಿ ಸಿಯೂ ಸಕಲದಲ್ಲಿ ಹುಟ್ಟದೆ ಇದ್ದ ಅಭವನು. ಸಕಲವನ್ನು ಕೌತುಕ ದಿಂದ ನಡಿಸುತ್ತ ಇದ್ದರೂ, ಆ ಸಕಲದಲ್ಲಿ ನಡೆಯದ ಜಾಣನಾಗಿದ್ದಾನೆ. ಸಕಲವಳಿದರೂ ತಾನಳಿಯದಿರುವಂಥ ನಿತ್ಯನಾಗಿದ್ದಾನೆ. ಸಕಲವನ್ನು ತನ್ನಲ್ಲಿ ಇರಿಸಿಕೊಂಡರೂ ಆ ಸಕಲಕ್ಕೆ ಅಂಟಕೊಳ್ಳದೆ ಇರುವವನು. ಸಕಲವನ್ನು ತನ್ನ ಆಜ್ಞೆಯಿಂದ ಜಗತ್ತಿನಲ್ಲಿ ನಡಿಸುವ ಸರ್ವಜ್ಞನು. ಸಕಲವನ್ನು ಹುರಿಗೊಳಿಸುತ್ತಿದ್ದರೂ ತನ್ನ ಇಚ್ಛಾಮಾತ್ರದಿಂದ ಅದನ್ನು ವಿಕೃತಪಡಿಸುವ ಮಹಾಮಹಿಮನು. ನೆನಹನ್ನು ಅತಿಗಳೆದರೂ ತನ್ನನ್ನು ನೆನೆವವರಿಗೆ ತನ್ನನ್ನೇ ಕೊಡುವಂಥವನು. ತನ್ನ ಅಳವನ್ನು ಅರಿತಂಥ ವರಿಂದ ಅವನು ಎಂದಿಗೂ ಅಗಲಲಾರದೆ, ಅವರಲ್ಲಿಯೇ ಇರುವನು. ನಿಜ ವನ್ನು ಹುಡುಕುವಂಥವರ ಮನದ ಕೊನೆಯಲ್ಲಿ ಹೊಳೆಯುವಂಥ ವನು. ಹಿಡಿಯ ಹೋದರೆ ತಪ್ಪಿಸಿಕೊಳ್ಳುವವನಾದರೂ ಅರವಿನಿಂದ ಅವನನ್ನು ಹಿಡಿಯಲು ಸಾಧ್ಯನು. ಹೀಗೆ ಅವನನ್ನು ಹಿಡಿದಲ್ಲಿ, ಬಟ್ಟ ಬಯಲು. ಅವನು ಸ್ತುತಿಗೆ ಮೀರಿದವನೂ, ನುಡಿಗಳಿಗೆ ಮಿಕ್ಕಿದ ವನೂ, ದೃಷ್ಟಿಗೆ ಕಾಣದವನೂ ಇದ್ದಾನೆ. ಆದರೆ ನಿಜದೃಷ್ಟಿಯಿಂದ ನೋಡುವಂಥವರಿಗೆ ಕಾಣಿಸಿಕೊಳ್ಳುತ್ತಾನೆ. ಹೀಗೆ ಪರಮಾತ್ಮನ ಸ್ವರೂ ಪವಿದೆ. ಜಗತ್ತನ್ನು ಸೃಷ್ಟಿಸುವವನೂ ಅವನೇ, ರಕ್ಷಿಸುವವನೂ ಅವನೇ, ಕೆಡಿಸುವವನೂ ಅವನೇ. ಲೇಸು ಹೊಲ್ಲಹ ಎಂಬೆರಡೂ ಅವನಿಗೆ ಇಲ್ಲ. ಆಸೆ ಇಲ್ಲದ ಭಕ್ತನ ಚಿತ್ತದಲ್ಲಿ ವಾಸವಾಗಿರುವಂಥವನು. ಪ್ರತಿ ಇಲ್ಲದ ಅಪ್ರತಿಮನು. ಇವನ ಮಹಿಮೆಯನ್ನು ಭವಿಗಳಾದವರು ತಿಳಿಯಲಾ ರರು. ಅವನು ತರ್ಕಕ್ಕೆ ದೂರನಾಗಿದ್ದರೂ ಸುಪ್ರಸನ್ನನು. ಅವನು ಆದಿಗಾದಿಗನಾದಿಯಾದವನು. ಇದುವೇ ವೇದಾಗಮ ಶಾಸ್ತ್ರ ಸಿದ್ಧವು, ಎಂದು ನುಡಿಯುತ್ತಾ, ಎಲೈ ಜೈನರಿರಾ ನಿಮ್ಮ ಜೈನ ಧರ್ಮವು ವೇದ ಬಾಹಿರವಾದದ್ದು, ವೇದ ವಿರುದ್ಧವಾದದ್ದು, ಎಂದು ಓಲಗದಲ್ಲಿದ್ದ ಸಭಿ ಕರ ಮುಂದೆ ವೇದಾಗಮ ಪುರಾಣೋಕ್ತಿಗಳನ್ನು ಈ ಬಗ್ಗೆ ಅನೇಕ ವಾಗಿ ಉದಹರಿಸುತ್ತ ಪರಮನ ಸ್ವರೂಪವನ್ನು ಉದ್ಘೋಷಿಸಿದನು.

ಹೀಗೆ ದೇವರದಾಸಿಮಯ್ಯನು ತರ್ಕದಿಂದ ಮತ್ತು ವೇದಾಗಮ ಗಳ ಆಧಾರಗಳಿಂದ ರಾಮನಾಥನ ಸ್ವರೂಪವನ್ನು ಸಿದ್ಧಮಾಡಲು ಅಲ್ಲಿ

ನೆರೆದಿದ್ದ ಪರವಾದಿಗಳು ಅವನಿಗೆ ಉತ್ತರವನ್ನು ಕೊಡಲಾರದೆ ಹೋದರು. ಆಗ ಅವರ ಮುಖಗಳು ಕಂದಿದವು, ಮೊಗಗಳು ಬಾಡಿದವು. ಹೀಗಾಗಲು ಅಲ್ಲಿದ್ದ ಜೈನ ಸಮೂಹವು ತಮ್ಮ ತಮ್ಮೊಳಗೆ ಒಂದು ಕೃತಕವನ್ನು ನೆನೆದು, ಪಾವಕಜ್ವಾಲಾಪ್ರಭಾವವುಳ್ಳ ಘಟಸರ್ಪನೊಂದನ್ನು ತರಿಸಿ ಅದನ್ನು ಒಂದು ಘಟದೊಳಗಿರಿಸಿ ದಾಸಿಮಯ್ಯನಿಗೆ— ನೀನು ಶಿವನು ಸರ್ವಗತನೆಂಬೆ. ಈ ಘಟದಲ್ಲಿ ಶಿವನನ್ನು ತೋರಿಸುವಿಯಾ? ಎಂದೆನಲಾಗ, ಅವನು ಅದಕ್ಕೆ ಒಪ್ಪಿ ನಾಗಭೂಷಣನ ಅಡಿಯನ್ನು ನೆನೆಯುತ್ತ ಮನದಲ್ಲಿ ಅಂಜದೆ ಆ ಕುಂಭದ ಮೇಲಿದ್ದ ಮುಚ್ಚಳವನ್ನು ತೆಗೆಯಲಾಗಿ ಅದರಲ್ಲಿದ್ದ ಘಟಸರ್ಪನು ಮಡಿಕೆಯ ಮೇಲೆ ಹೆಡೆಯನ್ನು ಎತ್ತಿಕೊಂಡು ಭೋರ್ಗರೆಯುತ್ತಿರಲು, ದೇವರ ದಾಸಿಮಯ್ಯನು— ಶಂಕರನೇ ದೈವವು, ಎಂದು ತನ್ನ ಕರವನ್ನು ಮುಂದೆ ನೀಡುತ್ತ ಆ ಸರ್ಪನನ್ನು ಹಿಡಿಯಲು ಅದು ಕೂಡಲೆ ಸ್ಫಟಿಕಲಿಂಗವಾಯಿತು! ಆ ಲಿಂಗದ ಕಿರಣಗಳು ಸಭಾಮಂದಿರವನ್ನು ಆವರಿಸಿದವು. ಅದನ್ನು ಎಲ್ಲರೂ ಕಂಡು ಬೆರಗಾದರು. ಎಲ್ಲರ ಮುಖದಿಂದಲೂ ಜಯ, ಜಯ ನಿನಾದವು ವೆಗ್ಗಳಿಸಿತು. ಎಲ್ಲರೂ ದೇವರ ದಾಸಿಮಯ್ಯನನ್ನು ಸ್ತುತಿಸುತ್ತ ಅವನಿಗೆ ನಮಸ್ಕರಿಸುವವರಾದರು.

ಪರವಾದಿಗಳು ಮಾಡಿದ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಕೊಡುತ್ತ ವಾದದಲ್ಲಿ ಅವರನ್ನು ಹೀಗೆ ಜಯಿಸಿದ ಮೂಲಕ ಇದರ ಸ್ಮರಣಾರ್ಥವಾಗಿ ದೇವರದಾಸಿಮಯ್ಯನು ಆ ಲಿಂಗಕ್ಕೆ 'ಉತ್ತರನಾಥ'ನೆಂಬ ಹೆಸರನ್ನಿಟ್ಟು ಅಲ್ಲಿಯೇ ಅದನ್ನು ಪ್ರತಿಷ್ಠಾಪಿಸಿದನು.

ಆಗ ಅರಸನು ದೇವರದಾಸಿಮ್ಯನಿಗೆ— 'ಲಿಂಗಭಕ್ತಿಯು ಘನತರವಾದುದು. ಅದರ ಮಹತ್ವವನ್ನು ನಾನಿಂದು ಅರಿತೆನು. ನನಗೆ ಲಿಂಗಧಾರಣೆಯನ್ನು ಮಾಡಿ ಸಂರಕ್ಷಿಸು' ಎಂದೆನ್ನಲು ಅವನಿಗೂ ಅವನ ಶರೀರಸಂಬಂಧಿಗಳಿಗೂ ವೀರಶೈವ ದೀಕ್ಷೆಯನ್ನು ಕೊಟ್ಟನು. ಅಲ್ಲಿದ್ದ ಸುಗ್ಗಳಾದೇವಿಯು ಇಂದು ತನ್ನ ಭಾಷೆಯು ಪೂರೈಸಿತೆಂದು ಹರುಷಿತಳಾಗಿ ದಾಸಿಮಯ್ಯನನ್ನು ಕೊಂಡಾಡಿ ಪೂಜಿಸಿದಳು. ಪಟ್ಟಣದಲ್ಲಿ ೭೦೦ ಬಸದಿಗಳಿದ್ದವು. ಅವೆಲ್ಲವೂ ಲಿಂಗಾಲಯಗಳಾಗಿ ಮಾಡ

ಲ್ಪಟ್ಟವು. ಪಟ್ಟಣದಲ್ಲಿದ್ದ ಇಪ್ಪತ್ತುಸಾವಿರ ಜೈನರು ವೀರಶೈವ ದೀಕ್ಷೆಯನ್ನು ಹೊಂದಿದರು.

ಹೀಗೆ ರಾಜನ ರಾಜಧಾನಿಯಲ್ಲಿ ಬಹು ಜನರು ವೀರಶೈವರಾಗಲು ದೇವರ ದಾಸಿಮಯ್ಯನ ಕೀರ್ತಿಯು ನಾಡಿನಲ್ಲಿ ಅತ್ಯಂತವಾಗಿ ಹಬ್ಬಿತು. ಆದರೆ ದಾಸಿಮಯ್ಯನು ಪೊಟ್ಟಲಕೆರೆಯಲ್ಲಿ ಬಹಳ ದಿವಸವಿರಲಿಲ್ಲ. ಅವನು ತನ್ನ ಅಧಿದೇವತೆಯಾದ ರಾಮನಾಥನ ಸನ್ನಿಧಿಯಲ್ಲಿರಲು ಅಪೇಕ್ಷಿಸಿ ಗಣಸಮೂಹದೊಡನೆ ಮುದುನೂರಿಗೆ ಬಂದನು. ಅಲ್ಲಿ ಅವನು ರಾಮನಾಥನ ಭಕ್ತಿಯಲ್ಲಿ ತನ್ನ ಹೆಂಡತಿಯೊಂದಿಗೆ ಕಾಲಕಳೆಯುಹತ್ತಿದನು. ಅವನು ತಾನು ಕೈಕೊಂಡ ನೆಯ್ಗೆಯ ಕಾಯಕದಲ್ಲಿ ತತ್ಪರನಾದನು. ಆದರಿಂದ ಬಂದದ್ದರಿಂದ ಗುರು ಲಿಂಗ ಜಂಗಮ ದಾಸೋಹ ಕಾರ್ಯಗಳನ್ನು ನಡಿಸುತ್ತ ಜನರಿಗೆ ಬೋಧಿಸುತ್ತ ರಾಮನಾಥನನ್ನು ಭಜಿಸುತ್ತ ಮುದುನೂರಲ್ಲಿ ಇರಹತ್ತಿದನು.

ಈ ಪ್ರಕಾರ ದಾಸಿಮಯ್ಯನು ಜಯಸಿಂಹನ ಬಳಿಯಲ್ಲಿ ರಾಜಭೋಗಗಳನ್ನು ಅನುಭವಿಸುತ್ತ ಅವನಲ್ಲಿರಲು ಬಯಸಲಿಲ್ಲ. ಶಿವಶರಣರ ಪದ್ಧತಿಯ ಪ್ರಕಾರ ಅವನು ತನ್ನ ಇಷ್ಟದೇವತೆಯ ಬಳಿಗೆ ಬಂದು ತನ್ನ ನೆಯ್ಗೆಯ ಕಾಯಕವನ್ನು ಮಾಡುತ್ತ ಜನರನ್ನು ಉದ್ಧಾರ ಮಾಡುವ ಕಾರ್ಯದಲ್ಲಿ ಕಡೆಯ ವರೆಗೆ ಉಳಿದನು. ಶಿವಶರಣರ ಮಾರ್ಗವು ಇದೇ ಆಗಿರುತ್ತದೆ.

ಹೀಗೆ ಕೆಲವು ದಿವಸಗಳಾದ ಬಳಿಕ ಪರಮಾತ್ಮನಲ್ಲಿ ಸಾಮರಸ್ಯವನ್ನು ಹೊಂದಬೇಕೆಂಬ ಅಪೇಕ್ಷೆಯು ದಾಸಿಮಯ್ಯನಲ್ಲಿ ಉಂಟಾಯಿತು. ಆಗ ಅವನು ರಾಮನಾಥನ ಬಳಿಗೆ ಹೋಗಿ ಅವನನ್ನು ನಮಿಸಿ--- ನಾನು ನಿನ್ನ ಅನುಜ್ಞೆಯನ್ನು ಹೊಂದಿ ಈ ಮಹೀತಳಕ್ಕೆ ಬಂದೆನು. ಈ ವರೆಗೆ ನನ್ನಿಂದ ಆಗಬೇಕಾದುದನ್ನು ನಾನು ನಿನ್ನ ದಯೆಯಿಂದ ಮಾಡಿದೆನು. ಇನ್ನು ಮೇಲೆ ನನ್ನನ್ನು ನಿನ್ನೊಳಗಿರಿಸು ಎಂದು ಪ್ರಾರ್ಥಿಸಿದನು. ಅದಕ್ಕೆ ರಾಮೇಶನು ಮೆಚ್ಚಿ ತನ್ನ ನಿಜರೂಪು ದೋರಿದನು. ಇದನ್ನು ದಾಸಿಮಯ್ಯನ ಹೆಂಡತಿಯು ತಿಳಿದು ಅಲ್ಲಿಯೇ ಬಂದು ರಾಮೇಶ್ವರನಿಗೆ— ಪತಿಯ ನಡೆಯೇ ನನ್ನ ನಡೆ. ಅವನೊಡನೆ ನನ್ನನ್ನು ನಿನ್ನಲ್ಲಿ ಇಂಬಿಟ್ಟುಕೊಳ್ಳು ಎಂದು ಬೇಡಿಕೊಂಡಳು. ಹೀಗೆ ಉಭಯ ಸತಿಪತಿಗಳು ಪರಮಾತ್ಮನನ್ನು ಸ್ಮರಿಸುತ್ತಿರಲು ಅವನಲ್ಲಿಯೇ ಲಯವಾದರು.

# BOOK-POST.

*From,*
**Shivanubhava**
**Office**
**Bijapur.**

ಚನಮಲ್ಲಪ್ಪ ಸಿದ್ದಪ್ಪ ಬಡೇವಿ
ಪೋ॥ ಬನಹಟ್ಟಿ
ಸ್ಟೇ॥ ಕುಡಚಿ
(M. S. M. Ry.)




ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ॥ ಬ॥ ಪಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರ ವಾರ್ಡ ಮನೆ ನಂ. ೧೩೭೮ ರಲ್ಲಿರುವ ತಮ್ಮ ಹಿತಚಿಂತಕ ಪ್ರಿ[illegible]ನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

# ಶಿವಾನುಭವ

ವರ್ಷ 21 | ಅಗಸ್ಟ 1947 | ಸಂಚಿಕೆ 11

## ವಿಷಯಾನುಕ್ರಮಣಿಕೆ

1) ಜೋಳಗೆಯ ವಿಚಾರ
ಶ್ರೀ ಸಾಸನೂರ ಮಡಿವಾಳಪ್ಪ - 213-236

2) ಅಷ್ಟಾವರಣದ ನಿರ್ಮಾಣ ಸ್ವರೂಪ
ವಿರಕ್ತಮಠ ಅನ್ನದಾನೀಶ್ವರ - 236-242

3) ಮಹಾದೇವಿಯಕ್ಕನಿಗೆ (ಕವನ)
- ಡಿ ಎಸ್ ಕರ್ಕಿ 242-244

4) ದೇವರದಾಸಿಮಯ್ಯ - 53-68

# ಶಿವಾನುಭವ

ವರ್ಷ ೨೧ | ಅಗಸ್ಟ್ ೧೯೪೭ | ಸಂಚಿಕೆ ೧೧

## ಲೋಕಗಳ ವಿಚಾರ.

( ಲೇಖಕ:— ಶ್ರೀಯುತ ಸಾಸನೂರು ಮಡಿವಾಳಪ್ಪನವರು )

[ಈ ಲೇಖವನ್ನು ಶ್ರೀಯುತ ಮಡಿವಾಳಪ್ಪನವರು ಅನೇಕ ಗ್ರಂಥಗಳನ್ನು ಸಂಶೋಧಿಸಿ ಬರೆದಿದ್ದಾರೆ. ಅದರಲ್ಲಿ ಅವರು ನಿರೂಪಿಸಿದ ವಿಷಯಗಳು ಗಮನಾರ್ಹವಾಗಿದ್ದು, ಅವುಗಳನ್ನು ವಾಚಕರು ಲಕ್ಷಪೂರ್ವಕವಾಗಿ ಪರಿಶೀಲಿಸುವರೆಂದು ನಂಬಿದ್ದೇವೆ. —ಸಂಪಾದಕ]

ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

(ಮಹಾಭಾರತ)

ಸ್ವರ್ಗಲೋಕ ಹಾಗೂ ಮರ್ತ್ಯಲೋಕಗಳ ಮಾತು ಹಲವರ ಬಾಯಿಯಿಂದ ಹೊರಬೀಳುವದು. ಅದರೆ ಬಹು ಸ್ವಲ್ಪ ಜನರು ಮಾತ್ರ ಈ ವಿಷಯದ ನಿಜತ್ವವನ್ನು ತಿಳಿದಿರುವರು. ಸ್ವರ್ಗವೆಂದರೆ ಮೇಲಕ್ಕೆ ಬೊಟ್ಟು ಮಾಡಿ ತೋರಿಸುವದು ಅಭ್ಯಾಸವಾಗಿ ಬಿಟ್ಟಿದೆ. ನಮ್ಮ ದೇಶದ ಹಲವು ಪಂಡಿತರು ಈ ವಿಷಯದ ನಿಜವಾದ ಸಂಗತಿಯನ್ನು ತಿಳಿದಿಲ್ಲ. ತಿಳಿದುಕೊಳ್ಳಲಿಕ್ಕೆ ಪ್ರಯತ್ನವನ್ನೂ ಮಾಡುವದಿಲ್ಲವೆಂಬುವದು ವಿಷಾದಕರ ಸಂಗತಿಯು. ಅಜ್ಜ-ಮುತ್ತಾತರ ಕಾಲದಿಂದ ಸ್ವರ್ಗವೆಂದರೆ ಶೂನ್ಯ (ಆಕಾಶ)ದಲ್ಲಿ ಎಂದು ತಿಳಿದು ಸಂತುಷ್ಟರಾಗಿದ್ದಾರೆ. ನಮ್ಮ ಸಂಸ್ಕೃತ ಗ್ರಂಥಾದಿಗಳನ್ನು ಓದಲು ಅವರ

ಈ ತಿಳುವಳಿಕೆಯು ಭ್ರಮಾತ್ಮಕವೆಂದು ತಿಳಿದು ಬರುವದು. ವೇದ, ಉಪನಿಷತ್ತು, ಪುರಾಣ, ರಾಮಾಯಣ, ಮಹಾಭಾರತ ಹಾಗು ಜ್ಯೋತಿಷಶಾಸ್ತ್ರ ವಿಷಯಕ ಗ್ರಂಥಗಳನ್ನು ಹಲವರು ಓದಿರುವರು. ಆದರೆ ಈ ಎಲ್ಲ ಗ್ರಂಥಗಳನ್ನು ಮನಸುಗೊಟ್ಟು ಓದಲು ಸ್ವರ್ಗ ಸಂಬಂಧದ ವಿಶೇಷ ಜ್ಞಾನವುಂಟಾಗುವದು. ಬೇರೆ ಎಲ್ಲ ಗ್ರಂಥಗ ಳನ್ನು ಬಿಟ್ಟುಗೊಟ್ಟರೂ ಕೇವಲ ಸಂಸ್ಕೃತ ರಾಮಾಯಣ ಮತ್ತು ಮಹಾ ಭಾರತಗಳಿಂದಲೇ ಈ ವಿಷಯದ ಹಲವು ನಿಜಸಂಗತಿಗಳು ಗೊತ್ತಾ ಗುವವು. ರಾಮಾಯಣ ಮಹಾಭಾರತಗಳು ಹಿಂದುಗಳ ದೈನಿಕ ಪಠನೀಯ ಗ್ರಂಥಗಳು. ಇಂತಹ ಬಳಕೆಯ ಗ್ರಂಥಗಳಲ್ಲಿಯ ವಿಷ ಯಗಳು ನಮಗೆ ತಿಳಿದಿಲ್ಲವೆಂಬುವದು ದುಃಖದ ಸಂಗತಿಯು. 'ಯುಧಿ ಷ್ಠಿರ ಮಹಾರಾಜನು ನಾಲ್ವರು ತಮ್ಮಂದಿರು ಹಾಗು ದ್ರೌಪದಿಯೊ ಡನೆ ಕಾಲುನಡಿಗೆಯಿಂದ ಸ್ವರ್ಗಕ್ಕೆ ಹೋದನು. ದಾರಿಯಲ್ಲಿ (ಮೇರು ಪರ್ವತದಲ್ಲಿ) ಯುಧಿಷ್ಠಿರನ ಹೊರತು ಎಲ್ಲರೂ ಸತ್ತರು. ಯುಧಿಷ್ಠಿರ ಮಹಾರಾಜನೊಬ್ಬನೇ ಸಶರೀರದಿಂದ ಸ್ವರ್ಗಕ್ಕೆ ಹೋದನು.' ಎಂಬು ವದನ್ನು ಕನ್ನಡ ಮಹಾಭಾರತವನ್ನು ಓದಿದವರು ಸಹ ಬಲ್ಲರು. ಸ್ವರ್ಗವು ಒಂದು ವೇಳೆ ಅಂತರಿಕ್ಷದಲ್ಲಿ ಇದ್ದುದಾದರೆ, ಅಥವಾ ಪ್ರೇತ ಗಳ ಆವಾಸಭೂಮಿಯಾಗಿದ್ದರೆ ಯುಧಿಷ್ಠಿರನು ಕಾಲುನಡಿಗೆಯಿಂದ ಸಶರೀರವಾಗಿ ಸ್ವರ್ಗಕ್ಕೆ ಹೋದುದು ಹೇಗೆ? ಸಂಧ್ಯಾವಂದನೆಯ ಮಂತ್ರಗಳಲ್ಲಿ ಸಪ್ತಸ್ವರ್ಗಗಳ ವಿಷಯವು ಹೇಳಲ್ಪಟ್ಟಿರುವದು. ವೈದಿಕ ಯುಗದಲ್ಲಿ ಈ ಸಪ್ತಸ್ವರ್ಗಗಳು ನಿಜವಾಗಿಯೇ ಇದ್ದವು. ಯುಗ ಪರಿವರ್ತನದೊಡನೆಯೇ ಈ ಎಲ್ಲ ಸ್ವರ್ಗಗಳ ಹೆಸರುಗಳು ಸಹ ಮಾರ್ಪಾ ಟಾಗಿ ಹೋದವು. ಈ ಸಪ್ತಸ್ವರ್ಗಗಳು:—

೧. ಭೂಃ ಲೋಕ— ಭಾರತವರ್ಷ; ವೈದಿಕ ಯುಗದಲ್ಲಿ ಭಾರತ ವರ್ಷಕ್ಕೆ ದಕ್ಷಿಣ ಕುರುದೇಶವೆಂದೂ, ಅನ್ನುತ್ತಿದ್ದರು. ಪೂರ್ವಕಾಲ ದಲ್ಲಿ ಈ ಭಾರತವರ್ಷವು ವೇನ ರಾಜನ ಮಗನಾದ ಪೃಥುವಿನ ನಾಮಾನುಸಾರವಾಗಿ ಹಲವು ಸ್ಥಳಗಳಲ್ಲಿ 'ಪೃಥಿವೀ' ಎಂಬ ಹೆಸರಿ ನಿಂದ ಕರೆಯಲ್ಪಟ್ಟಿದೆ.

೨. ಭುವರ್ಲೋಕ—ಇದಕ್ಕೆ ಕೇತುಮಾಲವರ್ಷವೆಂದೂ ಹೆಸರು ಇದೆ. ಇದು ಮೊದಲು ದೈತ್ಯರಾಜರ ಹಾಗು ಅನಂತರ ವರುಣನ

ಆವಾಸಭೂಮಿಯಾಗಿತ್ತು. ಈ ಕೇತುಮಾಲವರ್ಷವು, ಈಗಿನ ಅಫಗಾನಿಸ್ತಾನದ ಉತ್ತರಭಾಗ, ಇರಾಣ ಹಾಗು ತುರುಷ್ಕ ಮೊದಲಾದ ಸ್ಥಾನಗಳ ವರೆಗೆ ಹಬ್ಬಿತ್ತು.

೩. ಸ್ವರ್ಲೋಕ—ವೈದಿಕ ಕಿಂಪುರುಷವರ್ಷ, ಹರಿವರ್ಷ ಹಾಗು ಇಲಾವೃತವರ್ಷ. ಈ ಸ್ವರ್ಲೋಕವೇ ಈಗಿನ ತಿಬೇಟ (ವೈದಿಕ ಮಾಶಕದೇಶ), ಚೀನ ತಾರ್ತರಿ ಹಾಗು ಮಂಗೋಲಿಯಾ (ವೈದಿಕ ಮಂಗದೇಶ), ಈ ಮೂರು ವರ್ಷಗಳು ಕ್ರಮದಿಂದ ಶಿವ, ಯಮ, ಹಾಗು ಇಂದ್ರ ಇವರ ವಾಸಸ್ಥಾನವಾಗಿತ್ತು.

೪. ಜನಃಲೋಕ— ಈಗಿನ ದಕ್ಷಿಣ ಸೈಬೇರಿಯಾ, ವೈದಿಕ ನಾಮ ಭದ್ರಾಶ್ವವರ್ಷ. ಇದು ಸೂರ್ಯನ ಆವಾಸ ಸ್ಥಳವಾಗಿತ್ತು.

೫. ಮಹರ್ಲೋಕ— ವೈದಿಕ ರಮ್ಯಕ ವರ್ಷ; ಈಗಿನ ಚೀನ, ಮಂಚೂರಿಯಾ ಮೊದಲಾದವುಗಳು. ಆದು ಚಂದ್ರನ ಆವಾಸ ಭೂಮಿಯಾಗಿತ್ತು.

೬. ತಪೋಲೋಕ— ಮಧ್ಯ ಸೈಬೇರಿಯಾ, ವೈದಿಕ ಹಿರಣ್ಮಯ ವರ್ಷ. ಇದೇ ವಿಷ್ಣುವಿನ ವೈಕುಂಠವು.

೭. ಸತ್ಯಲೋಕ—ವೈದಿಕನಾಮ ಉತ್ತರ ಕುರುವರ್ಷ, ಈಗಿನ ಉತ್ತರ ಸೈಬೇರಿಯಾ, ಮೇರುದೇಶ ಹಾಗು ಗ್ರೀನಲ್ಯಾಂಡ. ಇದೇ ಚತುರ್ಮುಖನೆಂಬ ಪ್ರಜಾಪತಿ ಬ್ರಹ್ಮನ ಬ್ರಹ್ಮಲೋಕವು.

( ಇತಿವಾಯು ಪುರಾಣ ೩೪ ನೆಯ ಅಧ್ಯಾಯ )

ಈ ಭಾರತವು ನಮ್ಮ ಮಾತೃಭೂಮಿಯು— ಪಿತೃಭೂಮಿಯಲ್ಲ ವೆಂದು ವೇದಗಳಿಂದ ಗೊತ್ತಾಗುವದು.

> “ ದ್ಯೌ ನಃ ಪಿತಾ ಜನಿತಾ ನಾಭಿರತ್ರ ಬಂಧನಂ ಮಾತಾ ಪೃಥಿವೀ ಮಹೀಯಮ್ ” (ಋಗ್ವೇದ ೧೦, ೧೦, ೪.)
>
> “ ದ್ಯೌ ಪಿತಾ ಪೃಥಿವೀ ಮಾತಾ, ಪಿತರಂಚ ದ್ಯುಲೋಕ ಮಪಿ ” ( ಮಹೀಧರ ಭಾಷ್ಯ )
>
> “ ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸಿ ”

ಅರ್ಥಾತ್ ನಮ್ಮ ಪಿತೃ ಭೂಮಿಯು ಸ್ವರ್ಗಲೋಕವು, ಮತ್ತು ನಮ್ಮ ವಾಸಸ್ಥಾನವು ಭಾರತ ವರ್ಷವು. ವಸ್ತುತಃ ಭಾರತ ವರ್ಷವು ಆರ್ಯರ ಉಪನಿವೇಶವಾಗಿತ್ತು. ಭಾರತ ವರ್ಷದಲ್ಲಿಯ ಆರ್ಯರು ಪಿತೃಭೂಮಿಯ ಸಂದರ್ಶನಕ್ಕೋಸುಗ ಪಿತೃಲೋಕಕ್ಕೆ ಅರ್ಥಾತ್ ಸ್ವರ್ಗಲೋಕಕ್ಕೆ ಹೋಗುತ್ತಿದ್ದರು. ಈ ಪಿತೃಲೋಕವು ಪುಣ್ಯಾತ್ಮರ ವಾಸಸ್ಥಾನವಾಗಿತ್ತು. ಹಲವರು ಶೇಷಾಯುಷ್ಯದಲ್ಲಿ ಅಲ್ಲಿಗೆ ಹೋಗಿ ಬ್ರಹ್ಮಚಿಂತನೆಯಲ್ಲಿ ಕಾಲಕಳೆಯುತ್ತಿದ್ದರು; ಕೆಲಕೆಲವರು ತಮ್ಮ ಜ್ಞಾತಿ ಕುಟುಂಬಗಳನ್ನು ನೋಡುವದಕ್ಕೋಸುಗ ಅಲ್ಲಿಗೆ ಹೋಗುತ್ತಿದ್ದರು. ಮತ್ತು ಕೆಲಕೆಲವರು ಬ್ರಹ್ಮ, ಶಿವ ಮೊದಲಾದ ದೇವತೆಗಳನ್ನು ನೋಡಲಿಕ್ಕೆ ಹೋಗುತ್ತಿದ್ದರು. ಮಹಾಭಾರತ (ಆದಿಪರ್ವ ೧೨೦ ಅಧ್ಯಾಯ) ದಲ್ಲಿ ಇದ್ದುದೇನಂದರೆ—ಮಹಾರಾಜ ಪಾಂಡುವು ಪತ್ನಿಯರೊಡನೆ ಹಿಮಾಲಯದ ಅಪರ ಪೃಷ್ಠದಲ್ಲಿ ಶತಶೃಂಗ ಶೈಲದಲ್ಲಿ ತಪಸ್ಸು ಮಾಡುತ್ತಿರುವಾಗ, ಒಂದು ದಿನ ಅಮಾವಾಸ್ಯಾ ತಿಥಿಯಲ್ಲಿ ಅಲ್ಲಿ ಕೆಲವು ಋಷಿಗಳನ್ನು ಉತ್ತರ ದಿಕ್ಕಿಗೆ ಹೋಗುತ್ತಿರುವದನ್ನು ನೋಡಿ ಕೇಳಿದನು— "ನೀವು ಎಲ್ಲಿಗೆ ಹೋಗುವಿರಿ?" ಋಷಿಗಳು ಉತ್ತರ ಕೊಟ್ಟರು,—"ಬ್ರಹ್ಮಲೋಕದಲ್ಲಿ ದೇವತೆಗಳ, ಋಷಿಗಳ ಹಾಗು ಪಿತೃಲೋಕವಾಸೀ ಮಹಾತ್ಮರ ಒಂದು ದೊಡ್ಡ ಸಭೆಯಾಗುವದು. ನಾವು ಅಲ್ಲಿ ಪ್ರಜಾಪತಿಯನ್ನು ನೋಡುವದಕ್ಕೋಸುಗ ಹೋಗುವೆವು.

"ಅಮಾವಾಸ್ಯಾಂ ತು ಸಹಿತಾ ಋಷಯಃ ಸಂಶಿತ ವ್ರತಾಃ ।
ಬ್ರಹ್ಮಾಣಂ ದ್ರಷ್ಟುಕಾಮಾಸ್ತೇ ಸಂಪ್ರತಸ್ಥುರ್ಮಹರ್ಷಯಃ ॥
ಸಂಪ್ರಯಾತಾನೃಷಿನ್ ದೃಷ್ಟ್ವಾ ಪಾಂಡುರ್ವಚನಮಬ್ರವೀತ್ ।
ಭವನ್ತಃ ಕ್ವ ಗಮಿಷ್ಯನ್ತಿ ಬ್ರೂತ ಮೇ ದೇವತಾಃ ವರಾಃ ॥

ಋಷಯ ಊಚುಃ—

ಸಮವಾಯೋ ಮಹಾನದ್ಯ ಬ್ರಹ್ಮಲೋಕೇ ಭವಿಷ್ಯತಿ
ದೇವಾನಾಂ ಚ ಋಷೀಣಾಂ ಚ ಪಿತೄಣಾಂ ಚ ಮಹಾತ್ಮನಾಮ್
ವಯಂ ತತ್ರ ಗಮಿಷ್ಯಾಮೋ ದ್ರಷ್ಟುಕಾಮಾಃ ಪ್ರಜಾಪತಿಮ್ ॥"

(ಆದಿಪರ್ವ ೧೨೦ ನೆಯ ಅಧ್ಯಾಯ)

ಮತ್ತು ಸಭಾಪರ್ವದಲ್ಲಿ ಅರ್ಜುನ ದಿಗ್ವಿಜಯ ಅಧ್ಯಾಯದಲ್ಲಿ ವರ್ಣಿತವಾದುದು— ಅರ್ಜುನನು ಉತ್ತರ ದೇಶವನ್ನು ಗೆಲ್ಲಲಿಕ್ಕೆ ಹೋದನು. ಯುಧಿಷ್ಠಿರ ಮಹಾರಾಜನು ರಾಜಸೂಯ ಯಜ್ಞದ ಆ ಯೋಜನೆಯನ್ನು ಮಾಡುವನು. ಎಲ್ಲ ದೇಶದ ರಾಜರುಗಳಿಂದ ಕಪ್ಪವನ್ನು ತರಬೇಕಾಗುವದು. ಅರ್ಜುನನು ಹಿಮಾಲಯವನ್ನು ದಾಟಿ, ಮತ್ತೂ ಉತ್ತರ ದೇಶವನ್ನು ಗೆಲ್ಲಲು ಹೋದನು. ಮೊದಲು ಶ್ವೇತ ಪರ್ವತವನ್ನು ದಾಟಿ ಕುಬೇರನ ಪುತ್ರನಿಂದ ರಕ್ಷಿತವಾದ ರಾಜ್ಯವನ್ನು ಆಕ್ರಮಣ ಮಾಡಿ ಅವನಿಂದ ಕಪ್ಪವನ್ನು ತೆಗೆದುಕೊಂಡನು. ಅನಂತರ ಮಾನಸ ಸರೋವರದ ತೀರದಲ್ಲಿದ್ದ ಗಂಧರ್ವ ಮತ್ತು ಅಪ್ಸರಾ ಇವರನ್ನು ಸೋಲಿಸಿ, ಹರಿವರ್ಷವನ್ನು ದಾಟಿ ಉತ್ತರ ಕುರುದೇಶದಲ್ಲಿ ಹೋದನು. ಅಲ್ಲಿ ದೇವತೆಗಳು ವಾಸಮಾಡುತ್ತಿದ್ದರು. ಅವರು ಯುದ್ಧ ಮಾಡದೆಯೇ ಕರವನ್ನು ಕೊಟ್ಟು ಒಡೆತನವನ್ನು ಒಪ್ಪಿಕೊಂಡರು.

ಸ ಶ್ವೇತ ಪರ್ವತಂ ವೀರಃ ಸಮತಿಕ್ರಮ್ಯ ವೀರ್ಯವಾನ್ ।
ದೇಶಂ ಕಿಂಪುರುಷವರ್ಷಂ ದ್ರುಮಪುತ್ರೇಣ ರಕ್ಷಿತಮ್ ॥

× × × ×

ಸರೋಮಾನಸ ಮಾಸಾದ್ಯ ಹಾಟಕಾನಭಿತಃ ಪ್ರಭುಃ ।
ಗಂಧರ್ವ ರಕ್ಷಿತಂ ದೇಶಮಜಯತ್ ಪಾಂಡವಸ್ತತಃ ॥

× × × ×

ಉತ್ತರಂ ಹರಿವರ್ಷನ್ತು ಸಮಾಸಾದ್ಯ ಸ ಪಾಂಡವಃ ।
ಇಯೇಷ ಜೇತುಂ ತಂ ದೇಶಂ ಪಾಕಶಾಸನ ನಂದನಃ ॥
ತತ ಏನಂ ಮಹಾವೀರ್ಯಂ ಮಹಾಕಾಯಾ ಮಹಾಬಲಾಃ ।

× × × ×

ಉತ್ತರಾಃ ಕುರವೋ ಹ್ಯೇತೇ ನಾತ್ರ ಯುದ್ಧಂ ಪ್ರವರ್ತತೇ ॥

× × × ×

ಅನಂತರ ವನಪರ್ವದಲ್ಲಿ ಕಂಡು ಬರುವದೇನಂದರೆ—ಅರ್ಜುನನು ಅಸ್ತ್ರವಿದ್ಯೆಯನ್ನು ಕಲಿಯುವದಕ್ಕೋಸುಗ ವ್ಯಾಸದೇವನ ಸಲಹೆಯಂತೆ ಸ್ವರ್ಗಲೋಕದಲ್ಲಿ ಇಂದ್ರಾಲಯಕ್ಕೆ ಹೋದನು. ಹೋಗು

ವಾಗ ಮಾರ್ಗದಲ್ಲಿ ಹಿಮಾಲಯದ ಉತ್ತರದಲ್ಲಿ ಶ್ವೇತಪರ್ವತ (ಕೈಲಾಸ ಪರ್ವತ) ದಲ್ಲಿ ಶಿವನಿಂದ ಪಾಶುಪತ ಅಸ್ತ್ರವನ್ನು ಸಂಪಾದನೆ ಮಾಡಿದನು. ಹಾಗು ವರುಣನಿಂದಲೂ ಹಲವು ದಿವ್ಯಾಸ್ತ್ರಗಳನ್ನು ಸಂಪಾದಿಸಿ ಅನಂತರ ಇಂದ್ರಾಲಯಕ್ಕೆ ಹೋದನು. ಅರ್ಜುನನು ಕಾಲು ನಡಿಗೆಯಿಂದಲೇ ಹೋಗಿದ್ದನು. ಸ್ವರ್ಗಕ್ಕೆ ಹೋಗಬೇಕಾದರೆ ಸ್ವರ್ಗ ಪುರಿಯ ಹತ್ತರದಲ್ಲಿದ್ದ ಆ ಎಲ್ಲ ಸ್ಥಳಗಳ ಉಲ್ಲೇಖವು ದೊರೆಯುತ್ತದೆ. ಅವೆಲ್ಲವು ಈಗ ಸಹ ಇರುತ್ತವೆ. ೧-೨ ಸ್ಥಾನಗಳ ಹೆಸರು ಮಾತ್ರ ಪರಿವರ್ತನವಾಗಿರುತ್ತವೆ. ಇದರಿಂದ ದೇವತೆಗಳ ಆವಾಸಭೂಮಿಯಾದ ಸ್ವರ್ಗವು ಭೂಮಿಯ ಮೇಲೆಯೇ ಇದ್ದಿತೆಂದೂ, ಆಕಾಶದಲ್ಲಿದ್ದಿಲ್ಲವೆಂದೂ ಗೊತ್ತಾಗುತ್ತದೆ.

ಅನಂತರ ಮಹಾಪ್ರಸ್ಥಾನಿಕ ಪರ್ವದಲ್ಲಿ:--

ಮಹಾರಾಜ ಯುಧಿಷ್ಠಿರನು ನಾಲ್ವರು ತಮ್ಮಂದಿರು ಹಾಗು ದ್ರೌಪದಿಯೊಡನೆ ಕಾಲುನಡಿಗೆಯಿಂದಲೇ ಸ್ವರ್ಗಕ್ಕೆ ಹೋದನು. ಮೊದಲು ಮಹಾಗಿರಿ ಹಿಮಾಲಯವನ್ನು ದಾಟಿ ವಾಲುಕಾ ಸಮುದ್ರದಲ್ಲಿ ಹೋದರು. ಈ ವಾಲುಕಾ ಸಮುದ್ರವು ಚೀನ ದೇಶದಲ್ಲಿಯ ಗೋಬೀ ಎಂಬ ಮರುಭೂಮಿಯು. ಅನಂತರ ಮೇರುಪರ್ವತ ( ಗೋಬೀ ಮರುಭೂಮಿಯ ಉತ್ತರದಲ್ಲಿದ್ದ ಅಲ್ತಾಯಿಪರ್ವತ;—ಉತ್ತರ ಮೇರುವಿನಲ್ಲಿಯ ಸುಮೇರು ಪರ್ವತವಲ್ಲ) ನಯನಗೋಚರವಾಯಿತು. ಈ ಪರ್ವತದಲ್ಲಿಯೇ ಕೆಲಕಾಲದ ನಂತರ ದ್ರೌಪದಿ, ಸಹದೇವ, ನಕುಲ ಅರ್ಜುನ, ಭೀಮ ಇವರು ಮೃತ್ಯುವಿಗೊಳಗಾದರು. ಕೇವಲ ಯುಧಿಷ್ಠಿರನೊಬ್ಬನೇ ಮೇರುಪರ್ವತವನ್ನು ದಾಟಿ ಮುಂದೆ ಉತ್ತರಕ್ಕೆ ಹೋಗುತ್ತ ಹೋಗುತ್ತ ಬ್ರಹ್ಮಲೋಕಕ್ಕೆ ಹೋದನು. ಸ್ವರ್ಗವು ಭೂಮಿಯಲ್ಲಿ ಇರದೆ ಆಕಾಶದಲ್ಲಿ ಇದ್ದುದಾದರೆ ಯುಧಿಷ್ಠಿರನು ಬ್ರಹ್ಮಲೋಕಕ್ಕೆ ಹೋದುದು ಹೇಗೆ ? ಮತ್ತೊಂದು ಮಾತು—ಈ ಸ್ವರ್ಗಭೂಮಿಯು ಹಿಮಾಲಯದ ಉತ್ತರದಲ್ಲಿಯೇ ಇತ್ತು; ಯಾಕಂದರೆ ಸ್ವರ್ಗಲೋಕಕ್ಕೆ ಹೋದವರೆಲ್ಲರೂ ಹಿಮಾಲಯ ಪರ್ವತವನ್ನು ದಾಟಿಯೇ ಹೋಗಿರುವರು.

ಯುಧಿಷ್ಠಿರ ಮಹಾರಾಜನು ಬ್ರಹ್ಮಲೋಕದಲ್ಲಿ ಹೋಗಿ ಗಂಗಾ ಸ್ನಾನವನ್ನು ಮಾಡಿದನು. ಹಾಗು ಅಲ್ಲಿ ಬ್ರಹ್ಮರ್ಷಿಗಳೊಡನೆ ವಾಸ

ಮಾಡಿದ ತರುವಾಯ ಶರೀರ ತ್ಯಾಗವನ್ನು ಮಾಡಿದನೆಂದು ಹೇಳಿದೆ. ಇದು ಯಾವ ಗಂಗೆಯು ? ಹಿಮಾಲಯದಲ್ಲಿಯ ಗೋಮುಖೀ ಎಂಬ ಸ್ಥಾನದಿಂದ ಹೊರಟು ಭಾರತ ವರ್ಷದ ಮಧ್ಯದಿಂದ ಹರಿದು ಬಂಗಾಲ ಉಪಸಾಗರಕ್ಕೆ ಕೂಡುವ ಗಂಗೆಯನ್ನು ನಾವು ಬಲ್ಲೆವು. ಆದರೆ ಯುಧಿಷ್ಠಿರನು ಯಾವ ಗಂಗೆಯಲ್ಲಿ ಸ್ನಾನ ಮಾಡಿದ್ದನು ? ಭಾಸ್ಕರಾಚಾರ್ಯರು ತಮ್ಮ ಸಿದ್ಧಾಂತ ಶಿರೋಮಣಿ ಗ್ರಂಥದ ಭುವನಕೋಷ ಅಧ್ಯಾಯದಲ್ಲಿ ಹೇಳಿದ್ದೇನಂದರೆ—

"ವಿಷ್ಣುಪದೀ ವಿಷ್ಣುಪದಾತ್ ಪತಿತಾ ಮೇರೌ ಚತುರ್ದ್ಧಾಸ್ಯಾತ್। ವಿಷ್ಕಂಭಾಚಲಮಸ್ತಕಾಸ್ತಸವಃ ಸಂಗತಾ ಗತವಿಯತಾ। ಸೀತಾಖ್ಯಾ ಭದ್ರಾಶ್ವಂ ಸಾಲಕಾನಂದಾಚ ಭಾರತ ವರ್ಷಮ್। ಚಕ್ಷುಶ್ಚ ಕೇತುಮಾಲಂ ಭದ್ರಾಖ್ಯಾಚೋತ್ತರಾನ್ ಕುರೂನ್ ಯಾತಾ"।

ಅರ್ಥಾತ್ ಮೇರು ಅಥವಾ ಅಲ್ತಾಯಿ ಪರ್ವದ ದಕ್ಷಿಣದಲ್ಲಿ ವಿಷ್ಕಂಭ ಪರ್ವತದಲ್ಲಿಯ ಸರೋವರದಿಂದ ಗಂಗೆಯು ನಾಲ್ಕು ಭಾಗಗಳಾಗಿ ಹೊರಗೆ ಬರುತ್ತದೆ. ಭದ್ರಾಶ್ವವರ್ಷದಲ್ಲಿ ಅಥವಾ ದಕ್ಷಿಣ ಸೈಬೇರಿಯಾದಲ್ಲಿ ಹರಿಯುವ ಪ್ರವಾಹದ ಹೆಸರು ಸೀತೆ; ಭಾರತ ವರ್ಷದಲ್ಲಿ ಹರಿಯುವ ಪ್ರವಾಹವು ಅಲಕನಂದಾ; ಕೇತುಮಾಲಾ ವರ್ಷದಲ್ಲಿ ಹರಿಯುವ ಪ್ರವಾಹವು ಚಕ್ಷು; ಹಾಗು ಉತ್ತರ ಕುರುದೇಶದಲ್ಲಿ ಹರಿಯುವ ಪ್ರವಾಹವು ಭದ್ರಾ. ಯುಧಿಷ್ಠಿರ ಮಹಾರಾಜನು ಇದೇ ಭದ್ರಾ ಎಂಬ ಗಂಗೆಯಲ್ಲಿ ಸ್ನಾನ ಮಾಡಿದನು. ಶ್ರೀಮತ್ ಸ್ವಾಮಿಜೀ ಯೋಗಾನಂದ ಸರಸ್ವತಿಗಳವರು ಭದ್ರೆಯ ಈಗಿನ ಹೆಸರು "ಇಸಿಸಿ" ಎಂದು ಹೇಳುವರು. ಈ ನದಿಯು ಈಗ ಉತ್ತರ ಸೈಬೇರಿಯಾದಲ್ಲಿ ಹರಿದು ಉತ್ತರ ಮೇರು ಸಮುದ್ರಕ್ಕೆ ಕೂಡುತ್ತದೆ. ಭದ್ರಾಶ್ವವರ್ಷ ಅಥವಾ ದಕ್ಷಿಣ ಸೈಬೇರಿಯಾದಲ್ಲಿ ಹರಿಯುವ ಪ್ರವಾಹ ಸೀತಾದ ಈಗಿನ ಹೆಸರು "ಆಮೂರ". ಈ ನದಿಯು ಅಲ್ತಾಯಿ (ವೈದಿಕ–ಇಲಾಸ್ಥಾಯಿ) ಪರ್ವತದಲ್ಲಿ ಹುಟ್ಟಿ ಓಖಟಸ್ಕ ಸಮುದ್ರಕ್ಕೆ ಹೋಗಿ ಕೂಡುತ್ತದೆ. ಕೇತುಮಾಲ ವರ್ಷದಲ್ಲಿ ಹರಿಯುವ ಪ್ರವಾಹ "ಚಕ್ಷು"ವಿನ ಈಗಿನ ಹೆಸರು ಆಕ್‌ಶಾಸ್. ಚಕ್ಷುವಿನ ಮತ್ತೊಂದು ಹೆಸರು ಅಕ್ಷಿ ಅಥವಾ ಆಕ್‌ಷಿಯಿಂದಲೇ ಈ ಆಕ್‌ಶಾಸ್ ಹೆಸರಿನ ರಚನೆಯಾಗಿದೆ. ಈ ಆಕ್‌ಶಾಸ್

ತುರ್ಕಸ್ಥಾನ ಹಾಗು ಬೊಖಾರಾ ಪ್ರದೇಶದಿಂದ ಹರಿದು ಅರಲ್ ಸಮುದ್ರಕ್ಕೆ ಕೂಡುತ್ತದೆ. ಅರಲಸಮುದ್ರ ಅಥವಾ ಅರಲ ಸರೋವರದ ವೈದಿಕ ಹೆಸರು "ಅರಹ್ರದ." (ಕೌಷಿತಕಿ ಬ್ರಾಹ್ಮಣೋಪನಿಷತ್ತು, ೧ ನೆಯ ಅಧ್ಯಾಯ). ಭಾರತ ವರ್ಷದಲ್ಲಿ ಹರಿಯುವ "ಅಲಕನಂದೆ' ಯ ಮೂಲ ಪ್ರವಾಹವು ತಿಬೇಟ ದೇಶವನ್ನು ದಾಟಿ, ಹಿಮಾಲಯದಲ್ಲಿ ಸೇರಿ ಗೋಮುಖೀ ಎಂಬ ಸ್ಥಾನದಲ್ಲಿ ಪರ್ವತವನ್ನು ಒಡೆದು ಹೊರ ಬೀಳುವದು. ಹಾಗು ಅಲ್ಲಿಂದ ತಗ್ಗು ಪ್ರದೇಶದಲ್ಲಿ ಹರಿದು ಬಂಗಾಲದ ಉಪಸಾಗರಕ್ಕೆ ಕೂಡುವದು. ಈ ನಾಲ್ಕು ನದಿಗಳು ಒಂದೇ ಸ್ಥಳದಲ್ಲಿ ಹುಟ್ಟಿದ್ದರಿಂದ ಹಾಗು ಇವುಗಳ ನೀರು ಒಳ್ಳೇ ರುಚಿಕರವೂ, ಸ್ವಾಸ್ಥ್ಯ ಗೋಸುಗ ಅತ್ಯಂತ ಅನುಕೂಲವೂ ಇದ್ದುದರಿಂದ, ಇವುಗಳು ಒಂದೇ ಹೆಸರಿ (ಗಂಗೆ) ನಿಂದ ಕರೆಯಲ್ಪಟ್ಟಿವೆ. ಕೌಷಿತಕಿ ಬ್ರಾಹ್ಮಣೋಪನಿ ಷತ್ತಿನಲ್ಲಿ ಭದ್ರಾಗಂಗೆಯ ಹೆಸರು "ಪಿಜರಾ" ಎಂದು ಹೇಳಿದೆ. ಬೇರೆ ಮೂರು ಗಂಗೆಗಳ ಈ ಗುಣ ಸಂಬಂಧದಿಂದ ವಿಶೇಷವಾಗಿ ಏನನ್ನು ಹೇಳಲು ಶಕ್ಯವಾಗದಿದ್ದರೂ, ಭಾರತ ವರ್ಷದಲ್ಲಿಯ ಗಂಗೆಯು ವಾಸ್ತ ವಿಕವಾಗಿ 'ಪಿಜರಾ' ಎಂಬ ವಿಷಯದಲ್ಲಿ ಯಾವ ಸಂದೇಹವೂ ಇಲ್ಲ. ಸ್ವರ್ಗನದಿ ಗಂಗೆಯು ನಾಲ್ಕು ಭಾಗಗಳಾಗಿ ವಿಭಕ್ತವಾಗಿ, ನಾಲ್ಕು ಬೇರೆ ಬೇರೆ ದೇಶಗಳೊಳಗಿಂದ ಹರಿದು ಸಮುದ್ರಕ್ಕೆ ಕೂಡುವ ಸಂಗ ತಿಯು ವಿಷ್ಣು ಪುರಾಣದಲ್ಲಿಯೂ ಸ್ಪಷ್ಟವಾಗಿಯೇ ಬರೆದಿರುತ್ತದೆ. (೨ ನೇ ಖಂಡ ೨ ನೇ ಅಧ್ಯಾಯ).

"ಬ್ರಹ್ಮಲೋಕ, ಇಂದ್ರಲೋಕ, ವರುಣಲೋಕ, ಯಮಲೋಕ ಮೊದಲಾದವುಗಳ ಸ್ಥಾನನಿರ್ಣಯದ ಸಂಬಂಧದಿಂದ ಪುರಾಣಕಾರರು ಏನು ಹೇಳಿರುವರೆಂಬದನ್ನು ಈಗ ನೋಡೋಣ. ಮಹಾಭಾರತದ ಭೀಷ್ಮಪರ್ವದಲ್ಲಿ ಬರೆದುದು:— ಹಿಮಾಲಯದ ಉತ್ತರದಿಕ್ಕಿನಲ್ಲಿಯೇ ಹೇಮಕೂಟಪರ್ವತವು. ಹೇಮಕೂಟದ ಆಚೆಗೆ ಹರಿವರ್ಷವು) ಹೇಮ ಕೂಟದ ಮತ್ತೊಂದು ಹೆಸರು ಕೈಲಾಸಪರ್ವತ. ಅಥವಾ ಶ್ವೇತ ಪರ್ವತ). ಹೇಮಕೂಟದೊಡನೆಯೇ ಉತ್ತರಕ್ಕೆ ನಿಷಧ, ನೀಲ ಮತ್ತು ಮಾಲ್ಯವಾನ್ ಪರ್ವತಗಳು. ಮಾಲ್ಯವಾನದ ಆಚೆಯಲ್ಲಿ ಗಂಧಮಾ ದನ ಪರ್ವತವು. ಮಾಲ್ಯವಾನ್ ಮತ್ತು ಗಂಧಮಾದನ ಪರ್ವತಗಳ ಮಧ್ಯದಲ್ಲಿದ್ದ ಪರ್ವತವೇ ಮೇರುಪರ್ವತವು. ಈ ಮೇರು ಪರ್ವತದ

ಪೂರ್ವಕ್ಕೆ ಭದ್ರಾಶ್ವವರ್ಷ. ಪಶ್ಚಿಮಕ್ಕೆ ಕೇತುಮಾಲವರ್ಷ, ಹಾಗು ಉತ್ತರಕ್ಕೆ ಉತ್ತರಕುರುವರ್ಷ. ಮತ್ತು ಈ ಎಲ್ಲ ವರ್ಷ (ದೇಶ)ಗಳಲ್ಲಿ ದೇವತೆ, ಗಂಧರ್ವ, ಅಸುರ, ಕಿನ್ನರ ಹಾಗು ಅಪ್ಸರರು ವಾಸ ಮಾಡುತ್ತಾರೆ. ಇಲ್ಲಿಯೇ ಬ್ರಹ್ಮ, ಶಿವ, ಇಂದ್ರ ಮೊದಲಾದವರೂ ವಾಸಿಸುವರು.

"ತತ್ರ ದೇವಗಣಾ ರಾಜನ್ ಗಂಧರ್ವಾಸುರ ರಾಕ್ಷಸಾಃ ।
ಅಪ್ಸರಾಗಣ ಸಂಯುಕ್ತಾಃ ಶೈಲೀ ಕ್ರೀಡನ್ತಿ ಸರ್ವದಾ ॥
ತತ್ರ ಬ್ರಹ್ಮಾಚ ರುದ್ರಶ್ಚ ಶಕ್ರಶ್ಚಾಪಿ ಸುರೇಶ್ವರಾಃ ।
ಸಮೇತ್ಯ ವಿವಿಧೈರ್ಯಜ್ಞೈರ್ಯಜನ್ತೇಽನೇಕ ದಕ್ಷಿಣೈಃ" ॥

—ಭೀಷ್ಮಪರ್ವ—೬ನೆಯ ಅಧ್ಯಾಯ.

ಭಾಸ್ಕರಾಚಾರ್ಯನು ತನ್ನ ಸಿದ್ಧಾಂತ ಶಿರೋಮಣಿ ಗ್ರಂಥದಲ್ಲಿ ಹೇಳಿರುವನು—ನಿಷಧ, ನೀಲ, ಗಂಧಮಾದನ ಮತ್ತು ಮಾಲ್ಯವಾನ್ ಪರ್ವತ ಪರಿವೇಷ್ಟಿತವಾದುದು ಇಲಾವೃತ ವರ್ಷವು. ಈ ಇಲಾವೃತ ವರ್ಷದ ಮಧ್ಯದಲ್ಲಿ ಮೇರು ಗಿರಿಯು. ಇದೇ ಕನಕ ರತ್ನಮಯ ತ್ರಿದಶಾಲಯ ಹಾಗು ಬ್ರಹ್ಮನ ಜನ್ಮ ಭೂಮಿಯು—ಪುರಾಣವಿದರು ಹೀಗೆಯೇ ಹೇಳಿರುವರು.

"ನಿಷಧ ನೀಲ ಸುಗಂಧ ಸುಮಾಲ್ಯಕೈಃ,
ಅಲಮಿಲಾವೃತ ಮಾವೃತಮಾವಭೌ ।
ಇಹ ಹಿ ಮೇರುಗಿರಿ ಕಿಲ ಮಧ್ಯಗಃ,
ಕನಕ ರತ್ನಮಯ ಸ್ತ್ರಿದಶಾಲಯಃ,
ದ್ರುಹಿಣ ಜನ್ಮ ಕುಪದ್ಮಜ ಕರ್ಣಿಕಾ
ಇತಿ ಚ ಪುರಾಣ ವಿದೋಽಮುಮವರ್ಣಯನ್ ॥"

(–ಸಿದ್ಧಾಂತ ಶಿರೋಮಣಿ–ಭುವನಕೋಷಾಧ್ಯಾಯ ೩೦–೩೧)

ಅತ ಏವ ಈ ಇಲಾವೃತ ವರ್ಷದಲ್ಲಿಯ ಮೇರುಪರ್ವತವೇ ತ್ರಿದಶಾಲಯ ಅಥವಾ ದೇವತೆಗಳ ಆವಾಸಭೂಮಿಯಾಗಿತ್ತೆಂದು ಗೊತ್ತಾಗುತ್ತದೆ. ಈ ಇಲಾವೃತ ವರ್ಷದ ಸಂಬಂಧದಿಂದ ವಾಯುಪುರಾಣದಲ್ಲಿ ಕೆಳಗಿನಂತೆ ವರ್ಣನೆಯುಂಟು–

"ವೇದ್ಯರ್ಧ್ವಂ ದಕ್ಷಿಣೇ ತ್ರೀಣಿ ವರ್ಷಾಣಿ ತ್ರೀಣಿಚೋತ್ತರೇ।
ತಯೋರ್ಮಧ್ಯೇ ತು ವಿಜ್ಞೇಯಂ ಮೇರುಮಧ್ಯಮಿಲಾವೃತಮ್॥

× × × ×

ತತ್ರ ದೇವಗಣಾಃ ಸರ್ವೇ ಗಂಧರ್ವೋರಗಾ ರಾಕ್ಷಸಾಃ।
ಶೈಲರಾಜ್ಯೈಃ ಪ್ರದೃಶ್ಯನ್ತೇ ಶುಭಾಶ್ಚಾಪ್ಸರಸಾಂ ಗಣಾಃ ।।
ಸ ತು ಮೇರು ಪರಿವೃತೋ ಭುವನೈರ್ಭೂತ ಭಾವನಃ॥

× × ×

(ವಾಯುಪುರಾಣ, ೩೪ನೇಯ ಅಧ್ಯಾಯ.)

ಅರ್ಥಾತ್ ವಾಯುಪುರಾಣವು ಹೇಳುವದೇನಂದರೆ-ವೇದೀ ಅಥವಾ ಇಲಾವೃತ ವರ್ಷದ ದಕ್ಷಿಣದಲ್ಲಿ ಮೂರು ವರ್ಷಗಳು–ಹರಿವರ್ಷ, ಕಿಂಪುರುಷವರ್ಷ, ಹಾಗೂ ಭಾರತ ವರ್ಷ; ಮತ್ತು ಉತ್ತರದಲ್ಲಿ ಮೂರು ವರ್ಷಗಳು–ಭದ್ರಾಶ್ವ ವರ್ಷ, ಹಿರಣ್ಮಯವರ್ಷ, ಹಾಗು ಉತ್ತರ ಕುರುವರ್ಷ. ಸುತರಾಂ ಇಲಾವೃತ ವರ್ಷವು ನಟ್ಟನಡುವೆ ಮತ್ತು ಅಲ್ಲಿಯೂ ಮೇರುಪರ್ವತವು ಇರುವದು. ಈ ಮೇರು ಪರ್ವತದಲ್ಲಿ ದೇವತೆ (ಬ್ರಹ್ಮ, ವಿಷ್ಣು, ಚಂದ್ರ ಮೊದಲಾದವರು) ಗಂಧರ್ವ, ರಾಕ್ಷಸ, ಹಾಗೂ ಅಪ್ಸರರು ವಾಸಮಾಡುತ್ತಾರೆ. ಹಾಗು ಈ ಸ್ಥಾನವೇ ಪೃಥ್ವಿಯಲ್ಲಿಯ ಎಲ್ಲ ಜೀವಿಗಳ ಉತ್ಪತ್ತಿ ಸ್ಥಾನವು. ಮೇರು ಪರ್ವತವು ಈ ಇಲಾವೃತ ವರ್ಷದಲ್ಲಿ ಇದ್ದುದರಿಂದ ಇದರ ಮತ್ತೊಂದು ಹೆಸರು 'ಇಲಾಸ್ಥಾಯೀಪರ್ವತ'ವೆಂದು. ಈ ಇಲಾಸ್ಥಾಯಿಯಿಂದಲೇ ಈಗಿನ 'ಅಲ್ತಾಯಿ' ಹೆಸರು ಹುಟ್ಟಿರುತ್ತದೆ. ಅಲ್ತಾಯಿ ಪರ್ವತಕ್ಕೆ ಚೀನೀಯ ಹೆಸರು 'ಉಲಿಯಾ ಸುತಾಯಿ' ಎಂದು ಇದೆ. ವಾಯು ಪುರಾಣವು ಮತ್ತೂ ಹೇಳುವದು-ಉತ್ತರ ಕುರುದೇಶವು ಉತ್ತರ ಸಮುದ್ರದ ದಕ್ಷಿಣದಲ್ಲಿ ಇರುತ್ತದೆಂದು.

"ಉತ್ತರಸ್ಯ ಸಮುದ್ರಸ್ಯ ಸಮುದ್ರಾನ್ತೇಚ ದಕ್ಷಿಣೇ ।
ಕುರವಸ್ತತ್ರ ತದ್ವರ್ಷಂ ಪುಣ್ಯಂ ಸಿದ್ಧನಿಷೇವಿತಮ್ ॥ "

೪೫ನೆಯ ಅಧ್ಯಾಯ.

ಈ ಉತ್ತರ ದೇಶವು ಪುಣ್ಯಭೂಮಿಯು, ಹಾಗು ಸಿದ್ಧಪುರುಷ ರಿಂದ ಅಧ್ಯುಷಿತವು. ಅತ ಏವ ಉತ್ತರ ಕುರುದೇಶವೇ ಈಗಿನ ಉತ್ತರ ಸೈಬೇರಿಯಾ ಅಥವಾ ಮೇರು ದೇಶವೆಂದು ಸ್ಪಷ್ಟವಾಗಿ ಕಂಡು ಬರು ತ್ತದೆ. ಈಗ ಈ ಉತ್ತರ ಕುರುದೇಶದ ಇರುವಿಕೆಯ ಸಂಬಂಧದಿಂದ ಕೆಲವು ಸಂಗತಿಯನ್ನು ತಿಳಿಯುವದು ಆವಶ್ಯಕವು. ರಾಮಾಯಣ ಕಿಷ್ಕಿಂಧಾಕಾಂಡದಲ್ಲಿ ಬರೆದುದೇನಂದರೆ—ಸುಗ್ರೀವನು ಸೀತೆಯನ್ನು ಹುಡುಕುವದಕ್ಕೋಸುಗ ಶತಬಲವೊದಲಾದ ಕೆಲವು ವಾನರರಿಗೆ ಉತ್ತ ರಕ್ಕೆ ಕಳಿಸುವಾಗ ಉಪದೇಶಮಾಡಿರುವನು:-ಎಲ್ಲಿ ವೈಖಾನಸ (ಈಗಿನ ಬಾಲ್ಕಸ ಸರೋವರ) ಸರೋವರವು ಇರುವದೋ, ಆ ಪ್ರದೇಶವನ್ನು ದಾಟಿ ಶೈಲೋದಾ ಎಂಬ ನದಿಯು ಕಂಡುಬರುವದು. ಅದರ ಎರಡೂ ತೀರಗಳಲ್ಲಿ ಕೀಚಕವೆಂಬ ಬಿದುರಿನ ಗಿಡಗಳಿವೆ. ಸಿದ್ಧಪುರುಷರು ಆ ಬಿದುರ್ನಿನ ನಾವನ್ನು ಮಾಡಿ ಆ ನದಿಯನ್ನು ದಾಟುತ್ತಿರುವರು. ನೀವು ಸಹ ಅದರಂತೆಯೇ ಆ ನದಿಯ ನ್ನು ದಾಟತಕ್ಕದ್ದು. ಆ ನದಿಯ ಆಚೆಯ ದಂಡೆಯಲ್ಲಿಯೇ ಅರ್ಥಾತ್ ಉತ್ತರ ಕಡೆಯಲ್ಲಿಯೇ ಆ ಪುಣ್ಯಮಯ ಉತ್ತರ ಕುರುದೇಶವು. ಆ ಉತ್ತರ ಕುರುದೇಶದ ಉತ್ತರ ಭಾಗದಲ್ಲಿ ಉತ್ತರ ಸಮುದ್ರದ ತೀರದಲ್ಲಿ ಸೋಮಗಿರಿಯು ಇರುವದು. ಆ ದೇಶವು ಸೂರ್ಯವಿಹೀನವಿದ್ದರೂ ಅರ್ಥಾತ್ ಅಲ್ಲಿ ಸೂರ್ಯನು ಅಸ್ತನಾಗಿ ದ್ದರೂ ಒಂದು ಬಗೆಯ ಬೆಳಕು ಕಂಡುಬರುವದು. (ಇದೇ ಈಗಿನ Aurora Borealis). ಈ ದೇಶದಲ್ಲಿಯೇ ದೇವೇಶ ಬ್ರಹ್ಮನು ಬ್ರಹ್ಮರ್ಷಿ ಗಳಿಂದ ಪರಿವೇಷ್ಟಿತನಾಗಿ ವಾಸಮಾಡುತ್ತಾನೆ. ನೀವು ಈ ದೇಶದ ಉತ್ತರಕ್ಕೆ ಹೋಗಬೇಡಿರಿ. ಯಾಕಂದರೆ ಅಲ್ಲಿ ಸೂರ್ಯನಿಲ್ಲ, ಅಥವಾ ಅಲ್ಲಿ ಯಾವ ಬಗೆಯ ಪ್ರಕಾಶವೂ ಇರುವದಿಲ್ಲ. ಇದು ಸೀಮಾ ವಿಹೀ ನವು; ಇದರ ಆಚೆಯಲ್ಲಿ ಮತ್ತೇನಿದೆ ಎಂಬುವದು ನನಗೆ ಗೊತ್ತಿಲ್ಲ.

"ಹೇಮ ಪುಷ್ಕರ ಸಂಛನ್ನಂ ತತ್ರ ವೈಖಾನಸಂ ಸರಃ ।
ತರುಣಾದಿತ್ಯ ಸಂಕಾಶೈರ್ಹಂಸೈರ್ವಿಚರಿತಂ ಶುಭೈಃ ॥

× × × ×

ತಂ ತು ದೇಶಮತಿಕ್ರಮ್ಯ ಶೈಲೋದಾ ನಾಮ ನಿಮ್ನಗಾ ।
ಉಭಯೋಸ್ತೀರಯೋಸ್ತಸ್ಯಾಃ ಕೀಚಕನಾಮ ವೇಣವಃ ॥

ತೇನಯನ್ತೀ ಪರಂ ತೀರಂ ಸಿದ್ಧಾನ್ ಪ್ರತ್ಯಾನಯನ್ತಿ ಚ ।
ಉತ್ತರಾಃ ಕುರವಸ್ತತ್ರ ಕೃತಪುಣ್ಯ ಪ್ರೀತಿಶ್ರಯಾಃ ॥

× × × ×

ತಮತಿಕ್ರಮ್ಯ ಶೈಲೇಂದ್ರಮುತ್ತರ ಪಯಸಾಂ ನಿಧಿಃ ।
ತತ್ರ ಸೋಮಗಿರಿರ್ನಾಮ ಮಧ್ಯೇ ಹೇಮಮಯೋ ಮಹಾನ್ ॥
ಸ ತು ದೇಶ ವಿಸೂರ್ಯೋಽಪಿ ತಸ್ಯಭಾಸಾ ಪ್ರಕಾಶತೇ ।
ಸೂರ್ಯಲಕ್ಷ್ಮ್ಯಾಭಿ ವಿಜ್ಞೇಯಸ್ತಪತೇ ವಿವಸ್ವತಾ ॥

× × × ×

ಬ್ರಹ್ಮಾ ವಸತಿ ದೇವೇಶೋ ಬ್ರಹ್ಮರ್ಷಿ ಪರಿವಾರಿತಃ ।
ನ ಕಥಂಚ ನ ಗಂತವ್ಯಂ ಕುರುಣಾಮುತ್ತರೇಣಚ ॥

× × × ×

ಸ ಹಿ ಸೋಮಗಿರಿರ್ನಾಮ ದೇವಾನಾಮಪಿ ದುರ್ಗಮಃ ।
ತಮಾಲೋಕ್ಯ ತತಃ ಕ್ಷಿಪ್ರಮುಪಾವರ್ತಿತು ಮರ್ಹಥ॥
ಏತಾವದ್ವಾನರೈಃ ಶಕ್ಯಂ ಗನ್ತುಂ ವಾನರ ಪುಂಗವಾಃ ।
ಅಭಾಸ್ಕರಮಮರ್ಯಾದಂ ನ ಜಾನೀಮಸ್ತತಃ ಪರಮ್ ॥

ಉತ್ತರ ಸೈಬೇರಿಯಾದ ಒಂದು ಭಾಗದಲ್ಲಿ ಹಾಗು ಗ್ರೀನಲ್ಯಾಂಡಿನಲ್ಲಿ ಆರುತಿಂಗಳು ಸೂರ್ಯೋದಯವಾಗುವದಿಲ್ಲ. ಒಮ್ಮೆ ಉದಯನಾದ ಸೂರ್ಯನು ಆರುತಿಂಗಳು ಅಸ್ತನಾಗುವದಿಲ್ಲ. ಅಲ್ಲಿ ಆರು ತಿಂಗಳ ಕೇವಲ ಚಂದ್ರನ ಬೆಳಕು. ಅಲ್ಲಿ ಸೂರ್ಯ ಪ್ರಕಾಶದ ಆರು ತಿಂಗಳಲ್ಲಿ ಒಂದು ಹಗಲು, ಚಂದ್ರಪ್ರಕಾಶದ ಆರು ತಿಂಗಳಲ್ಲಿ ಒಂದು ರಾತ್ರಿ. ಸುತರಾಂ ಬ್ರಹ್ಮನ ಒಂದು ಹಗಲು, ಹಾಗು ರಾತ್ರಿಯಲ್ಲಿ ನಮ್ಮ ಒಂದು ವರ್ಷವಾಗುವದು.

"ಏತದ್ದೇವಾನಾಮಹಃ ಯತ್ ಸಂವತ್ಸರಃ"
ತೈತ್ತರೀಯ ಬ್ರಾಹ್ಮಣ.

ಮತ್ತು ಮನುಸ್ಮೃತಿಯಲ್ಲಿ ಃ—
"ದೈವೇರಾತ್ರ್ಯಹನೀ ವರ್ಷಂ ಪ್ರವಿಭಾಗಸ್ತಯೋಃ ಪುನಃ ।
ಅಹಸ್ತತ್ರೋದಗ್ಯನಂ ರಾತ್ರಿಃ ಸ್ಯಾದ್ದಕ್ಷಿಣಾಯನಮ್ ॥"
೧ನೆಯ ಅಧ್ಯಾಯ ೬೭ನೆಯ ಶ್ಲೋಕ.

೧. ಕಲ್ಲೂಕಭಾಷ್ಯ :— ದೈವೇ ರಾತ್ರ್ಯಹನೀವರ್ಷಮಿತಿ ॥
ಮನುಷ್ಯಾಣಾಂ ವರ್ಷಂ ದೇವಾನಾಂ ರಾತ್ರಿದಿನೇ ಭವತಃ ।
ತಯೋರಪ್ಯಯಂ ವಿಭಾಗಃ ।
ನರಾಣಾಮುದ್ಗಯನಂ ದೇವಾನಾಮಹಃ ।
ತತ್ರ ಪ್ರಾಯೇಣ ದೈವಕರ್ಮಣಾಮನುಷ್ಠಾನಂ ದಕ್ಷಿಣಾ
ಯನಂ ತು ರಾತ್ರಿಃ ।।

ಅರ್ಥಾತ್ ದೇವತೆಗಳ ಒಂದು ರಾತ್ರಿ-ಹಗಲಿನಲ್ಲಿ ಮನುಷ್ಯರ ಒಂದು ವರ್ಷವಾಗುವದು. ಸೂರ್ಯನ ಉತ್ತರಾಯಣದಲ್ಲಿ ದೇವತೆಗಳ ಹಗಲು, ಹಾಗು ದಕ್ಷಿಣಾಯನದಲ್ಲಿ ರಾತ್ರಿ. ಆದರೆ ಛಾಂದೋಗ್ಯ ಉಪನಿಷತ್ತಿನಲ್ಲಿ ಬಹ್ಮಲೋಕದೊಳಗೆ ಸೂರ್ಯಾಸ್ತವಾಗುವದಿಲ್ಲವೆಂದು ವರ್ಣಿತವಾಗಿದೆ. ಬ್ರಹ್ಮಲೋಕದಲ್ಲಿ ಸೂರ್ಯನು ಯಾವಾಗಲೂ ತೋರುವನು ಎಂದು ಒಬ್ಬ ಋಷಿಯು ಪ್ರತಿಜ್ಞಾಪೂರ್ವಕ ಹೇಳಿದ್ದಾನೆ.

"ಅಥ ತತ ಉರ್ಧ್ವ ಉದೇತ್ಯ ನೈವೋದೇತಾ ನಾಸ್ತಮೇ ತೈಕಲ
ಏವಮಧ್ಯೇ ಸ್ಥಾತಾ ।" (೩।೧೧।೧ ಮಂತ್ರ)
ತದೇವ ಶ್ಲೋಕಃ ನ ವೈ ತತ್ರ ನ ನಿಮ್ಲೋಚ ।
(Setting) ನೋದಿಯಾಮ (nor rising) ಕದಾಚನ ।
ದೇವಸ್ತೇನಾಹಂ ಸತ್ಯೇನ ಮಾ ವಿರಾಧಿಷಿ ಬ್ರಹ್ಮಣೈತಿ ।
೩-೧೧-೨ ಮಂತ್ರ

"ನಽವಾ ಅಸ್ಮೈ ಉದೇತಿ ನ ನಿಮ್ಲೋಚತಿ ಸಕೃದ್ದಿವಾ ಹೈ
ವಾಸ್ಮೈ ಭವತಿ ಯ ಏತಾಮೇವಂ ಬಹ್ಮೋಪನಿಷದಂ ವೇದ"
—೩-೧೧-೩ ಮಂತ್ರ

ಈ ಋಷಿಯು ಉತ್ತರಾಯಣದಲ್ಲಿ ಬ್ರಹ್ಮಲೋಕಕ್ಕೆ ಹೋಗಿ, ಪುನಃ ಉತ್ತರಾಯಣದಲ್ಲಿಯೇ ಅಲ್ಲಿಂದ ತಿರುಗಿ ಬಂದನೆಂಬುವದು ಹೆಚ್ಚು ಸಂಭವನೀಯವು. ಸುತರಾಂ ಆಗ ಅವನು ಕೇವಲ ಹಗಲನ್ನೇ ನೋಡಿಬಂದಿದ್ದನು. ಇರದಿದ್ದರೆ ಅವನಿಗಿಂತ ಮೊದಲು ಇದ್ದ ಮನುವು ತನ್ನ ಸ್ಮೃತಿಯಲ್ಲಿ, ಉತ್ತರಾಯಣದಲ್ಲಿ ದೇವತೆಗಳ ಹಗಲು ಹಾಗೂ ದಕ್ಷಿಣಾಯನದಲ್ಲಿ ರಾತ್ರಿಯೆಂದು ಏಕೆ ಬರೆಯುತ್ತಿದ್ದನು.? ಮತ್ತು ರಾಮಾಯಣವಾದರೂ ಮೊದಲು ಹೇಳಿದಂತೆ ಏಕೆ ಬರೆಯುತ್ತಿತ್ತು.?

ಅತ ಏವ ಕಂಡುಬರುವದೇನಂದರೆ- ಬ್ರಹ್ಮಲೋಕವು ಇದೇ ಉತ್ತರ ಸೈಬೇರಿಯಾ ಅಥವಾ ಉತ್ತರ ಸಮುದ್ರ ತೀರದಲ್ಲಿಯು ಉತ್ತರ ಮೇರು ದೇಶದಲ್ಲಿಯೇ ಇತ್ತು; ಈ ವಿಷಯುದಲ್ಲಿ ಯಾವ ಸಂದೇಹವೂ ಉಳಿಯಲು ಶಕ್ಯವಿಲ್ಲ. ಇಲಾವೃತ ವರ್ಷದಲ್ಲಿಯೇ ಬ್ರಹ್ಮನು ಜನಿಸಿ, ಅಲ್ಲಿಯೇ ವಾಸಮಾಡುತ್ತಿದ್ದನೆಂದು ಕೆಲ ಕೆಲವರು ಸಿದ್ಧಾಂತ ಶಿರೋಮಣಿ ಹಾಗು ಕೆಲಪುರಾಣಗಳ ಆಧಾರದಿಂದ ಜಿಜ್ಞಾಸೆ ಮಾಡಬಹುದು. ಇದಕ್ಕೆ ಉತ್ತರಃ- ಮೊದಲು ಬ್ರಹ್ಮಲೋಕವು ಇಲಾವೃತ ವರ್ಷದಲ್ಲಿಯೇ ಇತ್ತು. ಕಶ್ಯಪಪುತ್ರ ಬ್ರಹ್ಮಪ್ರಜಾಪತಿಯು ಮೊದಲು ಈ ಇಲಾವೃತ ವರ್ಷದಲ್ಲಿಯೇ ಇರುತ್ತಿದ್ದನು. ಆಮೇಲೆ ಮುಲತಾಯಿಯ ಮಗನಾದ ದಾನವ ರಾಜನಿಂದ ಕಷ್ಟಕ್ಕೆ ಗುರಿಯಾಗಿ ಎರಡನೇ ಕಡೆಗೆ ಹೊರಟುಹೋದನು. ಪೂಜ್ಯಸ್ವಾಮಿ ಶ್ರೀ ಯೋಗಾನಂದ ಸರಸ್ವತಿಗಳವರು ಹೇಳುವದೇನಂದರೆ- ಈ ಘಟನೆಯ ತರುವಾಯ ಬ್ರಹ್ಮನು ಪೂರ್ವ ದ್ವೀಪಕಲ್ಪಕ್ಕೆ ಹೋದನು. ಹಾಗು ಅಲ್ಲಿ ಒಂದು ರಾಜ್ಯವನ್ನು ಸ್ಥಾಪಿಸಿದನು. ಇದರ ಹೆಸರು ಬ್ರಹ್ಮದೇಶವೆಂದಾಯಿತು. ಕೆಲವು ದಿವಸಗಳ ತರುವಾಯ ಚಿಕ್ಕ ಸಹೋದರನಾದ ವಾಮನ-ವಿಷ್ಣುವಿನ ಜಾಣತನದಿಂದ ದಾನವರು ರಾಜ್ಯವನ್ನು ಕಳಕೊಳ್ಳಲು, ಬ್ರಹ್ಮನು ಪುನಃ ತನ್ನ ಮೊದಲಿನ ಆವಾಸಕ್ಕೆ ಅರ್ಥಾತ್ ಇಲಾವೃತ ವರ್ಷಕ್ಕೆ ಹೊರಟು ಹೋದನು. ಕೆಲಕಾಲದ ತರುವಾಯ ಬ್ರಹ್ಮನು ಚಿಕ್ಕ ಸಹೋದರನಾದ ಇಂದ್ರನಿಗೆ ರಾಜ್ಯವನ್ನು ಒಪ್ಪಿಸಿ, ಉತ್ತರ ಕುರುದೇಶದಲ್ಲಿ ಹೋಗಿ ನೂತನ ರಾಜ್ಯವನ್ನು ಸ್ಥಾಪನೆ ಮಾಡಿದನು. ಹಾಗು ಅಲ್ಲಿ ಸ್ಥಿರವಾಗಿ ವಾಸಮಾಡಿದನು. ಇದೇ ತೃತೀಯ ಬ್ರಹ್ಮಲೋಕವು. ರಾಮಾಯಣ, ಮಹಾಭಾರತ, ಛಾಂದೋಗ್ಯ ಉಪನಿಷತ್ತು ಮನು ಸ್ಮೃತಿಗಳಲ್ಲಿ ಈ ಬ್ರಹ್ಮಲೋಕದ ವಿಷಯುವಾಗಿಯೇ ಹೇಳಲ್ಪಟ್ಟದೆ.

"ಏವಂ ತಸ್ಮೈವರಂ ದತ್ವಾ ಸರ್ವಲೋಕ ಪಿತಾಮಹಃ।
ಇಂದ್ರೇ ತ್ರೈಲೋಕ್ಯಮಾಧಾಯ ಬ್ರಹ್ಮಲೋಕಂ ಗತಃ ಪ್ರಭುಃ।
—ಮಹಾಭಾರತ— ಆದಿಪರ್ವ.

ಈಗ ಬ್ರಹ್ಮಲೋಕದ ಹೊರತು ಬೇರೆ ಬೇರೆ ಲೋಕಗಳ ವಿಷಯುವು ಸಂಕ್ಷೇಪದಿಂದ ವರ್ಣನೆ ಮಾಡಲ್ಪಡುವದು.

ಹಿಮಾಲಯದ ದಕ್ಷಿಣಕ್ಕೆ ಹಬ್ಬಿದ ಭೂಭಾಗವು ಭಾರತ ವರ್ಷವು. ಪೂರ್ವ ಕಾಲದಲ್ಲಿ ಅಲ್ಲಿಯ ವೇನರಾಜನ ಪುತ್ರನಾದ ಪೃಥುವಿನ ನಾಮಾನುಸಾರವಾಗಿ ಅದಕ್ಕೆ ಪೃಥಿವೀ ಎಂಬ ಹೆಸರು ಕೊಡಲ್ಪಟ್ಟಿತ್ತು. ಮಹಾಭಾರತದಲ್ಲಿ ಭಾರತ ವರ್ಷಕ್ಕೆ ದಕ್ಷಿಣ ಕುರುದೇಶವೆಂದೂ ಹೆಸರು ಇರುವದು. ಆರ್ಯರು ಬರುವ ಮೊದಲು ಇಲ್ಲಿ ಅಸಭ್ಯ ಜಾತಿಗಳು ವಾಸವಾಡುತ್ತಿದ್ದವು. ಆರ್ಯರಲ್ಲಿ ಮೊದಲು ಮನುವೇ ಭಾರತದಲ್ಲಿ ರಾಜ್ಯವನ್ನು ಸ್ಥಾಪನೆ ಮಾಡಿದನು. ಈ ಮನುವು ವಿವಸ್ವಾನನ ಮಗನು; ಸುತರಾಂ ಬ್ರಹ್ಮ, ವಿಷ್ಣು, ಇಂದ್ರ (ಶಕ್ರ) ಮೊದಲಾದವರ ಸಹೋದರನ ಮಗನು. ಮನುವು ಕಕ್ಕನಾದ ವಿಷ್ಣುವಿನ ಸಹಾಯದಿಂದ ಅಯೋಧ್ಯೆಯಲ್ಲಿ ರಾಜಧಾನಿಯನ್ನು ಸ್ಥಾಪಿಸಿದನು.

''ಅಯೋಧ್ಯಾನಾಮ ನಗರೀ ತತ್ರಾಸೀತ್ ಲೋಕವಿಶ್ರುತಃ।
ಮನುನಾ ಮಾನವೇಂದ್ರೇಣ ಯಾ ಪುರೀ ನಿರ್ಮಿತಾ ಸ್ವಯಮ್॥
— ರಾಮಾಯಣ — ಬಾಲಕಾಂಡ

ಮನುವು ವಿವಸ್ವಾನನ ಮಗನೆಂದೂ, ಸೂರ್ಯವಂಶೀಯನೆಂದೂ ಪ್ರಖ್ಯಾತನಾಗಿರುತ್ತಾನೆ. ಮತ್ತು ಸ್ವರ್ಗದಿಂದ ಬಂದ ದೇವತೆಗಳಿಂದ ಈ ಅಯೋಧ್ಯಾಪುರಿಯು ನಿರ್ಮಿತವಾಗಿತ್ತೆಂದು ವೇದದಲ್ಲಿ ಅದಕ್ಕೆ ದೇವಪುರಿಯೆಂದು ಹೇಳಲ್ಪಟ್ಟಿದೆ.

''ದೇವಾನಾಂ ಪುರಯೋಧ್ಯಾ"- ಅಥರ್ವವೇದ.

—ಮಹಾನುಭಾವ ರಾಮಚಂದ್ರನು ಈ ಸೂರ್ಯವಂಶದಲ್ಲಿ ಜನಿಸಿದವನು. ಸೂರ್ಯವಂಶದ ಪತನದ ತರುವಾಯ ಭಾರತ ವರ್ಷದಲ್ಲಿ ಚಂದ್ರವಂಶೀಯ ರಾಜರು ಪ್ರಬಲರಾದರು. ಅವರು ಸಹ ಪ್ರಬಲ ಪ್ರತಾಪದಿಂದ ಹಲವು ಶತಮಾನಗಳ ವರೆಗೆ ದಿಲ್ಲಿಯ ಹತ್ತರ ರಾಜ್ಯತ್ವವನ್ನು ಮಾಡಿದರು. ದುಷ್ಯಂತ, ನಹುಷ, ಯುಧಿಷ್ಠಿರ ಮೊದಲಾದವರು ಈ ಚಂದ್ರವಂಶೀಯರು. ಈಗ ಸಹ ಭರತಖಂಡದ ಹಲವು ರಾಜರು ಈ ಸೂರ್ಯ ಮತ್ತು ಚಂದ್ರವಂಶೀಯರಾಗಿರುವರು.

ಭಾರತವರ್ಷದ ಉತ್ತರದಲ್ಲಿ ಹಿಮಾಲಯ ಪರ್ವತವು. ಈ ಹಿಮಾಲಯದ ಉತ್ತರಾಂಶದಲ್ಲಿ ಕೈಲಾಸಪರ್ವತವು. ಕೈಲಾಸಪರ್ವತ ಹಾಗು

ಅದರ ಪಾರ್ಶ್ವವರ್ತಿ ಸ್ಥಾನಗಳು ಕಿಂಪುರುಷ ವರ್ಷವೆಂದು ಹೇಳಲ್ಪಡುತ್ತಿತ್ತು. ಮಹಾಭಾರತದ ಸಭಾ ಪರ್ವದಲ್ಲಿ- ಪರಮಯೋಗೀ ಶಿವನು ಈ ರಾಜ್ಯದ ನಿಜವಾದ ಒಡೆಯನಿದ್ದನು. ಆದರೆ ಅವನ ಕೋಶಾಧ್ಯಕ್ಷನಾದ ಕುಬೇರನ ಕೈಯಲ್ಲಿಯೇ ರಾಜ್ಯರಕ್ಷಣೆಯ ಭಾರವು ಇರುತ್ತಿತ್ತು. ಈ ಸಭಾಪರ್ವದಲ್ಲಿಯೇ ಅರ್ಜುನ ದಿಗ್ವಿಜಯಾಧ್ಯಾಯದಲ್ಲಿ, ಅರ್ಜುನನು ಉತ್ತರ ದಿಕ್ಕನ್ನು ಜಯಿಸಲಿಕ್ಕೆ ಹೋಗಿ ಹಿಮಾಲಯ ಪರ್ವತವನ್ನು ದಾಟಿ ಶ್ವೇತಪರ್ವತಕ್ಕೆ ಹೋದನು. ಕೈಲಾಸಪರ್ವತವು ಯಾವಾಗಲೂ ಹಿಮದಿಂದ ಮುಚ್ಚಲ್ಪಟ್ಟದ್ದರಿಂದ ಇದಕ್ಕೇ ಶ್ವೇತಪರ್ವತವೆಂದು ಹೆಸರುಂಟಾಯಿತು. ಅರ್ಜುನನು ಶ್ವೇತಪರ್ವತಕ್ಕೆ ಹೊಂದಿ ಇದ್ದ ಉತ್ತರ ಭೂಪ್ರದೇಶವನ್ನು ದ್ರುಮಪುತ್ರ (ಕುಬೇರನ ಮಗ)ನಿಂದ ಆಳಲ್ಪಡುವ ಕಿಂಪುರುಷಾವಾಸವನ್ನು ಆಕ್ರಮಣಮಾಡಿ ಜಯಿಸಿದನು. ಮತ್ತು ಅವನಿಂದ ಕಪ್ಪವನ್ನು ತೆಗೆದುಕೊಂಡನು. ಕಿಂಪುರುಷ ವರ್ಷವು, ಮಾನಸ ಸರೋವರದ ಹಾಗು ಅದಕ್ಕೆ ಹೊಂದಿದ ಭೂಭಾಗದವರೆಗೆ ವಿಸ್ತಾರವಾಗಿತ್ತು. ಈ ವಿಷಯವಾಗಿ ರಾಮಾಯಣದಲ್ಲಿ ಸ್ಪಷ್ಟವಾಗಿಯೇ ಬರೆಯಲ್ಪಟ್ಟಿದೆ.

"ಕೈಲಾಸಂ ಪಾಂಡುರಂ ಪ್ರಾಪ್ಯ ಹೃಷ್ಟಾ ಯೂಯಂ ಭವಿಷ್ಯಥ।
ತತ್ರ ಪಾಂಡುರ ಮೇಘಾಭಂ ಜಾಂಬುನದ ಪರಿಷ್ಕೃತಮ್ ।
ಕುಬೇರ ಭವನಂ ರಮ್ಯಂ ನಿರ್ಮಿತಂ ವಿಶ್ವಕರ್ಮಣಾ ॥
ವಿಶಾಲಾ ನಲಿನೀಯತ್ರ ಪ್ರಭೂತ ಕಮಲೋತ್ಪಲಾ ।
ಹಂಸಕಾರಂಡವಾಕೀರ್ಣಾ ಅಪ್ಸರಸೋಗಣ ಸೇವಿತಾ ॥
ತತ್ರ ವೈಶ್ರವಣೋ ರಾಜಾ ಸರ್ವಲೋಕ ನಮಸ್ಕೃತಃ ।
ಧನದೋ ರಮತೇ ಶ್ರೀಮಾನ್ ಗುಹ್ಯಕೈಃ ಸಹ ಯಕ್ಷರಾಟ್ ॥"

— ಕಿಷ್ಕಿಂಧಾಕಾಂಡ-೩೪ನೆಯ ಸರ್ಗ.

—ಅರ್ಥಾತ್ ಸುಗ್ರೀವನು ಹೇಳುತ್ತಾನೆ— ನೀವು ಶ್ವೇತವರ್ಣದ ಕೈಲಾಸಪರ್ವತವನ್ನು ನೋಡಿ ಹರ್ಷಿತರಾಗಿರಿ. ಅಲ್ಲಿಯೇ ವಿಶ್ವಕರ್ಮನಿರ್ಮಿತವಾದ ಸ್ವರ್ಣಾಲಂಕೃತವೂ, ಶುಭ್ರವರ್ಣವೂ, ಮೇಘಸದೃಶವೂ ಆದ ಕುಬೇರನ ಸುರಮ್ಯವಾದ ಭುವನವನ್ನು ನೋಡುವಿರಿ. ಅದರ ಹತ್ತರವೇ ಪದ್ಮಪರಿಪೂರ್ಣವೂ ವಿಶಾಲವೂ ಆದ ಒಂದು ಸರೋವರ

ವನ್ನು ನೋಡುವಿರಿ. ಆ ಸರೋವರದಲ್ಲಿ ರಾಜಹಂಸಗಳೂ, ಅಪ್ಸರರೂ ಆಟವಾಡುತ್ತಿರುವರು. ಅಲ್ಲಿಯೇ ಯಕ್ಷರಾಜನಾದ ಕುಬೇರನು ಯಕ್ಷರಿಂದ ಪರಿವೃತನಾಗಿರುತ್ತಾನೆ. ಯಾವ ಸರೋವರದ ಸಂಗತಿಯು ಇಲ್ಲಿ ಹೇಳಲ್ಪಟ್ಟಿರುವದೆಂಬದನ್ನು ಎಲ್ಲರೂ ಬಲ್ಲರು. ಕೈಲಾಸ ಪರ್ವತದ ಉತ್ತರಕ್ಕೆ ಮಾನಸಸರೋವರವು ಇರುತ್ತದೆ. ಕವಿ ಕಾಲಿದಾಸ ಮೊದಲಾದವರು ಮಾನಸಸರೋವರದ ರಾಜಹಂಸಗಳ ಸಂಗತಿಯನ್ನು ಬರೆದಿರುವರು. ಸುತರಾಂ ಕುಬೇರನ ಪ್ರಾಸಾದದ ಹತ್ತರವೇ ಮಾನಸ ಸರೋವರವು ಇತ್ತು ಮತ್ತು ಕುಬೇರನ ಪ್ರಾಸಾದವು ಈ ಮಾನಸದ ದಕ್ಷಿಣಕ್ಕೆ ಇತ್ತೆಂಬುವದು ಸ್ಪಷ್ಟವಾಗಿಯೇ ತಿಳಿಯುವದು.

ಈ ಕುಬೇರನ ರಾಜ್ಯ (ಕಿಂಪುರುಷವರ್ಷ)ದ ಉತ್ತರಕ್ಕೆ ಯಮ ಹಾಗು ಇಂದ್ರರ ರಾಜ್ಯವಿತ್ತು.

ವಿಷ್ಣು ಪುರಾಣದಲ್ಲಿಃ—

"ಮಾನಸೋತ್ತರ ಶೈಲೇತು ಪರ್ವತೋ ವಾಸವೀ ಪುರೀ ।
ದಕ್ಷಿಣೇನ ಯಮಸ್ಯಾನ್ಯಾ ಪ್ರತೀಚ್ಯಾಂ ವರುಣಸ್ಯ ಚ ॥"

ಅರ್ಥಾತ್ ಮಾನಸ ಸರೋವರದ ಉತ್ತರದ ಪರ್ವತದಲ್ಲಿ ಹಾಗು ಅದರ ಪೂರ್ವಕ್ಕೆ ವಾಸವೀಪುರಿ, ಅಥವಾ ಇಂದ್ರನ ಅರಮನೆ ವೈಜಯನ್ತೀಧಾಮವು; ಹಾಗು ಅದೇ ಪರ್ವತದ ದಕ್ಷಿಣದಲ್ಲಿ (ಅರ್ಥಾತ್ ಮಾನಸ ಸರೋವರದ ಉತ್ತರದಲ್ಲಿ) ಯಮನ ಪಟ್ಟಣವು. ಮತ್ತು ಪಶ್ಚಿಮಕ್ಕೆ ವರುಣನ ಆಲಯವು ಇದ್ದವು. ಅತ ಏವ ವಿಷ್ಣು ಪುರಾಣದ ಮತದಂತೆ ಇದೇ ಪ್ರತೀಯಮಾನವಾಗುವದು— ಮಾನಸದ ಉತ್ತರದಲ್ಲಿದ್ದ ನಿಷಧ ಪರ್ವತದ ಪೂರ್ವಕ್ಕೆ ಈಗಿನ ಮಂಗೋಲಿಯಾದಲ್ಲಿ ಇಂದ್ರನ ಅರಮನೆಯು ಇತ್ತು. ಇಂದ್ರನ ಅರಮನೆಯ ದಕ್ಷಿಣಕ್ಕೆ ಅರ್ಥಾತ್ ಸಿಜ ತಿಬೇತ ಅಥವಾ ವೈದಿಕ ಮಾಶಕ ದೇಶದಲ್ಲಿ ಯಮಪುರಿಯು ಇತ್ತು. ಇದರ ಪಶ್ಚಿಮಕ್ಕೆ ಆರಲಹ್ರದ (ವೈದಿಕ "ಆರ" ಹ್ರದ) ಹಾಗು ಕಾಸ್ಪಿಯನ ಸಮುದ್ರದ ಕಡೆಗೆ ವರುಣನ ಪಟ್ಟಣವು ಇತ್ತು.

ಈಗ ಈ ಇಂದ್ರಪುರಿ ಅಥವಾ ವೈಜಯನ್ತೀಧಾಮದ ಸಂಬಂಧವಾಗಿ ಹೇಳುವದು ಆವಶ್ಯಕವಾಗಿದೆ. ಇಂದ್ರನು ಕಸ್ಯಪಮುನಿಯ

ಎಲ್ಲರಕ್ಕೂ ಚಿಕ್ಕ ಮಗನು; ಸುತರಾಂ ಅವನು ಬ್ರಹ್ಮ, ವಿಷ್ಣು, ವಿವಸ್ವಾನ ಮೊದಲಾದವರ ಚಿಕ್ಕ ಸಹೋದರನು. ಅವನ ರಾಜ್ಯದ ಹೆಸರು ಸ್ವರ್ಲೋಕವೆಂದಿತ್ತು. ವೈದಿಕ ಯುಗದಲ್ಲಿ ಇದು ಇಲಾವೃತ ವೆಂದು ಕರೆಯಲ್ಪಡುತ್ತಿತ್ತು. ಋಗ್ವೇದದಲ್ಲಿ--"ಇಲಂ ಪತಿರ್ವ್ಮಘವಾ" ಅರ್ಥಾತ್ 'ಮಘವಾ' (ಇಂದ್ರನ ಒಂದು ಹೆಸರು) ಇಲ ಅಥವಾ ಇಲಾಭೂಮಿಯ ರಾಜನು. ಈ ಇಲಾವೃತ ವರ್ಷದ ಮತ್ತೊಂದು ಹೆಸರು ಮಂಗದೇಶ; ಇದರಿಂದಲೇ ಈಗಿನ ಮಂಗೋಲಿಯಾ ನಾಮದ ಉತ್ಪತ್ತಿಯಾಗಿದೆ. ವೈದಿಕ ಯುಗದಲ್ಲಿ ಮಂಗೋಲಿಯಾ ಬ್ರಾಹ್ಮಣ ರಿಗೆ ಪ್ರಧಾನ ಸ್ಥಾನವಿತ್ತು. ಮಹಾಭಾರತದಲ್ಲಿ—

"ಮಂಗಾ ಬ್ರಾಹ್ಮಣ ಭೂಯಿಷ್ಠಾಃ"

--ಭೀಷ್ಮಪರ್ವ - ೧೧ನೆಯ ಅಧ್ಯಾಯ.

ಈ ಮಂಗೋಲಿಯಾ ಅಥವಾ ಇಲಾವೃತ ವರ್ಷದಲ್ಲಿ ಯಕ್ಷ, ಗಂಧರ್ವ, ಅಪ್ಸರರು ವಾಸಮಾಡುತ್ತಾರೆಂದ ಸಿದ್ಧಾಂತಶಿರೋಮಣಿಯ ಆಧಾರದಿಂದ ಮೊದಲೇ ಹೇಳಿದೆ. ಇಂದ್ರನ ಸಭೆಯಲ್ಲಿ ದಿವ್ಯಸುಂದ ರಿಯರಾದ ಅಪ್ಸರೆಯರು ಯಾವಾಗಲೂ ನೃತ್ಯ, ಗೀತ, ವಾದ್ಯವಾದನ ಗಳಲ್ಲಿ ನಿರತರಾಗುತ್ತಿದ್ದರು. ವೈದಿಕಯುಗದಲ್ಲಿ ಮುನಿ-ಋಷಿಗಳು ಹಾಗು ಕ್ಷತ್ರಿಯರಾಜರು ಇಂದ್ರಪುರಿಯಲ್ಲಿ ಬರಹೋಗುವದನ್ನು ಮಾಡು ತ್ತಿದ್ದರು. ಭರದ್ವಾಜ ಮಹರ್ಷಿಯು ಆಯುರ್ವೇದವನ್ನ ಕಲಿಯುವ ದಕ್ಕೋಸುಗ, ಮುನಿಗಳಿಂದ ಪ್ರೇರಿತನಾಗಿ ಇಂದ್ರಪುರಿಗೆ ಹೋಗಿದ್ದನು ಎಂದು ಚರಕಸಂಹಿತೆಯಲ್ಲಿ ಬರೆಯಲ್ಪಟ್ಟಿದೆ. ಭಾರತ ವರ್ಷದಿಂದ ಹಲವು ವ್ಯಾಪಾರಿಗಳು ವಿಶೇಷ ಲಾಭದ ಆಶೆಯಿಂದ ವ್ಯಾಪಾರದ ಸರ ಕುಗಳನ್ನು ತೆಗೆದುಕೊಂಡು ಇಂದ್ರಾಲಯ ಮೊದಲಾದವುಗಳಲ್ಲಿ ವ್ಯಾಪಾರ ಮಾಡಲು ಹೋಗುತ್ತಿದ್ದರು. ಅಥರ್ವವೇದದಲ್ಲಿಃ— ಒಬ್ಬ ಭಾರತೀಯ ವ್ಯಾಪಾರಿಯು ತನ್ನ ಮಾರಾಟದ ಸರಕುಗಳನ್ನು ಮಾಶಕ ಹಾಗು ಇಲಾವೃತ ವರ್ಷಗಳಲ್ಲಿ ನಿರಾಪದದಿಂದ ತಕ್ಕೊಂಡು ಹೋಗಲು ಇಂದ್ರನ ಸಹಾಯವನ್ನು ಬೇಡಿಕೊಂಡಿದ್ದಾನೆ— "ಎಲೈ ಇಂದ್ರನೇ ನೀನು ಮಹಾನ್ ವ್ಯಕ್ತಿಯು. ನೀನು ದಾರಿಯಲ್ಲಿಯ ಎಲ್ಲ ವೈರಿ ಗಳ ಹಾಗು ಹಿಂಸ್ರ ಜಂತುಗಳ ಕೈಯಿಂದ ರಕ್ಷಣೆ ಮಾಡಿ ನಮ್ಮ ವಾಣಿಜ್ಯಕ್ಕೆ ಅನುಕೂಲವನ್ನು ಮಾಡಿಕೊಡು."

"ಇಂದ್ರಮಹಂ ವಣಿಜಂ ಚೋದಯಾಮಿ । ಸೂದನಂ ಆರಾತಿಂ ಪರಿಪಂಥಿನಂ ಮೃಗಮ್ । ಸ ಈಶಾನೋ ಧನದಾ ಅಸ್ತು ಮಹ್ಯಮ್ ।"

—ಅಥರ್ವವೇದ.

ದಶರಥಮಹಾರಾಜನು ದೇವಾಸುರ ಯುದ್ಧದಲ್ಲಿ ಇಂದ್ರನಿಗೆ ಸಹಾಯವನ್ನು ಮಾಡುವದಕ್ಕೋಸುಗ ಸ್ವರ್ಗಕ್ಕೆ ಹೋಗಿದ್ದನೆಂದು ರಾಮಾಯಣದಲ್ಲಿ ಹೇಳಿದೆ. ಅರ್ಜುನನು ವ್ಯಾಸಮುನಿಯ ಸಲಹೆಯಂತೆ ದಿವ್ಯಾಸ್ತ್ರಗಳನ್ನು ಕಲಿಯುವದಕ್ಕೋಸುಗ ಇಂದ್ರಾಲಯಕ್ಕೆ ಹೋಗಿದ್ದನು; ಹಾಗು ಅಲ್ಲಿ ಐದು ವರ್ಷಗಳ ಕಾಲ ವಾಸಮಾಡಿ ಅನೇಕ ದಿವ್ಯಾಸ್ತ್ರಗಳನ್ನು ಕಲಿತು ಭಾರತಕ್ಕೆ ತಿರುಗಿಬಂದನು; ಎಂದು ಮಹಾಭಾರತದಲ್ಲಿ ಹೇಳಿದೆ. ಇಂದ್ರನಿಗೆ ದೇವರಾಜನೆಂದು ಹೆಸರು ಇತ್ತು. ಇವನು ಕ್ಷಮತ್ವದಲ್ಲಿ ಹಾಗು ವಿದ್ವತ್ತೆಯಲ್ಲಿ ಬೇರೆಯವರಿಗಿಂತ ಶ್ರೇಷ್ಠನಿದ್ದನೆಂದೇ ಸ್ವರ್ಗ ಭೂಮಿಯ ರಾಜನಾಗಿದ್ದನು. 'ಇಂದ್ರ' ಎಂಬುವದು ವ್ಯಕ್ತಿವಿಶೇಷದ ಹೆಸರು ಅಲ್ಲ, ಇದು ಒಂದು ಉಪಾಧಿಯು. ಎಲ್ಲರಿಗಿಂತ ಶ್ರೇಷ್ಠನಾದ ವ್ಯಕ್ತಿಗೆ ಈ ಉಪಾಧಿಯು ಕೊಡಲ್ಪಡುತ್ತಿತ್ತು. ಪುರಾಣಗಳಲ್ಲಿಃ— ಇಂದ್ರನು ದೇವಸೇನಾಪತಿಯಾಗಿದ್ದನು. ಮೊದಲು ಇಂದ್ರನ ಹೆಸರು 'ಶಕ್ರ'ನೆಂದು ಇತ್ತು. 'ಇಂದ್ರ' ಇದು ಒಂದು ಉಪಾಧಿ ವಿಶೇಷನೆಂದು ಚಂದ್ರವಂಶೀಯ ನಹುಷರಾಜನ ಇಂದ್ರತ್ವ ಪ್ರಾಪ್ತಿಯ ಘಟನೆಯಿಂದಲೇ ಕಂಡುಬರುವದು. ಸಗರ ಚಕ್ರವರ್ತಿಯೂ ಅಶ್ವಮೇಧ ಯಜ್ಞಗಳನ್ನು ಮಾಡಿ ಇಂದ್ರನಾಗುವ ಪ್ರಯತ್ನವನ್ನು ಮಾಡಿದ್ದನು. ಸರ್ವ ಶ್ರೇಷ್ಠ ರಾಜನೇ ಅಶ್ವಮೇಧ ಯಜ್ಞವನ್ನು ಮಾಡಲು ಸಮರ್ಥನು. ಅಂತೇ ಸರ್ವಶ್ರೇಷ್ಠನೇ ಇಂದ್ರನಾಗುತ್ತಿದ್ದನು.

ಇನ್ನುಮುಂದೆ ಯಮಪುರಿಯ ಮಾತು— ಯಮನು ಕಸ್ಯಪ ಮುನಿಯ ಪೌತ್ರನು ಹಾಗು ವಿವಸ್ವಾನನ ಮಗನು. ವಿವಸ್ವಾನ ಅಥವಾ ಸೂರ್ಯನಿಗೆ ಯಮ, ಶನಿ, ಮನುಗಳೆಂಬ ಮೂವರು ಮಕ್ಕಳ ಹೆಸರು ದೊರೆಯುವದು. ಯಮನು ಮನುವಿನ ಮಲತಾಯಿಯ ಮಗನು. ಅಂದಮೇಲೆ ಮನುಷ್ಯನು. ಮಾಶಕದೇಶ ಅಥವಾ ಈಗಿನ ತಿಬೇತ ದೇಶವೇ ಯಮನ ರಾಜ್ಯವೆಂದು ಮೊದಲೇ ಹೇಳಿ

ದ್ದೇವೆ. ದೇವತೆಗಳ ಮಲತಾಯಿಯ ಮಕ್ಕಳಾದ ಅಸುರರು ಮೊದಲು ಅಲ್ಲಿ ವಾಸಮಾಡುತ್ತಿದ್ದರು; ಕೆಲಕಾಲದ ಮೇಲೆ ಅಸುರರು ದೇವತೆಗಳಿಗೆ ಸೋತು ತಮ್ಮ ರಾಜ್ಯವನ್ನು ಬಿಟ್ಟು ಬೇರೆ ಕಡೆಗೆ ಹೊರಟು ಹೋದರೆಂಬುವದು ವೇದದಿಂದ ತಿಳಿಯುತ್ತದೆ. ಆ ಕಾಲದಲ್ಲಿ ಈ ಪ್ರದೇಶವು ವಿಶೇಷವಾದ ಬಡಬಾನಲದಿಂದ ಕೂಡಿಕೊಂಡಿತ್ತು; ಇದು ಬಹಳ ವಿಸ್ತಾರವಾದ ಜವುಳು ಭೂಮಿಯಾಗಿದ್ದು ಅತ್ಯಂತ ಅಸ್ವಾಸ್ಥ್ಯಕರವಿತ್ತು; ಇದಕ್ಕೋಸುಗ ಇದಕ್ಕೆ 'ನರಕ' ವೆಂದು ಹೆಸರು ಕೊಡಲ್ಪಟ್ಟಿತ್ತು. ಭಾಸ್ಕರಾಚಾರ್ಯರು:—

"ವಸನ್ತಿ ಮೇರೌ ಸುರಸಿದ್ಧಸಂಘಾ ಔರ್ವೇಚ
ಸರ್ವೇ ನರಕಾ ಸ ದೈತ್ಯಾಃ"

—ಸಿದ್ಧಾಂತ ಶಿರೋಮಣಿ—ಭುವನಕೋಷಾಧ್ಯಾಯ.

ಔರ್ವ ಅರ್ಥದಲ್ಲಿ ಬಡಬಾನಲ ಕೂಡಿದ ಸ್ಥಾನವನ್ನೇ ತಿಳಿಸುತ್ತದೆ. ಈ ನರಕ ದೇಶವು ಮಾನಸ ಸರೋವರದ ಉತ್ತರ ತೀರದಿಂದಲೇ ಆರಂಭವಾಗಿತ್ತು. ಈಗ ಸಹ ಮಾನಸದ ಉತ್ತರ ತೀರವು ಅತ್ಯಂತ ಅನಾರೋಗ್ಯಕರವಾಗಿರುವದು. ಪ್ರವಾಸಿಗಳು ಈಗ ಸಹ ಪ್ರಾಣಭಯದಿಂದ ಮಾನಸದ ಉತ್ತರ ತೀರದಲ್ಲಿ ಹೋಗುವದಿಲ್ಲ. ತಿಬೇಟಿಯರು ಸಹ ಅಲ್ಲಿ ವಾಸಮಾಡಲು ಸಮರ್ಥರೆಂಬದನ್ನು ಕೇಳಿಲ್ಲ.

ರಾಜ್ಯಶಾಸನಕ್ಕೋಸುಗ ಯಮನು ಈ ನರಕ ಪ್ರದೇಶದಲ್ಲಿ ಒಂದು ಪಟ್ಟಣವನ್ನು ಕಟ್ಟಿಸಿದ್ದನು. ಅದರ ಹೆಸರು ಸಂಯಮನೀಪುರವು. ಇದೇ ನರಕದ ರಾಜಧಾನಿಯು. ಮಾನಸದ ಉತ್ತರಕ್ಕೆ ಸಂಯಮನೀ ಪುರದಲ್ಲಿ ವೈವಸ್ವತ ಯಮನು ವಾಸ ಮಾಡುತ್ತಾನೆಂದು ವಾಯು ಪುರಾಣದಲ್ಲಿ ಹೇಳಿದೆ.

"ದಕ್ಷಿಣೇನ ಪುನರ್ಮೇರೋ ಮಾನಸಸ್ಯೈವ ಮೂರ್ಧನಿ ।
ವೈವಸ್ವತೋ ನಿವಸತಿ ಯಮಃ ಸಂಯಮನೇಪುರೇ ॥"

—ವಾಯು ಪುರಾಣ ೪೫ನೆಯ ಅಧ್ಯಾಯ.

"ಯತ್ರ ರಾಜಾ ವೈವಸ್ವತೋ ಯತ್ರ ಅವರೋಧನಂ ದಿವಃ" ಎಂದು ಋಗ್ವೇದವು ಹೇಳುತ್ತದೆ. ಅತ ಏವ ಯಮನು ತನ್ನ ವಾಸಸ್ಥಾನದ ಹತ್ತರ ಒಂದು ಅವರೋಧವನ್ನು ನಿರ್ಮಾಣ ಮಾಡಿಸಿದ್ದನು. ದುಷ್ಟ

ರನ್ನು ಶಿಕ್ಷಿಸುವದರ ಸಲುವಾಗಿಯೇ ಈ ಕಾರಾಗೃಹವು ನಿರ್ಮಿತವಾಗಿತ್ತು ಎಂದು ಋಗ್ವೇದದ ಮತವು. ವೇದದಲ್ಲಿ ಕಂಡುಬರುವದೇನಂದರೆ- ಯಮನು ಬಹಳ ದೊಡ್ಡ ಅಪರಾಧದ ಅಪರಾಧಿಗಳಿಗೆ ಪ್ರಾಣದಂಡದ ಆಜ್ಞೆಯನ್ನು ಕೊಡುತ್ತಿದ್ದನು. ಅವನು ಅತ್ಯಂತ ನ್ಯಾಯವಂತನಿದ್ದನು. ಅನ್ಯಾಯ ಅಥವಾ ಅಧರ್ಮದ ಪಕ್ಷಪಾತಿಯು ಎಂದೂ ಇದ್ದಿಲ್ಲ. ಇದ ಕ್ಕೋಸುಗವೇ ಅವನು ಧರ್ಮಾವತಾರ ಅಥವಾ ಧರ್ಮನೆಂದೂ ಕರೆಯ ಲ್ಪಡುತ್ತಾನೆ. ವೈವಸ್ವತ ಯಮನು ಗುರುತರ ಅಪರಾಧಿಗಳಿಗೆ ಪ್ರಾಣ ದಂಡದ ಆಜ್ಞೆಯನ್ನು ಕೊಡುತ್ತಿದ್ದನೆಂದು ವೇದದಲ್ಲಿ ಕೆಲಕೆಲವು ಸ್ಥಳ ಗಳಲ್ಲಿ "ಮೃತ್ಯು" ಎಂಬ ಹೆಸರಿನಿಂದಲೂ ಕರೆಯಲ್ಪಡುತ್ತಾನೆ. ಸ್ವರ್ಗ ರಾಜ್ಯದ ಎಲ್ಲ ಜನರ ವಿಚಾರವೂ ಅವನ ತತ್ವಾವಧಾನದಲ್ಲಿಯೇ ಆಗುತ್ತಿತ್ತೆಂಬುವದು ಹೆಚ್ಚು ಸಂಭವನೀಯವು. ಅವನು ಚರರು (ಈಗಿನ ಪೋಲೀಸ, ಸೀ-ಆಯ್. ಡಿ. ಮೊದಲಾದವರು) ಅಪರಾಧಿಗಳ ಶೋಧವನ್ನು ಮಾಡಿ, ಅವರನ್ನು ಹಿಡಿದು ಯಮನ ಹತ್ತರ ತಕ್ಕೊಂಡು ಬರುತ್ತಿದ್ದರು. ಅದೇ ಸ್ವರ್ಗದ ವರಿಷ್ಠಕೋರ್ಟು (High—Court). ಅವನೇ ಮುಖ್ಯ ನ್ಯಾಯಾಧೀಶ (Chief Justice) ನಿದ್ದನು. ಯಮನೇ ಮೃತ್ಯುವಿನ ಕರ್ತನೆಂದೂ, ಅವನು ಈಗ ಸಹ ಬದುಕಿರುವನೆಂದೂ ಪಂಡಿತರು, ಪಾಮರರು ಮೊದಲಾದವರು ನಂಬುವರು. ಇದು ಅತ್ಯಂತ ದುಃಖದ ವಿಷಯವೆಂಬಲ್ಲಿ ಸಂದೇಹವಿಲ್ಲ. ವೇದ ಪುರಾಣಾದಿಗಳನ್ನು ಓದಲು ಈ ತಿಳುವಳಿಕೆಯು ಉಳಿಯುವದಿಲ್ಲವೆಂಬದನ್ನು ಹೇಳಲಿಕ್ಕೇ ಬೇಡ. ಯಮನ ಸಂಬಂಧದ ಈ ತಪ್ಪುತಿಳುವಳಿಕೆಯು ಬಹುಕಾಲ ದಿಂದ ನಡೆದುಬಂದಿದೆ. ವೈದಿಕಯುಗದ ಶೇಷಭಾಗದಲ್ಲಿ ಜನರು ಕ್ರಮೇಣ ವೇದವಿದ್ಯಾವಿಹೀನರಾಗಲು, ಅಂದಿನಿಂದಲೇ ಜನಸಾಧಾರ ಣರ ಮನಸ್ಸಿನಲ್ಲಿ ಕ್ರಮ-ಕ್ರಮದಿಂದ ಈ ವಿಶ್ವಾಸವು ಹುಟ್ಟಹತ್ತಿತು. ಯಮನೇ ಮೃತ್ಯುವಿನ ಕರ್ತನೆಂದೂ ಅರ್ಥಾತ್ ಅವನೇ ಸಮಸ್ತ ಮನುಷ್ಯ ಮತ್ತು ಪ್ರಾಣಿಗಳಿಗೆ ಮರಣವನ್ನು ತರುವವನು ಎಂದೂ ಜನರ ತಿಳುವಳಿಕೆಯಾಯಿತು. ವಾಸ್ತವಿಕವಾಗಿ ಈ ಯಮನು ಪ್ರಾಣಿ ಗಳ ಮೃತ್ಯುವಿನ ಕರ್ತನು ಅಲ್ಲ; ಹಾಗು ಮಾನವನ ಮರಣೋ ತ್ತರ ಸ್ಥಿತಿಯು ಅವನಿಗೆ ಗೊತ್ತಿದ್ದಿಲ್ಲ. ಈ ವಿಷಯವು ಯಜುರ್ವೇ ದೀಯ ಕಠೋಪನಿಷತ್ತಿನಲ್ಲಿ "ಯಮ—ನಚಿಕೇತಾ ಸಂವಾದ"ದಲ್ಲಿ

ವಿಶದಭಾವದಿಂದ ವರ್ಣಿತವಾಗಿರುತ್ತದೆ. ನಚಿಕೇತನು ಈ ಯಮನ ಅರಮನೆಗೆ ಹೋಗಿ ಮೂರು ರಾತ್ರಿ ವಾಸಮಾಡಿದ್ದನು. ಆಗ ಯಮನು ಅರಮನೆಯಲ್ಲಿ ಇದ್ದಿಲ್ಲ. ಅನಂತರ ಯಮನು ಅರಮನೆಗೆ ಬಂದು ನಚಿಕೇತನಿಗೆ ನಮಸ್ಕರಿಸಿ—"ನೀವು ದೊಡ್ಡವರು, ನಮ್ಮ ಮನೆಗೆ ಬಂದು ಮೂರು ರಾತ್ರಿ ಅಭುಕ್ತರಾಗಿರುವಿರಿ, ಅದಕ್ಕೋಸುಗ ನಮ್ಮಿಂದ ಮೂರು ವರಗಳನ್ನು ತಕ್ಕೊಳ್ಳಿರಿ" ಎಂದು ಹೇಳಿದನು. ಆಗ ನಚಿಕೇತನು ಮೂರನೆಯ ವರವನ್ನು ಬೇಡಿ ಕುಳಿತನು—'ಭಗವಾನ್ ಕೆಲವರು ಪ್ರೇತವು ಮಾನವರಿಗೆ ಅಗೋಚರವೆಂದೂ, ಕೆಲವರು ಪ್ರೇತವು ಜೀವವೆಂದೂ, ಹಲವರು ಪ್ರೇತವೆಂಬುವದು ಇಲ್ಲವೆಂದೂ ಹೇಳುವರು. ತಾವು ಅನುಗ್ರಹ ಮಾಡಿ ನನಗೆ ಪ್ರೇತ ವಿದ್ಯೆಯನ್ನು ಕಲಿಸತಕ್ಕದ್ದು. ಇದೇ ನನ್ನ ಪ್ರಾರ್ಥನೀಯ ತೃತೀಯ ವರವು" ಈ ಪ್ರಶ್ನಕ್ಕೆ ಉತ್ತರವಾಗಿ ಯಮನು—"ಪೂರ್ವಕಾಲದಲ್ಲಿ ದೇವತೆಗಳೂ (ಅರ್ಥಾತ್ ಬ್ರಹ್ಮ, ವಿಷ್ಣು, ಇಂದ್ರ, ಶಿವ ಮೊದಲಾದವರು) ಪ್ರೇತಪದಾರ್ಥವನ್ನು ತಿಳಿಯಲು ಶಕ್ತರಾಗಲಿಲ್ಲ. ಮುಂದಿನ ಕಾಲದಲ್ಲಿಯೂ ಈ ಪ್ರೇತವಿದ್ಯೆಯು ಅವರಿಗೆ ಸುಜ್ಞೇಯವಾಗುವದಿಲ್ಲ. ನಾನು ಎಷ್ಟರವನು! ಇದು ಅತ್ಯಂತ ಬಿಗಿಯಾದ ಪ್ರಶ್ನವು. ನಚಿಕೇತಾ ನೀನು ಬೇರೆ ವರವನ್ನು ಬೇಡು.

ನಚಿಕೇತಾ ಉವಾಚ।

• "ಯೋಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇಽಸ್ತೀತ್ಯೇಕೆ ನಾಯಮಸ್ತೀತಿ ಚೈಕೇ, ಏತಾ-ವಿದ್ಯಾಮನುಶಿಷ್ಟ ಸ್ತ್ವಯಾಹಂ ವರಾಣಾಮೇಷ ವರಸ್ತೃತೀಯಃ॥,,

—ಕಠೋಪನಿಷತ್ ೨೦ನೆಯ ಮಂತ್ರ

ಯಮ ಉವಾಚ।

ದೇವೈರತ್ರಾಪಿ ವಿಚಿಕಿತ್ಸಿತಂ ಪುರಾ, ನಹಿ ಸುಜ್ಞೇಯ ಮನುರೇಷ ಧರ್ಮಃ। ಅನ್ಯಂ ವರಂ ನಚಿಕೇತೋ ವೃಣೀಷ್ವ......ಇತ್ಯಾದಿ।

—ಕಠೋಪನಿಷತ್ ೨೧ನೆಯ ಮಂತ್ರ

ಮನುಷ್ಯನು ಸತ್ತು ಯಮನ ಮನೆಗೆ ಹೋಗುತ್ತಾನೆ ಎಂಬುವದು ಸಂಪೂರ್ಣವಾಗಿ ಅಸತ್ಯವಾಗಿರುವದೆಂದು ಈ ಘಟನೆಯಿಂದ ತಿಳಿಯುವದು. ಒಂದು ವೇಳೆ ಮನುಷ್ಯನು ಸತ್ತು ಯಮನ ಮನೆಗೆ

ಹೋಗುತ್ತಿದ್ದರೆ ಪ್ರೇತಗಳ ಸಂಗತಿಯನ್ನು ಯಮನು ನಿಶ್ಚಯ ವಾಗಿ ತಿಳಿದಿರುತ್ತಿದ್ದನು. ಮತ್ತು ಈ ಮಾತು ಸತ್ಯವಾಗಿದ್ದರೆ ಬ್ರಹ್ಮ, ವಿಷ್ಣು, ಶಿವ ಮೊದಲಾದ ದೇವತೆಗಳಿಗೂ ಪ್ರೇತಗಳ ಅವಸ್ಥೆಯ ಸಂಬಂಧದಿಂದ ತಿಳುವಳಿಕೆಯು ಇರುತ್ತಿತ್ತು. ಯಮನಿಗೂ ನಚಿಕೇತನನ ಪ್ರಶ್ನಕ್ಕೆ ಉತ್ತರ ಕೊಡಲಿಕ್ಕೆ ಕಷ್ಟವಾಗುತ್ತಿದ್ದಿಲ್ಲ. ಪ್ರೇತಗಳು ನಮ್ಮ ಪಟ್ಟಣದ ನರಕ ಭೂಮಿಯಲ್ಲಿ ಇರುತ್ತವೆಂದು ಸ್ಪಷ್ಟವಾಗಿ ಹೇಳುತ್ತಿದ್ದನು. ಆದರೆ ಯಮನು ಮನುಷ್ಯರ ಮೃತ್ಯುವಿನ ಕರ್ತನಲ್ಲ. ಯಮನು ಅಪರಾಧಿಗಳಿಗೆ ಪ್ರಾಣದಂಡದ ಆಜ್ಞೆಯನ್ನು ಕೊಡುತ್ತಿದ್ದನೆಂದು 'ಯಮನೇ ಮೃತ್ಯುವಿನ ಕರ್ತನು' ಎಂದು ಜನರು ಹೇಳಿರುವರು. ಜನರು ಪಿತೃಭೂಮಿ ಇಲಾವೃತ ವರ್ಷದಿಂದ ಭಾರತದಲ್ಲಿ ಬಂದು ಉಪನಿವೇಶ ಸ್ಥಾಪನೆ ಮಾಡಿದರೆಂದೂ, ಮೃತ್ಯುದಂಡದ ಆಜ್ಞಾಕಾರಿಯಾದ ಯಮನು ಅವರ ವಂಶದವನೇ ಒಬ್ಬ ಮನುಷ್ಯನೆಂದೂ ಅವರೂ ಮರಣಾಧೀನನೆಂದೂ ಜನರು ಮರೆತರು. ಇಂಥವನು ಜನರ ಮೃತ್ಯುವಿನ ಕರ್ತನು ಆಗುವದು ಹೇಗೆ? ಫಲತಃ ಜನರು ಮರವೆಯಿಂದಲೇ ಈ ಅವಾಸ್ತವ ಕಲ್ಪನೆಯ ಸೃಷ್ಟಿಯನ್ನು ಮಾಡಿರುತ್ತಾರೆ. ವೇದದಲ್ಲಿ ಪಿತೃಲೋಕವಾಸಿಗಳಾದ ದೇವತೆಗಳು ಯಮನನ್ನು ರಾಜನನ್ನಾಗಿ ಮಾಡಿದರೆಂದು ಹೇಳಿದೆ—"ತಸ್ಮಾತ್ ಯಮಃ ಪಿತೄಣಾಂ ರಾಜಾ" ಈ ಕಾರಣದಿಂದ ಯಮನು ಪಿತೃಲೋಕದ ರಾಜನಾದನು. ಈ ಪಿತೃಲೋಕವು ಪ್ರೇತಲೋಕವು ಎಂದೂ ಅಲ್ಲ ಮಹರ್ಷಿ ದೇವಲನುಃ— "ನ ಪ್ರೇತಾಃ ಪಿತರಃ ಸ್ಮೃತಾಃ" ಅರ್ಥಾತ್ ಪ್ರೇತಗಣವು ಎಂದೂ ಪಿತೃಪದ ವಾಚ್ಯವಾಗಲು ಶಕ್ಯವಿಲ್ಲ. ಅತ ಏವ ಯಮನೂ ಪ್ರೇತಲೋಕದ ರಾಜನಾಗಲು ಶಕ್ಯವಿಲ್ಲ. ಯಮನು ವೈದಿಕ ಮಾಶಕ ದೇಶದ ನರಕ ಭೂಮಿಯಲ್ಲಿಯೇ ರಾಜ್ಯವಾಳುತ್ತಿದ್ದನು.

ಈ ಯಮಪುರಿಯ ಅವಸ್ಥೆಯ ಸಂಬಂಧದಿಂದ ಮಹಾಭಾರತ ಸಭಾಪರ್ವದಲ್ಲಿ ಬರೆದುದುಃ—"ಆ ಸ್ಥಾನವು ನಾತಿ ಶೀತೋಷ್ಣಮಯ. ಮತ್ತು ಯಮನು ಅದರ ಸಂಯಮನೀಪುರಿಯಲ್ಲಿ ರಾಜರ್ಷಿ ಮತ್ತು ಬ್ರಹ್ಮರ್ಷಿಗಳಿಂದ ಪರಿವೇಷ್ಟಿತನಾಗಿ ವಾಸಮಾಡುತ್ತಾನೆ. ಅಲ್ಲಿ ಹಲವು ಬಗೆಯ ಸುಖಾದ್ಯಗಳು ದೊರೆಯುವವು. ಅಲ್ಲಿ ಗಂಧರ್ವ, ಕಿನ್ನರ, ಅಪ್ಸರರು ಗೀತ-ವಾದ್ಯಾದಿಗಳಿಂದ ಸುಖದಲ್ಲಿ ಕಾಲಕಳೆಯುತ್ತಾರೆ;

ಹಾಗು ಬಹುತರ ಸಾಧು, ಸನ್ಯಾಸಿ ಮತ್ತು ಪುಣ್ಯವಂತರು ಧರ್ಮಾ ವತಾರನಾದ ಯಮನನ್ನು ನೋಡಲಿಕ್ಕೆ ಹೋಗುವರು." ಈ ವರ್ಣ ನೆಯಲ್ಲಿ ಶ್ರಾದ್ಧದ ಮಂತ್ರ "ಯಮದ್ವಾರೇ ಮಹಾಘೋರೇ ತಪ್ತಾ ವೈತರಣೀ ನದೀ" ಇದರ ಉಲ್ಲೇಖವಿಲ್ಲೆಂಬುವದು ಆಶ್ಚರ್ಯಕರವು. ಯಾಕೆ ಇಲ್ಲವೆಂಬದನ್ನು ವಿಚಾರವಂತರಾದ ವಾಚಕರು ತಿಳಿಯ ಬಲ್ಲರು.

(ಮುಂದುವರಿದಿದೆ.)

---

# ಅಷ್ಟಾವರಣದ ಸಾಮಾನ್ಯ ಸ್ವರೂಪ.

(ಲೇಖಕರುಃ — ಅನ್ನದಾನೀಶ್ವರ ವಿರಕ್ತಮಠ ಮು॥ ರಾಣೇಬೆನ್ನೂರು.)

---

ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಇವು ಅಷ್ಟಾವರಣಗಳು. ನೆಲ, ನೀರು, ಬೆಂಕಿ, ಗಾಳಿ, ಮುಗಿಲು, ಸೂರ್ಯ, ಚಂದ್ರ, ಆತ್ಮ ಇವು ಪರಮಾತ್ಮನಿಗೆ ತನು ವಾಗಿರುವಂತೆ, ಅಷ್ಟಾವರಣಗಳು ವೀರಶೈವನಿಗೆ ಅಂಗವಾಗಬೇಕು. ದೇಹವನ್ನು ಪ್ರೀತಿಸುವದು ಸ್ವಭಾವ ಧರ್ಮವಾಗಿರುವಂತೆ ಅಷ್ಟಾವರಣ ಗಳನ್ನು ಪ್ರೀತಿಸುವದು ವೀರಶೈವನ ಸ್ವಭಾವ ಧರ್ಮವಾಗಿರಬೇಕು.

ಆವರಣವೆಂದರೆ ಹೊದಿಕೆ. ಅಷ್ಟಾವರಣವೆಂದರೆ ಎಂಟು ಹೊದಿಕೆ ಗಳು ಎಂದರ್ಥ. ಚಳಿ, ಮಳಿ, ಗಾಳಿ, ಬಿಸಿಲುಗಳಿಂದ ಬಟ್ಟೆಗಳು ರಕ್ಷಿಸು ವಂತೆ ಅಷ್ಟಾವರಣಗಳು ಅಷ್ಟಮದಗಳಿಂದ ಆತ್ಮನನ್ನು ರಕ್ಷಿಸುತ್ತವೆ. ಅಷ್ಟಾವರಣ ವಿಚಾರವು ಗಹನವಾದುದು. ಶಿವಾನುಭಾವಿಗಳು ಅನೇಕ ವಿಧವಾಗಿ ಅವುಗಳ ಅರ್ಥ ಮಾಡುತ್ತಾರೆ. ಅವು ಅಷ್ಟು ಅರ್ಥಗರ್ಭಿತವಾ ದವುಗಳಾಗಿವೆ.

ಇಲ್ಲಿ ಅಷ್ಟಾವರಣದ ವಿಚಾರ ಹೊಸಬರು ಅತ್ಯಂತ ಸುಲಭವಾಗಿ ತಿಳಿದುಕೊಂಡು ಹೆಚ್ಚಿನ ಸಂಗತಿಗಳನ್ನು ಅರಿತುಕೊಳ್ಳುವ ಇಚ್ಛೆಯುಳ್ಳವ

ರಾಗಬೇಕೆಂದು ಸಾರಾಂಶರೂಪವಾಗಿ ಸಾಮಾನ್ಯ ಸ್ವರೂಪದಿಂದ ವಿವರಿಸಿದ್ದಾಗಿದೆ. ವೀರಶೈವ ತತ್ವಗಳು ಈಗಿನ ಕಾಲಕ್ಕೆ ತಕ್ಕಂತೆ ಅನಂತ ವಿಧವಾಗಿ ಪ್ರಚಾರ ಮಾಡಬೇಕಾಗಿದೆ. ಇದು ಅಂಥ ಪ್ರಚಾರದ ಪ್ರಯತ್ನಗಳಲ್ಲೊಂದು.

**ಗುರು:**— ಶಿವನು ಗುರುಸ್ವರೂಪವನ್ನು ಧರಿಸಿ ಮಾನವ ಪ್ರಾಣಿಗಳ ಉದ್ಧಾರಕ್ಕಾಗಿ ಭೂಮಿಯಲ್ಲಿ ಜನ್ಮತಾಳುತ್ತಾನೆ. ಕಣ್ಣಿಗೆ ಕಾಣುವ ಶಿವನೇ ಗುರುವು. ಗುರುವಿನಲ್ಲಿ ವಿಶ್ವಾಸವನ್ನಿಟ್ಟು ಭಕ್ತಿಯಿಂದ ನಡೆದರೆ ಶಿವನನ್ನು ಕಾಣುತ್ತೇವೆ. ಶಿವಸಾಕ್ಷಾತ್ಕಾರದಿಂದ ಸಂಸಾರದ ತಾಪಗಳು ದೂರಾಗುತ್ತವೆ. ಗುರುವಿನ ಕರುಣೆಯುಂಟಾಗುವಂತೆ ನಡೆದರೆ ಶಿವನನ್ನು ಕಾಣುವ ಮಾರ್ಗವನ್ನು ತೋರಿಸುತ್ತಾನೆ. ಅಂದರೆ ಲಿಂಗವನ್ನು ದಯಪಾಲಿಸುತ್ತಾನೆ. ಲಿಂಗದಿಂದ ಅಂಗ ಗುಣಗಳು ಹಿಂಗುತ್ತವೆ. ಅಂಗವು ಲಿಂಗವಾಗುತ್ತದೆ. ಜೀವನು ಶಿವನಾಗುತ್ತಾನೆ. ಆದ್ದರಿಂದ ಲಿಂಗದ ಅನುಭವದಿಂದ ಸುಖಪಡೆಯಬೇಕೆನ್ನುವವರು ಗುರುವನ್ನು ಭಕ್ತಿಯಿಂದ ದೇಹಾಭಿಮಾನವನ್ನು ತ್ಯಜಿಸಿ ಸೇವಿಸಬೇಕು. ಗುರುವು ನರದೇಹವನ್ನು ತೊಟ್ಟಿದ್ದರೂ ನರನೆಂದು ತಿಳದು ಉಪೇಕ್ಷಿಸಬಾರದು. ಗುರುವಿನ ಕರುಣೆಯನ್ನು ಪಡೆಯಲು ಭಕ್ತಿಯಿಂದ ಪೂಜಿಸಿ ಆತನಂತೆ ಗುರುವಾಗಲು ಯತ್ನಿಸಬೇಕು. ಅಂದರೆ ಆ ಯೋಗ್ಯತೆಯನ್ನು ಹೊಂದಬೇಕು. ಗುರುವಚನದಂತೆ ನಡೆಯುತ್ತ ಗುರುಭಕ್ತಿಯಿಂದ ಸೇವಿಸುತ್ತ ಲಿಂಗ ಪೂಜೆಯನ್ನು ಮನಸ್ಸಿನಿಂದ ಮಾಡುತ್ತ ಹೋದರೆ ಸುಖ-ಶಾಂತಿಗಳು ಲಭಿಸುತ್ತವೆ.

**ಲಿಂಗ:**—ಗುರುವಿನಿಂದ ಲಿಂಗೋತ್ಪತ್ತಿ. ಗುರುವು ತಾನು ಹೊಂದಿದ ಅನುಭವವನ್ನೇ ಲಿಂಗರೂಪದಲ್ಲಿ ಶಿಷ್ಯನಿಗೆ ಕೊಡುತ್ತಾನೆ. ಲಿಂಗವೆಂದರೆ ಗುರುವಿನ ಅನುಭವವು! ಲಿಂಗವೆಂದರೆ ಗುರುವು ಕಂಡು ಉಂಡ ಶಿವನು! ಲಿಂಗಪೂಜೆಯನ್ನು ಗುರುವು ಹೇಳಿದಂತೆ ಮನಸ್ಸಿನಿಂದ ಮಾಡಬೇಕು. ಮನಸ್ಸಿನ ಚಂಚಲತನವು ಅಳಿದು ಮನಸ್ಸಿಗೆ ಶಾಂತಿಯುಂಟಾಗಬೇಕಾದರೆ ಲಿಂಗಪೂಜೆಯನ್ನು ಮಾಡಬೇಕು. ಲಿಂಗದಲ್ಲಿಯೇ ಜಗತ್ತನ್ನು ಕಾಣಬೇಕು. ಲಿಂಗ ಪೂಜಕನು ಸ್ವರ್ಗಾದಿ ಪದವಿಗಳನ್ನು ಆಶೆ ಮಾಡಬಾರದು. ಲಿಂಗವನ್ನು ಅರಿತವನು ಲಿಂಗವಾಗುತ್ತಾನೆ. ಅಂದರೆ ಶಿವ

ನಾಗುತ್ತಾನೆ. ಲಿಂಗ ಪೂಜಕನು ಸುಳ್ಳು, ಕಳವು, ಹಿಂಸೆ, ಹಾದರ, ತಿನ್ನಬಾರದ್ದು ತಿನ್ನುವದು, ಕುಡಿಯಬಾರದ್ದು ಕುಡಿಯುವದು ಈ ಪಂಚ ಪಾಪಗಳನ್ನು ಎಂದೂ ಆಚರಿಸುವದಿಲ್ಲ. ಲಿಂಗಧಾರಿಯು ಸದಾ ಶುಚಿಯಾಗಿರುವದರಿಂದ ಪಂಚ ಸೂತಕಗಳು ಆತನಿಗೆ ಬಾಧಿಸವು. ಲಿಂಗಧಾರಿಯು ಸ್ನಾನಾದಿ ನಿತ್ಯ ಕ್ರಿಯೆ ನಿಯಮಿತವಾಗಿ ಮಾಡುತ್ತಿರುವದರಿಂದ ರೋಗಾದಿಗಳು ಆತನಿಗೆ ಬಾಧಿಸವು. ಗುರುವು ಹೇಳಿದಂತೆ ಲಿಂಗ ಪೂಜೆಯನ್ನು ಮನಸ್ಸಿನಿಂದ ಮಾಡುತ್ತಾ ಹೋದರೆ ಮನಸ್ಸಿನ ತಾಪಗಳು ದೂರಾಗಿ ಸುಖ-ಶಾಂತಿಗಳು ಲಭಿಸುತ್ತವೆ.

**ಜಂಗಮ:**— ಶಿವನು ಜಂಗಮ ರೂಪವನ್ನು ಧರಿಸಿ, ಮಾನವ ಪ್ರಾಣಿಗಳ ಉದ್ಧಾರಕ್ಕಾಗಿ ಭೂಮಿಯಲ್ಲಿ ಜನ್ಮತಾಳುತ್ತಾನೆ. ಕಣ್ಣಿಗೆ ಕಾಣುವ ಶಿವನೇ ಜಂಗಮನು! ಗುರುವಚನದಂತೆ ಲಿಂಗಪೂಜೆಯಿಂದ ಜಂಗಮ ಪ್ರಾಪ್ತಿಯಾಗುತ್ತದೆ. ಗುರುವು ಮಾರ್ಗದರ್ಶಕ ಸಾಧ್ಯವಸ್ತುವು. ಲಿಂಗವು ಮಾರ್ಗವು-ರಾಜಮಾರ್ಗವು. ಗುರುವಿನಿಂದ ಲಿಂಗವು! ಲಿಂಗದಿಂದ ಜಂಗಮವು! ತ್ರಿವಿಧವೂ ಒಂದೇ. ಗುರುವಚನದಂತೆ ಲಿಂಗಪೂಜೆ ಮಾಡಿದರೆ ಗುರುವಾಗುತ್ತಾನೆ. ಅಂತಪ್ಪ ಗುರುತ್ವ ಪ್ರಾಪ್ತಿಯಾದ ಭಕ್ತನು ಜಂಗಮನಾಗುತ್ತಾನೆ. ಸಂಕುಚಿತ ಸ್ವಾರ್ಥಗಳನ್ನು ಬದಿಗೊತ್ತಿ ತ್ಯಾಗದಿಂದ ಜಂಗಮನನ್ನು ಪೂಜಿಸಿ ಆತನಂತೆ ಜಂಗಮನಾಗಲು ಯತ್ನಿಸಬೇಕು. ಅಂದರೆ ಆ ಯೋಗ್ಯತೆಯನ್ನು ಹೊಂದಬೇಕು.

ದೇಹಾಭಿಮಾನವನ್ನು ತ್ಯಜಿಸಿ ಗುರುವನ್ನು ಸೇವಿಸಿ ಗುರುವಿನ ಕರುಣೆಯನ್ನು ಹಡೆದರೆ ಗುರುಸ್ಥಲ ಸಾಧ್ಯವಾಗುತ್ತದೆ.

ಮನಸ್ಸಿನ ಚಂಚಲತೆಯನ್ನು ತ್ಯಜಿಸಿ, ಲಿಂಗ ಪೂಜೆಯನ್ನು ಮಾಡಿ ದುರ್ಗುಣಗಳು ಹಿಂಗಿದರೆ ಲಿಂಗಸ್ಥಲ ಸಾಧ್ಯವಾಗುತ್ತದೆ.

ಜೀವಭಾವವನ್ನು ತ್ಯಜಿಸಿ ಜಂಗಮವನ್ನು ಪೂಜಿಸಿ ವ್ಯಾಪಕ ಭಾವನೆಯನ್ನು ಹೊಂದಿದರೆ ಜಂಗಮಸ್ಥಲ ಸಾಧ್ಯವಾಗುತ್ತದೆ.

ಭಕ್ತರ ಉದ್ಧಾರಕ್ಕಾಗಿ ಶಿವನೇ ಗುರು, ಲಿಂಗ, ಜಂಗಮ ರೂಪಗಳನ್ನು ಧರಿಸಿರುತ್ತಾನೆ. ಪ್ರತಿಯೊಬ್ಬ ಭಕ್ತಿವಂತನಾದ ಭಕ್ತನಿಗೂ ಶಿವ-ಸಾಕ್ಷಾತ್ಕಾರವಾಗುತ್ತದೆ. ಆದ್ದರಿಂದ ಪ್ರತಿಯೊಬ್ಬ ಭಕ್ತನೂ ಗುರುವಾಗುತ್ತಾನೆ. ಲಿಂಗವಾಗುತ್ತಾನೆ. ಜಂಗಮವಾಗುತ್ತಾನೆ. ಜಂಗಮನು ಜಗದ್ಭರಿತನು. ಜಂಗಮನು ವಿರಕ್ತನು. ಪ್ರತಿಯೊಬ್ಬ ವೀರಶೈವನು ಜಗದ್ಭರಿತ ಜಗದೋದ್ಧಾರಕ ಜಂಗಮನಾದರೆ ಜಗತ್ತಿನಲ್ಲಿ ಲಿಂಗಾಂಗೀ

ಧರ್ಮದ ರಾಜ್ಯವನ್ನು ಸ್ಥಾಪಿಸಲು ಸಾಧ್ಯವಾಗುತ್ತದೆ. ಸಮಾಜ ಸೌಕರ್ಯಕ್ಕಾಗಿ ಗುರು-ವಿರಕ್ತ-ಭಕ್ತಸ್ಥಲಗಳು ವೀರಶೈವ ಸಮಾಜದಲ್ಲಿ ಏರ್ಪಟ್ಟಿವೆಯೇ ವಿನಃ ಜನ್ಮದಿಂದ-ಜಾತಿಯಿಂದ-ಅಲ್ಲ. ಇಂತು ಗುರು, ಲಿಂಗ, ಜಂಗಮರೂಪಾದ ಶಿವನನ್ನು ತನು, ಮನ, ಧನ, ಆತ್ಮಗಳಿಂದ ಪೂಜಿಸುತ್ತಾ ಹೋದರೆ ಸುಖ-ಶಾಂತಿಗಳು ಲಭಿಸುತ್ತವೆ.

**ಪಾದೋದಕ:**---ಗುರು, ಲಿಂಗ, ಜಂಗಮರಿಂದ ಪಾದೋದಕವು ಸಿದ್ಧವಾಗುತ್ತದೆ. ಗುರು, ಲಿಂಗ, ಜಂಗಮರ ಕರುಣಾರಸವೇ ಪಾದೋದಕವು. ಪಾದೋದಕ ಕ್ರಿಯೆಯಲ್ಲಿ ಅಭೇದ ಭಾವನೆಯಿದೆ. ಸಮರಸೈಕ್ಯವಿದೆ. ಭಕ್ತರದೊಂದು ಜಾತಿ, ಮಹೇಶ್ವರರದೊಂದು ಜಾತಿ ಎಂಬ ಹುಚ್ಚು ಕಲ್ಪನೆಯನ್ನು ಈ ಪಾದೋದಕ ಕ್ರಿಯೆಯು ದೂರ ಮಾಡುತ್ತದೆ. ಈ ಸಮರಸಭಾವನೆಯು ಅಡಿಗೆ ಮನೆಯ ದೇವರ ಕೋಣೆಯಲ್ಲಿ ಮಾತ್ರ ಉಳಿದು ವ್ಯವಹಾರದಲ್ಲಿ ಕೇವಲ ದ್ವೈತಭಾವನೆಯೇ ತುಂಬಿದ್ದರಿಂದ ವೀರಶೈವರಲ್ಲಿ ನಿಜವಾದ ಸಂಘಟನೆಯಾಗಲೊಲ್ಲದು.

ಲಿಂಗದ ಮುಖವು ಜಂಗಮವು! ಜಂಗಮ ತೃಪ್ತಿಯಿಂದ ಲಿಂಗ ಸಂತೃಪ್ತಿಯು! ಜಂಗಮಲಿಂಗದಲ್ಲಿ ಶಿವನು ಯಾವಾಗಲೂ ನೆಲಿಸಿರುತ್ತಾನೆ. ಆದ್ದರಿಂದ ಜಂಗಮನಿಂದೆಯನ್ನು ಸರ್ವಥಾ ಮಾಡಬಾರದು. ಇಷ್ಟೇ ಅಲ್ಲ, ಜಂಗಮ ಪಾದೋದಕವನ್ನು ಲಿಂಗಕ್ಕೆ ಅಭಿಷೇಕಿಸಬೇಕೆಂದೇ ವೀರಶೈವರ ಸಿದ್ಧಾಂತದಲ್ಲಿ ಹೇಳಿದೆ. ಅಂತು ಗುರು, ಲಿಂಗ, ಜಂಗಮ ಪಾದೋದಕವು ಜ್ಞಾನೋದಕವು. ಗುರು, ಲಿಂಗ, ಜಂಗಮರಿಂದ ಪ್ರಾಪ್ತವಾದ ನೀರು ಶುದ್ಧವಾಗುತ್ತದೆ. ಅಂಥ ಪವಿತ್ರ ನೀರೇ ಪಾದೋದಕವು. ಅದು ಆರೋಗ್ಯಕ್ಕೂ ಮನೋನೈರ್ಮಲ್ಯಕ್ಕೂ ಸಾಧನವಾಗುತ್ತದೆ. ಗುರು, ಲಿಂಗ, ಜಂಗಮರಿಂದ ದಶವಿಧ ಪಾದೋದಕ ಕ್ರಮವನ್ನು ಅರಿಯಬೇಕು. ಗುರು; ಲಿಂಗ, ಜಂಗಮರಿಂದ ಲಭಿಸುವ ಪಾದೋದಕವನ್ನು ಜ್ಞಾನದಿಂದ ಸಮರಸ ಭಾವನೆಯಿಂದ ಸ್ವೀಕರಿಸಿ ಆ ಸಮರಸ ಭಾವನೆಯನ್ನು ಸ್ಥಿರೀಕರಿಸುತ್ತಾ ಹೋಗುವದರಿಂದಾ ಸುಖ-ಶಾಂತಿಗಳು ಲಭಿಸುತ್ತವೆ.

**ಪ್ರಸಾದ:**— ಗುರು, ಲಿಂಗ, ಜಂಗಮರಿಂದ ಪ್ರಸಾದವು ಸಿದ್ಧವಾಗುತ್ತಿದೆ. ಗುರು, ಲಿಂಗ, ಜಂಗಮರಿಗೆ ಅರ್ಪಣಕ್ಕೆ ಯೋಗ್ಯವಾದ

ಆಹಾರವು ಪ್ರಸಾದವೆನಿಸುವದು. ಪ್ರಸಾದವು ವಿಶುದ್ಧವಾಗಿರುವದು. ಸಾತ್ವಿಕವಾಗಿರುವದು. ಶುದ್ಧ ಆಹಾರವನ್ನು ಪವಿತ್ರ ಭಾವನೆಯಿಂದ ಸ್ವೀಕರಿಸುವದೇ ಪ್ರಸಾದವು. ಪ್ರಸಾದದಿಂದ ಪ್ರಸನ್ನ ಚಿತ್ತವೂ, ಬುದ್ಧಿ ಸ್ಥಿರತೆಯೂ ಸಾಧ್ಯವಾಗುತ್ತದೆ. ಶಿವರಸವೇ ಪ್ರಸಾದವು. ಅಂತಪ್ಪ ಶಿವರಸವನ್ನು ಸೇವಿಸುವದರಿಂದ ಶಿವಾನಂದವು ಪ್ರಾಪ್ತವಾಗುತ್ತದೆ. ಮನಸ್ಸು ನಿರ್ಮಲವಾಗುತ್ತದೆ. ಪ್ರಸಾದಿಕರ ಮನಸ್ಸಿನಲ್ಲಿ ವಿಕಾರವಿರುವದಿಲ್ಲ. ಗುರು, ಲಿಂಗ, ಜಂಗಮರ ಪೂಜೆಮಾಡಿ ಪಾದೋದಕ ಪ್ರಸಾದಗಳನ್ನು ಸೇವಿಸುವದರಿಂದ ತನು, ಮನ, ಭಾವಗಳು ಶುದ್ಧವಾಗುತ್ತವೆ. ಪವಿತ್ರ ಭಾವನೆಯಿಲ್ಲದೇ ಅನ್ನ ಸೇವಿಸಿದರೆ ತಮೋಗುಣದಿಂದ ದೇಹವು ಜಡವಾಗುತ್ತಿದೆ. ಗುರು, ಲಿಂಗ, ಜಂಗಮರಿಗೆ ಅರ್ಪಿಸಿ ಸಾವಧಾನ–ಸುವಿವೇಕಗಳಿಂದ ಸೇವಿಸಿದರೆ ಸಾತ್ವಿಕತೆಯು ಪ್ರಕಾಶವಾಗುತ್ತದೆ. ದೇಹ, ಮನ, ಭಾವಗಳಲ್ಲಿ ಸೌಮ್ಯಕಳೆಯು ತುಂಬುತ್ತದೆ. ಪ್ರಸಾದಿಯು ಆಶಾವಾದಿಯಾಗಿರುತ್ತಾನೆ. ಜಗತ್ತೇ ಆನಂದಮಯವಾಗಿ ಆತನಿಗೆ ತೋರುತ್ತದೆ. ಗುರು, ಲಿಂಗ, ಜಂಗಮರಿಂದ ಏಕಾದಶಪ್ರಸಾದಮಾರ್ಗ ತಿಳಿಯಬೇಕು. ಪ್ರಸಾದಿಕರಿಂದ ಜಗತ್ತಿನ ಕಲಹ, ದ್ವೇಷ, ಪಂಗಡಗಳು ನಾಶವಾಗಲು ಸಾಧನವಾಗುತ್ತದೆ. ವಿಶುದ್ಧ ಪದಾರ್ಥಗಳನ್ನು ಗುರು, ಲಿಂಗ, ಜಂಗಮರಿಗೆ ಅರ್ಪಿಸಿ ಅಂತಪ್ಪ ಪ್ರಸಾದವನ್ನು ಸೇವಿಸುವದರಿಂದ ಸುಖ-ಶಾಂತಿಗಳು ಲಭಿಸುತ್ತವೆ.

ವಿಭೂತಿಃ– ವಿಭೂತಿಯು ಶಿವನ ಮೈಬೆಳಕಾಗಿದೆ. ಸೂರ್ಯ ಚಂದ್ರರ ಬೆಳಕಿನಿಂದ ಆ ಸೂರ್ಯ ಚಂದ್ರಾದಿಗಳನ್ನು ಕಾಣುವಂತೆ ವಿಭೂತಿಯಿಂದ, ಶಿವನ ಮೈ ಬೆಳಗಾದ ಭಸಿತದಿಂದ ಶಿವನನ್ನು ಕಾಣಬೇಕು. ವಿಭೂತಿಯು ಗೋಮಯದಿಂದ ಶಾಸ್ತ್ರೋಕ್ತವಾಗಿ ಸಿದ್ಧವಾಗುತ್ತದೆ. ಗೋ ರಕ್ಷಣೆಯು ವೀರಶೈವರಿಗೆ ಪರಮ ಪವಿತ್ರವೂ ಅಗತ್ಯವೂ ಆದ ಶಿವಕಾರ್ಯವಾಗಿದೆ. ವಿಭೂತಿಯು ಕರ್ಮಗಳನ್ನು ಭಸ್ಮಮಾಡುತ್ತದೆ. ವಿಭೂತಿಯು ಶೀತನಿವಾರಣೆಯನ್ನು ಮಾಡುತ್ತದೆ. ಚರ್ಮ ರೋಗವನ್ನು ಕಳೆಯುತ್ತದೆ. ಎಷ್ಟೋ ಜನರು ಅಡವಿಗಳಲ್ಲಿ ಬಟ್ಟೆ–ಬರಿಗಳಿಲ್ಲದೇ ವಿಭೂತಿಯಿಂದಲೇ ದೇಹವನ್ನು ರಕ್ಷಿಸಿಕೊಳ್ಳುತ್ತಾರೆ. ಶಿವಭಕ್ತರ ಹಣೆಗೆ ವಿಭೂತಿಯು ಶೃಂಗಾರವಾಗಿದೆ. ವಿಭೂತಿಯು ವಿಶಿಷ್ಟತೆಯನ್ನು

ಮನುಷ್ಯರಿಗೆ ಉಂಟುಮಾಡುತ್ತದೆ. ವಿಭೂತಿಯನ್ನು ಗುರುವು ಹೇಳಿದಂತೆ ಧರಿಸಬೇಕು. ಕಾಮನನ್ನು ದಹಿಸುತ್ತಿದ್ದೇನೆಂಬ ಶಿವಜ್ಯೋತಿಯನ್ನು ಧರಿಸಿದ್ದೇನೆಂಬ ಭಾವನೆಯಿಂದಲೇ ವಿಭೂತಿಯನ್ನು ಧರಿಸಬೇಕು. ಇಂತಪ್ಪ ವಿಭೂತಿಯು ಗುರು, ಲಿಂಗ, ಜಂಗಮರಿಂದ ಸಿದ್ಧವಾಗುತ್ತದೆ. ಅದನ್ನು ಭಕ್ತಿಯಿಂದ ಧರಿಸುತ್ತ ಗೋ ರಕ್ಷಣೆಯನ್ನು ಮಾಡುತ್ತ ಹೋದರೆ ಸುಖ-ಶಾಂತಿಗಳು ಲಭಿಸುತ್ತವೆ.

**ರುದ್ರಾಕ್ಷೀ:—** ರುದ್ರಾಕ್ಷಿಯು ಜ್ಞಾನನೇತ್ರವು. ಗುರುವು ಶಿವರೂಪನು. ಗುರುವಿನ ಕೃಪಾಕಟಾಕ್ಷಗಳಿಂದ ಬರುವ ಆನಂದ ಬಾಷ್ಪಗಳೇ ರುದ್ರಾಕ್ಷಿಗಳು. ರುದ್ರಾಕ್ಷ ಧಾರಣೆಯು ಗುರುವಿನ ಕೃಪೆಗೆ ಪಾತ್ರವಾಗಿದ್ದುದರ ಕುರುಹು. ರುದ್ರಾಕ್ಷಿಯಲ್ಲಿ ವಿದ್ಯುಚ್ಛಕ್ತಿ ಇರುತ್ತದೆ. ಅದರಿಂದ ರುಧಿರಾಭಿಸರಣವು ಸುಗಮವಾಗಿ ಸಾಗುತ್ತದೆ. ರುದ್ರಾಕ್ಷಿ ಬೀಜವು ನೂರು ವರ್ಷ ಬದುಕುವಂತೆ ಯಾವ ಬೀಜವೂ ಬದುಕುವದಿಲ್ಲ. ರುದ್ರಾಕ್ಷಿಯಂತೆ ನಾವೂ ನೂರು ವರ್ಷ ಬದುಕುವಂತೆ ನಡೆಯಬೇಕು. ಗುರುವು ಹೇಳಿದಂತೆ ರುದ್ರಾಕ್ಷಿಗಳನ್ನು ಧರಿಸಬೇಕು. ಒಂದು ರುದ್ರಾಕ್ಷಿಯನ್ನಾದರೂ ಯಾವಾಗಲೂ ಧರಿಸಬೇಕು. ಶಿವಭಕ್ತರಿಗೆ ಅದೇ ಆಭರಣವು. ಪತಿವ್ರತಾ ಸ್ತ್ರೀಗೆ ಹೇಗೆ ಆಭರಣಗಳೋ ಹಾಗೆಯೇ ಲಿಂಗಪತಿ, ಶರಣಸತಿ ಭಾವನೆಯುಳ್ಳ ಶಿವಭಕ್ತನಿಗೆ ರುದ್ರಾಕ್ಷಿಗಳು ಆಭರಣಗಳು. (೧೦೮) ರುದ್ರಾಕ್ಷಿ ಸರವು ಜಪಕ್ಕೆ ಒಳ್ಳೇ ಅನುಕೂಲ. ಇಂತಪ್ಪ ರುದ್ರಾಕ್ಷಿಯು ಗುರು, ಲಿಂಗ, ಜಂಗಮರಿಂದ ಸಿದ್ಧವಾಗುತ್ತದೆ. ಅದನ್ನು ಭಕ್ತಿಯಿಂದ ಧರಿಸಿ ಗುರು, ಲಿಂಗ, ಜಂಗಮ ಕೃಪೆಯನ್ನು ಪಡೆಯಲು ಸದಾ ಯತ್ನಿಸುತ್ತಿದ್ದರೆ ಸುಖ-ಶಾಂತಿಗಳು ಲಭಿಸುತ್ತವೆ.

**ಮಂತ್ರ:—** ಮನಸ್ಸಿನ ಪವಿತ್ರತೆಯನ್ನು ಮಂತ್ರವು ಕಾಪಾಡುತ್ತದೆ. ಬೂದಿಯು ಬೆಂಕಿಯನ್ನು ಕಾದಿಡುವಂತೆ ಮಂತ್ರವು ಮನಸ್ಸನ್ನು ವಿಷಯಾದಿಗಳಿಂದ ಮಲಿನವಾಗದಂತೆ ಕಾದಿಡುತ್ತದೆ. ಮಂತ್ರಗಳಲ್ಲಿ ಷಡಕ್ಷರಿ, ಪಂಚಾಕ್ಷರಿ, ದ್ವಾದಶಾಕ್ಷರಿ ಮಂತ್ರಗಳಿವೆ. ಗುರುವು ಉಪದೇಶ ಮಾಡಿದಂತೆ ಮನಸ್ಸಿನಲ್ಲಿ ಮಂತ್ರವನ್ನು ಜಪಿಸಬೇಕು.

ಈ ಮಂತ್ರಗಳಲ್ಲಿ ಯಾವದಾದರೊಂದನ್ನು ಲಿಂಗಪೂಜೆಯಾದ ನಂತರ ನೂರೆಂಟುಸಾರೆಯಾದರೂ ಜಪಿಸಬೇಕು. ನೂರೆಂಟು ಸಂಖ

ರುದ್ರಾಕ್ಷಿಗಳುಳ್ಳ ಜಪಮಾಲೆಯನ್ನು ಜಪದ ಕಾಲಕ್ಕೆ ಉಪಯೋಗಿಸು ವದು ಒಳ್ಳೇ ಪ್ರಯೋಜನ.

ಮಂತ್ರವು ಪರಮಾತ್ಮನ ನಾಮವಾಗಿದೆ. ಅಂಕುಶಕ್ಕೆ ಕರಿಯು, ವಜ್ರಕ್ಕೆ ಗಿರಿಯು, ಜ್ಯೋತಿಗೆ ತಮಂಧವು, ಬೇಗೆಗೆ ಕಾನನವು ಅಂಜು ವಂತೆ ಮಂತ್ರಕ್ಕೆ ಪಂಚಪಾಪಗಳು ಅಂಜುತ್ತವೆ. ಭಕ್ತಿಯಿಂದ ಪರ ಮಾತ್ಮನನ್ನು ನಂಬಿಕರೆದರೆ ಪ್ರಸನ್ನನಾಗುತ್ತಾನೆ. ಸದಾವಕಾಲದಲ್ಲಿ ಮಂತ್ರವನ್ನು ಜಪಿಸುವದರಿಂದ ವೀರಶೈವನು ಮಂತ್ರಮೂರ್ತಿಯೇ ಆಗುತ್ತಾನೆ. ಗುರು, ಲಿಂಗ, ಜಂಗಮಯು ಮಂತ್ರಮೂರ್ತಿಗಳು. ಅಂತಪ್ಪ ಮಂತ್ರಮೂರ್ತಿಗಳ ದಾಸೋಹದಿಂದ ಮಂತ್ರೋಪದೇಶವನ್ನು ಪಡೆದು ಮನಸ್ಸನ್ನು ವಿಷಯಾದಿಗಳಿಂದ ದೂರಿರಿಸುತ್ತಾ ನಡೆದರೆ ಸುಖ ಶಾಂತಿಗಳು ಲಭಿಸುತ್ತಿವೆ.

---

## ಮಹಾದೇವಿಯಕ್ಕನಿಗೆ.

(ಲೇಖಕಃ— ಡಿ. ಎಸ್. ಕರ್ಕಿ, ಎಂ. ಎ. ಬೆಳಗಾವಿ.)

---

ನಮ್ಮ ನಾಡಿನಾವ ಪುಣ್ಯದಿಂದ ದೇವಿಯೇ
ಚೆನ್ನ ನೊಲದ ರನ್ನೆ ನೀನು ಮೂಡಿ ಬೆಳಗಿದೆ ?
ಥಳ ಥಳನೆ ತೊಳಗಿದೆ ॥ಪಲ್ಲ॥

೧

ನಿನ್ನ ಧೈರ್ಯವೆಂಥದಮ್ಮ? ಸ್ಥೈರ್ಯವೆಂಥದು ?
ನೀನು ನೆಚ್ಚಿನಿಂದ ಮೋಘಯೋಗವೆಂಥದು !
ಮನವನೆತ್ತುವಂಥದು.
ಮೇಲಕೆತ್ತುವಂಥದು.
ಹೆಂಗಳಲಿ ನಿನ್ನ ಸರಿ
ಭಕುತಿ ಷ್ಪುರಿ ಮುಕುತಿಸಿರಿ
ಇನ್ನದಾರದು
ಇನ್ನು ವರೆಗು ತೋರದು.

೨

ಚನ್ನಮಲ್ಲಿಕಾರ್ಜುನಂಗೆ ನೀನೆ ಕಣ್ಮಣಿ
ನೀನೆ ಶಿವಾನುಭವ ಮಂಟಪದ ಶಿಖಾಮಣಿ
ಅಸಮಾನ ಪೆಣ್ಮಣಿ
ಶಿವ ಸಂಸ್ಕೃತಿಯ ಕಣಿ
ನಿನ್ನ ನುಡಿ ಹೊನ್ನ ಕಿಡಿ
ರಸದ ಕುಡಿ ಹೊಸತುಮಿಡಿ
ಎಸೆವ ಸುಗ್ಗಿಯು
ರಸಿಕತೆಯ ಬುಗ್ಗೆಯು

೩

ನಿನ್ನ ವಾಣಿಯಿಂದ ನಮ್ಮ ನುಡಿಗೆ ಕಳೆಯನು
ನೀಡಿ ಹರಿಯಿಸಿರುವೆ ವಚನ ಕಾವ್ಯ ನದಿಯನು
ಬೆಳೆಯಿಸಿರುವೆ ಬೆಳೆಯನು
ಅನುಭವದ ನಿಲುವನು
ವಚನದಲಿ ಒಲುಮೆಯಲಿ
ನೆಚ್ಚಾನುಲಿ ಕೆಚ್ಚಿನುಲಿ
ಮೇಳಗೂಡಿವೆ
ಕೋಡಿ ಕೋಡಿ ವರಿದಿದೆ.

೪

ನಿನ್ನ ಜೀವನದಲಿ ಅರಳಿರುವದು ಕಾವ್ಯವು
ಎನಿತು ಕಾಲ ಜಾರಲೇನು? ನಿತ್ಯನಿವ್ಯವು.
ಅದು ಅಮೋಘ ಕಾವ್ಯವು
ಇಹದೆ ಅವಕು ದಿವ್ಯವು
ದೇವನಲಿ ಪ್ರೇಮದಲಿ
ಬೆರೆದು ನಲಿನಲಿಯುತಲಿ
ಸುಳಿದ ಜೀವನ
ಅಸಾಧ್ಯಸಾಧನ

೫

ಎಂಥ ಎಳೆಯುತನದಿ ಪಂಥತೊಟ್ಟು ನಡೆದೆಯಾ
ಭಕ್ತಿ ಜ್ಞಾನ ವೈರಾಗ್ಯದ ದಾರಿಹಿಡಿದೆಯಾ
ಗುರಿಯು ನಂಬಿನಡೆದೆಯಾ
ನಿಜದೊಳಿಂಬುವಡೆದೆಯಾ
ಚೆನ್ನ ಪತಿ ನೀನೆಸತಿ
ಶಿವನೆಗತಿ ಅವನೆಮತಿ
ಎಂದು ಸಾರಿದಾ
ಅವನೊಳೊಂದುಗೂಡಿದಾ?

೬

ಎಂಟುನೂರು ವರುಷದಾಚೆಯಿಂದ ಈಚೆಗೆ
ನಿನ್ನ ಕಿರಣ ಕೀರ್ತಿಪಥದಿ ತೂರಿಬಂದಿದೆ.
ತೆರೆತೆರೆದು ನಿಂದಿದೆ.
ಕೌತುಕವ ತಂದಿದೆ.
ಮರಳಿ ಅದೇ ರೂಪವನೇ
ತಳೆದು ಅದೇ ಜ್ಯೋತಿಯನೇ
ಬೀರಲಾರೆಯಾ
ಪಥವ ತೋರಲಾರೆಯಾ!

---

ಮೇಲಿನ ವಿವರಣೆಗಳಿಂದ ದೇವರದಾಸಿಮಯ್ಯನು ಉಚ್ಚತರಗತಿಯ ಶಿವಶರಣನೆಂಬುದು ವಾಚಕರಿಗೆ ಗೊತ್ತಾಗದೆ ಇರದು. ಅವನ ಚರಿತ್ರೆಯಲ್ಲಿಯ ಅನೇಕ ಸಂಗತಿಗಳು ಅತ್ಯಂತ ಬೋಧಪ್ರದವಾಗಿರುತ್ತವೆ.

ದೇವರದಾಸಿಮಯ್ಯನು ಒಬ್ಬ ಐತಿಹಾಸಿಕ ಪುರುಷನಾಗಿದ್ದಾನೆಂಬುದು ಅನೇಕ ಶಿಲಾಶಾಸನಗಳಿಂದ ವ್ಯಕ್ತವಾಗುತ್ತದೆ. ಅವುಗಳನ್ನು ನಾವು ಮುಂದೆ ಉಲ್ಲೇಖಿಸುವೆವು. ಅನೇಕ ವೀರಶೈವ ಮಹಾಕವಿಗಳು ಅವನನ್ನು ತಮ್ಮ ಗ್ರಂಥಗಳಲ್ಲಿ ಅತ್ಯಂತ ಪೂಜ್ಯಭಾವದಿಂದ ಸ್ಮರಿಸಿರುತ್ತಾರೆ. ಅವನು ಬಸವೇಶ್ವರನಕಿಂತಲೂ ನೂರು, ನೂರಾಐವತ್ತು ವರ್ಷಗಳ ಮೊದಲು ಉದ್ಭವಿಸಿ ಧರ್ಮೋದ್ಧಾರ ಕಾರ್ಯಗಳನ್ನು ಬಹು ವಿಧವಾಗಿ ಮಾಡಿದ್ದಾನೆ. ಅವನು ವಚನಕಾರನೂ ಇದ್ದಾನೆ. ಆದ್ದರಿಂದ ಅವನು ಮಾಡಿದ ಪ್ರಯತ್ನಗಳನ್ನು ಚನ್ನಾಗಿ ವಿಮರ್ಶಿಸುವದರಿಂದ ಪುರಾತನ ಕಾಲದಲ್ಲಿದ್ದ ವೀರಶೈವ ಸಮಾಜದ ಸ್ಥಿತಿಗತಿಯ ಮೇಲೆ ಮಹತ್ವದ ಪ್ರಕಾಶವು ಬೀಳುವಂತಿದೆ.

೧೧ನೇ ಮತ್ತು ೧೨ನೇ ಶತಮಾನಗಳಲ್ಲಿ ಕರ್ನಾಟಕದಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಸ್ಥಿತ್ಯಂತರಗಳು ಬಹು ಒತ್ತರದಿಂದ ನಡೆದ ಹಾಗೆ ಕಂಡುಬರುತ್ತದೆ. ಈ ಕಾಲದಲ್ಲಿ ಇಲ್ಲಿ ಅನೇಕ ಮತಗಳು ಉದ್ಭವಿಸಿದ್ದವು. ಅವುಗಳಲ್ಲಿ ಶೈವ, ವೀರಶೈವ, ಕಾಳಾಮುಖ ಮತಗಳು ಪ್ರಾಬಲ್ಯವನ್ನು ಹೊಂದಿ ಅಲ್ಲಿಯ ವರೆಗೆ ಹೆಚ್ಚಾಗಿ ಪ್ರಚಲಿತವಿದ್ದ ಜೈನಮತವನ್ನು ಹಿಂದಕ್ಕೊತ್ತುವದರಲ್ಲಿ ತೊಡಗಿದ್ದವೆಂದು ತೋರುತ್ತದೆ. ಈ ಸಮಾಜಗಳಲ್ಲೆಲ್ಲ ಧರ್ಮಾಂತರಗಳು ದೊಡ್ಡ ಪ್ರಮಾಣದಿಂದ ಪರಸ್ಪರ ನಡೆಯುತ್ತ ಇದ್ದುದು ತಿಳಿದುಬರುತ್ತಿದೆ. ಇದು ಆಗಿನ ಸಮಾಜಗಳ ಶೈಥಿಲ್ಯವನ್ನು ತೋರಿಸುತ್ತದೆ. ಆದರೆ ೧೨ನೇ ಶತಮಾನದಲ್ಲಿ ವೀರಶೈವ ಧರ್ಮವು ವಿಶೇಷವಾಗಿ ಪ್ರಾಚುರ್ಯವನ್ನು ಹೊಂದಲು ಆಗ ಇಂಥ ಪರಿಸ್ಥಿತಿಯು ಹೊರಟುಹೋಯಿತು. ಈ ಚಳವಳಿಯ ಪ್ರಾರಂಭ ಕಾಲದಲ್ಲಿ ದೇವರದಾಸಿಮಯ್ಯನು ಕರ್ನಾಟಕದಲ್ಲಿ ಉದ್ಭವಿಸಿ ಅತ್ಯಂತ ಮಹತ್ತರವಾದ ಕಾರ್ಯಗಳನ್ನು ಮಾಡಿದ್ದು ಅವನ ಚರಿತ್ರೆಯಿಂದ ಕಂಡುಬರುತ್ತದೆ.

ದೇವರದಾಸಿಮಯ್ಯನು ಉದ್ಭವಿಸಿದ ಕಾಲದಲ್ಲಿ ಶೈವ, ವೈಷ್ಣವರಲ್ಲಿ ಅನೇಕತರದ ಭೇದವಿಭೇದಗಳುಂಟಾಗಿದ್ದವು. ಅಲ್ಲದೆ ಶಾಕ್ತರು, ಕಾಪಾಲಿಕರು, ಕಾಳಾಮುಖರು ಪ್ರಬಲಿಗೆ ಬಂದು, ಅವರ ಅನುಯಾಯಿಗಳು ಕೆಲವೊಂದು ಸಿದ್ಧಿಯನ್ನು ಸಾಧಿಸುವದಕ್ಕೋಸುಗ ಕ್ರೂರವಾದ ಮತ್ತು ನೀತಿಗೆ ಹೊರತಾದ ಆಚರಣೆಗಳನ್ನು ಸಹ ಆಚರಿಸುವವರಾಗಿದ್ದರು. ಸಮಾಜದ ಇಂಥ ಅವನತಿಯ ಕಾಲದಲ್ಲಿಯೇ ಮಹಾಪುರುಷರು ನಾಡಿನಲ್ಲಿ ಜನಿಸುತ್ತಾರೆ ಮತ್ತು ಕ್ರಾಂತಿಕಾರಕ ಕಾರ್ಯಗಳನ್ನು ಮಾಡುತ್ತಾರೆ.

ದೇವರದಾಸಿಮಯ್ಯನು ಜನಿಸಿದ್ದರ ಬಗ್ಗೆ ವೀರಶೈವ ಪುರಾಣಗಳಲ್ಲಿ ದಂತಕಥೆಯು ಇರುವದೇನೆಂದರೆ– ನಾರದಮಹರ್ಷಿಯು ಈ ಕಾಲದಲ್ಲಿ ಧಾರ್ಮಿಕ ಅವನತಿಯು ನಾಡಿನಲ್ಲಿ ಉಂಟಾದದ್ದನ್ನು ತಿಳಿದು ಅವನು ಇದನ್ನು ನಿವಾರಿಸಬೇಕೆಂದು ಶಿವನಿಗೆ ಬಿನ್ನವಿಸಲು ಶಿವನು ಈ ಸ್ಥಿತಿಯನ್ನು ದೂರಮಾಡುವದಕ್ಕೋಸ್ಕರ ತನ್ನ ಸಮೀಪದಲ್ಲಿದ್ದ ದೇವಾಂಗ ಗಣೇಶ್ವರನಿಗೆ ಆಜ್ಞಾಪಿಸಿದನು. ಆಗ ಈ ಗಣೇಶ್ವರನು ಮುದನೂರಲ್ಲಿ ಕಾಮಯ್ಯ ಮತ್ತು ಶಂಕರೀ ಇವರ ಉದರದಲ್ಲಿ ಜನಿಸಿದನು. ದೇವರದಾಸಿಮಯ್ಯನು ಹೀಗೆ ಜನಿಸಿದ ಬಳಿಕ ಅವನು ಅನೇಕ ಬಗೆಯ ಸಮಾಜೋದ್ಧಾರ ಕಾರ್ಯಗಳನ್ನು ಅನೇಕ ರೀತಿಯಿಂದ ಜರಿಗಿಸುತ್ತ ಬಂದನೆಂಬುದು ಅವನ ಚರಿತ್ರೆಯಿಂದ ಸ್ಪಷ್ಟವಾಗಿ ತೋರಿಬರುತ್ತದೆ.

ದೇವರದಾಸಿಮಯ್ಯನು ಉಚ್ಚತರಗತಿಯ ಬೋಧಕನಿದ್ದಾನೆ. ವೀರಶೈವ ಶಿವಶರಣರಲ್ಲಿ ರೇವಣಸಿದ್ಧೇಶ್ವರ, ಪಂಡಿತಾರಾಧ್ಯ, ವರದಾನಿ ಗುಡ್ಡಮ್ಮ, ಅಲ್ಲಮಪ್ರಭು ಹೀಗೆ ಅನೇಕ ಬೋಧಕರು ಆಗಿಹೋಗಿದ್ದು, ಇಂಥ ಮಹಾನುಭಾವರ ವರ್ಗದಲ್ಲಿ ಅವನು ಬರುತ್ತಾನೆ. ಅವನು ಶ್ರೀಶೈಲ ಮಲ್ಲಿಕಾರ್ಜುನನ ಸನ್ನಿಧಿಯಲ್ಲಿ ದೀಕ್ಷೆಯನ್ನು ಹೊಂದಿದಬಳಿಕ ಅಂದಿನಿಂದ ಅಂತ್ಯಕಾಲದವರೆಗೂ ಬಹುಜನ ಸಮಾಜದಲ್ಲಿ ವೀರಶೈವ ಧರ್ಮ ತತ್ವಗಳನ್ನು ಪ್ರಸಾರಮಾಡುತ್ತ ಹೋದುದು ತಿಳಿದು ಬರುತ್ತದೆ.

ದೇವರ ದಾಸಿಮಯ್ಯನು ತನ್ನ ಬೋಧ ಮಾಡುವ ಕಾರ್ಯವನ್ನು ಕರ್ನಾಟಕದ ಕೆಲವೊಂದು ಭಾಗದಲ್ಲಿಯೇ ಹೆಚ್ಚಾಗಿ ಮಾಡಿದ್ದಾನೆಂದು

ತೋರುತ್ತದೆ. ಈ ಭಾಗವು ಪೂರ್ವಕ್ಕೆ ಶ್ರೀಶೈಲದಿಂದ ಹಿಡಿದು ಪಶ್ಚಿಮಕ್ಕೆ ವಿಜಾಪುರ ಜಿಲ್ಹೆಯ ಮಧ್ಯದ ವರೆಗೂ ಇತ್ತೆಂದು ಅವನ ಚರಿತ್ರೆಯಿಂದ ತಿಳಿದು ಬರುತ್ತದೆ. ಅವನು ಈ ಕ್ಷೇತ್ರದ ಹೊರಗೆ ಹೋದದ್ದು ಬಹುಶಃ ಕಂಡು ಬರುವದಿಲ್ಲ. ಆದರೆ ರೇವಣಸಿದ್ಧೇಶ್ವರ, ಅಲ್ಲಮಪ್ರಭು, ಮೊದಲಾದವರ ಸಂಚಾರವು ಉತ್ತರಕ್ಕೆ ಕಾಶೀ ಪಟ್ಟಣದಿಂದ ದಕ್ಷಿಣಕ್ಕೆ ತಮಿಳು ದೇಶದವರೆಗೂ ಇತ್ತೆಂದು ಅವರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಆದರೆ ದೇವರ ದಾಸಿಮಯ್ಯನ ಬೋಧೆಯ ಮೂಲಕ ವೀರ ಶೈವ ಧರ್ಮದ ಪರಿಣಾಮಗಳು ನಾಡಿನ ಕೆಲವೊಂದು ವಿಶಿಷ್ಟ ಭಾಗದಲ್ಲಿ ಸ್ಥಿರತರವಾಗಿ ಉಳಿಯಲಿಕ್ಕೆ ಕಾರಣವಾಯಿತು. ಇದರಿಂದ ದೇವರ ದಾಸಿಮಯ್ಯಸಿದ್ಧ ಪ್ರಾಂತದಲ್ಲಿ ಶಿವಶರಣರು ಅವನ ತರುವಾಯ ಸ್ವಲ್ಪ ಕಾಲದಲ್ಲಿಯೇ ಅಸಂಖ್ಯಾತವಾಗಿ ಜನಿಸಿದ್ದು ಕಂಡು ಬರುತ್ತದೆ. ಇವರ ಮೂಲಕಕಲಬುರ್ಗಿ ಮತ್ತು ವಿಜಾಪುರ ಜಿಲ್ಹೆಗಳಲ್ಲಿ ಒಂದು ದೊಡ್ಡ ಸಾಮಾಜಿಕ ಕ್ರಾಂತಿಯು ಉಂಟಾಯಿತು.

ಈಗಿನ ಚರಿತ್ರೆಯಲ್ಲಿ ದೇವರ ದಾಸಿಮಯ್ಯನು ಜನರಿಗೆ ಬೋಧ ಮಾಡಿದ್ದರ ಕೆಲವು ವಿವರಗಳು ಬಂದಿರುತ್ತವೆ. ಅವುಗಳನ್ನು ನಾವು ಪರಿಶೀಲಿಸಿದಲ್ಲಿ ದೇವರದಾಸಿಮಯ್ಯನು ಪವಾಡಗಳ ಮೂಲಕ ಜನರಲ್ಲಿ ಮತತತ್ವ ಪ್ರಚಾರ ಮಾಡಿದ್ದು ವಿಶೇಷವಾಗಿ ಕಂಡುಬರುವದಿಲ್ಲ. ಈ ಪವಾಡಗಳು ಅವನ ಚರಿತ್ರೆಯಲ್ಲಿ ಅಲ್ಲಲ್ಲಿ ಕಂಡು ಬಂದರೂ ಅವುಗಳಿಗೆ ಮುಖ್ಯ ಸ್ಥಾನವು ಇರುವದಿಲ್ಲ. ದೇವರದಾಸಿಮಯ್ಯನು ತನ್ನ ಬೋಧೆಯಲ್ಲಿ ಉಚ್ಚವಿಚಾರಗಳು, ಧರ್ಮತತ್ವಗಳು, ನಡೆನುಡಿಗಳು, ಇವುಗಳಿಗೆ ಮಹತ್ವವನ್ನು ಕೊಟ್ಟಿರುತ್ತಾನೆ. ಅವನು ಜನರಲ್ಲಿರುವ ಅಜ್ಞಾನದ ಲಾಭವನ್ನು ತೆಗೆದುಕೊಂಡು ಪವಾಡಗಳ ಮೂಲಕ ಅಂಧಶ್ರದ್ಧೆಯನ್ನು ಹುಟ್ಟಿಸಲು ಯಾವಾಗಲೂ ಪ್ರಯತ್ನ ಮಾಡಿಲ್ಲ. ಅವನು ಜನರಲ್ಲಿ ತಿಳುವಳಿಕೆಯನ್ನು ಹುಟ್ಟಿಸಿ ಅವರಿಗೆ ಸತ್ಯವಾದುದು ಆವುದು ಎಂಬುದನ್ನು ತಿಳಿಸಿ ಅವರಲ್ಲಿ ನಂಬಿಗೆಯನ್ನು ಹುಟ್ಟಿಸಿ ಅವರಿಗೆ ದೀಕ್ಷೆಯನ್ನು ಕೊಟ್ಟಿದ್ದಾನೆ. ಇದು ಅವನ ಕಾರ್ಯಗಳ ವೈಶಿಷ್ಟ್ಯವಾಗಿರುತ್ತದೆ.

ಇದರಿಂದ ದೇವರದಾಸಿಮಯ್ಯನು ಅತ್ಯಂತ ವಿದ್ವಾಂಸನಾಗಿದ್ದನೆಂಬುದು ಸ್ಪಷ್ಟವಾಗುತ್ತದೆ. ಅವನು ವೇದವೇದಾಂತಗಳು, ಉಪ

ನಿಷತ್ತು ಆಗವಾದಿ ಗ್ರಂಥಗಳು ಇವುಗಳನ್ನು ಚನ್ನಾಗಿ ಪರಿಶೀಲಿಸಿ ದವನಾಗಿದ್ದನೆಂದು ತೋರುತ್ತದೆ. ಅವನ ವಚನಗಳಲ್ಲಿ ಬರುವ ಸಂಸ್ಕೃತ ಅವತರಣಗಳ ಮೇಲಿಂದ ಈ ಅನುಮಾನವು ದೃಢಪಡುತ್ತದೆ. ಒಂದು ವೇಳೆ ಅವನು ವಿದ್ವಾಂಸನಾಗದೆ ಹೋಗಿದ್ದರೆ ಅವನು ಪರಮತಗಳ ಖಂಡನೆಯನ್ನು ಮಾಡಲು ಸಾಮರ್ಥ್ಯವನ್ನು ಹೊಂದುತ್ತಿದ್ದಿಲ್ಲ. ಬೋಧ ಕನು ತನ್ನ ಕಾರ್ಯವನ್ನು ಮಾಡುವಲ್ಲಿ ಅವನಿಗೆ ಅನೇಕತರದ ಜನರ ಸಂಬಂಧವು ಉಂಟಾಗುವದರಿಂದ ಅವರೊಡನೆ ವಾದಮಾಡುವ ಪ್ರಸಂಗ ಗಳು ಆಗಿಂದಾಗ್ಗೆ ಬರುತ್ತವೆ. ಆಗ ಅವನಲ್ಲಿ ಪೂರ್ಣ ವಿದ್ವತ್ತು ಇರದ ಹೊರ್ತು ಅವರ ಮತಗಳನ್ನು ಖಂಡಿಸುವದು ಅವನಿಂದ ಎಂದೂ ಸಮರ್ಪಕವಾಗಿ ಆಗಲಾರದು.

ದೇವರದಾಸಿಮಯ್ಯನು ಎಲ್ಲ ತರಗತಿಯ ಜನರಲ್ಲಿ ಬೆರೆದು ತನ್ನ ಉಪದೇಶ ಕಾರ್ಯಗಳನ್ನು ನಡಿಸಿದ್ದಾನೆ ಅನೇಕರು ಭಾವಿಸಿರುವಂತೆ ಕೇವಲ ನೇಯ್ಗೆಯವರಲ್ಲಿ ಮಾತ್ರ ಅವನು ಉಪದೇಶ ಮಾಡಿರುವ ದಿಲ್ಲ. ಅವನು ಅತ್ಯಂತ ಕಾಡುಜನರನ್ನು ಹಿಡಿದು ಉಚ್ಚಸಮಾಜಗ ಳಾದ ಜೈನ ಬ್ರಾಹ್ಮಣರ ವರೆಗೆ ಎಲ್ಲರಲ್ಲಿಯೂ ತನ್ನ ಧರ್ಮತತ್ತ್ವ ಗಳ ಬೋಧೆಯನ್ನು ಮಾಡಿದ್ದಾನೆ. ಬಹುಜನರು ವೀರಶೈವ ಸಮಾಜ ದಲ್ಲಿ ಅನೇಕ ಪಂಗಡಗಳಿದ್ದು ಇಂಥ ಪ್ರತಿಯೊಂದು ಪಂಗಡದಲಿ ಒಬ್ಬೊಬ್ಬ ಶರಣನು ಹುಟ್ಟಿ ಅವನು ತನ್ನ ಕಾಯಕ ಮಾಡುವ ಜನ ರಿಗಷ್ಟೇ ಉಪದೇಶಮಾಡಿ ದೀಕ್ಷೆಕೊಡುತ್ತ ಹೋದದ್ದರಿಂದ ವೀರಶೈವ ಸಮಾಜವು ಬೆಳೆಯಿತೆಂದು ಅಭಿಪ್ರಾಯಪಡುತ್ತಾರೆ. ಆದರೆ ಈ ತಿಳು ವಳಿಕೆಯು ತಪ್ಪಾದದ್ದೆಂದು ನಮಗೆ ತೋರುತ್ತದೆ. ಯಾಕಂದರೆ ಶಿವ ಶರಣರ ಕಾರ್ಯಗಳನ್ನು ಮತ್ತು ಅವರ ಗ್ರಂಥಗಳನ್ನು ಅವಲೋಕಿಸಿ ದಲ್ಲಿ ಅವರಲ್ಲಿ ಯಾರೂ ಹೀಗೆ ತಮ್ಮ ವಿಶಿಷ್ಟಜಾತಿಯನ್ನು ಅನುಲಕ್ಷಿಸಿ ಬೋಧೆ ಮಾಡದೆ ಅವರು ಇಡೀ ಜನತೆಯಲ್ಲಿ ಸರ್ವಸಾಮಾನ್ಯವಾಗಿ ಬೋಧಿಸುತ್ತ ಹೋದದ್ದು ಕಂಡುಬರುತ್ತದೆ. ಹೀಗೆ ಶಿವಶರಣರು ಎಲ್ಲರಲ್ಲಿ ಧಾರ್ಮಿಕಭಾವನೆಯನ್ನು ಹುಟ್ಟಿಸಿ ಎಲ್ಲರಿಗೂ ದೀಕ್ಷೆಯನ್ನು ಮಾಡಿದ್ದಾರೆ. ದೇವರದಾಸಿಮಯ್ಯನಾದರೂ ಈ ರೀತಿಯಂತೆಯೇ ಆಚ ರಿಸಿದ್ದಾನೆ.

ದೇವರದಾಸಿಮಯ್ಯನು ಹೀಗೆ ಪ್ರಚಾರಕಾರ್ಯ ಮಾಡುತ್ತಿರುವಾಗ ಅವನು ಒಂದು ದಿವಸ ಒಂದು ಅರಣ್ಯವನ್ನು ಪ್ರವೇಶಿಸಲು ಅಲ್ಲಿ ಒಂದು ಕಾಡುಜನರ ಗುಂಪನ್ನು ಕಂಡನು. ಈ ಜನರು ಬೇಟೆಯಾಡುತ್ತ ಮೃಗಗಳ ಮಾಂಸವನ್ನು ತಿನ್ನುತ್ತ ಹಿಂಸಾಚರಣೆಯಲ್ಲಿರುವದನ್ನು ನೋಡಿ ಅವರನ್ನು ಉದ್ಧಾರ ಮಾಡಬೇಕೆಂಬ ಅಪೇಕ್ಷೆಯು ಅವನಲ್ಲಿ ಉಂಟಾಯಿತು. ಆಗ ಅವರಿಗೋಸ್ಕರ ಅವನು ಅಸಹ್ಯಭಾವವನ್ನು ಎಷ್ಟುಮಾತ್ರವೂ ತಾಳದೆ, ಅವರಿಗೆ ಸನ್ಮಾರ್ಗೋಪದೇಶವನ್ನು ಮಾಡಲೆಣಿಸಿ ಹಿಂಸಾಚರಣೆಯನ್ನು ನೀವು ಬಿಟ್ಟುಬಿಡಬೇಕೆಂದ್ಯ ಅವರಿಗೆ ಅನೇಕ ರೀತಿಯಿಂದ ಉಪದೇಶಿಸಿದನು. ಅವರು ಅವನ ಉಪದೇಶವನ್ನು ಕೇಳಲಾಗಿ ಅವರ ಮನಸ್ಸು ತಿರುಗಿತು. ಮತ್ತು ಅವರು ದೇವರದಾಸಿಮಯ್ಯನಿಂದ ದೀಕ್ಷೆಯನ್ನು ಹೊಂದಲು ಸಿದ್ಧರಾದರು. ದೇವರದಾಸಿಮಯ್ಯನು ಅವರಿಗೆ ಬೇಟೆಯಾಡಬಾರದೆಂದು ತಿಳಿಸಿ ಅವರಿಗೆ 'ತಿಲಕಾಯಕ' ಅಂದರೆ ಎಣ್ಣೆಯನ್ನು ತೆಗೆಯುವ ಉದ್ಯೋಗವನ್ನು ನಿಯಮಿಸಿ ಆದರಿಂದಲೇ ಅವರು ಉಪಜೀವನವನ್ನು ಹೊಂದಬೇಕೆಂದು ಅವರಿಗೆ ಬೋಧಿಸಿದನು. ಹೀಗೆ ಬೋಧಿಸಿ ಈ ಕಾಯಕವನ್ನು ಅವರು ಶ್ರೀಮಲ್ಲಿಕಾರ್ಜುನನ ಸೇವೆಗೋಸ್ಕರ ಮಾಡಬೇಕೆಂದು ಅವರಿಗೆ ಅರುಹಿ ಅಲ್ಲಿಂದ ಅವನು ತೆರಳುವವನಾದನು. ದೇವರದಾಸಿಮಯ್ಯನ ಈ ಕಾರ್ಯದಲ್ಲಿ ಬೋಧಕನು ಹೇಗೆ ನಡೆಯಬೇಕೆಂಬುದರ ವಿವರವು ಬಹು ಬೋಧಪ್ರದವಾಗಿದೆ.

ಮುಂದೆ ದೇವರದಾಸಿಮಯ್ಯನು ಮತ್ತೊಂದು ಊರಿಗೆ ಹೋಗಿರಲು, ಅಲ್ಲಿದ್ದ ವಿಷ್ಣುಭಕ್ತರಾದ ಬ್ರಾಹ್ಮಣರು ಅವನ ಕಡೆಗೆ ಬಂದು ಶಿವನ ನಿಂದೆಯನ್ನು ಮಾಡುತ್ತ ಶಿವನನ್ನು ಪೂಜಿಸುವವರು ಕುಲಗೇಡಿಗಳೆಂದು ಹೀಯಾಳಿಸಲು ಪ್ರಾರಂಭಿಸಿದರು. ಅದಕ್ಕೆ ದಾಸಿಮಯ್ಯನು ಅವರಿಗೆ--ಶಿವನು ವಿಶ್ವಗತನಾಗಿದ್ದಾನೆ, ಆವನಿಗೆ ವಿಷ್ಣುವಿನಂತೆ ಹುಟ್ಟು ಸಾವುಗಳೆಂಬುವು ಇಲ್ಲ, ಅವನೇ ಶ್ರೇಷ್ಠನು, ಅವನು ನಿಜವಾದ ದೇವರು, ಎಂದು ಶಾಸ್ತ್ರಮುಖದಿಂದ ಸಿದ್ಧಪಡಿಸಿ, ಭಕ್ತರಿಗೆ ಲಿಂಗಧಾರಣವಿರುವದರಿಂದ ಅವರಿಗೆ ಕುಲಸೂತಕವೆಂಬುದಿಲ್ಲ, ಅದು ಅವರಲ್ಲಿ ಅಳಿದುಹೋಗುತ್ತದೆಂದು ತಿಳಿಸುವವನಾದನು.

ಈ ಪ್ರಕಾರ ಅವನು ಬೋಧೆಮಾಡುತ್ತ ಸಂಚರಿಸುತ್ತಿರಲು, ಒಂದು ಗ್ರಾಮದಲ್ಲಿ ಒಕ್ಕಲಿಗರ ಸಂಗಡವೊಂದು ಅವನ ದೃಷ್ಟಿಗೆ ಬಿದ್ದಿತು. ಅದರ ಮುಖ್ಯಸ್ಥನನ್ನು ಅವನು ಕಂಡು ಅವನಿಗೆ— ನಿನ್ನ ಕುಲದವರು ಧನಿಕರಿರುವದೇನೋ ನಿಜವು. ಆದರೆ ಅವರಿಗೆ ಆಚಾರಗಳೆಂಬುವು ಗೊತ್ತಿಲ್ಲ. ಅವರು ಒಕ್ಕಲುತನ ಮಾಡುತ್ತ ಯಾವಾಗಲೂ ಹೊಲ ಸಿನಲ್ಲಿ ಇರುತ್ತಾರೆ. ಅವರು ಕೀಳು ದೈವಗಳನ್ನು ಭಜಿಸುತ್ತಾರೆ. ಅವರು ಅವುಗಳಿಗೆ ಬಲಿಕೊಡುತ್ತಾರೆ. ಇದು ಹಿಂಸೆಯು, ಪಾಪ ಕರ್ಮವು, ಎಂದು ಬೋಧಿಸಿ ಅವರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟನು.

ಮುಂದೆ ದೇವರದಾಸಿಮಯ್ಯನು ಮಾರ್ಗಕ್ರಮಣ ಮಾಡುತ್ತಿರಲು ಅನೇಕ ಪಟ್ಟಣಗಳಲ್ಲಿ ಬಹುಜನ ಜೈನರು ಅವನನ್ನು ಕಾಣುವವರಾದರು. ಇಂಥಪ್ರಸಂಗಗಳಲ್ಲಿ ಉಭಯತರಲ್ಲಿ ಯಾವಾಗಲೂ ಪರಸ್ಪರ ವಾಗ್ವಾದಗಳಾಗುತ್ತಿದ್ದವು. ಹೀಗೆ ವಾದಗಳು ನಡೆಯಲು ಅವುಗಳಲ್ಲಿ ದೇವರದಾಸಿಮಯ್ಯನು ಅವರಿಗೆ— ದೇವರು ಇದ್ದಾನೆ. ಅವನೇ ವಿಶ್ವಕ್ಕೆ ಕರ್ತನು. ಅವನನ್ನು ನೀವು ನಂಬಬೇಕು. ಶಿವನು ಜಗತ್ತಿನಲ್ಲಿ ಎಲ್ಲೆಲ್ಲಿಯೂ ಪಸರಿಸಿದ್ದಾನೆಂಬುವನ್ನು ತಿಳಿಯಪಡಿಸುವನು.

ಅನೇಕ ಕಡೆಗೆ ದೇವರದಾಸಿಮಯ್ಯನನ್ನು ನೇಗೆಯ ಕಾಯಕ ಮಾಡುವವರೂ ಕಾಣುತ್ತಬಂದರು. ಅವನು ಅವರಿಗೆ ಶುದ್ಧ ಶಿವಾಚಾರ ಮಾರ್ಗವನ್ನು ಬೋಧಿಸಿ ಅದರಂತೆ ನಡಿಯಿರೆಂದು ಹೇಳುವನು. ಅವರಿಗೆ ಅಂಗಲಿಂಗದ ರೀತಿ, ಷಟ್‌ಸ್ಥಲದ ನಡವಳಿಕೆ ಇವುಗಳನ್ನು ತಿಳಿಸಿ ಹೇಳುವನು. ದೇವರದಾಸಿಮಯ್ಯನು ತಾನು ಸ್ವತಃ ನೇಯಿಗೆಯ ಕಾಯಕವನ್ನು ಮಾಡುತ್ತಿದ್ದರೂ ಅವನು ಆ ಕಾಯಕದವರಿಗಷ್ಟೇ ಹೀಗೆ ಉಪದೇಶಮಾಡದೆ ಸರ್ವರಿಗೂ ಉಪದೇಶ ಮಾಡುತ್ತ ಹೋದನೆಂಬುದು ಅವನ ಚರಿತ್ರೆಯಲ್ಲಿ ಕಂಡುಬರುತ್ತಿದೆ.

ಈ ಕಾಲದಲ್ಲಿ ಕರ್ನಾಟಕದಲ್ಲಿ ಯಂತ್ರ ತಂತ್ರ ಮಾಡುವವರೂ ಸಿದ್ಧರೂ ಯೋಗಾಭ್ಯಾಸಿಗಳೂ ಬಹು ಜನರು ಇದ್ದುದು ತಿಳಿದುಬರುತ್ತಿದೆ. ದಾಸಿಮಯ್ಯನು ಅಂಥವರನ್ನು ಕಂಡಾಗ ಅವರಿಗೆ ಇಂಥ ಮಾರ್ಗವು ಮೋಕ್ಷವನ್ನು ಕೊಡಲಾರದೆಂದು ವಾದಿಸಿದ್ದಾನೆ. ಅವರು ಇದಕ್ಕೆ ಕೆರಳಿ ತಮ್ಮ ವಾಮ ಮಾರ್ಗದ ಪ್ರಯೋಗಗಳನ್ನು ಅವನ

ಮೇಲೆ ಮಾಡಿರುವರು. ಆದರೆ ದೇವರದಾಸಿಮಯ್ಯನು ಮಂತ್ರ ಸ್ಮರಣೆಯಿಂದ ಲಿಂಗದ ಕಳೆಗಳನ್ನು ತನ್ನಲ್ಲಿ ಪ್ರಜ್ವಲಗೊಳಿಸಿದವನು. ಆದ್ದರಿಂದ ಅವರ ತಂತ್ರಗಳು ಅವನ ಮೇಲೆ ಯಾವ ಪರಿಣಾಮವನ್ನೂ ಮಾಡಿರುವದಿಲ್ಲ.

ಈ ಪ್ರಕಾರ ದೇವರದಾಸಿಮಯ್ಯನು ಎಲ್ಲ ವರ್ಗದ ಜನರಲ್ಲಿ ಸದಾಚಾರ, ಧರ್ಮ, ನೀತಿ, ಶುದ್ಧವರ್ತನೆ, ಅಹಿಂಸಾಚರಣೆ, ಲಿಂಗಾನುಭವ, ಷಟ್‌ಸ್ಥಲ ಇವುಗಳನ್ನು ಬೋಧಿಸುತ್ತ ಸಂಚರಿಸುತ್ತ ಬಂದನು. ಅವನು ತನ್ನ ಪ್ರಚಾರ ಕಾರ್ಯದಲ್ಲಿ ವೀರಶೈವೋಪದೇಶಕರಾಗಿರುವ ಜಂಗಮರು ಅವನನ್ನು ಕಾಣುತ್ತಾರೆ. ಆದರೆ ಅವರು ತಮ್ಮ ಉಪದೇಶ ಮಾಡುವ ಕಾರ್ಯವನ್ನು ದುರ್ಲಕ್ಷಿಸಿ ದುರಾಚಾರವುಳ್ಳವರಾಗಿದ್ದುದು ಅವನಿಗೆ ಕಂಡುಬಂದಲ್ಲಿ ಅವರನ್ನು ಸಹ ಟೀಕಿಸಲಿಕ್ಕೆ ಅವನು ಹಿಂದೆಗೆದಿರುವದಿಲ್ಲ. ಜಂಗಮರು ಗ್ರಾಸಕ್ಕಾಗಿ ಆಸೆಮಾಡಿ ಉದರವನ್ನು ಹೊರೆದರೆ ಅವರ ವೇಷವು ವೇಶಿಯಿಂದಲೂ ಕರಕಷ್ಟವೆಂತಲೂ ಕಂಡ ಕಂಡವರಿಗೆ ಕೈಯ್ಯೊಡ್ಡಿ ಬೇಡುವ ಇಂಥ ಭಂಡರನ್ನು ಪರಮಾತ್ಮನು ಒಲ್ಲನೆಂತಲೂ ವೇಷವ ಹೊತ್ತು ದೋಷದಲ್ಲಿ ನಡೆದರೆ ಪರಮಾತ್ಮನು ಅವರನ್ನು ನರಕದಲಿಕ್ಕುವನೆಂತಲೂ ಅನೇಕ ಬಗೆಯಾಗಿ ಇಂಥವರನ್ನು ಕಟುತರವಾಗಿ ತನ್ನ ಉಕ್ತಿಗಳಲ್ಲಿ ನಿಂದಿಸಿರುವನು.

ಈ ಪ್ರಕಾರ ದೇವರದಾಸಿಮಯ್ಯನು ಷಟ್‌ಸ್ಥಲದ ಮಾರ್ಗವನ್ನು ಎಲ್ಲ ಜನರಲ್ಲಿ ಪ್ರಸಾರಮಾಡುತ್ತ ನಾಡಿನಲ್ಲಿ ಸಂಚರಿಸಿದ್ದಾನೆ. ಅವನು ಉಪದೇಶಿಸುತ್ತಿದ್ದ ತತ್ವಗಳು ಅವನು ರಚಿಸಿದ ವಚನಗಳಲ್ಲಿ ಬಹಳ ಅತ್ಯುತ್ತಮವಾಗಿ ನಿರೂಪಿಸಲ್ಪಟ್ಟಿವೆ. ಅವುಗಳನ್ನು ವಾಚಕರು ಅವಶ್ಯವಾಗಿ ಓದಬೇಕು. ಅವನು ಅತ್ಯಂತ ವಿಶಾಲವಾದ ಧಾರ್ಮಿಕ ತತ್ವಗಳನ್ನು ಅಚ್ಚಗನ್ನಡ ನುಡಿಯಲ್ಲಿ ಹೇಳಿದ್ದು ಕಂಡುಬರುತ್ತದೆ. ಅವನು ಅತ್ಯಂತ ಸಾಮಾನ್ಯ ಜನರಿಗೆ ತಿಳಿಯುವಂತೆ ವಾಡಿಕೆಯ ಉದಾಹರಣೆಗಳನ್ನು ಕೊಡುತ್ತ ಉಚ್ಚ ತತ್ವಗಳನ್ನು ಅವುಗಳಲ್ಲಿ ನಿರೂಪಿಸಿದ್ದಾನೆ. ಅವನ ಮಾತಿನ ಜಾಣ್ಮೆಯು ಬಹು ಮಿಗಿಲಾದದ್ದಿರುತ್ತದೆ. ಅವನು ತನ್ನ ಉಕ್ತಿಗಳಲ್ಲಿ, ಬಂಡಿ–ಅದರ ಕೀಲು, ಉರಿ–ಹುಲ್ಲು, ಎಳ್ಳು–ಎಣ್ಣೆ, ಆಕಳ ಕೆಚ್ಚಲು–ಹಾಲು ಇಂಥ ವಾಡಿಕೆಯ ಉದಾಹರಣೆಗಳನ್ನು ಕೊಡುತ್ತ ಉದಾತ್ತ ತತ್ವಗಳನ್ನು ವಿವೇಚಿಸಿದ್ದಾನೆ.

ದೇವರದಾಸಿಮಯ್ಯನ ಈ ಧರ್ಮಪ್ರಸಾರ ಕಾರ್ಯಗಳ ಮೂಲಕ ಆಗಿನ ಎಲ್ಲ ವರ್ಗದ ಜನರು ವೀರಶೈವ ಮತವನ್ನು ಸ್ವೀಕರಿಸಿದಂತೆ ಅವನ ಚರಿತ್ರೆಯಿಂದ ತಿಳಿದುಬರುತ್ತದೆ. ಅವನು ಇದರಲ್ಲಿ ಯಾರ ಮೇಲೂ ಒತ್ತಾಯ ಅಥವಾ ಮೋಸವನ್ನು ಮಾಡಲು ಪ್ರಯತ್ನಿಸಿಲ್ಲ. ಅವನು ವೀರಶೈವ ಮತದಲ್ಲಿರುವ ಉದಾರ ತತ್ವಗಳು, ನೀತಿಯುನಡೆಗಳು, ಲಿಂಗಾನುಭವವ ರೀತಿಗಳು, ಇವುಗಳನ್ನು ಪ್ರಸಾರಮಾಡುತ್ತ ಬಹು ಜನ ಸಮಾಜದ ಮನಸ್ಸನ್ನು ಆಕರ್ಷಿಸಿರುತ್ತಾನೆ. ಇದರಿಂದ ಅವನು ಸಂಚಾರ ಮಾಡಿದಲ್ಲೆಲ್ಲ ಜನರು ಅವನ ಇಷ್ಟದೇವತೆಯಾದ ರಾಮೇಶ್ವರ ಅಥವಾ ರಾಮನಾಥ ಈ ಹೆಸರಿನಿಂದ ಅನೇಕ ದೇವಾಲಯಗಳನ್ನು ಸ್ಥಾಪಿಸಿದರು. ರಾಮೇಶ್ವರ ಮತ್ತು ರಾಮನಾಥ ಈ ಹೆಸರುಗಳು ಒಂದೇ ಇವೆ. ಶ್ರೀಶೈಲಕ್ಕೆ ಸಮೀಪದಲ್ಲಿ ನಂದೀಗ್ರಾಮವೆಂಬುದಿದ್ದು ಇದು ಇದ್ದ ಭಾಗದಿಂದ ವಿಜಾಪುರ ಜಿಲ್ಹೆಯ ಮಧ್ಯಪ್ರದೇಶದಲ್ಲಿದ್ದ ಚಿಮ್ಮಲಿಗೆಯ ಪ್ರದೇಶ ವರೆಗೂ ಈ ಹೆಸರಿನ ಅನೇಕ ದೇವಾಲಯಗಳು ಈಗಲೂ ಇವೆ. ಆದ್ದರಿಂದ ಈ ಭಾಗದಲ್ಲಿಯೇ ದೇವರದಾಸಿಮಯ್ಯನು ತನ್ನ ಧರ್ಮೋದ್ಧಾರ ಕಾರ್ಯಗಳನ್ನು ನಡಿಸಿರಬೇಕೆಂಬ ಅನುಮಾನವು ಉಂಟಾಗುತ್ತದೆ.

ಈ ಕಾಲದಲ್ಲಿ ಜಯಸಿಂಹರಾಜನು ಚಾಲುಕ್ಯ ಚಕ್ರವರ್ತಿಯಾಗಿ ರಾಜ್ಯವಾಳುತ್ತಿದ್ದನು. ಕ್ರಿ. ಶ. ೯೭೩ ರಲ್ಲಿ ನೂರ್ಮಡಿ ತೈಲಪನು ರಾಷ್ಟ್ರಕೂಟ ರಾಜರನ್ನು ಸದೆಬಡಿದು ಚಾಲುಕ್ಯಾಧಿಪತ್ಯವನ್ನು ಪುನರುಜ್ಜೀವನಗೊಳಿಸಿದನು. ಅವನ ತರುವಾಯ ೯೯೭ ರಿಂದ ೧೦೦೮ ರ ವರೆಗೆ ಸತ್ಯಾಶ್ರಯನೆಂಬ ರಾಜನು ರಾಜ್ಯವಾಳಿದನು. ಅವನ ತರುವಾಯ ಜಯಸಿಂಹನು ಪಟ್ಟವೇರಿದನು. ಅವನು ಆ ವರೆಗೆ ಚಿಕ್ಕದಾಗಿದ್ದ ತನ್ನ ರಾಜ್ಯವನ್ನು ಎಲ್ಲ ಕಡೆಗೂ ವಿಸ್ತಾರಪಡಿಸಿದನು. ಅವನು ಕೊಂಕಣ ಪ್ರಾಂತದ ಅಧಿಪತಿಗಳನ್ನೂ ಚೋಳರಾಜರನ್ನೂ ಜಯಿಸಿ ಮೊದಲು ಕಳೆದುಹೋಗಿದ್ದ ರಾಜ್ಯಗಳನ್ನು ಅಂಕಿತಮಾಡಿಕೊಂಡನು. ಅವನು ಮೊದಲು ಬಳ್ಳಿಗಾವಿ, ಆ ಮೇಲೆ ಯಾದಗಿರಿ, ಆ ಮೇಲೆ ೧೦೩೩ ರಲ್ಲಿ ಕೊಲ್ಲಿಪಾಕಿ, ಅದರ ತರುವಾಯ ಪೊಟ್ಟಲಕೆರೆ ಈ ಸ್ಥಳಗಳನ್ನು ತನ್ನ ರಾಜಧಾನಿಗಳನ್ನಾಗಿ ಮಾಡಿಕೊಂಡು ರಾಜ್ಯವಾಳಿದನು.

ಕರ್ನಾಟಕ ಇತಿಹಾಸದಲ್ಲಿ ಅತ್ಯಂತ ಪ್ರಸಿದ್ಧಿಹೊಂದಿದ ಅಕ್ಕಾದೇವಿಯು ಇವನ ಅಕ್ಕನಾಗಿದ್ದು ಅವಳು ಈ ಕಾಲದಲ್ಲಿ ವಿಜಾಪುರ ಜಿಲ್ಹಾ ಹುನಗುಂದ ತಾಲೂಕಿನಲ್ಲಿರುವ ಅರಸಿಬಿಡಿ (ಇದರ ಹಿಂದಿನ ಹೆಸರು ವಿಕ್ರಮಪುರ) ಈ ಸ್ಥಳದಲ್ಲಿ ತನ್ನ ತಮ್ಮನ ಸಾಮಂತಳಾಗಿ ರಾಜ್ಯ ಭಾರ ಮಾಡುತ್ತಿದ್ದಳು. ಹೀಗೆ ಅತ್ಯಂತ ಪ್ರಾಬಲ್ಯವನ್ನು ಹೊಂದಿದ ಜಯಸಿಂಹರಾಜನಿಗೆ ಸುಗ್ಗಲಾದೇವಿ ಇವಳು ಪಟ್ಟದ ರಾಣಿಯಾಗಿದ್ದಳು. ಇವಳು ವೀರಶೈವ ಶಿವಶರಣಿಯರಲ್ಲಿ ಅತ್ಯಂತ ಪ್ರಸಿದ್ಧಳಾಗಿದ್ದಾಳೆ. ಇವಳು ದೇವರದಾಸಿಮಯ್ಯನಿಗೋಸ್ಕರ ಭಕ್ತಿಯನ್ನು ತಾಳಿ ಅವನ ವೀರಶೈವ ಧರ್ಮಪ್ರಸಾರ ಕಾರ್ಯಕ್ಕೆ ಅತ್ಯಂತ ಉತ್ತೇಜನವನ್ನು ಕೊಟ್ಟಿದ್ದಾಳೆ. ಅದರ ವಿವರವು ಈ ಚರಿತ್ರೆಯಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿರುತ್ತದೆ.

ಸುಗ್ಗಲಾದೇವಿಯು ಅತ್ಯಂತ ದೃಢಮನಸ್ಸಿನವಳೂ ದೇವರದಾಸಿಮಯ್ಯನಿಗೋಸ್ಕರ ಗಾಢವಾದ ಭಕ್ತಿಯುಳ್ಳವಳೂ ವಿರೋಧಿಗಳು ಎಷ್ಟು ವಿರೋಧಿಸಿದರೂ ಅದಕ್ಕೆ ಅಂಜದವಳೂ ಆಗಿ ವರ್ತಿಸಿದ್ದಾಳೆ. ಇದರಿಂದ ಆರಂಭದ ಸ್ಥಿತಿಯಲ್ಲಿದ್ದ ಆಗಿನ ವೀರಶೈವ ಮತಕ್ಕೆ ಅತ್ಯಂತ ಪ್ರೋತ್ಸಾಹವು ಉಂಟಾಯಿತು. ಇದರಲ್ಲಿ ಅವಳು ರಾಜನಾದ ತನ್ನ ಪತಿಯ ಕೋಪವನ್ನು ಸಹ ಲೆಕ್ಕಿಸಿರುವದಿಲ್ಲ ಈ ಪ್ರಕಾರ ಅವಳು ದೇವರದಾಸಿಮಯ್ಯನಿಗೆ ಸಹಾಯಕಳಾಗಿ ವೀರಶೈವಮತವನ್ನು ವಿಸ್ತರಿಸಲು ಕಾರಣಳಾಗಿದ್ದಾಳೆ. ಆದ್ದರಿಂದ ಹೇಗೆ ಹೇಗೆ ವೀರಶೈವಮತ ಪ್ರಸಾರವು ನಾಡಿನಲ್ಲಿ ಹೆಚ್ಚುತ್ತ ಹೋಯಿತೋ ಹಾಗೆಯೇ ಅವಳ ಖ್ಯಾತಿಯೂ ಕೂಡ ಬೆಳೆಯುತ್ತಲೇ ಬಂದಿತು. ಆಕೆಯ ಮಹತ್ವವು ಎಷ್ಟು ಇತ್ತು ಎಂಬುದು ಮೈಸೂರು ಪ್ರಾಂತ, ಹಾಸನ ಜಿಲ್ಹಾ, ಬೇಲೂರ ತಾಲೂಕಿನಲ್ಲಿರುವ ಹಳೇಬೀಡಿನಲ್ಲಿಯ ಒಂದು ಶಿಲಾಶಾಸನದಿಂದ ಗೊತ್ತಾಗುತ್ತದೆ. (ಎಪಿಗ್ರಾಫಿಕಾ ಕರ್ನಾಟಿಕಾ-ಹಾಸನ ಜಿಲ್ಲಾ ಶಿಲಾಶಾಸನ ನಂ॥ ೧೧೨ ನೋಡಿರಿ.) ಇದರಲ್ಲಿ ಸುಗ್ಗಳೆಯ ಉಲ್ಲೇಖವಿದ್ದು ಅದರ ಸಂದರ್ಭವನ್ನು ವಾಚಕರು ಅರಿಯುವದು ಬಹಳ ಅವಶ್ಯವಿದೆ.

ಈ ಶಾಸನದ ವರ್ಷವು ೧೨೨೦ ಇದ್ದು, ಹೊಯಿಸಳ ದೇಶವನ್ನು ಆಗ ಆಳುತ್ತಿದ್ದ ವೀರಬಲ್ಲಾಳನು ಸಾಯಲು ಅವನ ದಂಡನಾಯಕ

ನಾದ ಲಕ್ಷ್ಮನೂ ಅವನ ಸಾವಿರ ಜನ ಸೇವಕರೂ ಕೂಡಿಕೊಂಡು ಚಿತೆಯಲ್ಲಿ ಹಾರಿಕೊಂಡು ಪ್ರಾಣಕೊಟ್ಟರು! ಇದು ಆಗಿನ ಕರ್ನಾಟಕಸ್ತ್ರರಲ್ಲಿದ್ದ ಅತುಲ ಸ್ವಾಮಿಭಕ್ತಿಯನ್ನು ತೋರಿಸುತ್ತದೆ. ಆ ಕಾಲದಲ್ಲಿ ಕುಮಾರ ಲಕ್ಷ್ಮನ ಹೆಂಡತಿಯಾದ ಸುಗ್ಗಲೆಯೂ ಕೂಡ ತನ್ನ ಪತಿಯೊಡನೆ ಚಿತೆಯನ್ನು ಪ್ರವೇಶಿಸಿದಳು. ಈ ಶಿಲಾಶಾಸನವನ್ನು ಬರೆದವನು ಈ ಸುಗ್ಗಲಾದೇವಿಯು ಜಯಸಿಂಹರಾಜನ ಹೆಂಡತಿಯಾದ ಸುಗ್ಗಲೆಗೆ ಸಮಾನಳೆಂದು ವರ್ಣಿಸಿದ್ದಾನೆ. ಈ ರೀತಿಯ ವರ್ಣನೆಯಿಂದ ಜಯಸಿಂಹನ ಸುಗ್ಗಲಾದೇವಿಯ ಖ್ಯಾತಿಯು ಎಷ್ಟಿತ್ತೆಂಬುದು ಸ್ಪಷ್ಟವಾಗುತ್ತದೆ. ಈ ಶಾಸನದಲ್ಲಿ ಲಿಖಿಸಿರುವದು ಏನೆಂದರೆ—

"ಜಯಸಿಂಹ ಕ್ಷಿತಿಪಾಲಕಂಗೆ ಜಗಮೆಲ್ಲಂ ಬಣ್ಣಿಸಲ್ ಪೂಣ್ದ ಭಾ। ಷೆಯನೆ ಸುಗಲದೇವಿ ಕೊಟ್ಟ ತೆರದಿಂ ಬಲ್ಲಾಳ ಭೂಪೋತ್ತಮ॥
ಪ್ರಿಯಪುತ್ರಂಗೆ ಕುಮಾರ ಲಕ್ಷ್ಮ ರಥಿಸೀನಾಥಂಗೆ ಕೊಟ್ಟಳ್ ಮನಃ।
ಪ್ರಿಯೆಯಿೂ ಸುಗ್ಗಲದೇವಿ ಭಾಷೆಯನಿಳಾಚಕ್ರಂ ಪೊಗಳ್ವನ್ನೆಗಂ॥"

ಇದರಲ್ಲಿ ಸುಗ್ಗಲದೇವಿಯು ಜಯಸಿಂಹರಾಜನಿಗೆ ಭಾಷೆಯನ್ನು ಹೇಗೆ ಕೊಟ್ಟಳೋ ಹಾಗೆಯೇ ಈ ಸುಗ್ಗಲೆಯೂ ಭಾಷೆಯನ್ನು ಕೊಟ್ಟಳೆಂದು ಹೇಳಿದೆ. ಈ ಭಾಷೆಯು ಯಾವದೆಂಬುದು ಶಿಲಾಶಾಸನದಲ್ಲಿ ಸ್ಪಷ್ಟವಾಗಿರುವದಿಲ್ಲ- ಅದು ದೇವರದಾಸಿಮಯ್ಯನ ಕೂಡ ನಡೆದ ಘಟನೆಯೇ ಇರಬಹುದೆಂದು ತೋರುತ್ತದೆ. ಈ ಭಾಷೆಯು ಗಂಡನೊಡನೆ ಸಹಗಮನಮಾಡಬೇಕೆಂಬುದಕ್ಕೆ ಸಂಬಂಧಿಸಿರಲಾರದು. ಯಾಕಂದರೆ ಇಂಥ ಭಾಷೆಯನ್ನು ಮೊದಲಿಗೆಯೇ ಹೀಗೆ ಕೊಡುವದು ಸಂಭವನೀಯವಲ್ಲ. ಇದಲ್ಲದೆ ವೀರಶೈವ ಧರ್ಮದ ಪ್ರಕಾರ ಸ್ತ್ರೀಯಳು ಮೋಕ್ಷವನ್ನು ಹೊಂದಲು ಸ್ವತಂತ್ರಾಧಿಕಾರವುಳ್ಳವಳಿರುವದರಿಂದಲೂ ಪತಿಯ ಪುಣ್ಯಪಾಪಗಳಿಗೆ ಅವಳ ಸಂಬಂಧವಿರದ್ದರಿಂದಲೂ ಅವಳು ತನ್ನ ಗಂಡನ ಕೂಡ ಸಹಗಮನ ಮಾಡುವ ಕಾರಣವಿರುವದಿಲ್ಲ. ಆದ್ದರಿಂದ ಸುಗ್ಗಲೆಯ ಬಗ್ಗೆ ಶಿಲಾಶಾಸನದಲ್ಲಿ ವರ್ಣಿಸಲ್ಪಟ್ಟ ಭಾಷೆಯು ಅಗ್ನಿಯಲ್ಲಿ ಪ್ರವೇಶಿಸುವ ಬಗ್ಗೆ ಇರದೆ ಅದು ದೇವರದಾಸಿಮಯ್ಯನಿಗೆ ಸಂಬಂಧಿಸಿದ ಕೆಲವೊಂದು ಘಟನೆ ಇರಬೇಕೆಂದು ನಾವು ಅನುಮಾನ ಮಾಡುತ್ತೇವೆ. ಅದು ಏನೇ ಇರಲಿ, ಜಯಸಿಂಹರಾಜನ ಹೆಂಡತಿಯಾದ

ಸುಗ್ಗಲೆಯು ಗತಿಸಿದ ಬಳಿಕ ೧೭೦-೧೫೦ ವರ್ಷಗಳ ತರುವಾಯ ಸಹ ಮೈಸೂರು ಪ್ರಾಂತದ ಮಧ್ಯಭಾಗದಂಥ ದೂರ ಪ್ರದೇಶದಲ್ಲಿ ಅವಳ ಹೆಸರು ಹೀಗೆ ಉಳಿಯಬೇಕಾದರೆ ಅವಳು ಮೊದಲು ಅತ್ಯಂತ ಪ್ರಸಿದ್ಧ ಸ್ತ್ರೀಯಳಾಗಿರಬೇಕೆಂಬುದು ಸ್ಪಷ್ಟವು. ಇಂಥವಳ ಗುರುವು ದಾಸಿಮಯ್ಯನು. ಆದುದರಿಂದ ಅವನ ಧರ್ಮಪ್ರಸಾರ ಕಾರ್ಯವು ಮುಂದೆ ಅವಳ ಸಹಾಯದಿಂದ ನಾಡಿನಲ್ಲಿ ಬಹಳ ಭರದಿಂದ ಸಾಗಿರಬೇಕೆಂದು ನಾವು ಊಹಿಸಲು ಯಾವ ಪ್ರತ್ಯವಾಯುವೂ ಇರಲಾರದು.

ದೇವರದಾಸಿಮಯ್ಯನು ಮೇಲೆ ವಿವರಿಸಿದಂತೆ ಘಟನೆಗಳಾದ ಬಳಿಕ ಸ್ವಗ್ರಾಮವಾದ ಮುದನೂರಿಗೆ ತಿರುಗಿ ಬಂದು ಅವನು ತನ್ನ ದಿನದ ಕಾರ್ಯಗಳಲ್ಲಿ ಅಂದರೆ ನೆಯ್ಗೆಯ ಕೆಲಸಗಳಲ್ಲಿ ತೊಡಗಿದವನಾದನು. ಅವನು ಒಂದು ವೇಳೆ ಇಚ್ಛಿಸಿದ್ದರೆ ಜಯಸಿಂಹರಾಜನ ರಾಜಧಾನಿಯಲ್ಲಿದ್ದುಕೊಂಡು ತನ್ನ ಅಶನ ವಸನಕ್ಕೆ ಕೊರತೆ ಇಲ್ಲದೆ ಅರಸನ, ಅವನ ರಾಣಿಯ, ಅವನ ಊಳಿಗದವರ, ಮಾಂಡಲಿಕರ ಮತ್ತು ಜನಸಮುದಾಯದ ಮನ್ನಣೆಯನ್ನು ಹೊಂದುತ್ತ ಅತ್ಯಂತ ವೈಭವದಿಂದ ಕಾಲಕಳೆಯಬಹುದಾಗಿತ್ತು. ಈ ರೀತಿಯಾಗಿ ಮೊದಲಿನ ಕಾಲದಲ್ಲಿ ಬಹುಜನ ಜೈನ, ಬೌದ್ಧ, ಬ್ರಾಹ್ಮಣ ಧರ್ಮಾಧಿಕಾರಿಗಳು ರಾಜರ ನೆರೆಯಲ್ಲಿದ್ದುಕೊಂಡು ಕಾಲಕಳೆದಿರುತ್ತಾರೆ. ಇಲ್ಲವೆ ಅವನು ಬಯಸಿದ್ದರೆ ಜಯಸಿಂಹರಾಜನ ಆಡಳಿತೆಯಲ್ಲಿ ಕೆಲವೊಂದು ಉಚ್ಚ ಅಧಿಕಾರ ಸ್ಥಾನವನ್ನು ಹೊಂದಬಹುದಾಗಿತ್ತು. ಭಾರತ ಪುರಾಣದ ಕಾಲದಲ್ಲಿ ಬ್ರಾಹ್ಮಣರಾದ ದ್ರೋಣ, ಕೃಪ, ಅಶ್ವತ್ಥಮರು ಸೈನ್ಯಾಧಿಕಾರಿಗಳಾಗಿಯೂ ಚಾಣಕ್ಯನು ಮಂತ್ರಿಯಾಗಿಯೂ ಈಚೆಗೆ ಕರ್ನಾಟಕದಲ್ಲಿ ಜೈನ ಧರ್ಮೀಯರಾದ ಪಂಪ, ಪೊನ್ನ, ಜನ್ನರು ತಮ್ಮ ಜೈನ ರಾಜರಲ್ಲಿ ರಾಜಕೀಯ ಉದ್ಯೋಗಸ್ಥರಾಗಿಯೂ ಇದ್ದು ಪ್ರಸಿದ್ಧಿಗೆ ಬಂದದ್ದು ಕಂಡುಬರುತ್ತದೆ. ಆದರೆ ಈ ತೆರದ ವೃತ್ತಿಯು ಹಿಂದೂ ಸಂಸ್ಕೃತಿಗೆ ಹೊರತಾದದ್ದು. ಇದು ಉಪನಿಷತ್ಕಾಲದಲ್ಲಿ ಇರುವದಿಲ್ಲ. ಆ ಕಾಲದಲ್ಲಿ ರಾಜರೂ ಬ್ರಾಹ್ಮಣರೂ ಮೊದಲು ಗೃಹಸ್ಥಾಶ್ರಮಿಗಳಾಗಿ ಇದ್ದು ಮುಂದೆ ಅವರು ವನಾಂತರಗಳಿಗೆ ಹೋಗಿ ಅಧ್ಯಾತ್ಮ ವಿಚಾರದಲ್ಲಿ ತೊಡಗಿದ್ದುದು ಕಂಡುಬರುತ್ತದೆ. ಇಂಥವರ ರೀತಿಯನ್ನು ಈ ಕಾಲದ ಶಿವಶರಣರು

ಅನುಸರಿಸಿ ರಾಜಸನ್ನಿಧಿಯನ್ನು ಅಪೇಕ್ಷಿಸದೆ ತಮ್ಮ ತಮ್ಮ ನಿತ್ಯದ ಕಾಯಕಗಳಲ್ಲಿ ತೊಡಗಿ ಶಿವಾನುಭವದಲ್ಲಿದ್ದುದು ಅವರ ಚರಿತ್ರೆಗಳಲ್ಲಿ ಕಂಡುಬರುತ್ತಿದೆ. ಅದೇ ಪ್ರಕಾರ ದೇವರದಾಸಿಮಯ್ಯನು ಜಯಸಿಂಹ ಸುಗ್ಗಲೆಯರ ಸಾನ್ನಿಧ್ಯದಲ್ಲಿರದೆ ತನ್ನ ಗ್ರಾಮಕ್ಕೆ ತಿರುಗಿಬಂದು ತನ್ನ ನೇಕಾರಿಕೆಯ ಉದ್ಯೋಗದಲ್ಲಿ ತೊಡಗಿದನು!

ಶಿವಶರಣರಲ್ಲಿ ಕೆಲವರು ಮಾತ್ರ ಕೇಶಿರಾಜ, ತೆಲುಗು ಜೊಮ್ಮಯ್ಯ ರಂಥವರು ರಾಜರ ಸೇವಕರಾದದ್ದು ಕಂಡುಬರುತ್ತದೆ. ಆದರೆ ಈ ರಾಜರು ಕೊಂಡೆಯರ ಮಾತು ಕೇಳಿ ಈ ಶರಣರಿಗೆ ತೊಂದರೆಯನ್ನು ಮಾತ್ರ ಕೊಟ್ಟಿದ್ದು ತಿಳಿದುಬರುತ್ತದೆ. ಹಾಗೆಯೇ ಬಸವೇಶ್ವರನು ಮಂತ್ರಿಪದವನ್ನು ಹೊಂದಿದ್ದರಿಂದ ಅವನು ಅನೇಕ ತರದ ತೊಂದರೆಗಳಿಗೆ ಗುರಿಯಾದನು. ಅವನು ಕಡೆಗೆ ರಾಜಧಾನಿಯನ್ನು ಬಿಟ್ಟು ಹೋಗಬೇಕಾಯಿತು. ಅವನಿಂದ ಧರ್ಮೋದ್ಧಾರ ಕಾರ್ಯಗಳಾದದ್ದು ಅವನು ಮಂತ್ರಿಪದವನ್ನು ಸ್ವೀಕರಿಸಿದ್ದರ ಮೂಲಕವಲ್ಲ, ಆದರೆ ಅವನು ಶಿವಾನುಭವ ಮಂಟಪವನ್ನು ನಿರ್ಮಾಣ ಮಾಡಿದ್ದರಿಂದ ಅಲ್ಲಿ ಉಜ್ವಲ ವರ್ತನೆಯುಳ್ಳ ಬಹುಜನ ಶಿವಶರಣರು ಕೂಡಿಕೊಳ್ಳಲು ಅನುಕೂಲವಾಯಿತು. ಮತ್ತು ಅವರ ಬಲದಿಂದಲೇ ಅವನು ಧರ್ಮೋದ್ಧಾರ ಕಾರ್ಯಗಳನ್ನು ಮಾಡಲು ಶಕ್ತನಾದನು. ಅಧಿಕಾರವಿದ್ದಲ್ಲಿ ಸ್ವಾರ್ಥಿಗಳೂ, ಕೆಡುಕರೂ ದುಷ್ಟರೂ ನೆರೆದು ಕಾರ್ಯಗಳಲ್ಲಿ ತೊಂದರೆ ಕೊಡುವದುಂಟು. ಆದ್ದರಿಂದ ಎಲ್ಲ ಧರ್ಮೋದ್ಧಾರಕರು ಆರಂಭದಲ್ಲಿ ಅಧಿಕಾರಸ್ಥಾನದಲ್ಲಿರದೆ, ಸಾಮಾನ್ಯ ಜನರಲ್ಲಿದ್ದುಕೊಂಡೇ ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತ ಬಂದಿರುವದು ಕಂಡುಬರುತ್ತದೆ.

ದಾಸಿಮಯ್ಯನು ಮುದನೂರಿಗೆ ಬಂದಬಳಿಕ ಅವನು ಸಾಧ್ವಿಯಾದ ದುಗ್ಗಳೆಯನ್ನು ಲಗ್ನವಾಗಿ ತನ್ನ ಕಾಯಕದಲ್ಲಿ ಮಗ್ನನಾದನು. ಅವನು ಈ ಮೊದಲು ಶ್ರೀಶೈಲಮಲ್ಲಿಕಾರ್ಜುನನ ಸನ್ನಿಧಿಯಲ್ಲಿ ದೀಕ್ಷೆಯನ್ನು ಹೊಂದಿ ವಿರಕ್ತಾಶ್ರಮವನ್ನು ಹೊಂದಿದ್ದನು. ಒಂದು ವೇಳೆ ಅವನು ಇಚ್ಛಿಸಿದ್ದರೆ ಈ ವಿರಕ್ತಾಶ್ರಮದಲ್ಲಿಯೇ ಕಡೆಯ ವರೆಗೆ ಇರಬಹುದಾಗಿತ್ತು. ಅವನು ಹಾಗೆ ವರ್ತಿಸಿದ್ದರೆ ಅಜ್ಞ ಬಹುಜನ ಸಮಾಜವು ಅವನಿಗೆ ಮೆಚ್ಚಿ ಅವನನ್ನು ಪೂಜಿಸಬಹುದಾಗಿತ್ತು. ಅವನನ್ನು ಅವರು

ಪಲ್ಲಕ್ಕಿಯೊಳಗೆ ಕುಳ್ಳರಿಸಿ ಮೆರೆಯಿಸಬಹುದಾಗಿತ್ತು. ಆದರೆ ದಾಸಿಮಯ್ಯನು ಈ ತೆರದ ಆಯುಷ್ಯಕ್ರಮವನ್ನು ಅನುಸರಿಸಲು ಇಚ್ಛಿಸಲಿಲ್ಲ. ಅವನು ತನ್ನ ಗುರುಗಳು ದಯಪಾಲಿಸಿದ್ದ ವಿರಕ್ತಾಶ್ರಮವನ್ನು ತೊರೆದು ಲಗ್ನಮಾಡಿಕೊಂಡನು! ಹೀಗೆ ಮಾಡಿದ್ದರಿಂದ ಅವನ ಯೋಗ್ಯತೆಗೆ ಎಷ್ಟುಮಾತ್ರವೂ ಭಂಗ ಉಂಟಾಗಲಿಲ್ಲ. ಇಷ್ಟೇ ಅಲ್ಲ, ನಿಜವಾದ ಕೈಲಾಸ ಸುಖವು ಈ ದಾಂಪತ್ಯ ಸ್ಥಿತಿಯಲ್ಲಿಯೇ ಇರುತ್ತದೆಂಬುದು ಅವನ ಚರಿತ್ರೆಯಲ್ಲಿ ಈ ಬಗ್ಗೆ ಬಂದ ವಿವರಣೆಗಳಿಂದ ವಾಚಕರಿಗೆ ಕಂಡುಬರುವದು. ದಾಸಿಮಯ್ಯನು ಈ ಪ್ರಕಾರ ವರ್ತಿಸುತ್ತ ಶಿವಶರಣರಲ್ಲಿ ಉನ್ನತ ಸ್ಥಾನವನ್ನು ಪಡೆದಿರುತ್ತಾನೆ.

ದೇವರದಾಸಿಮಯ್ಯನು ತನ್ನ ವಚನಗಳಲ್ಲಿ ಸ್ತ್ರೀಯರಿಗೆ ಅತ್ಯಂತ ಆದರಭಾವವನ್ನು ತೋರಿಸಿದ್ದಾನೆ. ಅವನ ಹೆಂಡತಿಯಾದ ದುಗ್ಗಳೆಯು ಅವನ ಇಚ್ಛಾನುಸಾರವಾಗಿ ಯಾವಾಗಲೂ ವರ್ತಿಸುತ್ತ ಬಂದಿದ್ದಾಳೆ. ಹರಿಹರನೂ ಬಸವೇಶ್ವರನೂ ಅವಳ ಶ್ರೇಷ್ಠತರವಾದ ಭಕ್ತಿಯನ್ನು ತಮ್ಮ ಉಕ್ತಿಗಳಲ್ಲಿ ಹೊಗಳಿದ್ದಾರೆ. ಹೀಗೆ ಸ್ತ್ರೀಯರಿಗೆ ಮನ್ನಣೆಯನ್ನು ಕೊಡುವವರು ಉಚ್ಚ ಸುಧಾರಣೆಯನ್ನು ಹೊಂದಿದ ಸಮಾಜದವರೇ ಇರುತ್ತಾರೆ. ಆದರೆ ನಾಗರಿಕತೆ ಇಲ್ಲದ ಕನಿಷ್ಟ ಸಮಾಜಗಳು ಹೀಗೆ ವರ್ತಿಸದೆ ಸ್ತ್ರೀಯರೆಂದರೆ ಕೇವಲ ಭೋಗ್ಯವಸ್ತುಗಳೆಂದು ಭಾವಿಸಿ ವರ್ತಿಸುವದುಂಟು. ಆದರೆ ಶಿವಶರಣರಲ್ಲಿ ಇಂಥ ವಿಚಾರಗಳಿರದೆ, 'ಸ್ತ್ರೀ' ಎಂದರೆ ಪ್ರತ್ಯಕ್ಷ 'ಕಪಿಲಸಿದ್ಧಮಲ್ಲಿಕಾರ್ಜುನ' ಎಂದು ಅವರು ಅವಳನ್ನು ಹೊಗಳಿದ್ದಾರೆ. ಇದರಿಂದ ಈ ಕಾಲದಲ್ಲಿ ಅನೇಕ ಸ್ತ್ರೀ ವಚನಕಾರರೂ ಶಿವಶರಣೆಯರೂ ಆಗಿಹೋಗಿರುತ್ತಾರೆ. ಈ ಸ್ಥಿತಿಯು ಇದ್ದುದರಿಂದ ಈ ಕಾಲದಲ್ಲಿ ಉಚ್ಚತರದ ಧಾರ್ಮಿಕ ವಾತಾವರಣವು ಸಮಾಜದಲ್ಲಿ ಉಂಟಾದದ್ದು ಕಂಡುಬರುತ್ತದೆ.

ದೇವರದಾಸಿಮಯ್ಯನು ತನ್ನ ಧರ್ಮೋದ್ಧಾರ ಕಾರ್ಯಗಳನ್ನು ಮಾಡುವಲ್ಲಿ ಅವನು ಪುರಾತನ ಪರಂಪರೆಯನ್ನು ಹಿಡಿದುಕೊಂಡು ಮಾಡಿರುವದು ಕಂಡುಬರುತ್ತದೆ. ಅವನು ತನ್ನ ಪ್ರಚಾರ ಕಾರ್ಯಗಳನ್ನು ಶ್ರೀಶೈಲಮಲ್ಲಿಕಾರ್ಜುನನ ಹೆಸರಿನಿಂದಲೇ ಮಾಡಿದ್ದಾನೆ. ಅವನು ಕಾಡುಜನರಿಗೆ ಉಪದೇಶವನ್ನು ಮಾಡುವಲ್ಲಾಗಲಿ ಇಲ್ಲವೆ

ಗೋಡೇಕೆರಿಯ ಒಕ್ಕಲಿಗರಿಗೆ ದೀಕ್ಷೆಯನ್ನು ಕೊಡುವಲ್ಲಾಗಲಿ ಅವರು ಮಲ್ಲಿಕಾರ್ಜುನನ ಭಕ್ತರಾಗಿ ವರ್ತಿಸಿರೆಂದು ಬೋಧಿಸಿದ್ದಾನೆ. ಅವನು ಮುದನೂರಿಗೆ ಬಂದ ಬಳಿಕ ಸಹ ಅಲ್ಲಿ ಒಂದು ಮಲ್ಲಿಕಾರ್ಜುನನ ದೇವಸ್ಥಾನವನ್ನು ಸ್ಥಾಪಿಸಿದ್ದಾನೆ. ಇದು ಈ ಗ್ರಾಮದಲ್ಲಿ ಈಗಲೂ ಒಂದು ಮಹತ್ವದ ಸ್ಥಾನವಾಗಿರುತ್ತದೆ. ಒಟ್ಟಾರೆ, ದೇವರದಾಸಿ ಮಯ್ಯನು ಸಮಾಜದ ಪೂರ್ವಪರಂಪರೆಯನ್ನು ಬಿಟ್ಟುಕೊಟ್ಟು ತನ್ನ ಧರ್ಮೋದ್ಧಾರ ಕಾರ್ಯಗಳನ್ನು ಮಾಡಿರುವದಿಲ್ಲ. ಇದರಿಂದ ನಾಡಿನಲ್ಲಿ ವೀರಶೈವ ಧರ್ಮಪ್ರಸಾರ ಕಾರ್ಯಗಳು ಬಹು ಭರದಿಂದ ಸಾಗಿದವೆಂಬುದರಲ್ಲಿ ಯಾವ ಸಂದೇಹವೂ ಇರಲಾರದು.

ದಾಸಿಮಯ್ಯನು ತನ್ನ ಗ್ರಾಮಕ್ಕೆ ಬಂದಬಳಿಕ ತನ್ನ ಕಾಯಕದಲ್ಲಿ ತೊಡಗಿ ಗುರು ಲಿಂಗ ಜಂಗಮ ದಾಸೋಹದಲ್ಲಿ ಇರಹತ್ತಿದನು. ಅವನು ಕಾಯಕ ನಡಿಸಿದ ರೀತಿಯು ಅನುಕರಣೀಯವಾಗಿದೆ. ಕಾಯಕ ಮಾಡುವಲ್ಲಿ ಮಿಗಿಲಾದ ಜಾಣ್ಮೆ ಇರಬೇಕು. ಅದರಲ್ಲಿ ಸ್ವಂತವಾಗಿ ಶ್ರಮಪಡಬೇಕು. ತಾಳ್ಮೆಯಿಂದ ಅವನ್ನು ಯಾವಾಗಲೂ ಮಾಡುತ್ತಿರಬೇಕು. ಮತ್ತು ಅದರಲ್ಲಿ ಶಿವಾರ್ಪಣಭಾವವಿರಬೇಕು. ಶಿವಾರ್ಪಣಭಾವವೆಂದರೆ ಬಂದುದೆಲ್ಲವು ತನ್ನದೆಂದು ಭಾವಿಸದೆ ಲಿಂಗಾರ್ಪಿತ ಮಾಡಿ ಲಿಂಗಮುಖವಾಗಿ ಲಿಂಗಭೋಗೋಪಭೋಗಿಯಾಗಿ ಅದನ್ನು ಸೇವಿಸುವದು. ಇದು ಶಿವಶರಣರ ನಡೆಯಾಗಿರುತ್ತದೆ. ಹೀಗೆ ದೇವರದಾಸಿಮಯ್ಯನು ವರ್ತಿಸುತ್ತ ಬಂದುದು ಅವನ ಚರಿತ್ರೆಯಿಂದ ಕಂಡುಬರುತ್ತದೆ. ಅದಕ್ಕೋಸ್ಕರ ಪರಮಾತ್ಮನು ಅವನಿಗೆ ಒಲಿದು ತವನಿಧಿಯನ್ನು ಅಂದರೆ ಎಂದಿಗೂ ಸವೆಯದ ಧನನಿಧಿಯನ್ನು ದಯಪಾಲಿಸಿದನು. ಹೀಗೆ ಯಾರು ಕಾಯಕ ಮಾಡುತ್ತಾರೋ ಅವರಿಗೆ ಬಡತನವು ಬರಬಹುದಾದರೂ ಹೇಗೆ? ಅವರಲ್ಲಿ ತವನಿಧಿಯು ಇದ್ದಂತೆಯೇ ಸರಿ. ದಾಸಿಮಯ್ಯನು ಈ ರೀತಿಯಾಗಿ ವಿಪುಲ ಧನವನ್ನು ಸಂಪಾದಿಸುತ್ತಲೂ ಹೀಗೆ ಸಂಪಾದಿಸಿದ್ದನ್ನು ಧರ್ಮಪ್ರಸಾರ ಕಾರ್ಯವೆಂಬ ದಾಸೋಹಕ್ಕೆ ಉಪಯೋಗಿಸುತ್ತಲೂ ಬಂದುದರಿಂದ ನಾಡಿನಲ್ಲಿ ವೀರಶೈವ ಧರ್ಮವು ಸ್ಥಿರತರವಾಗಿ ಅವನ ಕಾಲದಲ್ಲಿ ನೆಲೆಗೊಂಡಿರಬಹುದೆಂದು ತೋರುತ್ತದೆ.

ವಚನಕಾರರು ತಮ್ಮ ವಚನಗಳನ್ನು ರಚಿಸುವಲ್ಲಿ ಕೆಲವೊಂದು ಮುದ್ರಿಕೆಯನ್ನಿಟ್ಟುಕೊಂಡಿರುವದು ಕಂಡುಬರುತ್ತದೆ. ಈ ಮುದ್ರಿಕೆಗಳಿಂದ

ಆಯಾ ವಚನಕಾರರು ಯಾವುದರ ಮೇಲೆ ಭಕ್ತಿಯುಳ್ಳವರಾಗಿದ್ದರು, ಯಾರ ಮೂಲಕ ಅವರು ಆತ್ಮೋನ್ನತಿಯನ್ನು ಹೊಂದಿದರು, ಇವೇ ಮೊದಲಾದ ಮಹತ್ವದ ಸಂಗತಿಗಳನ್ನು ನಾವು ಕಂಡುಹಿಡಿಯಲು ಸಾಧ್ಯವಾಗುತ್ತದೆ. ಅವುಗಳ ಸಹಾಯದಿಂದ ವಚನಕಾರರು ಎಲ್ಲಿಯವ ರೆಂಬುದನ್ನೂ ಸಹ ನಾವು ಕಂಡುಹಿಡಿಯಬಹುದು. ಈ ಸಂಗತಿಗಳು ಕೆಳಗಿನ ವಿವರಣೆಗಳಿಂದ ವಾಚಕರಿಗೆ ಗೋಚರವಾಗದೆ ಇರದು.

ಅನೇಕ ವಚನಕಾರರು 'ಕೂಡಲಸಂಗಮ' ಈ ಹೆಸರನ್ನು ತಮ್ಮ ಮುದ್ರಿಕೆಗಳಲ್ಲಿ ಇಟ್ಟುಕೊಂಡು ತಮ್ಮ ವಚನಗಳನ್ನು ರಚಿಸಿದ್ದಾರೆ. ಇದು ಬಸವೇಶ್ವರನಲ್ಲಿದ್ದ ಅವರ ಭಕ್ತಿಭಾವವನ್ನು ತೋರಿಸುತ್ತದೆ. ಉದಾಃ— ಗಿರಿಗಾಂಬಿಕೆಯ ಗಂಗಾಪ್ರಿಯ ಕೂಡಲಸಂಗಮದೇವ, ನೀಲಾಂಬಿಕೆಯ ಬಸವಪ್ರಿಯ ಕೂಡಲಸಂಗಮದೇವ, ನಾಗಲಾಂಬಿಕೆಯ ಬಸವಣ್ಣಾ ಪ್ರಿಯ ಚನ್ನಸಂಗಾ, ಬಸವಣ್ಣಪ್ರಿಯ ನಿಃಕಳಂಕ ಸೋಮೇಶ್ವರಾ, ಹಡಪದಪ್ಪಣ್ಣನ ಬಸವಪ್ರಿಯ ಕೂಡಲಚನ್ನಸಂಗಮದೇವಾ ಎಂಬಿವು ಇದಕ್ಕೆ ಉದಾಹರಣೆಗಳಾಗಿವೆ.

ಬೇರೆ ಕೆಲವರು 'ಶ್ರೀಶೈಲ ಮಲ್ಲಿಕಾರ್ಜುನನ' ವಿಷಯವಾಗಿ ಭಕ್ತಿಯನ್ನು ವಹಿಸಿ ಈ ದೇವಾಲಯಕ್ಕೆ ಸಂಬಂಧಿಸಿದ ಮುದ್ರಿಕೆಗಳನ್ನು ಇಟ್ಟುಕೊಂಡಿದ್ದಾರೆ. ಉದಾಃ — ಸಿದ್ಧರಾಮೇಶ್ವರನು ಕಪಿಲಸಿದ್ಧಮಲ್ಲಿಕಾರ್ಜುನಾ, ಮೋಳಿಗೆಯ ಮಾರಯ್ಯನು ನಿಃಕಳಂಕಮಲ್ಲಿಕಾರ್ಜುನಾ, ಮಹಾದೇವಿಯಕ್ಕನು ಚನ್ನಮಲ್ಲಿಕಾರ್ಜುನಾ ಎಂಬ ಮುದ್ರಿಕೆಗಳನ್ನಿಟ್ಟುಕೊಂಡಿರುವದು ಇದಕ್ಕೆ ಉದಾಹರಣೆಗಳಾಗಿವೆ.

ಬೇರೆ ಕೆಲವರು ಹುಲಿಗೆರೆಯಲ್ಲಿರುವ 'ಸೋಮೇಶ್ವರನ' ಇಲ್ಲವೆ 'ಸೌರಾಷ್ಟ್ರ ಸೋಮೇಶ್ವರ'ನ ಹೆಸರಿನಿಂದ ತಮ್ಮ ವಚನಗಳನ್ನು ರಚಿಸಿದ್ದಾರೆ. ಉದಾಃ— ಆದಯ್ಯನ ಸೌರಾಷ್ಟ್ರಸೋಮೇಶ್ವರಾ, ಅಮುಗಿದೇವನ ಸಿದ್ಧಸೋಮನಾಥಾ, ಬಿಬ್ಬಬಾಚಯ್ಯನ ಏಣಾಂಕಧರ ಸೋಮೇಶ್ವರಾ, ಹುಲಿಗೆರೆಯ ಸೋಮೇಶ್ವರ, ಎಂಬಿವು ಇದಕ್ಕೆ ಉದಾಹರಣೆಗಳಾಗಿವೆ.

ಕೆಲವರು ಪ್ರಭುದೇವರ ವಿಷಯವಾಗಿ ಭಕ್ತಿಯನ್ನು ತಾಳಿ 'ಗುಹೇಶ್ವರ' ಈ ಶಬ್ದವನ್ನು ತಮ್ಮ ಮುದ್ರಿಕೆಯಲ್ಲಿಟ್ಟುಕೊಂಡು ವಚನಗಳನ್ನು

ರಚಿಸಿದ್ದಾರೆ. ಉದಾಃ— ಗಾಣದ ಕನ್ನಪ್ಪನ ಗುಹೇಶ್ವರಲ್ಲಯ್ಯ, ಗುಹೇಶ್ವರಪ್ರಿಯನಿರಾಳಲಿಂಗ, ಗುರುಗುಹೇಶ್ವರಾ ಇವು ಇದಕ್ಕೆ ಉದಾಹರಣೆಗಳಾಗಿವೆ.

ಹೀಗೆ ಯಾವ ಮುದ್ರಿಕೆಗಳನ್ನು ಇಟ್ಟುಕೊಂಡು ವಚನಕಾರರು ತಮ್ಮ ವಚನಗಳನ್ನು ರಚಿಸಿರುವರೋ ಅವುಗಳ ಮೇಲಿಂದ ಅವರ ಭಕ್ತಿಯು ಯಾರಲ್ಲಿ ಇತ್ತು, ಯಾರನ್ನು ಅವರು ಸ್ಮರಿಸುತ್ತಿದ್ದರು ಅವರು ಎಲ್ಲಿಯವರು, ಎಂಬುದನ್ನು ನಾವು ಕಂಡುಹಿಡಿಯಬಹುದಾಗಿದೆ.

ಈ ದೃಷ್ಟಿಯಿಂದ ಈ ವರೆಗೆ ನಮಗೆ ದೊರೆದ ವಚನಕಾರರ ಮುದ್ರಿಕೆಗಳನ್ನು ನಿರೀಕ್ಷಿಸಿದಲ್ಲಿ ಅವುಗಳಲ್ಲಿ 'ರಾಮೇಶ್ವರ' ಎಂಬ ಹೆಸರುಳ್ಳ ವಚನಗಳು ಬಹಳ ಹೊರಡುತ್ತವೆ. 'ರಾಮೇಶ್ವರ' ಮತ್ತು 'ರಾಮನಾಥ' ಇವು ಒಂದೇ ದೇವಾಲಯಕ್ಕೆ ಸಂಬಂಧಿಸಿದ ಹೆಸರುಗಳು. ಆದ್ದರಿಂದ ಈ ಮುದ್ರಿಕೆಗಳನ್ನು ಉಪಯೋಗಿಸಿದ ವಚನಕಾರರೆಲ್ಲರೂ ದಾಸಿಮಯ್ಯನ ಇಷ್ಟದೇವತೆಯಾದ ರಾಮನಾಥನಲ್ಲಿದ್ದ ಭಕ್ತಿಯ ಮೂಲಕವಾಗಿ ಇಲ್ಲವೆ ದಾಸಿಮಯ್ಯನ ಚರಿತ್ರೆ ಅಥವಾ ಅವನ ವಾಙ್ಮಯದ ಪ್ರಭಾವದಿಂದಾಗಲಿ ಪ್ರೇರಣೆ ಹೊಂದಿದವರೆಂಬ ಅನುಮಾನವು ಉಂಟಾಗುತ್ತದೆ. 'ರಾಮೇಶ್ವರ' ಅಥವಾ 'ರಾಮನಾಥ' ಅಥವಾ 'ದಾಸ' ಈ ಹೆಸರುಳ್ಳ ಮುದ್ರಿಕೆಗಳನ್ನು ನಾವು ಕೆಳಗೆ ಕೊಟ್ಟಿರುತ್ತೇವೆ.

ಏಲೇಶಕೇತಯ್ಯನ ಆಚಾರವೇ ಪ್ರಾಣವಾದ ರಾಮೇಶ್ವರಲಿಂಗ, ನಗೆಮಾರಿತಂದೆಯ ಆತುರವೈರಿ ರಾಮೇಶ್ವರ, ಏಕಾಂತದ ರಾಮಯ್ಯನ ಏಕಾಂತ ರಾಮೇಶ್ವರಲಿಂಗ, ಮೆರೆಮಿಂಡದೇವನ ಐಘಟದೂರ ರಾಮೇಶ್ವರ ಲಿಂಗ, ತಳವಾರ ಕಾಮಿದೇವನ ಕಾಮಹರಪ್ರಿಯ ರಾಮನಾಥ, ಭರಿತಾರ್ಪಣದ ಚನ್ನಬಸವಣ್ಣನ ಚನ್ನಕೂಡಲರಾಮೇಶ್ವರಲಿಂಗ, ಶಿವನಾಗಮಯ್ಯನ ನಾಗಯ್ಯ ಪ್ರಿಯಚನ್ನರಾಮೇಶ್ವರಾ, ಅನಾಮಿಕ ನಾಚಯ್ಯನ ನಾಚಯ್ಯಪ್ರಿಯ ಚನ್ನರಾಮೇಶ್ವರಾ, ಗುಪ್ತಮಂಚಣ್ಣನ ನಾರಾಯಣಪ್ರಿಯ ರಾಮನಾಥಾ, ವೈದ್ಯಸಂಗಣ್ಣನ ಮರುಳುಶಂಕರಪ್ರಿಯ ಸಿದ್ಧರಾಮೇಶ್ವರಲಿಂಗ, ವೈದುನರಾಮಯ್ಯನ ಮಹಾಲಿಂಗಚನ್ನರಾಮಾ, ಬಾಲಬೊಮ್ಮಣ್ಣನ ವೀರಶೂರ ರಾಮೇಶ್ವರಲಿಂಗ, ಚಂದಿಮರಸನ ಸಿಮ್ಮಲಿಗೆಯ ಚನ್ನರಾಮ, ಮ್ಯಾದರಚನ್ನಯ್ಯನ ಕಯ್ಯುಳಿಗಳಿ ಅಡಿ

# ಶಿವಾನುಭವ

ವರ್ಷ ೨೧ ‖ ಸಪ್ಟಂಬರ ೧೯೪೭ ‖ ಸಂಚಿಕೆ ೧೨.

## ಅಕ್ಕನವರ ಅಧ್ಯಾತ್ಮಿಕತೆ.

(ಲೇಖಕರು:— ಶ್ರೀಮಾನ್ ಮ. ಮಲ್ಲಪ್ಪ ಪ್ರಧಾನ ಅಧ್ಯಾಪಕರು,
ಚಿಕ್ಕಮಗಳೂರು ಮೈಸೂರುದೇಶ.)

---

ಭರತಖಂಡದ ಅಧ್ಯಾತ್ಮಿಕ ಪ್ರಭೆಯನ್ನು ಸ್ವಾಮಿ ವಿವೇಕಾನಂದರು ಜಗತ್ತಿಗೆ ತೋರಿಸಿದರು. ಕನ್ನಡನಾಡಿನ ಅಧ್ಯಾತ್ಮಿಕ ಪ್ರಭೆಯನ್ನು ಭರತಖಂಡದ ಇತರೆ ನಾಡುಗಳಿಗೆ ತೋರಿಸಿದ ದಿವ್ಯಜ್ಯೋತಿಯು ಅಕ್ಕ ಮಹಾದೇವಿ. ಕನ್ನಡನಾಡು, ಧಾರ್ಮಿಕ ರಾಜಕೀಯ, ನೈತಿಕ ನಡೆಯಲ್ಲಿ ಮಹಾವಿಭೂತಿಗಳನ್ನು ಹೊಂದಿರುವುದು ಅದರ ಸುದೈವತೆ ಮತ್ತು ಕನ್ನಡಿಗರ ಸೌಭಾಗ್ಯವು. ಧಾರ್ಮಿಕ ಪ್ರಪಂಚದಲ್ಲಿ ಕನ್ನಡದೇವಿಯ ಕೊರಲಿಗೆ ಮುತ್ತಿನ ಹಾರವನ್ನು ಹಾಕಿ, ಮಂಗಳಾರತಿಯಿಂದ ಬೆಳಗಿಸಿದ ಆದರ್ಶ ಮಹಿಳೆಯು ಮಹಾದೇವಿ ಅಕ್ಕನವರು. ಕನ್ನಡನಾಡನ್ನು ಸಜೀವವನ್ನಾಗಿ ಮಾಡಿದ ಮಹಾವಿಭೂತಿಗಳಲ್ಲಿನ ಪ್ರಮುಖರಲ್ಲೊಬ್ಬರು. ವಂಗದೇಶದಲ್ಲಿ ಸ್ವಾಮಿ ವಿವೇಕಾನಂದರು ಅಧ್ಯಾತ್ಮಿಕ ವಿದ್ಯೆಯ ನಿರ್ವಾಣ ಪ್ರಾಪ್ತಿಯ ಹಾಡನ್ನು ಹಾಡಿದಂತೆಯೇ ಕನ್ನಡ ಬೀಡಿನಲ್ಲಿ ಮಹಾದೇವಿಯು ಅಧ್ಯಾತ್ಮಿಕ ವಿದ್ಯೆಯ ನಿರ್ವಾಣ ಪ್ರಾಪ್ತಿಯ ಹಾಡನ್ನು ಹಾಡಿದರು. ಪ್ರಪಂಚದ ಮಹಿಳೆಯರಿಗೆ ಆದರ್ಶ ವ್ಯಕ್ತಿಯು. ವೀರಶೈವ ಪ್ರಪಂಚದ ಧಾರ್ಮಿಕ ತತ್ವಗಳು ಮಹೋನ್ನತಿ ಹೊಂದುವಂತೆ ಮಾಡಿದವರು ಈಕೆ. ಆರ್ಯಮಹಿಳೆಯರ ಆಣಿಮುತ್ತು. ಪ್ರಪಂಚದ ಅಧ್ಯಾತ್ಮಿಕ ಇತಿಹಾಸಕಾರರಲ್ಲಿ ಅಗ್ರಸ್ಥಾನವು ಅಕ್ಕನವರಿಗೆ ಮುಕ್ತಿ

ಜ್ಯೋತಿಯು ದೇದೀಪ್ಯಮಾನವಾಗಿ ಉರಿದು ಪಾರಮಾರ್ಥಿಕದ ಬೆಳಕನ್ನು ಇತರರಿಗೆ ಕೊಟ್ಟು ತಾನು ಅನುಭವಿಸಿ ಐಕ್ಯವಾಗಿ ಹೋಯಿತು. ಹೆಂಗಸರು ಅಬಲೆಯರಲ್ಲ; ಸಬಲೆಯರು, ಸಾಹಸಿಗಳು ಎಂಬುದನ್ನು ಅಕ್ಕನವರು ಕಾರ್ಯರೂಪದಲ್ಲಿ ತೋರಿಸಿದರು. ಈ ದಿವ್ಯಜ್ಯೋತಿಯು ತನ್ನ ಅಪಾರ, ಅಗಾಧ ವೈರಾಗ್ಯಾನುಸರಣೆಯಿಂದ ಮುಕ್ತಿಜ್ಯೋತಿಯೆನಿಸಿಕೊಂಡು ಮೆರೆಯುತ್ತಿರುವುದು. ಈ ದಿವ್ಯಜ್ಯೋತಿಯ ಬೆಳಕಿನಿಂದಲೇ ಇಂದೂ ಕೂಡ ಪಾರಮಾರ್ಥಿಗಳು ಹಾದಿಯನ್ನು ಮಾಡಿಕೊಂಡು ಹೋಗುತ್ತಿರುವರು. ವೈರಾಗ್ಯ ಶಿಖಾಮಣಿ; ಪಾರಮಾರ್ಥಿಕ ಸುಧಾಮಣಿ.

ಮುಕ್ತಿಯು ಸ್ತ್ರೀಯರಿಗಲ್ಲ; ವೇದಾಂತದ ತಿಳಿವನ್ನು ಹೊಂದಲು ಅವರು ಯೋಗ್ಯರಲ್ಲ. ಸ್ತ್ರೀಯರೂ, ಶೂದ್ರರೂ ಓದಲೇಬಾರದು ಎಂಬ ನಿನಾದವು ಕನ್ನಡನಾಡಿನಲ್ಲಿ ಘೋಷಣೆ ಮಾಡುತ್ತಿರುವ ಸಮಯದಲ್ಲಿ ವ್ಯಕ್ತಿಯೊಂದು ಉಡುತಡಿಯೆಂಬ ಗ್ರಾಮದಲ್ಲಿ ಜನಿಸಿತು. ಆ ವ್ಯಕ್ತಿಯೇ ಅಕ್ಕಮಹಾದೇವಿಯು. ಇವರ ತಂದೆತಾಯಿಗಳು ನಿರ್ಮಲಶೆಟ್ಟಿ ಮತ್ತು ಸುಮತಿ ಎಂಬುವರು. ಈಶ್ವರನ ಭಕ್ತರಾದ ಇವರು ಏಕಾಗ್ರತೆಯಿಂದ ಮಾಡಿದ ಶಿವಪೂಜೆಯ ಫಲದಿಂದ ಅಕ್ಕನವರನ್ನು ಪಡೆದರು. ಮೊಳೆಯಲ್ಲಿಯೇ ಬೆಳೆಯು ಕಾಣುವುದು ಎಂಬಂತೆ ಅಕ್ಕನವರ ಬಾಲ್ಯದ ಆಚರಣೆ, ನಡೆವಳಿಕೆಗಳಲ್ಲಿ ಕಾಣುತ್ತಿದ್ದ ಅಗಾಧ ದೈವಭಕ್ತಿ, ಇಹಲೋಕದ ವಸ್ತುಗಳಲ್ಲಿ ಉಪೇಕ್ಷೆಯೇ ಇವರ ಮುಂದಿನ ವೈರಾಗ್ಯವನ್ನು ಸೂಚಿಸುತ್ತಿದ್ದವು. ಹೆಂಗಸರು ಚಂಚಲೆಯರು ಎಂಬ ಮಾತನ್ನು ಸಟಿ ಮಾಡಿದರು. ಸಾಮಾನ್ಯವಾಗಿ ಹೆಂಗಸರಲ್ಲಿ ದೃಢಮನಸ್ಸು ಇರುವುದಿಲ್ಲ; ದೃಢಮನಸ್ಸು ಇಲ್ಲದವರಿಗೆ ವೈರಾಗ್ಯವು ಲಭಿಸುವುದು ಸುಲಭಸಾಧ್ಯವಲ್ಲವು. ಹೀಗಿರುವಲ್ಲಿ ಅಕ್ಕನವರು ವೈರಾಗ್ಯವನ್ನವಲಂಬಿಸಿ, ನಿರಾಕಾರ ಪರಂಜ್ಯೋತಿ ಸ್ವರೂಪನಾದ ಪರಮೇಶ್ವರನ ಧ್ಯಾನದಲ್ಲಿ ಲೀನವಾದರು. ಇವರು ಮಾನವ ವ್ಯಕ್ತಿಯಲ್ಲ; ಒಂದು ದೈವ ವ್ಯಕ್ತಿಯು. ಜನರಿಗೆ ದೈವತ್ವದ ಮಟ್ಟವು ಗೊತ್ತಾಗಲೆಂದು ಅಕ್ಕನವರು ಉದಯವಾಗಿ, ಅಸ್ತಮಯವಾದರು. ಸರ್ವಸಾಮಾನ್ಯವಾಗಿ ಹಿರಿಯರು ಪ್ರಪಂಚದಲ್ಲಿ ಪಾರಮಾರ್ಥಿಕವಿದೆ ಎನ್ನುವರು. ಆದರೆ ಅಕ್ಕನವರು ಪಾರಮಾರ್ಥಿಕದಲ್ಲಿ ಪ್ರಪಂಚವನ್ನು ಕಲ್ಪಿಸಿದ್ದಾರೆ. ಪಾರಮಾರ್ಥಿಕಾಗ್ರಣಿಯು

ವೈರಾಗ್ಯವು ಹೊಗಳಿಕೆಗೆ ಯೋಗ್ಯವಾದದ್ದು, ಸ್ತೋತ್ರಕ್ಕೆ ಪಾತ್ರವಾದದ್ದು. ಸಾಮಾನ್ಯ ಜನರಿಗೆ ಬರುವ ಸ್ಮಶಾನ ವೈರಾಗ್ಯವು ಅಕ್ಕನವರಿಗೆ ಇರ ಲಿಲ್ಲವು. ಅವುಗಳು ಕ್ಷಣಿಕವಾದವು. ಅಕ್ಕನವರ ವೈರಾಗ್ಯವು ಶಾಶ್ವತ ವಾದದ್ದು.

ಒಂದು ವಿಗ್ರಹವು ಮೂರ್ತಿ ಪೂಜ್ಯತೆಯ ಯೋಗ್ಯತೆಗೆ ಬರಬೇ ಕಾದರೆ ಅದು ಉಳಿಯ ಪೆಟ್ಟು ಹಲವನ್ನು ತಿನ್ನಬೇಕು. ಅಂತೆಯೇ ನಿಜವಾಗಿಯೂ ವೈರಾಗ್ಯಪರನಾಗಬೇಕಾದರೆ ಹಲವು ಕಷ್ಟ ಸುಖಗಳನ್ನು ಅನುಭವಿಸಬೇಕು. "ಲೌಕಿಕ ಪಾರಮಾರ್ಥಿಕವೆಂಬೆರಡನ್ನು ನುಡಿ ಸಲು ಬಾರದಯ್ಯಾ. ಬಿಲ್ಲು ಬೆಳವಲಕಾಯಿ ಒಂದಾಗಿ ಹಿಡಿಯಬಾರ ದಯ್ಯಾ" ಎಂಬ ವಚನದಿಂದ ಲೌಕಿಕವನ್ನು ಪಾರಮಾರ್ಥಿಕವಾಗಿ ಮಾಡಿದ ಯಶಸ್ಸು ಅಕ್ಕನವರಿಗೆ ದೊರತಿದೆ. ಸಾಮಾನ್ಯ ಹೆಂಗಸರಿಗೆ ಆಭರಣಗಳು ಇಹಲೋಕದ ಭೋಗವಸ್ತುಗಳು, ಇಚ್ಛೆಯು. ಆದರೆ ಕಾರಣಿಕರಾದ ಅಕ್ಕನವರಿಗೆ ತಾನಾಗಿಯೇ ಒದಗಿದ್ದ ಐಸಿರಿಗಳನ್ನೂ, ಭೋಗವಸ್ತುಗಳನ್ನೂ ಅವರು ತೊರೆದು ನಿಶ್ಚಿಂತೆಯಾಗಿ ಈಶ್ವರನ ಧ್ಯಾನದಲ್ಲಿಯೇ ನಿರತರಾದರು. ಸಾಮಾನ್ಯ ಹೆಂಗಸರಿಗೆ ಇಂತಹ ಕಾರ್ಯವು ಆಗುವದೂ ಅಸಾಧ್ಯವು. ಇವರ ಸ್ವಭಾವವನ್ನು ನೋಡಿ ದರೆ ಹಿಮಾಚಲ ಪರ್ವತವೂಕೂಡ ಇವರಷ್ಟು ಸ್ಥಾವರವಿರುವುದಿಲ್ಲ. ಅಕ್ಕ ನವರಿಗೆ ಯಾವ ತೊಡರು ತೊಡಕುಗಳು ಬಂದರೂ, ಅವುಗಳಿಗೆ ಹೆದ ರದೆ ಧೈರ್ಯದಿಂದ ಇದಿರಾಗಿ ನಿಂತು ಸ್ಥಿರಮನಸ್ಸಿನಿಂದ ವೈರಾಗ್ಯಾವ ಲಂಬಿಗಳಾದರು. ಅಧ್ಯಾತ್ಮಿಕ ಸಂಸಾರಿಕರಾದ ಅಕ್ಕನವರು ಅಧ್ಯಾತ್ಮ ರಾಜ್ಯದಲ್ಲಿ ಅದ್ಭುತಸಾಹಸ ಕಾರ್ಯವನ್ನು ಮಾಡಿದರು. ಅಕ್ಕನವರು "ಹೆಸರಿನಲ್ಲಿ ಹೆಂಗಸರಾಗಿರುವರೆ ಹೊರತು ಬೇರೆಯಲ್ಲವು" ಎಂದು ಹೇಳಿರುವರು. ಸರ್ವವೂ ಪರಮಾತ್ಮನಾದ ಚೆನ್ನಮಲ್ಲಿಕಾರ್ಜುನನಲ್ಲಿ ಐಕ್ಯನಾಗುವುದು. ಲಿಂಗಸೇವೆಯನ್ನೂ, ಪರಮಾತ್ಮನ ಸೇವೆಯನ್ನೂ ಒಬ್ಬರಿಂದ ಹೇಳಿಸಿಕೊಂಡು ಇಷ್ಟವಿಲ್ಲದ ಮನಸ್ಸಿನಿಂದ ಮಾಡಬಾರದು. ಅಕ್ಕನವರಿಗೆ ತಾರುಣ್ಯದಲ್ಲಿಯೇ ಅಧ್ಯಾತ್ಮಿಕ ಜ್ಞಾನವೂ, ವೈರಾಗ್ಯವೂ ಬಂದಿರುವುದು ಒಂದು ಅಚ್ಚರಿಯ ಸಂಗತಿಯು. ಇಲ್ಲಿ ಸಾಮಾನ್ಯ ರಿಗಿಂತ ಮಿಗಿಲಾದ ಮೆಟ್ಟಲನ್ನು ಏರಿಹೋಗಿದ್ದಾರೆ ಎಂಬ ಅಂಶವು ತಿಳಿಯುವುದು.

ಅಕ್ಕನವರ ಲಿಂಗಪೂಜೆ ದೈವಭಕ್ತಿ ಗುರುಭಕ್ತಿಯು ಇವರ ವೈರಾಗ್ಯಭವನಕ್ಕೆ ಆಧಾರಗಂಬಗಳು. ಸಾಮಾನ್ಯರು ರಾಜವೈಭವಕ್ಕೆ, ಹಸಿದ ಕರುವು ಗಂಕೆಗೆ, ಬಾಯಿಬಿಡುವಂತೆ ಕಾತುರದಿಂದ ಹಾತೊರೆಯುತ್ತಿರುವುದು. ಅಂತಹುದರಲ್ಲಿ ಅಕ್ಕನವರು ರಾಜವೈಭವನ್ನು ತೃಣಸಮಾನವಾಗಿ ಗಣಿಸಿಕೊಂಡು ಶಿವಸಾನ್ನಿಧ್ಯವನ್ನು ಸೇರಲು ಕೈಲಾಸ ಶಂಕರನನ್ನು ಸತತವೂ ಆರಾಧಿಸುತ್ತಿದ್ದಳು. ಇವಳ ವೈರಾಗ್ಯಪ್ರೇಮ ಈ ವಚನದಲ್ಲಿ ಕಾಣುವುವು. "ಮಂಗಳವೇ ಮಜ್ಜನವೆನಗೆ, ವಿಭೂತಿಯೇ ಒಳಗುಂದದ ಅರಿಸಿನವೆನಗೆ, ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ ಚನ್ನಮಲ್ಲಿಕಾರ್ಜುನನಂಗೆ ಮದುವಳಿಗೆ, ಎನಗೆ ಬೇರೆ ಶೃಂಗಾರವೇಕೆ ಹೇಳಿರವ್ವಾ? ವೈರಾಗಿಗೆ ಬೇಕಾದ ಶಾಂತಿ, ಶಮೆ, ದಮೆಯು ಇವರಲ್ಲಿತ್ತು ಎನಲು ವಚನವಿದು. "ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದೊಡೆಂತಯ್ಯ! ಸಮುದ್ರದ ತಡಿಯಲ್ಲಿ ಮನೆಯ ಮಾಡಿ ನೊರೆ ತೆರೆಗಳಿಗಂಜಿದೊಡೆಂತಯ್ಯ! ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದೊಡೆಂತಯ್ಯ! ಚನ್ನಮಲ್ಲಿಕಾರ್ಜುನದೇವ, ಕೇಳಯ್ಯ ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ ನಿಂದೆಗಳು ಬಂದೊಡೆ ಮನದಲ್ಲಿ ಕೋಪ ತಾಳದೆ ಸಮಾಧಾನಿಯಾಗಿರಬೇಕು." ಈ ವಚನಗಳೆಲ್ಲವೂ ಬಹು ಮಧುರವಾಗಿವೆ. ಅಕ್ಕನವರ ಜೀವನರಹಸ್ಯವು ಗೊತ್ತಾಗಬೇಕಾದರೆ ಅವರ ವಚನನಿಕಂಡವನ್ನು ನಾವು ಪುನಃ ಪುನಃ ಅವಲೋಕಿಸುತ್ತಿರಬೇಕು. ಅವರ ಜೀವನಸಾರದ ಮಾಧುರ್ಯದ ತಂಪು ಇಂಪು ಬಹಳ ಸೊಗಸು ಎಂಬುದು ಅರಿವಾಗುವುದು. ಅಕ್ಕನವರು ತಾರುಣ್ಯದ ಬಗ್ಗೆಯು ನಿಸರ್ಗಳವಾಗಿ ಬರುತ್ತಿದ್ದಾಗ ಅದನ್ನು ಲಕ್ಷಿಸದೆ ಯಾವ ಭೋಗದಾಸೆಯನ್ನೂ ಇಟ್ಟುಕೊಂಡಿರಲಿಲ್ಲ. ಅವರಿಗೆ ಬೇಕಾದ ಮುಖ್ಯ ಬಹುಕೆಯು ವೈರಾಗ್ಯವೂ, ಅಕ್ಕರೆಯೂ, ಭಕ್ತಿಯೂ, ವಿಲಾಸವೂ, ಲಿಂಗಪೂಜೆಯೂ, ಬೆರಗು ತಪಃತೇಜವೂ, ಬಿಂಕವೂ, ಯೋಗವೂ, ಆಟವೂ, ಈಶ್ವರನ ಸಾಮರಸ್ಯವೂ ಆಗಿತ್ತು. ಕಾಯದ ಬಗ್ಗೆ ಬೇಸರ, ಅನಿತ್ಯ ಸುಖದ ಪ್ರಪಂಚ, ಮಾಯೆಯ ಹರಡಿಕೆಗಳಿಂದ ಬಿಡುಗಡೆಯಾಗಲು ಕೈಲಾಸ ಶಂಕರನನ್ನು ಆರಾಧಿಸಿ ಆತನನ್ನು ಶರಣು ಹೋಗುವುದೇ ರಾಜಮಾರ್ಗವು. ಸಂಸಾರದಲ್ಲಿ ಅವರಿಗಿದ್ದ ಬೇಸರವನ್ನು ಈ ವಚ

ನವು ತೋರಿಸುವುದು. "ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ, ಎಲುವಿನ ತಡಿಕೆ, ಕೀವಿನ ಹಡಿಕೆ, ಸುಡಲೀ ದೇಹವ ಒಡಲವಿಡಿದು ಕೆಡದಿರು ಚೆನ್ನಮಲ್ಲಿಕಾರ್ಜುನನರಿ ಮರುಳೇ !! ಸಂಸಾರವೆಂಬ ಹಗೆ ಯಯ್ಯ ಕಂಡೆ! ಎನ್ನ ವಂಶ ವಂಶದಪ್ಪದೆ ಅರಸಿಕೊಂಡು ಬರುತ್ತಿದೆಯಯ್ಯ! ಎನ್ನನರಸಿಯರಸಿ ಹಿಡಿದು ಕೊಲುತಿದೆಯಯ್ಯಾ! ನಿಮ್ಮ ಮರೆಹೊಕ್ಕೆನು ಕಾಯಯ್ಯಾ! ಎನ್ನ ಬಿನ್ನಪವನವಧಾರು ಚೆನ್ನಮಲ್ಲಿಕಾರ್ಜುನ". ಪ್ರೇಮಿಯು ತನ್ನ ನಲ್ಲನಿಗಾಗಿ ಕಾತರಿಸುವಂತೆ, ಗೋದಾದೇವಿಯು ಗೋಪಿಕೃಷ್ಣನಿಗಾಗಿ ಆತುರದಿಂದ ಕಾಯ್ದಿರುವಂತೆ ಅಕ್ಕನವರು ಚೆನ್ನಮಲ್ಲಿಕಾರ್ಜುನನಿಗಾಗಿ ಹಂಬಲಿಸುತ್ತಿದ್ದರು. "ಅಳಿಸಂಕುಳವೇ ಮಾಮರದ ಬೆಳದಿಂಗಳೇ ಕೋಗಿಲೆಯೇ ನಿಮ್ಮ ನಿಮ್ಮನೆಲ್ಲರನು ಒಂದು ಬೇಡುವೆನು. ಎನ್ನೊಡೆಯಾ ಎನ್ನೊಡೆಯಾ ಚನ್ನಮಲ್ಲಿಕಾರ್ಜುನನ ಕಂಡರೆ ಕರೆದು ತೋರಿಸುವಿರಾ" ಈ ವಚನವು ಚೆನ್ನಮಲ್ಲಿಕಾರ್ಜುನನಿಗಾಗಿ ಅಕ್ಕಮಹಾದೇವಿಯ ಹಂಬಲಿಕೆಯು ಎಂತಿತ್ತು ಎಂಬುದನ್ನು ತಿಳಿಸುವುದು.

ಶ್ರೀಬಸವೇಶ್ವರರ ಕಾಲದಲ್ಲಿ ವಿದ್ಯಾವಿಶಾರದೆಯರಾದ, ವಿಶಾಲ ಜ್ಞಾನಿಗಳಾದ ಶಿವಶರಣೆಯರಲ್ಲಿ ಹೆಚ್ಚಳವನ್ನು ಪಡೆದ ವಚನಕಾರ್ತಿಯು ಮಹಾದೇವಿಯಕ್ಕನವರು. "ಅಕ್ಕನ ನಿಲವನ್ನು ಕಾಣಲು ತೆರಹಿಲ್ಲ ಕಣಾ" ಎಂಬುದಾಗಿ ಪ್ರಭುದೇವರಿಂದ ಹೊಗಳಿಸಿಕೊಂಡ ಮಹಾ ವ್ಯಕ್ತಿಯು ಈಕೆಯು. ಅಕ್ಕನವರು ಕಲ್ಯಾಣದಲ್ಲಿನ ಶಿವಾನುಭವ ಮಂಟಪಕ್ಕೆ ಹೋಗಿ, ಅಲ್ಲಿ ತಮ್ಮ ಅನುಭಾವ ವಿದ್ಯೆಯನ್ನು ಬೀರಿದರು. ಅಲ್ಲಿ ಅಕ್ಕನವರು ಸಮಂಜಸ ಉತ್ತರವನ್ನು ಬಸವಣ್ಣ ಪ್ರಭುದೇವರು ಇವರಿಗೆ ಕೊಡಲು, ಅಲ್ಲಿಯ ಶರಣರು ಇವರು ಸಚ್ಚರಿತೆ ಶರಣೆಯರು, ಪವಿತ್ರತಮೆಯರು, ಪರಿಶುದ್ಧೆಯರು, ಲಿಂಗಾಂಗಸಾಮರಸ್ಯಭೋಗಿಗಳು ಎಂಬುದನ್ನು ತಿಳಿದುಕೊಂಡರು. "ಅಜಕೋಟಿ ವರುಷದವರೆಲ್ಲರೂ ಹಿರಿಯರೇ? ಹುತ್ತೇರಿ ಬೆತ್ತೇರಿ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೇ? ನಡುಮುರಿದು, ತಲೆನಡುಗಿ, ಗುಡುಗೂರಿ ಮತಿಗೆಟ್ಟು ಒಂದನಾಡಹೋಗಿ ಒಂಬತ್ತನಾಡುವ ಅಜ್ಞಾನಿಗಳೆಲ್ಲರು ಹಿರಿಯರೇ? ಅನುವರಿದು ಘನವ ಬೆರಸಿ, ಹಿರಿದುಕಿರಿದೆಂಬ ಭೇದವ ಮರೆದು ಕೂಡಲ ಚೆನ್ನಸಂಗಯ್ಯನಲ್ಲಿ ಏಕವಾಗಿಪ್ಪ ಅಕ್ಕಮಹಾದೇವಿಗಾಗಿತ್ತು

ನಿಲುವು” ಎಂದು ಹೇಳಿದ ಜ್ಞಾನಿವರ್ಯ ಚನ್ನಬಸವಣ್ಣನವರ ನುಡಿಯೇ ಇವರ ಹಿರಿಮೆಗೆ ಸಾಕ್ಷಿಯು ಈಕೆಯು. ವೈರಾಗ್ಯ ಜೀವನದಲ್ಲಿ ತವ ಗುಂಟಾವ ಆನಂದವನ್ನು ಇತರರು ಸವಿಯಲೆಂಬ ಆಶೆಯಿಂದ ಕೂಡಿದ್ದರು ಎಂಬುದು ಈ ವಚನದಿಂದ ಅರಿವಾಗುವುದು. “ಇಂದೆನ್ನ ಮನೆಗೆ ಗಂಡ ಬಂದಿಹನೆಲಗವ್ವ! ನಿಮನಿಮಗೆಲ್ಲ ಶೃಂಗಾರವಮಾಡಿಕೊಳ್ಳಿ! ಚೆನ್ನಮಲ್ಲಿಕಾರ್ಜುನನು ಈಗಳೆ ಬಂದಿಹನು! ಇದಿರು ಕೊಳ್ಳಲು ಬನ್ನಿರಿ ಅವ್ವಗಳಿರಾ!” ವೃಡನೇ ಗಂಡನೆಂದು ತ್ರಿಕರಣಪೂರ್ವಕವಾಗಿ ತವ್ಮ ದೇಹವನ್ನು ದೇವರಿಗೆ ಅರ್ಪಿಸಿದರು. ಇದಕ್ಕೆ ಆಧಾರ ವಚನವಿದು. ತನು ನಿಮ್ಮ ರೂಪಾದ ಬಳಿಕ ಆರಿಗೆ ಮಾಡುವೆ? ಮನ ನಿಮ್ಮ ರೂಪಾದ ಬಳಿಕ ಆರ ನೆನೆವೆ? ಪ್ರಾಣ ನಿಮ್ಮ ರೂಪಾದ ಬಳಿಕ ಆರನಾರಾಧಿಸುವೆ? ಅರಿವು ನಿಮ್ಮಲ್ಲಿ ಸ್ವಯವಾದ ಬಳಿಕ ಆರನರಿವೆ? ಚೆನ್ನಮಲ್ಲಿಕಾರ್ಜುನಯ್ಯ, ನಿಮ್ಮಿಂದ ನೀವೆಯಾದಿರಾಗಿ, ನಿಮ್ಮನೇ ಅರಿವುತಿರ್ದೆನು” ಶರಣಸತಿ ಲಿಂಗಪತಿಯ ಗುರಿಯನ್ನು ಚಾಚೂ ತಪ್ಪದೆ ಏಕರೀತಿಯಿಂದ ಸಾಧಿಸಿದ ಮಹಾಸಿದ್ಧಪುರುಷೆ ಅಕ್ಕಮಹಾದೇವಿಯು. ಇವರು ವೈರಾಗ್ಯ ಪರ್ವತದಿಂದ ಶ್ರೀಪರ್ವತವನ್ನೇರಿದರು. ಅಕ್ಕನವರ ವೈರಾಗ್ಯವು ಮಹತ್ತರವಾದದ್ದು, ಶ್ಲಾಘನೀಯವಾದದ್ದು. ಅಕ್ಕನವರ ಸಂದೇಶವು ಅಮೃತ ಸಂದೇಶವು. ಅವರ ವಾಣಿ ಅಮರವಾಣಿ. ಅಕ್ಕನಂತಹ ದೈವವ್ಯಕ್ತಿಯನ್ನು ಪಡೆದದ್ದು ಕನ್ನಡಿಗರ ಸುಕೃತವೇ ಸರಿಯು. ಅಕ್ಕನಂತಹ ಮಹಿಳೆಯನ್ನು ಹೊಂದಿದ್ದು ಆರ್ಯಮಹಿಳೆಯರ ಪುಣ್ಯೋದಯವು. ಇವರ ಬೆಳಕು ನಮ್ಮ ನಾಡನುಡಿಯನ್ನೂ, ಜನತೆಯನ್ನೂ ಪ್ರಕಾಶಮಾನವಾಗಿರುವಂತೆ ಮಾಡಿದೆ. ಪರನಾಡು ನುಡಿಯ ಮೇಲೂ ಕೂಡ ಈ ಬೆಳಕು ಬಿದ್ದು ಆ ನಾಡ ಜನತೆಯು ಜಾಗ್ರತವಾಗಲಿ. ಅಕ್ಕನವರ ದಿವ್ಯವಾಣಿಗಳು ನಮ್ಮ ಹೃದಯದಲ್ಲಿ ಸೇರಿ ಮಿಲನವಾಗಲಿ. ಶರಣಸಾಹಿತ್ಯದ ಉದ್ಧಾರಕ್ಕೆ ಬೆಂಬಲ ಕೊಡೋಣ. ದಿವ್ಯವಚನ ಸಾಹಿತ್ಯ ತರಂಗವೇ ನಮ್ಮ ಚಿರಆಸ್ತಿಯಾಗಿರಲಿ. ಧನ್ಯ ಕನ್ನಡಮಾತೆಯ ಆಶಿಷವು ನಮ್ಮ ಮೇಲೆ ಬೀಳಲಿ.

---

# ಪಥವಾವುದಯ್ಯಾ?

(ಲೇಃ— ಕುಮಾರಿ ಲಲಿತಾ ನಾಗಲಿಂಗಪ್ಪ ಮು. ಕೊಳ್ಳೆಗಾಲ)

ಎನ್ನ ಪಥವಾವುದಯ್ಯಾ
ನನ್ನನ್ನು ಕೈಹಿಡಿದು ರಕ್ಷಿಸು ಗುರುದೇವ
ಎನ್ನ ಮನ ಬಯಸುತಿಹುದು
ನಿನ್ನ ನೆಲೆಯ ತಿಳಿಯ ಹೇಳು ದೇವಾ. ॥೧॥

ನಾನೇ ಬರಲ್ ಕಾರ್ ಕತ್ತಲೆ !
ನಾನು ಧೈರ್ಯ ಮಾಡಿ ಮುಂದುವರಿದೆನು.
ಎನ್ನ ಕರ್ಮದ ಮೂಲ ಹಿಂದೆ
ತಳ್ಳಿ ಮಾಯ ಪ್ರಪಂಚಕ್ಕೆ ಬೀಳಿಸುತಿದೆ. ॥೨॥

ಓ ದೇವ! ಕೈಹಿಡಿದು ಸಲಹು.
ಪಾಪಪ್ರಪಂಚದಲಿ ಮುಳುಗುತಿಹೆನು.
ಶ್ರೀಚೆನ್ನ ಶಾಂತ ಬಸವೇಶ್ವರಾ, ಎನ್ನ ತಂದೆ!
ಎಲ್ಲಿ ಮರೆಯಾಗಿರುವೆ ಬಾರಯ್ಯಾ. ॥೩॥

ಎನ್ನ ಜೀವನ ಯಾತ್ರೆಯ ನಾವೆಯದು
ಬಿರುಗಾಳಿಯ ಸಮುದ್ರದಲಿ ಪಯಣ ಮಾಡುತಿಹುದು.
ದಿಕ್ ಸೂಚಿಯನು ಕಳೆದು ಅಲೆಯುತಿಹುದು
ಕಣ್ ತೆರೆದು ನೋಡು ಶ್ರೀಚೆನ್ನಶಾಂತಬಸವೇಶ್ವರಾ. ॥೪॥

ನೀರ್ ಗುಳ್ಳೆಯಂತಿರ್ಪ ಪ್ರಾಯ ಒಂದು ಕಡೆ
ಎನ್ನ ಕರ್ಮ ಮತ್ತೊಂದು ಕಡೆ ಶೂಲದಂತೆ
ಎಳೆಯುತಿಹುದು ಎಲ್ಲಿಗೆ ಪೋಗಲಿ ನಾನು?
ಯಾರನ್ನು ಸೇರಲಿ ಹೇಳು ದೇವಾ. ॥೫॥

ಬೆಂಕಿಯಂತಿರ್ಪ ಈ ಲೋಕದಲ್ಲಿ
ಬಾಡಿ ಸೊರಗುತಿರ್ಪೆನು ನಾನು ಹೇ ದೇವ
ಜ್ಞಾನ ನೀರನ್ನು ಎರೆದು ಕಾಪಾಡು
ಶ್ರೀ ಚೆನ್ನಶಾಂತಬಸವೇಶ್ವರಾ ಓ ತಂದೆ!

ಅಕ್ಕಮಹಾದೇವಿ, ಹೇಮರಡ್ಡಿ ಮಲ್ಲಮ್ಮ ತಾಯಿಗಳೆ
ನಿಮ್ಮ ವೈರಾಗ್ಯವನು ನನಗೆ ಧಾರೆ ಎರೆದು
ಈ ಭವಪ್ರಪಂಚದಿಂದ ಕೈಹಿಡಿದು ಎಳೆಯಿರಿ
ಮೂಢಳಾದ ಎನ್ನನು ನಮ್ಮವ್ವೆಗಳಿರಾ! ಶರಣತಾಯಿಗಳೆ! ॥೭॥

---

# ಮರಣದ ಭೀತಿಯನ್ನು ಗೆಲ್ಲುವ ಬಗೆ ಹೇಗೆ?

(ಲೇಖಕ:— ಶ್ರೀ. ಅನ್ನದಾನೀಶ್ವರ ವಿರಕ್ತಮಠ, ರಾಣೇಬಿನ್ನೂರ.)

---

"ಮೃತ್ಯುಂಜಯನಾಗು" ಎಂದು ಘನಮಠದಪ್ಪನವರೇ ಮೊದಲಾದ ಸಕಲ ಶರಣರು ಮನುಷ್ಯನಿಗೆ ಉಪದೇಶಿಸಿರುವರು. ಮೃತ್ಯುವನ್ನು ಗೆಲ್ಲು ಎಂದರೆ ಮೃತ್ಯುಂಜಯನಾಗು. ಮೃತ್ಯುವನ್ನು ಗೆಲ್ಲುವದೆಂದರೆ ಮರಣವನ್ನು ತಪ್ಪಿಸಿಕೊಳ್ಳುವದೋ? ಹುಟ್ಟಿದವನಿಗೆ ಸಾವು ತಪ್ಪದು. ಪ್ರತಿಯೊಬ್ಬನೂ ಸಾಯಲೇಬೇಕು. ಮಹಾತ್ಮನಿರಲಿ, ದುರಾತ್ಮನಿರಲಿ, ಅವತಾರಿಪುರುಷನಿರಲಿ, ಋಷಿಯಿರಲಿ, ಎಲ್ಲರೂ ಸಾಯಲೇಬೇಕು. ಹಾಗೆ ಎಲ್ಲರೂ ಸತ್ತಿರುವರು. ಸಾಯದೇ ಇದ್ದ ಮಹಾಪುರುಷರು ಮಾತ್ರ ಪುರಾಣದ ಕಥೆಗಳಲ್ಲಿ ಹೇರಳವಾಗಿ ಸಿಗುವದೇ ವಿನಃ ಬಾಹ್ಯಪ್ರಪಂಚದಲ್ಲಿ ದೊರೆಯುವದಿಲ್ಲ. "ಮೃತ್ಯುಂಜಯನಾಗು" ಎಂದರೆ ಅರ್ಥವೇನು ಹಾಗಾದರೆ? ಮರಣದ ಭೀತಿಯನ್ನು, ಗೆಲ್ಲು ಎಂಬುದೇ ಅದರ ಅರ್ಥವು. ವೈರಿಯನ್ನು ಗೆಲ್ಲು ಎಂದರೆ ವೈರಿಯನ್ನು ಕೊಂದೇ ತೀರು ಎಂದು ಹೇಳಿದಂತಲ್ಲ. ವೈರಿಯ ಭಯವನ್ನು ತಪ್ಪಿಸಿಕೊಂಡರೆ ವೈರಿಯನ್ನು ಗೆದ್ದಂತೆಯೇ ಸರಿ. ಇನ್ನೊಂದು ರೀತಿಯಲ್ಲಿ ಹೇಳಬೇಕೆಂದರೆ ಶತ್ರುವನ್ನು ಮಿತ್ರನನ್ನಾಗಿ ಮಾಡಿಕೊಂಡರಂತೂ

ವೈರಿಯ ಸಂಪೂರ್ಣ ವಿಜಯವೇ ಸರಿ. ಅಲ್ಲವೇ? ಈ ಅರ್ಥದಲ್ಲಿಯೇ ಘನಮಹದಪ್ಪನವರೇ ಮುಂತಾದ ಎಲ್ಲ ಶರಣರು ನಮಗೆ ಬೋಧಿಸಿರುವರು. ಬರೀ ಬೋಧಿಸಿಲ್ಲ. ಆ ಪ್ರಕಾರ ಸಾಧಿಸಿಯೂ, ಅವರ ಅನುಯಾಯಿಗಳು ಸಾಧಿಸುವಂತೆಯೂ ಮಾಡಿ ಮಾರ್ಗದರ್ಶಕರಾಗಿ ಸತ್ತು ಹೋಗಿರುವರು. "ಮರಣವೇ ಮಹಾನವಮಿ ಯೆನಗೆ" ಎಂದು ಶರಣಮಾರ್ಗ ಪ್ರವರ್ತಕ, ದೀನೋದ್ಧಾರಕ ಬಸವಣ್ಣನು ತನ್ನ ವಚನಗಳಲ್ಲಿ ಒಂದು ಪ್ರಸಂಗದಲ್ಲಿ ಹೇಳಿರುವನು.

ಶರಣರು ಸತ್ತರೋ? ಅಹುದು. ಅವರು ಸತ್ತು ಹೋಗಿರುವರು. ಹಾಗಾದರೆ ಲಿಂಗೈಕ್ಯರಾದರು ಎಂದು ಹೇಳಿರುವರಲ್ಲಾ! ಮರಣದ ಭೀತಿಯನ್ನು ಗೆದ್ದು ಸತ್ತರು ಎಂದರೂ ಒಂದೇ. ಲಿಂಗೈಕ್ಯರಾದರು ಎಂದರೂ ಒಂದೇ. ಶರಣನಿಗೆ ಮರಣವಿಲ್ಲವೆಂದರೇನು? ಜನಾಂಗದ ಮನೋಭೂಮಿಕೆಯಲ್ಲಿ, ಸ್ಮೃತಿಯಲ್ಲಿ ಅವರ ನೆನಹು ಉಳಿಯುವದೆಂಬುದೇ ಅದರ ಅರ್ಥ. ಮೇಲಿನ ವಿವೇಚನೆಯಿಂದ ಮೃತ್ಯುಂಜಯನಾಗು, ಲಿಂಗೈಕ್ಯನಾಗು, ಮರಣದ ಭೀತಿಯನ್ನು ಗೆಲ್ಲು— ಈ ಮೂರು ಮಾತುಗಳು ಒಂದೇ ಭಾವವನ್ನು ಹೇಳುತ್ತವೆಂದೂ, ಶರಣರು ಮರಣದ ಭಯವನ್ನು ಗೆದ್ದು ಲಿಂಗೈಕ್ಯರಾಗಿರುವರೆಂದೂ ಹೇಳಿದಂತಾಯಿತು. ಅಸ್ತು.

## ಜಗತ್ತಿನ ಓಘ.

ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಸಾಯುವ ವರೆಗೆ ಹಂಚಿಕೆಯನ್ನು ಹಾಕುತ್ತಿರುವದೇ ಜಗತ್ತಿನ ಜನರ ಓಘವಾಗಿದೆ. ನಮ್ಮ ಉತ್ಪನ್ನವನ್ನು ಹೇಗೆ ಹೆಚ್ಚಿಸಿಕೊಳ್ಳಬೇಕು? ನಮ್ಮ ಮಕ್ಕಳ ಶಿಕ್ಷಣದ ಭವಿತವ್ಯವೇನು? ಮುಪ್ಪಿನ ಕಾಲದಲ್ಲಿ ಸುಖವಾಗಿ ಕಾಲ ಕಳೆಯುವಂತೆ ಈಗಿನಿಂದಲೇ ಏನು ಮಾಡಬೇಕು? ಈ ಬಗೆಯಾಗಿ ವಿಚಾರಿಸಿ ಹಂಚಿಕೆ ಹಾಕುವದು ತಪ್ಪೋ? ಛೇ! ಅದು ಸ್ವಾಭಾವಿಕ. ಹಾಗಾದರೆ ತಪ್ಪು ಎಲ್ಲಿದೆ? ಮೇಲಿನ ಹಂಚಿಕೆಗಳನ್ನು ಹಾಕುತ್ತಿರುವಂತೆ, ಆ ಪ್ರಕಾರ ಕಷ್ಟಪಟ್ಟು ದುಡಿಯುತ್ತಿರುವಂತೆ, ಮನುಷ್ಯನು ಮರಣದ ಭಯವನ್ನು ಗೆಲ್ಲುವ ಬಗ್ಗೆ ಹಂಚಿಕೆಯನ್ನು ಹಾಕದಿರುವದೇ ತಪ್ಪು. ಆ ದಿಶೆಯಲ್ಲಿ ಕಷ್ಟಪಟ್ಟು ಯತ್ನಮಾಡದಿರುವದೇ ತಪ್ಪು.

ನಮ್ಮ ಹಂಚಿಕೆಗಳಿಗೂ ಸಹ ಮರಣವಿದೆ ಎಂಬುದನ್ನು ಅರಿಯದಿರುವದೇ ತಪ್ಪು. ಮರಣದ ಅರಿವಿಲ್ಲದೇ ಕೇವಲ ಸ್ವಾರ್ಥದ ಹಂಚಿಕೆಯುಳ್ಳವರಾಗಿ ದಿನಗಳೆಯುವದೇ ಮಹಾ ತಪ್ಪು.

## ಸ್ವಾರ್ಥದ ವಿಮರ್ಶೆ.

ನಮ್ಮ ಎಲ್ಲ ಹಂಚಿಕೆಗಳಿಗೂ ಸ್ವಾರ್ಥವೇ ಆಧಾರ. ಅನ್ಯರ ಹಿತಕ್ಕೆ ಧಕ್ಕೆ ತಗಲಿದರೂ ಆ ಕಡೆಗೆ ಲಕ್ಷಕೊಡದೇ ನಮ್ಮ ಸ್ವಾರ್ಥವನ್ನು ಮಾತ್ರ ಸಾಧಿಸಿಕೊಳ್ಳಹತ್ತಿದರೆ ಅದು ನೀಚ, ಅಧಮಸ್ವಾರ್ಥವು. ಅನ್ಯರ ಹಿತಕ್ಕೆ ಧಕ್ಕೆ ತಗಲದಂತೆ ನಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುವದು ಮಧ್ಯಮವು. ಅನ್ಯರಿಗೆ ಹಿತಮಾಡುವಾಗ ನಮ್ಮ ಸ್ವಾರ್ಥವು ಸಹಜವಾಗಿ ಸಾಧ್ಯವಾಗುತ್ತಿದ್ದರೆ ಅದು ಉತ್ತಮವು. ನಮ್ಮ ಸ್ವಾರ್ಥವು ಶುದ್ಧವಾಗಿದ್ದು ಅದನ್ನು ಸಾಧಿಸುವ ಕ್ರಮವೂ ಶುದ್ಧವಾಗಿದ್ದು, ಆ ವಿಶುದ್ಧ ಕ್ರಮದಲ್ಲಿಯೇ ಜಗತ್ತಿನ ಸ್ವಾರ್ಥವು ಶುದ್ಧೀಕರಿಸಲ್ಪಟ್ಟು ಸಾಧಿಸುತ್ತಿದ್ದರೆ ಇಂಥ ಸ್ವಾರ್ಥವು ಉತ್ತಮೋತ್ತಮವು. ಶುದ್ಧವಾದ ಸ್ವಾರ್ಥವನ್ನು ಶುದ್ಧವಾದ ರೀತಿಯಲ್ಲಿ ಸಾಧಿಸುವ ಬಗೆಯನ್ನೂ ಮಾರ್ಗವನ್ನೂ ತೋರಿಸುವದೇ ಉತ್ತಮೋತ್ತಮವು. ಇಂಥ ಉತ್ತಮ ಮತ್ತು ಉತ್ತಮೋತ್ತಮ ಸ್ವಾರ್ಥವು ಮತ್ತು ಅವನ್ನು ಸಾಧಿಸುವ ದಾರಿಯು ಶರಣರಲ್ಲಿತ್ತು. ಆದ್ದರಿಂದಲೇ ಅವರು ಮರಣದ ಭಯವನ್ನು ನೀಗಿದ್ದರು.

## ಶರಣಮಾರ್ಗ.

ಶರಣಮಾರ್ಗವು ಭಯಪರಿಹಾರಕವು. ಮರಣದ ಭಯವನ್ನು ಗೆಲ್ಲಬೇಕೆನ್ನುವವರು ಶರಣಮಾರ್ಗವನ್ನು ತಿಳಿಯಬೇಕು. ಶರಣರು ಈ ಪ್ರಪಂಚದಲ್ಲಿಯೇ ಬಾಳಿವೆ ಮಾಡಿದರು. ಅವರೂ ಪ್ರಾಪಂಚಿಕರೇ ಇದ್ದರು. ಅವರು ಅಡವಿಯ ಗುಹೆಗಳಲ್ಲಿ ಇದ್ದಿಲ್ಲ. ನಮಗೆ ಅಸಾಧ್ಯವಾದ ಘೋರ ತಪಸ್ಸನ್ನೇನೂ ಅವರು ಅರಣ್ಯದಲ್ಲಿ ಮಾಡಿಲ್ಲ. ಪ್ರಪಂಚಕ್ಕೆ ಹೆದರಿಯೂ ಇದ್ದಿಲ್ಲ. ಪ್ರಪಂಚದಲ್ಲಿ ಆಸಕ್ತರಾಗಿಯೂ ಇದ್ದಿಲ್ಲ. ಭೋಗವಿಲಾಸದಲ್ಲಿದ್ದರೂ ಶರಣಮಾರ್ಗವನ್ನು ತಿಳಿಯಬರುವದು. ದರಿದ್ರರಿದ್ದರೂ ಶರಣಮಾರ್ಗವನ್ನು ಗಮಿಸಬಹುದು. ಮತವಿದ್ದವರೂ, ಮತವಿಲ್ಲದವರೂ ಅನುಸರಿಸಬಹುದು. ಸ್ತ್ರೀಯರೂ,

ಪುರುಷರೂ, ಧನಿಕರೂ, ದರಿದ್ರರೂ, ಸ್ಪೃಶ್ಯರೂ ಅಸ್ಪೃಶ್ಯರೂ, ಪಂಡಿತರೂ, ಪಾಮರರೂ ಒಟ್ಟಾರೆ ಎಲ್ಲರೂ ಶರಣಮಾರ್ಗಾವಲಂಬಿಗಳಾಗಬಹುದು. ಅಂಥ ವಿಶ್ವವ್ಯಾಪಕ ತತ್ವಜ್ಞಾನವೇ ಶರಣರಲ್ಲಿದೆ. ಪ್ರಪಂಚವನ್ನು ಶಿವಮಯ ಅಥವಾ ಮಂಗಳಮಯವಾಗಿ ಮಾಡುವದೇ ಶರಣರ ತತ್ವಜ್ಞಾನದ ಗುರಿಯು. ಅವರ ತತ್ವಜ್ಞಾನವು ಸೃಷ್ಟಿಯ ಸಹಜ ಧರ್ಮಕ್ಕೆ ಅನುಸರಿಸಿ ಇದ್ದುದು. ಅಸ್ವಾಭಾವಿಕ, ಕೃತ್ರಿಮ, ಜಟಿಲ ಮತ್ತು ಅವ್ಯಾವಹಾರಿಕವಲ್ಲ.

ಅವರ ತತ್ವಜ್ಞಾನಕ್ಕನುಗುಣವಾಗಿಯೇ ಅವರ ಸಮಾಜರಚನಾ ಕೌಶಲ್ಯವಿದೆ. ಅವರ ಸಮಾಜ ರಚನೆಯಲ್ಲಿ ವಿಷಮತೆಯ ವರ್ಣಗಳಿಲ್ಲ. ಭೇದಮೂಲ ಜಾತಿಗಳಿಲ್ಲ. ಪಕ್ಷ, ಪಂಗಡಗಳಿಲ್ಲ. ಕಾಯಕದಿಂದ ಕೂಡಿದ ಸಮಾನತೆಯ ಸಮಾಜರಚನೆ ಅವರದು!

ಶರಣರ ಸಮಾಜದಲ್ಲಿ ಕಾಯಕಮಾಡುತ್ತ ಸಮಾನತೆಯಿಂದ ಇದ್ದು ಅವರ ತತ್ವಜ್ಞಾನದಂತೆ ನಡೆಯುತ್ತ ಹೋಗುವವರಿಂದ ನಾವು ಮರಣದ ಭಯವನ್ನು ಸುಲಭವಾಗಿ ನೀಗಬಲ್ಲೆವು. ಲಿಂಗೈಕ್ಯಮನವಿರಲಿ. ಆಲಸ್ಯಬೇಡ. ಬೇಕಾದ ಉದ್ಯೋಗ ಮಾಡು. ಕೇವಲ ಸ್ವಾರ್ಥಿಯಾಗಬೇಡ. ದುಡಿದ ದುಡ್ಡು ಸ್ವಲ್ಪಾದರೂ ಸಮಾಜಕ್ಕೆ ವಿನಿಯೋಗವಾಗಲಿ. ಬಂಧು ಪ್ರೀತಿಬೇಕು. ಜಾತಿಭೇದಮಾಡಬೇಡ. "ಭಕ್ತನ ನೋವೇ ಲಿಂಗದ ನೋವು!" ಎಂಬ ಜಗದಂಣ ಬಸವಂಣನ ಸಮಾಜದ ಸೂತ್ರವು ನೆನಪಿರಲಿ. ಅನುಭವಮಂಟಪಕ್ಕೆ ಹೋಗುತ್ತಿರು. ಶರಣರ ಸಹವಾಸದಲ್ಲಿರು. ವರ್ಣಗಳಿಂದ ವಿಷಮಪರಿಸ್ಥಿತಿಯೂ, ಸ್ಪೃಶ್ಯಾಸ್ಪೃಶ್ಯ ಕೃತಕ ಭೇದಗಳೂ, ಜನ್ಮಜಾತಿ ಮೂಲಕ ಉಚ್ಚನೀಚ ಮನೋರಂಗವೂ ತಯಾರಾಗುತ್ತವೆ. ಕಾರಣ ಆರ್ಯರ ವರ್ಣಗಳು ಬೇಡ. ಇದು ಶರಣ ಮಾರ್ಗದ ಸಾರಾಂಶ.

ಶರಣರ ವಿಚಾರಗಳು ನಮ್ಮವಾಗಲಿ! ಶರಣರ ನುಡಿಯು ನಮಗಿರಲಿ! ಶರಣರ ಜೀವನದ ನಡೆಯು ನಮಗೆ ಬರಲಿ!!! ನಾವು ಮೃತ್ಯುಂಜಯವಾಗೋಣ!!! ಜಗದಲ್ಲಿ ಅಮೃತದ ಝುರಿಯನ್ನು ಹರಿಸೋಣ!!!

---

# ಲೋಕಗಳ ವಿಚಾರ.

( ಲೇಖಕ:— ಶ್ರೀಯುತ ಸಾಸನೂರು ಮಡಿವಾಳಪ್ಪನವರು )

[ಹಿಂದಿನ ಸಂಚಿಕೆಯಿಂದ ಮುಂದುವರೆದಿದು.]

ಈಗ ವರುಣ ಲೋಕದ ವಿಚಾರಃ—

ವಾಸವೀಪುರಿಯ ಪಶ್ಚಿಮಕ್ಕೆ ವರುಣನ ಪಟ್ಟಣವು ಇತ್ತೆಂದು ಮೊದಲೇ ಹೇಳಿದ್ದೇವೆ. ವೇದ, ಪುರಾಣ, ಹಾಗು ಮಹಾಭಾರತಾದಿಗಳಲ್ಲಿ, ಮೇರು ಪರ್ವತದ ಪಶ್ಚಿಮಕ್ಕೆ ಕೇತುಮಾಲವರ್ಷವೆಂದು ಬರೆದಿದೆ. ಸುತರಾಂ ಈ ಕೇತುಮಾಲ ವರ್ಷವೇ ವರುಣನ ರಾಜ್ಯವು. ಈಗಿನ ಅಫಗಾನಿಸ್ತಾನ, ಇರಾಣ ಹಾಗು ತುರ್ಕೀಸ್ತಾನ ಮೊದಲಾದವುಗಳು ಈ ಕೇತುಮಾಲ ವರ್ಷದ ಅಂತರ್ಭೂತವಾಗಿದ್ದವು. ಶಾಸ್ತ್ರ ಪುರಾಣಾದಿಗಳಲ್ಲಿ ವರುಣನು ಜಲಾಧಿಪನೆಂದು ಬರೆದುದನ್ನು ಎಲ್ಲರೂ ಬಲ್ಲರು. 'ಜಲಾಧಿಪ'ನೆಂದರೆ ನಾವು ಸಾಧಾರಣವಾಗಿ ಜಲದ ಅಧಿಪತಿ ಅರ್ಥಾತ್ ನದ, ನದೀ ಹಾಗು ಸಮುದ್ರಾದಿಗಳ ಕರ್ತನೆಂದು ತಿಳಿಯುವೆವು. ವಾಸ್ತವಿಕವಾಗಿ ವರುಣನ ರಾಜ್ಯವು ಜಲಮಯವಾವಾಗಿತ್ತು. ವೈದಿಕ ಯುಗದಲ್ಲಿ ಅವನ ರಾಜ್ಯವು ದ್ವೀಪಮಯವಿತ್ತೆಂದು ಗೊತ್ತಾಗುತ್ತದೆ. ಈಗಿನ ಅಫಗಾನಿಸ್ತಾನದ ವೈದಿಕ ಹೆಸರು ಅಪ್ ಅಥವಾ ಜಲಬಹುಲತಾಹೇತು-ಅಪಗಸ್ಥಾನವಿತ್ತು— ಈಗ ಸಹ ಚಿಕ್ಕ ಚಿಕ್ಕ ಪರ್ವತಪ್ರವಾಹಗಳಿಂದ ತುಂಬಿಕೊಂಡಿದೆ. ವರುಣನ ರಾಜ್ಯದ ಪಶ್ಚಿಮಕ್ಕೆ ಮಹಾಸಮುದ್ರವಿತ್ತೆಂದು ಋಗ್ವೇದದಿಂದ ತಿಳಿಯುವದು. ಈ ಸಮುದ್ರವೇ ಎತ್ತರವಾಗಿ ಕಡೆಗೆ ಕಾಸ್ಪಿಯನ್ ಸರೋವರದಲ್ಲಿ ಪರಿಣಮಿಸಿತು. ಭಾಸ್ಕರಾಚಾರ್ಯರ ಸಿದ್ಧಾಂತ ಶಿರೋಮಣೀ ಗ್ರಂಥದಲ್ಲಿಃ- ಸ್ವರ್ಣದೀ ಗಂಗೆಯು ನಾಲ್ಕು ಭಾಗಗಳಲ್ಲಿ ವಿಭಕ್ತವಾಗಿ, ನಾಲ್ಕು ಕಡೆಗೆ ಹೋಗಿರುತ್ತದೆ. ಕೇತುಮಾಲವರ್ಷದಲ್ಲಿ ಹೋದ ಶಾಖೆಯ ಹೆಸರು 'ಚಕ್ಷು' ಚಕ್ಷುವಿನ ಮತ್ತೊಂದು ಹೆಸರು ಅಕ್ಷಿ, ಅಥವಾ ಅರ್ಷಿಯಿಂದಲೇ ಈಗಿನ ಅರ್ಶಾಸ್ ಆಗಿರುತ್ತದೆ. ಈ ಅರ್ಶಾಸ್ ನದಿಯು ಈಗ ಬೋಖಾರಾ ಹಾಗು ತುರ್ಕಿಸ್ಥಾನಗಳೊಳಗಿಂದ ಹರಿದು, ಅರಲಹ್ರದ (ವೈದಿಕ-ಅರ

ಹ್ರದ)ಕ್ಕೆ ಕೂಡುತ್ತದೆ. ವರುಣನ ರಾಜ್ಯವು ಕೇತುಮಾಲ ವರ್ಷದಲ್ಲಿ ಇತ್ತೆಂದು ತಿಳಿಯುತ್ತದೆ. ಆದರೆ ಮಹಾಭಾರತದ ಸಭಾಪರ್ವತದಲ್ಲಿ ನಕುಲ ದಿಗ್ವಿಜಯಾಧ್ಯಾಯದಲ್ಲಿ:— ನಕುಲನು ಪಶ್ಚಿಮ ದಿಕ್ಕನ್ನು ಜಯಿಸಲಿಕ್ಕೆ ಹೋಗಿ, ಸಿಂಧು, ಗಾಂಧಾರ (ಈಗಿನ ಕಂದಾಹಾರ) ಮೊದಲಾದ ಹಲವು ದೇಶಗಳನ್ನು ಗೆದ್ದನು. ಅನಂತರ ಮತ್ತೂ ಪಶ್ಚಿಮ ದಿಕ್ಕಿಗೆ ಹೋಗಿ, ಹೂಣ, ಶಕ, ಕಿರಾತ, ಪಹ್ಲವ, ಯವನ ಮೊದಲಾದ ದುರ್ಧರ್ಷ ಜಾತಿಗಳನ್ನು ಸೋಲಿಸಿ, ಅವರಿಂದ ಕಪ್ಪವನ್ನು ತೆಗೆದುಕೊಂಡನು. ಈ ಎಲ್ಲ ದೇಶಗಳೂ ವರುಣ ಪಾಲಿತ ದೇಶಗಳೆಂದು ಹೇಳಲ್ಪಟ್ಟಿದೆ:—

"ಏವಂ ವಿಜಿತ್ಯ ನಕುಲೋ ದಿಶಂ ವರುಣ ಪಾಲಿತಾಮ್"

—ಮಹಾಭಾರತ ಸಭಾಪರ್ವ.

ವರುಣನ ರಾಜ್ಯವು ಎಲ್ಲಿ ಇತ್ತೆಂಬುವದು ಸ್ಪಷ್ಟವಾಗಿಯೇ ಕಂಡುಬರುವದು. ಹೂಣ, ಶಕ ಮೊದಲಾದ ಜಾತಿಗಳ ವಾಸಭೂಮಿಯು ತುರ್ಕಿಸ್ತಾನದಲ್ಲಿಯೇ ಇತ್ತೆಂಬುವದು ಮಹಾಭಾರತದ ಇತಿಹಾಸವನ್ನು ಓದುವವರು ಬಲ್ಲರು. ಯಾಕಂದರೆ ಈ ಎರಡು ಜಾತಿಗಳು ಪ್ರಾಯಃ ೨೧೦೦, ವರ್ಷಗಳ ಪೂರ್ವದಲ್ಲಿಯೇ ಎಲ್ಲ ಮಧ್ಯ ಏಶಿಯಾ ಹಾಗು ಭಾರತದ ಹಲವು ಭಾಗಗಳಲ್ಲಿಯೂ ಇದ್ದರು. ಶಕ ಶ್ರೇಷ್ಠ ಮಹಾರಾಜ ಕನಿಷ್ಕನ ಹೆಸರನ್ನು ಈಗ ಸಹ ಇತಿಹಾಸ ಪಾಠಕರು ಬಲ್ಲರು. ಮತ್ತು ಪಾರಸ್ಯ ದೇಶೀಯ ಪಹ್ಲವ - ವಂಶೀಯ ರೇಜಾಖಾಂ ಈಗ ಪಾರಸ್ಯ ದೇಶದ ಸಿಂಹಾಸನದಲ್ಲಿ ಆಸೀನನಾಗಿದ್ದನು. ವರುಣನ ಪ್ರಜೆಗಳು ದೈತ್ಯ, ಅಪ್ಸರಾ, ಗಂಧರ್ವ ಮೊದಲಾದವರು ಇದ್ದರೆಂದು ಮಹಾಭಾರತದಿಂದ ಕಂಡುಬರುತ್ತದೆ. ಅರ್ಜುನನು ಈ ವರುಣನಿಂದ ಎಷ್ಟೋ ದಿವ್ಯಾಸ್ತ್ರಗಳನ್ನು ಕಲಿತಿದ್ದನು. ಶ್ರೀಕೃಷ್ಣನು ಸಹ ತನ್ನ ಸುದರ್ಶನಚಕ್ರವೆಂಬ ಅವ್ಯರ್ಥ ಅಸ್ತ್ರವನ್ನು ಈ ವರುಣನಿಂದಲೇ ಸಂಪಾದನೆ ಮಾಡಿದ್ದನು.

ಈಗ ವಿಷ್ಣು ಲೋಕ:—

ವಿಷ್ಣುಲೋಕದ ಮತ್ತೊಂದು ಹೆಸರು ಹಿರಣ್ಮಯ ವರ್ಷವೆಂದು. ಇದಕ್ಕೆ ಕೆಲಕೆಲವು ಸ್ಥಳಗಳಲ್ಲಿ ತಪೋಲೋಕವೆಂದೂ ಹೇಳಲ್ಪಟ್ಟಿದೆ.

ವಿಷ್ಣುವು ಕಶ್ಯಪ ಮುನಿಯ ಪುತ್ರನು; ಅದಿತಿಯ ಗರ್ಭಸಂಭೂತನು. ಅವನು ಗಿಡ್ಡನಿದ್ದನೆಂದೂ ವಾಮನ—ವಿಷ್ಣುವೆಂದೂ ಕರೆಯಲ್ಪಟ್ಟಿದ್ದಾನೆ. ಹಿರಣ್ಮಯ ವರ್ಷವು ಈಗಿನ ಮಧ್ಯ ಸೈಬೇರಿಯಾವು, ಬ್ರಹ್ಮಲೋಕಕ್ಕೆ ಹೋಗಬೇಕಾದರೆ ಎಲ್ಲರೂ ವಿಷ್ಣುಲೋಕವನ್ನು ದಾಟಿ ಹೋಗಬೇಕಾಗುತ್ತಿತ್ತು. ಸುತರಾಂ ವಿಷ್ಣುಲೋಕವು ಬ್ರಹ್ಮಲೋಕಕ್ಕೆ ಪ್ರವೇಶದ ದ್ವಾರ ಸ್ವರೂಪವಾಗಿತ್ತು. ಅಂತೇ ವಿಷ್ಣುವು ವೇದದಲ್ಲಿ ದ್ವಾರಪಾಲನೆಂಬ ಹೆಸರಿನಿಂದ ಕರೆಯಲ್ಪಡುತ್ತಾನೆ:—

"ವಿಷ್ಣುರ್ವೈ ದೇವಾನಾಂ ದ್ವಾರಪಾಃ ಸ ಏಷ ಅಸ್ಮೈ ಏತದ್ವಾರಂ ವಿವೃಣೋತಿ"

—ಐತರೇಯ ಬ್ರಾಹ್ಮಣ.

ವಾಮನ ವಿಷ್ಣುವಿನ ಹಿರಣ್ಮಯ ವರ್ಷವು ಮಧ್ಯ ಸೈಬೇರಿಯಾದಲ್ಲಿದ್ದರೂ, ಇದು ಮಧ್ಯಸೈಬೇರಿಯದ ಪಶ್ಚಿಮ ಭಾಗದಲ್ಲಿತ್ತು. ವಿಷ್ಣುವಿನ ರಾಜಧಾನಿಯ ಹೆಸರು ವೈಕುಂಠಪುರಿಯೆಂದು ಇತ್ತು. ಈ ವಾಮನ ವಿಷ್ಣುವು ಮೂರು ಸಾರೆ ಭಾರತಕ್ಕೆ ಬಂದಿದ್ದನು.

"ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇಪದಮ್"

—ಯಜುರ್ವೇದ.

ಶ್ರೀಮತ್ ಸ್ವಾಮೀ ಯೋಗಾನಂದ ಸರಸ್ವತಿಗಳವರು ವಿಷ್ಣುವು ಭಾರತಕ್ಕೆ ಮೂರುಸಾರೆ ಬಂದಕಾರಣಗಳನ್ನು ಕೆಳಗಿನಂತೆ ಹೇಳುವರು-

೧. ದಾನವರು ಇವನನ್ನು ಸ್ವರ್ಗರಾಜ್ಯದಿಂದ ಓಡಿಸಿರುವದು,

೨. ಅಸುರ ಬಲಿಯನ್ನು ಶಿಕ್ಷಿಸುವ ಉದ್ದೇಶದಿಂದ,

೩. ಸಹೋದರನ ಮಗನಾದ ಮನುವಿಗೆ ಅಯೋಧ್ಯೆಯ ಸಿಂಹಾಸನದಲ್ಲಿ ಕೂಡ್ರಿಸುವದರ ಸಲುವಾಗಿ.

ವಾಮನ ವಿಷ್ಣುವು ಛದ್ಮವೇಷದಿಂದ ಬಲಿಯ ರಾಜಧಾನಿಗೆ ಹೋಗಿ, ಅವನನ್ನು ಛಲದಿಂದಲೂ, ಕೌಶಲದಿಂದಲೂ ಸೋಲಿಸಿ ರಾಜ್ಯದಿಂದ ಹೊರದೂಡಿದನು. ಬಲಿಯು ಪಾತಾಲಪುರಿಗೆ (ದಕ್ಷಿಣ ಅಮೇರಿಕೆಯಲ್ಲಿ—ಭೂಮಿಯ ಅಭ್ಯಂತರದಲ್ಲಿ ಅಲ್ಲ) ಹೋಗಿ ಆಶ್ರಯ ಮಾಡಿದನು. ಹಾಗು ಅಲ್ಲಿ "ಬಲಿಭಿಯಾ" ಎಂಬ ಸ್ಥಾನದಲ್ಲಿ ರಾಜಧಾನಿಯನ್ನು ಸ್ಥಾಪಿಸಿದನು.

ಈ ವಿಷ್ಣುವಿನ ಭಾರತಾಗಮನದ ಸಂಬಂಧದಿಂದ ಪದ್ಮಪುರಾಣ ಕಾರನು ಬರೆದುದು:—

"ಸ್ವಲೋರ್ಕೇ ವಸತಿ ವಿಷ್ಣೋ ವೈಕುಂಠೇ ಅಸ್ಯಮಹಾತ್ಮನಃ ।
ಸ ಕಥಂ ಮಾನುಷೇ ಲೋಕೇ ಪದಂನ್ಯಾಸ ಚಕಾರಹ ॥"

—ಪದ್ಮಪುರಾಣ.

ವಿಷ್ಣುವು ವೈಕುಂಠಪುರಿಯನ್ನು ಬಿಟ್ಟು ಮೂರುಸಾರಿ ಭಾರತ ವರ್ಷದಲ್ಲಿ ಏಕೆ ಬಂದಿದ್ದನೆಂಬದನ್ನು ಮೊದಲೇ ಹೇಳಿದ್ದೇವೆ. ವಿಷ್ಣು ಲೋಕದ ಸಂಬಂಧದಿಂದ ಭೀಷ್ಮಪರ್ವದಲ್ಲಿ ವಿಸ್ತೃತವಾದ ವಿವರ ಣೆಯು ಕಂಡುಬರುವದು. ವಿಸ್ತಾರಭಯದಿಂದ ಅದರ ಉಲ್ಲೇಖವನ್ನು ಮಾಡಲಿಲ್ಲ.

ಆದಿತ್ಯಲೋಕದ ವಿಚಾರ:—

ವಿಷ್ಣುಲೋಕದ ಸ್ವಲ್ಪ ಪೂರ್ವಕ್ಕೆ ವಿಷ್ಣುವಿನ ಸಹೋದರನಾದ ವಿವಸ್ವಾನನ ರಾಜ್ಯವಿತ್ತು. ಈ ರಾಜ್ಯದ ಹೆಸರು ಭದ್ರಾಶ್ವವರ್ಷವೆಂದು. ಭದ್ರಾಶ್ವವರ್ಷವು ಮೇರುಪರ್ವತದ ವಾಯುವ್ಯಕ್ಕೆ ಇತ್ತೆಂದು ಮಹಾ ಭಾರತದಿಂದ ತಿಳಿಯುವದು.

"ಮೇರೋಃ ಪಾರ್ಶ್ವಮಹಂ ಪೂರ್ವಂ ವಕ್ಷ್ಯಮ್ಯಥ ಯಥಾಯಥವ್ ।
ತಸ್ಯ ಮೂರ್ಧಾಭಿಷೇಕಶ್ಚ ಭದ್ರಾಶ್ವಸ್ಯ ವಿಶ್ಶಾಂ ಪತೇ ।
ಭದ್ರಶಾಲವನಂ ಯತ್ರ ಕಾಲಾವ್ರಶ್ಚ ಮಹಾದ್ರುಮಃ ॥
ಕಾಲಾವ್ರಸ್ತು ಮಹಾರಾಜ ನಿತ್ಯಪುಷ್ಪಫಲಃ ಶುಭಃ ।
ದ್ರುಮಶ್ಚ ಯೋಜನೋತ್ ಸೇಧಃ ಸಿದ್ಧಚಾರಣ ಸೇವಿತಃ ॥
ತತ್ರತೇ ಪುರುಷಾಃ ಶ್ವೇತಾಸ್ತೇಜೋಯುಕ್ತಾ ಮಹಾಬಲಾಃ ।
ಸ್ತ್ರಿಯಃ ಕುಮುದ ವರ್ಣಾಶ್ಚ ಸುಂದರ್ಯಃ ಪ್ರಿಯದರ್ಶನಾಃ ॥"

—ಭೀಷ್ಮಪರ್ವ—೭ನೆಯ ಅಧ್ಯಾಯ.

ಅಲ್ಲಿ ಭದ್ರವೆಂಬ ಶಾಲವನವಿರುತ್ತದೆ. ಹಾಗು ಕಾಲಾವ್ರವೆಂಬ ಮಹಾದ್ರುಮದಿದೆ. ಆ ಕಾಲಾವ್ರ ಗಿಡದಲ್ಲಿ ಯಾವಾಗಲೂ ಹೂ-ಕಾಯಿ ಗಳು ದೊರೆಯುವವು; ಮತ್ತು ಅಲ್ಲಿ ಸಿದ್ಧ ಪುರುಷರು ವಾಸಮಾಡುವರು. ಅಲ್ಲಿಯ ಪುರುಷರು ಶ್ವೇತವರ್ಣದವರು, ತೇಜಃಪೂರ್ಣರು, ಮಹಾ

ವೀರ್ಯವಂತರು, ಮತ್ತು ಸ್ತ್ರೀಯರು ಕುಮುದವರ್ಣಗಳೂ ಅತ್ಯಂತ ಸುಂದರಿಯರೂ ಇರುವರು. ಈ ಭದ್ರಾಶ್ವವರ್ಷದ ವೈದಿಕ ಹೆಸರು ಅಹಃ ಹಾಗು ರಾತ್ರಿ ಜನಪದವೆಂದಿತ್ತು. 'ಅಹಃ' ಹಾಗು 'ರಾತ್ರಿ' ಇವು ಎರಡು ದ್ವೀಪಗಳು. ಒಂದು ದ್ವೀಪವು ಹಗಲಿನಲ್ಲಿ ಇನ್ನೊಂದು ರಾತ್ರಿಯಲ್ಲಿ ಸಮುದ್ರದಿಂದ ತೇಲುತ್ತಿದ್ದುದರಿಂದ ಇವುಗಳಿಗೆ ಕ್ರಮವಾಗಿ 'ಅಹಃ, 'ರಾತ್ರಿ, ಎಂದು ಇಡಲ್ಪಟ್ಟಿತ್ತು.

ಸುರಜ್ಯೇಷ್ಠನಾದ ಬ್ರಹ್ಮನು ತನ್ನ ಸಹೋದರನಾದ ಸೂರ್ಯನಿಗೆ "ಅಹಃ" ಹಾಗು "ರಾತ್ರಿ" ಜನಪದದಲ್ಲಿ, ಹಾಗು ಕಶ್ಯನಾಗ ಚಂದ್ರನಿಗೆ "ಸಂವತ್ಸರ" ಎಂಬ ಜಾನಪದದಲ್ಲಿ ಪ್ರತಿಷ್ಠಿತವಾಡಿದನು, ಎಂದು ಋಗ್ವೇದವು ಹೇಳುವುದು.

> "ಸಮುದ್ರಾತ್ ಅರ್ಣವಾತ್ ಅಧಿಸಂವತ್ಸರೋಽಜಾಯತ,
> ಅಹೋರಾತ್ರಾಣಿ" — ಋಗ್ವೇದ.

ಸೂರ್ಯನು ತನ್ನ ರಾಜ್ಯವನ್ನು ನೋಡುವದಕ್ಕೋಸುಗ ಪ್ರತಿ ತಿಂಗಳಲ್ಲಿ ಅಲ್ಲಿಗೆ ಹೋಗುತ್ತಿದ್ದನು.

> ತತ್ರಾದಿತ್ಯಸ್ಯ ದೇವಸ್ಯ ದೀಪ್ತಾಯತನಂ ಮಹತ್ ।
> ಮಾಸೇ ಮಾಸೇ ಅವತರತಿ ತತ್ರ ಸೂರ್ಯ ಪ್ರಜಾಪತಿಃ
> — ವಾಯುಪುರಾಣ.

ಈ ಪ್ರಜಾಪತಿ ಸೂರ್ಯನನ್ನು ನಾವು ಆಕಾಶಸ್ಥ ಜಡ ಸೂರ್ಯನೆಂದು ತಿಳಿದಿರುವದು ಬಹು ಭ್ರಮಾತ್ಮಕವೆಂಬದನ್ನು ಹೇಳಲೇಬೇಡ. ಆಕಾಶದಲ್ಲಿಯ ಜಡಸೂರ್ಯನು ಕಶ್ಯಪಮುನಿಯ ಪುತ್ರರೂಪದಿಂದ ಅದಿತಿಯ ಗರ್ಭದಿಂದ ಹುಟ್ಟಿದುದು ಹೇಗೆ? ಈ ಸೂರ್ಯನು ಮನುಷ್ಯನಿದ್ದನು. ಇವನ ವಂಶದವರೇ ಭರತಖಂಡದ ಸೂರ್ಯವಂಶದವರು. ಅವರ ವಂಶದ ಔರಸದಲ್ಲಿ ಕುಂತಿಯುಪುತ್ರ ಕರ್ಣನ ಜನ್ಮವಾಯಿತು. ವೈದಿಕ ಯುಗದಲ್ಲಿ ಹಲವರು ಬ್ರಹ್ಮಚರ್ಯಾದಿ ವ್ರತ ಪಾಲನಪೂರ್ವಕ ಆತ್ಮಜ್ಞಾನವನ್ನು ಸಂಪಾದನೆ ಮಾಡುವದಕ್ಕೋಸುಗ ಆದಿತ್ಯಲೋಕಕ್ಕೆ ಲೋಕಕ್ಕೆ ಹೋಗಿ ಅವನನ್ನು ಭಜಿಸುತ್ತಿದ್ದರಿಂದು ಪ್ರಶ್ನೋಪನಿಷತ್ತಿನಲ್ಲಿ ಬರೆದಿರುತ್ತದೆ.

"ಅಥೋತ್ತರೇಣ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ
ವಿದ್ಯಯಾ ಆತ್ಮಾನಮನ್ವಿಷ್ಯ ಆದಿತ್ಯಂ ಅಭಿಜಯನ್ತೇ"
—ಪ್ರಶ್ನೋಪನಿಷತ್ ೧೦ನೆಯ ಮಂತ್ರ.

ನಮ್ಮ ದೇಶದಲ್ಲಿ ಸಂಸ್ಕೃತವನ್ನು ಕಲಿಯುವದಕ್ಕೋಸುಗ ಕಾಶೀ, ಹರಿದ್ವಾರ, ಕುಂಭಕೋಣಮ್ ಮೊದಲಾದ ಸ್ಥಳಗಳಿಗೆ ಹೋಗುವಂತೆ, ಆ ಕಾಲದಲ್ಲಿಯೂ ಹಲವರು ಬ್ರಹ್ಮವಿದ್ಯೆ (ಆತ್ಮವಿದ್ಯೆ)ಯನ್ನು ಸಂಪಾದನೆ ಮಾಡುವದಕ್ಕೋಸುಗ ದೇವಲೋಕದಲ್ಲಿಯ ಮಹಾಪಂಡಿತನಾದ ಆದಿತ್ಯ (ಸೂರ್ಯ)ನ ಹತ್ತರ ಹೋಗುತ್ತಿದ್ದರು. ಈ ಸೂರ್ಯದೇವನೇ ಸಾಮವೇದವನ್ನು ಸಮಾಕರ ಮಾಡುತ್ತಾನೆ—"ಸೂರ್ಯಾತ್ ಸಾಮವೇದಃ।" ಬ್ರಹ್ಮಲೋಕದಲ್ಲಿ ಆವುದೋ ಹಿಮಪ್ರಲಯ (ಸಂಪ್ಲವ)ವು ಆರಂಭವಾಗಲು ಅಲ್ಲಿಯ ಪ್ರಜೆಗಳು ಆತ್ಮರಕ್ಷಣೆಗೋಸುಗ ಹತ್ತರದಲ್ಲಿದ್ದ ಸೂರ್ಯಲೋಕದಲ್ಲಿ ಪ್ರವೇಶ ಮಾಡುತ್ತಿದ್ದರು ಎಂದು ಮಹಾಭಾರತದ ಭೀಷ್ಮಪರ್ವದಲ್ಲಿ ಬರೆದಿರುವದು—

"ಬ್ರಹ್ಮಲೋಕಚ್ಯುತಾಃ ಸರ್ವೇ ಸರ್ವೇಷು ಸಾಧವಃ
× × × ×
ರಕ್ಷಣಾರ್ಥಂತು ಭೂತಾನಾಂ ಪ್ರವಿಶನ್ತೇ ದಿವಾಕರಮ್"
—ಭೀಷ್ಮಪರ್ವ - ೭ನೆಯ ಅಧ್ಯಾಯ.

ಈ ಆದಿತ್ಯಲೋಕವು ಒಂದುವೇಳೆ ಆಕಾಶದಲ್ಲಿಯ ಅಗ್ನಿಮಯ ಪದಾರ್ಥವಾದ ಜಡಸೂರ್ಯನಾಗಿದ್ದರೆ ಇದೆಲ್ಲವೂ ಸಂಭವವಾಗುತ್ತಿತ್ತೋ? ಆಕಾಶದ ಜಡಸೂರ್ಯನಿಗೆ ಆದಿತ್ಯ ಮತ್ತು ಕಾಸ್ಯಪೇಯ ಎಂಬ ಎರಡು ಹೆಸರುಗಳು ಇದ್ದುದು ಕಂಡುಬರುತ್ತದೆ. ಈ ಎರಡು ಹೆಸರುಗಳು ವಿಸ್ಮೃತಿಯಿಂದಲೇ ಇಡಲ್ಪಟ್ಟಿವೆ ಎಂಬಲ್ಲಿ ಸಂದೇಹವಿಲ್ಲ. ವೈದಿಕ ಯುಗದ ಕೊನೆಯ ಭಾಗದಲ್ಲಿ ನಮ್ಮ ದೇಶೀಯ ಪಂಡಿತರು ಪಿತೃಲೋಕಕ್ಕೆ ಹೋಗುವದನ್ನು ಪ್ರಾಯಶಃ ಬಿಟ್ಟುಗೊಟ್ಟರು. ಕ್ರಮೇಣ ಅವರ ವಂಶದವರು ಇದನ್ನೆಲ್ಲ ಮರೆತುಬಿಟ್ಟರು. ತಮ್ಮ ವಂಶದ ವೇದೋಕ್ತ ಸೂರ್ಯನೇ ಈ ಆಕಾಶದಲ್ಲಿಯ ಜಡಸೂರ್ಯನೆಂದು ತಿಳಿದುಕೊಂಡರು. ಅಂತೇ "ಆದಿತ್ಯ" ಹಾಗು "ಕಾಸ್ಯಪೇಯ" ಈ ಎರಡು

ಹೆಸರುಗಳು ಸೂರ್ಯನಿಗೆ ಜೋಡಿಸಲ್ಪಟ್ಟವು. ಯೋಗಾನಂದ ಸರಸ್ವತಿಗಳವರು—ಕಾಸ್ಯಪೇಯು ಅಂದರೆ ಭಗವಂತನ ಪುತ್ರ ಪೃಥ್ವಿಯಲ್ಲಿದ್ದ ನಾವೆಲ್ಲರೂ ಭಗವಂತನ ಪುತ್ರರು. ಅಂತೇ ಸೂರ್ಯನು ಸಹ 'ಕಶ್ಯಪಸ್ಯ ಅಪತ್ಯಂ ಪುಮಾನ್ ಕಾಸ್ಯಪೇಯು' ಆದನು, ಎಂದು ಹೇಳುವರು. ಇದು ವಸ್ತುತಃ ಪಕ್ಷದಲ್ಲಿ ಅಭಿಧಾನಗತ ವ್ಯಾಖ್ಯೆಮಾತ್ರ. ದೇಶದಲ್ಲಿಯ ಸಾಮಾನ್ಯ ಜನರ ಹಾಗು ಹಲವು ಪಂಡಿತರ ನಂಬುಗೆಯು ಏನೆಂದರೆ— ಆಕಾಶದಲ್ಲಿಯ ಜಡಸೂರ್ಯನೇ ನಮ್ಮ ಪಿತೃಪುರುಷನಾದ ಸೂರ್ಯನು, ಕಶ್ಯಪನ ಪುತ್ರನೂ, ಅದಿತಿಯ ಗರ್ಭಸಂಜಾತನೂ, ರಾವಣನಿಂದ ವಿಜಿತನಾದವನೂ, ಕರ್ಣನ ಪಿತನೂ ಇವನೇ ಎಂದು ಹೇಳುವರು. ಇದು ಅತ್ಯಂತ ಶೋಚನೀಯ ಸಂಗತಿಯು.

ಚಂದ್ರಲೋಕಃ—

ಈ ಸೂರ್ಯಲೋಕದ ದಕ್ಷಿಣ ಪಾರ್ಶ್ವದಲ್ಲಿಯೇ ಚಂದ್ರಲೋಕವು ಅಥವಾ ವೈದಿಕ ಮಹರ್ಲೋಕವು ಇತ್ತು. ಮಹಾಭಾರತದಲ್ಲಿ ಚಂದ್ರಲೋಕಕ್ಕೆ ರಮ್ಯಕವರ್ಷವೆಂಬ ಹೆಸರು ಇದೆ. ಈ ರಮ್ಯಕ ವರ್ಷವು ಈಗಿನ ಮಂಚೂರಿಯಾ ಹಾಗು ನಿಜಚೀನದ ಬಹುಭಾಗವನ್ನು ವ್ಯಾಪಿಸಿತ್ತು. ಪೂರ್ವದಲ್ಲಿ ಈ ರಮ್ಯಕವರ್ಷವು ದ್ವೀಪವಾಗಿದ್ದುದರಿಂದ ಇದಕ್ಕೆ ಚಂದ್ರದ್ವೀಪ ಅಥವಾ ಚಂದ್ರಮಂಡಲವೆಂದು ಹೇಳಲ್ಪಟ್ಟಿದೆ. ಚಂದ್ರನು ಅತ್ರಿಮಹರ್ಷಿಯ ಪುತ್ರನು. ಅತ್ರಿಮಹರ್ಷಿಯು ಕಶ್ಯಪಮುನಿಯ ಕಕ್ಕನೆಂದು ಕಂಡುಬರುತ್ತದೆ. ಚಂದ್ರನು ಬ್ರಹ್ಮ-ವಿಷ್ಣು ಮೊದಲಾದವರ ಕಕ್ಕನು. (ಚಂದ್ರನು ಕಶ್ಯಪ ಮುನಿಗಿಂತ ಚಿಕ್ಕವನಿದ್ದನು). ತೈತ್ತರೀಯ ಉಪನಿಷತ್ತಿನಲ್ಲಿಃ— "ಮಹಪತಿ ಚಂದ್ರಮಾ" ಅರ್ಥಾತ್ ಚಂದ್ರನು ಮಹರ್ಲೋಕದ ಅಧಿಪತಿ ಇದ್ದನು. ಪ್ರಶ್ನೋಪನಿಷತ್ತಿನಲ್ಲಿ ರಮ್ಯಕವರ್ಷದ ಹೆಸರು "ಸಂವತ್ಸರ" ಜನಪದವೆಂದಿದೆ. ಈ ಸಂವತ್ಸರ ಜನಪದವು ಎರಡು ಭಾಗಗಳಲ್ಲಿ ವಿಭಕ್ತವಾಗಿತ್ತು; ಉತ್ತರ ಸಂವತ್ಸರ ಹಾಗು ದಕ್ಷಿಣ ಸಂವತ್ಸರ ಎಂದು.

"ಸಂವತ್ಸರೋ ವೈ ಪ್ರಜಾಪತಿಃ । ತಸ್ಯ ಅಯನೇ ದಕ್ಷಿಣಂಚ ಉತ್ತರಂಚ ।" –ಪ್ರಶ್ನೋಪನಿಷತ್—೯ ಯ ಮಂತ್ರ.

ಹಲವರು ಈ ಸಂವತ್ಸರಕ್ಕೆ ವರ್ಷ ಅರ್ಥಾತ್ ಹನ್ನೆರಡು ತಿಂಗಳು ಎಂಬ ಅರ್ಥದಲ್ಲಿ ವ್ಯಾಖ್ಯೆಯನ್ನು ಮಾಡಿದ್ದಾರೆ. ಇದು ತಪ್ಪು ತಿಳು

ವಳಕೆಯೊಂದು ತೈತ್ತರೀಯ ಬ್ರಾಹ್ಮಣ ಹಾಗು ಋಗ್ವೇದದಿಂದ ತಿಳಿದು ಬರುವದು.

"ಸಂವತ್ಸರ ಖಲು ವೈ ದೇವಾನಾಂ ಪೂಃ"

—ತೈತ್ತರೀಯ ಬ್ರಾಹ್ಮಣ.

ಅರ್ಥಾತ್ ಸಂವತ್ಸರವು ದೇವತೆಗಳ ಪುರೀ ಅಥವಾ ವಾಸಸ್ಥಳವು. ಒಂದುವೇಳೆ ಸಂವತ್ಸರವು ಜನಪದವಾಗದೆ ಕಾಲ ಅಥವಾ ಸಮಯವು ಆದುದಾದರೆ ಅದು ದೇವತೆಗಳ ಪುರಿಯು ಆಗುವದು ಹೇಗೆ? ಋಗ್ವೇದದಲ್ಲಿಃ—

"ಸಮುದ್ರಾತ್ ಅರ್ಣವಾತ್ ಅಧಿಸಂವತ್ಸರೋಽಜಾಯತ"

—ಋಗ್ವೇದ—೧೦ನೇ ಮಂಡಲ ೧೯೦ ಸೂಕ್ತ

ಅರ್ಥಾತ್ ಸಮುದ್ರದಿಂದ ಸಂವತ್ಸರವು ತೇಲಿತು. ಈ ಸಂವತ್ಸರ ಅರ್ಥದಲ್ಲಿ ಸಂವತ್ಸರ ಎಂಬ ಜನಪದವು; ಕಾಲವು ಎಂದೂ ಆಗಲಾರದು. ಯಾಕಂದರೆ ಸಮುದ್ರದಿಂದ ಕಾಲದ ಉತ್ಪತ್ತಿಯು ಆಗುವದಿಲ್ಲ. ವರಂ ಚ ಸಮುದ್ರದಿಂದ ದ್ವೀಪ ಮೊದಲಾದ ಭೂಭಾಗಗಳೇ ಉತ್ಪತ್ತಿಯಾಗುವವು. ಸ್ವಾಮಿ ಯೋಗಾನಂದರೂ ಹೀಗೆಯೇ ಹೇಳುವರು. ಈ ಚಂದ್ರಮಂಡಲ ಅಥವಾ ಚಂದ್ರದ್ವೀಪ (ಚಂದ್ರನ ಆವಾಸಸ್ಥಳ) ದ ಸಂಬಂಧದಿಂದ ವಾಯುಪುರಾಣದಲ್ಲಿ ಹೇಳಿರುವದುಃ—

"ಉತ್ತರ ಕುರುಣಾಂ ಪಾರ್ಶ್ವೆ ಜ್ಞೇಯಸ್ತು ದಕ್ಷಿಣೇ
ಸಮುದ್ರ-ಊರ್ಮಿಮಾಲಾಢ್ಯೋ ನಾನಾರತ್ನ ವಿಭೂಷಿತಃ
ಪಂಚಯೋಜನ ಸಾಹಸ್ರಂ ಅತಿಕ್ರಮ್ಯ ಸುರಾಲಯಮ್
ಚಂದ್ರದ್ವೀಪ ಇತಿ ಖ್ಯಾತ ಶ್ಚಂದ್ರಮಂಡಲ ಸಂಜ್ಞಿತಃ ॥"

—ವಾಯುಪುರಾಣ.

ಅರ್ಥಾತ್ ಉತ್ತರ ಕುರುದೇಶದ ದಕ್ಷಿಣಕ್ಕೆ, (ಈಗಿನ ಮಂಚೂರಿಯಾದಲ್ಲಿ ಹಾಗು ಪೂರ್ವ ಚೀನದೇಶದಲ್ಲಿ) ಸುರಾಲಯ ಅಥವಾ ಇಂದ್ರಪುರಿಯಿಂದ ೫ ಸಾವಿರ ಯೋಜನ ದೂರದಲ್ಲಿ ಸಮುದ್ರ ದಂಡೆಯಲ್ಲಿ ನಾನಾರತ್ನ ಪರಿಪೂರ್ಣವಾದ ಚಂದ್ರಮಂಡಲವು ಇರುವದು. ಇದೇ ಚಂದ್ರದ್ವೀಪವೆಂದೂ ಕರೆಯಲ್ಪಡುವದು.

ಅತ ಏವ ವಾಯುಪುರಾಣವು ಋಗ್ವೇದದ ಮತವನ್ನೇ ಸಮರ್ಥನೆ ಮಾಡುತ್ತವೆ. ಚಂದ್ರಮಂಡಲವು ಸಮುದ್ರದಿಂದ ದ್ವೀಪಾಕಾರದಲ್ಲಿಯೇ ತೇಲಿತು. (ಋಗ್ವೇದದಲ್ಲಿ ಸಂವತ್ಸರವೆಂದು ಹೇಳಲ್ಪಟ್ಟಿದ್ದು) ಮುಂದೆ ಅದು ಎತ್ತರವಾಗುತ್ತ ಭೂಭಾಗದೊಡನೆ ಕೂಡಿಹೋಯಿತು. ಈ ಚಂದ್ರ ಮಂಡಲವು ಅತ್ಯಂತ ಬೆಳೆಯುಳ್ಳ ಭೂಮಿಯಾಗಿತ್ತು. ಇಲ್ಲಿ ಸೋಮರಸವೆಂಬ ಮದ್ಯವು ತಯಾರಾಗುತ್ತಿತ್ತು. ಆದ್ದರಿಂದ ಚಂದ್ರನಿಗೆ "ಓಷಧಿನಾಥ" ಹಾಗು "ಸುಧಾಕರ" ಎಂಬ ಹೆಸರು ಉಂಟಾದವು. ಚಂದ್ರನಲ್ಲಿಯ ಪ್ರಜೆಗಳು ಬ್ರಾಹ್ಮಣರು.

"ಸೋಮೋ ಬ್ರಾಹ್ಮಣಾನಾಂ ರಾಜಾ ಆಸೀತ್"

— ಯಜುರ್ವೇದ

ಒಂದುವೇಳೆ ಈ ಚಂದ್ರನು ಆಕಾಶದಲ್ಲಿಯ ಚಂದ್ರನಾಗಿದ್ದರೆ ಇದೆಲ್ಲವು ಸಂಭವವಾಗುತ್ತಿತ್ತೋ? ಮತ್ತು ಅವನ ರಾಜ್ಯವು ಉತ್ತರ ಕುರುದೇಶದ ದಕ್ಷಿಣದಲ್ಲಿ-ಸಮುದ್ರತೀರದಲ್ಲಿ ಈಗಿನ ಮಂಚೂರಿಯಾ ಹಾಗು ಪೂರ್ವಚೀನದೇಶದಲ್ಲಿ ಎಂದು ಸಿದ್ಧವಾಗುತ್ತಿತ್ತೋ?
ಮತ್ಸ್ಯಪುರಾಣದಲ್ಲಿ

"ಸೋಮಃ ಪಿತೃಣಾಮಧಿಪತಿಃ ಕಥಂ ಶಾಸ್ತ್ರವಿಶಾರದಃ ।
ತದ್ವಂಶ್ಯಾ ಯೇಚ ರಾಜಾನೋ ಬಭೂವುಃ ಕೀರ್ತಿವರ್ಧನಾಃ ॥

ಪಿತೃಲೋಕದ ಅಧಿಪತಿಯಾದ ಸೋಮ (ಚಂದ್ರ)ನು ಶಾಸ್ತ್ರವಿಶಾರದನಿದ್ದನು. ಅವನ ವಂಶದ ಅರಸರು ಒಳ್ಳೇ ಕೀರ್ತಿವಂತರಾಗಿದ್ದರು. ಹಸ್ತಿನಾಪುರದ ಅರಸರು ಚಂದ್ರವಂಶೀಯರು. ಅವರು ಹೀಗೆ ವಿಖ್ಯಾತರಾಗಿದ್ದರೆಂಬದನ್ನು ಎಲ್ಲರೂ ಬಲ್ಲರು. ಇದರಲ್ಲಿ ಸುಪ್ರಸಿದ್ಧರಾದ ದುಷ್ಯಂತ, ನಹುಷ, ಯುಧಿಷ್ಠಿರ ಮೊದಲಾದ ಚಕ್ರವರ್ತಿಗಳ ಹೆಸರನ್ನು ಅರಿಯದವರು ಯಾರು?

ಈಗ ಹೇಳಿದ ಚಂದ್ರನು ಒಂದು ವೇಳೆ ಆಕಾಶದಲ್ಲಿಯ ಜಡವಾದ ಚಂದ್ರನಾಗಿದ್ದರೆ, ಅವನ ವಂಶದವರು ಇಷ್ಟು ಕಾಲದ ವರೆಗೆ ಭಾರತವರ್ಷದಲ್ಲಿ ರಾಜ್ಯತ್ವವನ್ನು ಹೇಗೆ ಮಾಡಿದರು? ಎಂಬ ಪ್ರಶ್ನವು ಉಂಟಾಗುವದು. ಈ ಎಲ್ಲ ಭ್ರಾಂತಿಯ ಮೂಲದಲ್ಲಿ ವಿಸ್ಮೃತಿಯು ಇರುತ್ತದೆ. ಜನರು ಕ್ರಮೇಣ ವೇದವಿದ್ಯಾವಿಹೀನರಾಗಿ ನಿಜವಾದ ದೇವತೆಗಳನ್ನು

ಮರೆತು, ತನ್ನಾಮವಿಶಿಷ್ಟ ಆಕಾಶದಲ್ಲಿಯ ಜಡಪದಾರ್ಥಗಳನ್ನು ಪೂಜಿಸಹತ್ತಿದರು. ಏಕನಾಮ ವಿಶಿಷ್ಟವಾದೊಡನೆಯೇ ಅವು ಏಕಪದಾರ್ಥವಾಗಿ ಹೋದವು. ಇದಕ್ಕೆ ಬೇರೆ ಕಾರಣವೇ ಇಲ್ಲ. ಈಗ ಸಹ ಹಲವರ ಹೆಸರು, ಶಿವ, ವಿಷ್ಣು, ಇಂದ್ರ, ಚಂದ್ರ ಮೊದಲಾದವುಗಳು ಇಡಲ್ಪಡುವವು. ಆದರೆ ಅವರೂ ಆಯಾ ನಾಮವಿಶಿಷ್ಟ ದೇವತೆಗಳಂತೆ ಪೂಜ್ಯರಾಗುವರೋ? ಜನರು ಅಜ್ಞಾನದಿಂದ ನಿಜವಾದ ಚಂದ್ರನನ್ನು ಮರೆತು ಆಕಾಶದಲ್ಲಿಯ ಜಡಚಂದ್ರನನ್ನೇ ಪೂಜಿಸಹತ್ತಿರುವರು. ಇದಕ್ಕಿಂತಲೂ ಶೋಚನೀಯ ಸ್ಥಿತಿಯು ಮತ್ತಾವುದು?

ಛಾಂದೋಗ್ಯ ಉಪನಿಷತ್ತಿನ ೩ನೆಯ ಅಧ್ಯಾಯದ ೬, ೭, ೮, ೯, ೧೦ ನೆಯ ಖಂಡಗಳಲ್ಲಿ ಯಾವ ೫ ಅಮೃತ ಭೂಮಿಯ ಕಥೆಯು ವರ್ಣಿತವಾಗಿರುವದೋ, ಈ ೫ ಅಮೃತ ಭೂಮಿಗಳೇ ಸ್ವರ್ಗದ ೫ ಅಂಶಗಳು. ಅಮೃತ ಭೂಮಿಯೆಂದರೆ ಪರಮ ಸ್ವಾಸ್ಥ್ಯಕರ ಸ್ಥಾನ (*Sanitarium*)ವು. ಛಾಂದೋಗ್ಯ ಉಪನಿಷತ್ತು ಸಹ 'ಅಮೃತಭೂಮಿ, ಅರ್ಥದಲ್ಲಿ ಇದನ್ನೇ ಹೇಳುವದು. ಮೊದಲು ಅಮೃತ ಭೂಮಿಯಲ್ಲಿ ಪೂರ್ವದಲ್ಲಿ ಅಗ್ನಿ ದೇವನು ವಾಸಮಾಡುತ್ತಿದ್ದನು. ಮುಂದೆ ಇವನು ಅಮೃತಭೂಮಿಯನ್ನು ಅಥವಾ ಕಿಂಪುರುಷ ವರ್ಷವನ್ನು ಬಿಟ್ಟುಗೊಟ್ಟು ಬೇರೆ ಕಡೆಗೆ ಹೋಗಿ ವಾಸಮಾಡಿದನು. ಯೋಗೀಶ್ವರನಾದ ಶಿವನು ಮತ್ತು ಧನಾಧಿಪತಿ ಕುಬೇರನು ಅಗ್ನಿ ಪರಿತ್ಯಕ್ತವಾದ ಕಿಂಪುರುಷ ವರ್ಷದಲ್ಲಿ ವಾಸಮಾಡಿದರು. ಧನಾಧಿಪತಿ ಕುಬೇರನ ವಾಸಸ್ಥಾನವು ಮಾನಸಸರೋವರದ ದಕ್ಷಿಣ ತೀರದಲ್ಲಿ ಈಗ ತಿಬೇಟಿಯರು ಇದಕ್ಕೆ 'ಗ್ಯಾಲಪೋ ನರಜಿಂಗಿ ಫೋಪರಾಂ" ಎನ್ನುತ್ತಾರೆ, ಜಪಾನೀ ಪರಿವ್ರಾಜಕನಾದ "ಕಾವುಯಾಶುಚಿ'' ಯು ತನ್ನ ಗ್ರಂಥ *Three years in Tibet* (ತಿಬೇಟದಲ್ಲಿ ಮೂರು ವರ್ಷಗಳು) ಇದರಲ್ಲಿ ಬರೆದುದು:—

"On ascending the hill ( Dolma la ) one sees to the right a snowy range of the northern parts of mount Kailas, nomed in Tibitian" "Gylpo Norjingi phohrang' which means the 'residenee of king Kuvera the God of wealth"

ಜನೆಯ ಅವ್ಯೃತಭೂಮಿ ಅಥವಾ ಉತ್ತರ ಕುರುದೇಶದಲ್ಲಿ ಸುರ ಶ್ರೇಷ್ಠನಾದ ಚತುರ್ಮುಖ ಅಥವಾ ಚತುರ್ವೇದವಿದ್ ಬ್ರಹ್ಮನು ವಾಸ ಮಾಡುತ್ತಿದ್ದನು. ಅತಏವ ವೇದದಲ್ಲಿ:—

"ಶ್ರುಣ್ವಸ್ತು ವಿಶ್ವೇ ಅವ್ಯೃತಸ್ಯ ಪುತ್ರಾಃ"—"ಎಲೈ ಅವ್ಯೃತಲೋಕವಾಸಿಗಳಾದ ದೇವತೆಗಳೇ ನೀವು ಕೇಳಿರಿ., ಎಂದು ಇರುವದು. ಆದರೆ ದುಃಖದ ವಿಷಯುವೇನಂದರೆ ಹಲವು ಪಂಡಿತರು ಇದಕ್ಕೆ ಹಲವು ಬಗೆಯ ಕೂಟ ಅರ್ಥಗಳನ್ನು ಹೇಳುತ್ತಾರೆ. ಪೂರ್ವಾಪರವನ್ನು ಕೂಡಿಸದೆ ಹಾಗು ಹಲವು ಗ್ರಂಥಗಳೊಡನೆ ಸಂಬಂಧವನ್ನು ಇಡದೆ ಅಭಿಧಾನಗತ ಅಥವಾ ದಾರ್ಶನಿಕ ವ್ಯಾಖ್ಯೆಯನ್ನು ಮಾಡಿದರೆ, ಅದರಿಂದ ಪಾಂಡಿತ್ಯ ಪ್ರಕಟವಾಗುವದೆಂಬುವದು ತಪ್ಪಿತಿಳುವಳಿಕೆಯು.

ಮತ್ತು ಕೌಷಿತ ಕೇ ಬ್ರಹ್ಮಣೋಪನಿಷತ್ತಿನಲ್ಲಿಯೂ ಇದೇ ಮಾತು ವಿಶದಭಾವದಿಂದ ವರ್ಣಿತವಾಗಿರುತ್ತದೆ.

"ಸ ಏತಂ ದೇವಯಾನಂ ಪಂಥಾನಮಾಪದ್ಯಾಗ್ನಿ ಲೋಕಮಾಗಚ್ಛತಿ, ಸ ವಾಯುಲೋಕಂ, ಸ ವರುಣಲೋಕಂ, ಸ ಆದಿತ್ಯಲೋಕಂ, ಸ ಇಂದ್ರಲೋಕಂ, ಸ ಪ್ರಜಾಪತಿಲೋಕಂ, ಸ ಬ್ರಹ್ಮಲೋಕಂ, ತಸ್ಯಾಹ ವಾ ಏತಸ್ಯ ಬ್ರಹ್ಮಲೋಕಸ್ಯಾರೋಹ್ರದೋ ಮುಹೂರ್ತಾ ಯೇಷ್ಟಿಹಾ ವಿಜರಾನದೀ ಲ್ಯೋವೃಕ್ಷಃ ಸಾಲಜ್ಯಂ ಇತ್ಯಾದಿ—೧ನೆಯ ಅಧ್ಯಾಯ ೩ನೆಯ ಮಂತ್ರ.

ಅರ್ಥಾತ್ ಗಾರ್ಗ್ಯಪುತ್ರನಾದ ಚಿತ್ರನು ತದೀಯ ಪುರೋಹಿತ ಆರುಣಿ ಹಾಗು ಶ್ವೇತುಗಳಿಗೆ ಸ್ವರ್ಗಲೋಕದ ವಿಷಯುವನ್ನು ವರ್ಣಿಸಿ ಹೇಳುತ್ತಾನೆ:—ದೇವಯಾನ ಪಥದಿಂದ ಹೋಗುತ್ತ ಹೋಗುತ್ತ ಮೊದಲು ಅಗ್ನಿಲೋಕ, ಅನಂತರ ವಾಯುಲೋಕ, ವರುಣಲೋಕ, ಆದಿತ್ಯಲೋಕ, ಇಂದ್ರಲೋಕ, ಪ್ರಜಾಪತಿಲೋಕ, ಹಾಗು ಬ್ರಹ್ಮಲೋಕದಲ್ಲಿ ಹೋಗಬೇಕಾಗುತ್ತದೆ. ಮಾರ್ಗದಲ್ಲಿ ಅರಹ್ರದ (ಈಗಿನ ಅರಲ ಸರೋವರ), ವಿಜರಾನದೀ (ಬ್ರಹ್ಮಲೋಕದಲ್ಲಿ ಅಥವಾ ಉತ್ತರ ಕುರುದೇಶದಲ್ಲಿ ಹರಿಯುವ ಭದ್ರಾ ಎಂಬ ಗಂಗೆ), ಇಲ್ಯವೃಕ್ಷ (ಇಲಾವೃತ ಅಥವಾ ಇಲಾಭೂಮಿಯಲ್ಲಿ ಹುಟ್ಟುವ ಒಂದು ಬಗೆಯ ದೊಡ್ಡಮರ) ಹಾಗು ಸಾಲವೃಕ್ಷ (ಇದರ ನಾರಿನಿಂದ ಬಿಲ್ಲಿನ 'ಜ್ಯಾ' ವನ್ನು ಮಾಡುತ್ತಿದ್ದರು) ಇವುಗಳನ್ನು ದಾಟಿ ಹೋಗಬೇಕಾಗುತ್ತದೆ.

ಆತ ಏವ ಕಂಡುಬರುವದೇನಂದರೆ-ವೇದ-ಪುರಾಣ ಉಪನಿಷತ್ತು, ಮೊದಲಾದವುಗಳಲ್ಲಿ ವರ್ಣಿತವಾದ ಬ್ರಹ್ಮಲೋಕ, ವಿಷ್ಣುಲೋಕ, ಇಂದ್ರಲೋಕ, ಯಮಲೋಕ ಮೊದಲಾದವುಗಳು ಭೂಮಿಯಲ್ಲಿಯೇ ಇದ್ದವು. ಎಂದೂ ಆಕಾಶದಲ್ಲಿ (ಶೂನ್ಯದಲ್ಲಿ) ಇದ್ದಿಲ್ಲ. ನಾವು ಅಜ್ಞಾನದಿಂದ ಆಕಾಶದ ಕಡೆಗೆ ಬೊಟ್ಟುಮಾಡಿ ತೋರಿಸುತ್ತೇವೆ.

ವೈದಿಕಯುಗದಲ್ಲಿ ಭಾರತವರ್ಷದಿಂದ ಪಿತೃಲೋಕಕ್ಕೆ, ಹಾಗು ಪಿತೃಲೋಕದಿಂದ ಭಾರತವರ್ಷಕ್ಕೆ ಬರುವದಕ್ಕೋಸುಗ ಬೇರೆ ಬೇರೆ ಮಾರ್ಗಗಳು ಬೇರೆ ಬೇರೆ ವ್ಯಕ್ತಿಗಳಿಂದ ನಿರ್ಮಿಸಲ್ಪಟ್ಟಿದ್ದವು. ಈಗ ಆ ವಿಷಯದ ವಿಚಾರವನ್ನು ಸ್ವಲ್ಪ ಮಾಡುವದು ಅವಶ್ಯಕವು. ವಾಯು ಪುರಾಣದಲ್ಲಿ-ಪಿತೃಪುರುಷ ದೇವತೆಗಳ ಎರಡು ಮಾರ್ಗಗಳು ದಕ್ಷಿಣ ಹಾಗು ಉತ್ತರದಲ್ಲಿ ದೀರ್ಘವಾಗಿ ಇದ್ದವು. ಈ ಎರಡು ಮಾರ್ಗಗಳೇ ದೇವಯಾನಪಥ ಹಾಗು ಪಿತೃಯಾನಪಥ. ದೇವಯಾನ ಪಥವು ಭಾರತ ವರ್ಷದಿಂದ ಉತ್ತರಕ್ಕೆ ಉತ್ತರ ಕುರುವರ್ಷದ ವರೆಗೆ ಹೋಗಿರುತ್ತದೆ. ಹಾಗು ಪಿತ್ರಯಾನ ಪಥವು ಪಿತೃಲೋಕದಿಂದ ಭಾರತ ವರ್ಷದವರೆಗೆ ಬಂದಿರುತ್ತದೆ. ಶ್ರೀ ಶಂಕರಾಚಾರ್ಯರು ಛಾಂದೋಗ್ಯ ಉಪನಿಷತ್ತಿನ ತಮ್ಮ ಭಾಷ್ಯದಲ್ಲಿ ಈ ದೇವಯಾನ ಪಥದ ಸಂಬಂಧವಾಗಿ ಹೇಳಿದ್ದಾರೆ.

"ಏಷ ದೇವಯಾನಃ ಪಂಥಾ ಸತ್ಯಲೋಕಾವಸಾನೋ ನಾಂದ್ಯಾತ್ ಬಹಿಃ" ಅರ್ಥಾತ್ ಈ ದೇವಯಾನ ಪಥವು ಸತ್ಯಲೋಕ ಅಥವಾ ಬ್ರಹ್ಮಲೋಕದ ವರೆಗೆ ಹೋಗಿದೆ; ಹಾಗು ಅಲ್ಲಿಯೇ ಇದರ ಕೊನೆಯು ಎಂದೂ ಅಂಡದ—ಪೃಥ್ವಿಯ ಹೊರಗೆ ಆಕಾಶ (ಶೂನ್ಯ)ದಲ್ಲಿ ಹೋಗಿದ್ದಿಲ್ಲ. ಈ ದೇವಯಾನ ಹಾಗು ಪಿತೃಯಾನ ಮಾರ್ಗಗಳ ಹೊರತು ಬೇರೆ ಎರಡು ಮಾರ್ಗಗಳ ಹೆಸರು ದೊರೆಯುವವು. ಈ ಎರಡು ಮಾರ್ಗಗಳ ಹೆಸರು ಧೂಮಯಾನ ಹಾಗು ರಾತ್ರಿಯಾನ ಪಥ. ಆದರೂ ಸಾಮಾನ್ಯವಾಗಿ ಈ ನಾಲ್ಕು ಮಾರ್ಗಗಳಿಗೇ "ದೇವಯಾನಪಥ" ಎಂದು ಅನ್ನಲ್ಪಡುತ್ತಿತ್ತು. ಈ ದೇವಯಾನವು ಮೊದಲು ಹೇಳಿದ ವಿಶೇಷ ದೇವಯಾನ ಪಥದ ಹೆಸರು ಅಲ್ಲ. ಎಲ್ಲವೂ ದೇವಲೋಕದಲ್ಲಿ ಹೋಗುವ ಪಥಗಳೆಂದು ಸಾಮಾನ್ಯವಾಗಿ 'ದೇವಯಾನ ಪಥ' ಗಳೆಂದು ಹೇಳಲ್ಪಡುತ್ತಿದ್ದವು. ವಾಯು ಪುರಾಣದಲ್ಲಿಃ—

" ಚತ್ವಾರ ಏತೇ ಪಂಥಾನೋ ದೇವಯಾನಾ .ವಿನಿವಿ:ರ್ತಾಃ "

ವೇದಪಾಠದಿಂದ ತಿಳಿಯುವದು- ಸೂರ್ಯದೇವನಿಂದ ನಿರ್ಮಿತ ವಾದ ಯಾವ ಮಾರ್ಗಗಳು ಅಂತರಿಕ್ಷ (ಅಫಗಾನಿಸ್ಥಾನ) ದಿಂದ ಸ್ವರ್ಗಕ್ಕೆ ಹೋಗಿರುತ್ತವೆಯೋ ಅವೆಲ್ಲವುಗಳು ಒಳ್ಳೇ ಪರಿಷ್ಕಾರವೂ, ಸುಗಮವೂ ಆಗಿರುವವು:—

"ಯೇ ತೇ ಪಂಥಾಃ ಸರಿತಃ ಪೂರ್ವಾಸೋ ಅನರೇಣ, ಸುಕೃತಾ ಅನ್ತರಿಕ್ಷೋ ।

ತೇಭಿ ನೋ ಹದ್ಯಾ ಪಥಿಭಿಃ ಪುರಸ್ತಾತ್ ಪ್ರತೀಚೀ ಅತ್ಮಗಾತ್ ಅಧಿಹರ್ವೋಭ್ಯಃ ॥ ಋಕ್‌ವೇದ.

ಋಗ್ವೇದ ಪಾಠದಿಂದ ಇನ್ನೂ ತಿಳಿಯುವದೇನಂದರೆ-ವಿವಸ್ವಾನನು ತನ್ನ ಪುತ್ರ ಮನುವಿನ ಭಾರತಾಗಮನ ಕಾಲದಲ್ಲಿ ಅವನಿಗೆ ಒಂದು ಶ್ವೇತ ಅಶ್ವವನ್ನು ಕೊಟ್ಟಿದ್ದನು. ವೇದ ಮತ್ತು ಪುರಾಣಗಳಲ್ಲಿ ಹೇಳಿದ ಯಾವ ನಾಲ್ಕು ಮಾರ್ಗಗಳಿರುವವೋ ಅವುಗಳಲ್ಲಿ ಎರಡು ಸೀಮಾಂತ ಪ್ರವೇಶದ ಖೈಬರ ಹಾಗು ಬೋಲನ ಪಾಶಗಳಿಂದ ಅಫಗಾನಿಸ್ತಾನ (ವೈದಿಕ ಅನ್ತರೀಕ್ಷಲೋಕ) ದೊಳಗಿಂದ ಸ್ವರ್ಗರಾಜ್ಯ ಬ್ರಹ್ಮಲೋಕದಲ್ಲಿ ಹೋಗಿರುತ್ತದೆ. ವಶಿಷ್ಠ ಅಗಸ್ತ್ಯ ಮೊದಲಾದ ಮಹರ್ಷಿಗಳು ಈ ಮಾರ್ಗಗಳಿಂದಲೇ ಭಾರತದಲ್ಲಿ ಬಂದಿದ್ದರು. ಮತ್ತೊಂದು ಮಾರ್ಗವು ಬದರಿಕಾಶ್ರಮದ ಮೇಲಿಂದ ಹಿಮಾಲಯ ಪರ್ವತವನ್ನು ದಾಟಿ ತಿಬೇಟ ದೇಶದೊಳಗಿಂದ ಹೋಗಿರುತ್ತದೆ. ಯುಧಿಷ್ಠಿರ ಮಹಾರಾಜನು ಇದೇ ಮಾರ್ಗದಿಂದಲೇ ಸ್ವರ್ಗಕ್ಕೆ ಹೋಗಿದ್ದನು. ವಾಮನ ವಿಷ್ಣುವು ಸಹ ಅಸುರರಾಜನಾದ ಬಲಿಯನ್ನು ದಮನ ಮಾಡಲಿಕ್ಕೆ ಈ ಮಾರ್ಗದಿಂದಲೇ ಭಾರತ ವರ್ಷಕ್ಕೆ ಬಂದಿದ್ದನು. ಮತ್ತೊಂದು ಮಾರ್ಗವು ಕಂಡು ಬರುವದು—"ಕಾಲಿಂಪೋಂ" ದಿಂದ ಸಿಕಿಮ ಹಾಗು ಭೂತಾನ ರಾಜ್ಯಗಳ ಸೀಮಾಂತರದಿಂದ ತಿಬೇಟ ದೇಶದೊಳಗಿಂದ ಹೋಗಿರುವದು. ಇದೇ ನಾಲ್ಕನೆಯ ಮಾರ್ಗವೆಂಬುದು ಹೆಚ್ಚು ಸಂಭವನೀಯವು. ,

ಲಂಕಾಧಿಪತಿಯಾದ ರಾವಣನ ಸಂಬಂಧದಿಂದ ನಮ್ಮ ದೇಶದಲ್ಲಿ ಒಂದು ಪ್ರವಾದವು ಪ್ರಚಲಿತವಾಗಿರುವದು. ಅವನು ಎಲ್ಲರೂ

ಸ್ವರ್ಗಲೋಕಕ್ಕೆ ಸುಲಭವಾಗಿ ಹೋಗಲು ಅನುಕೂಲವಾಗುವಂತೆ ಒಂದು ನಿಚ್ಚಣಿಕೆಯ ಮಾರ್ಗವನ್ನು ಮಾಡಬೇಕೆಂದು ಮಾಡಿದ್ದನು. ಆದರೆ ದೀರ್ಘಸೂತ್ರಿಕಾ ದೋಷದಿಂದಲೋ ಏನೋ ಅವನ ಈ ಇಚ್ಛೆಯು ಕಾರ್ಯದಲ್ಲಿ ಪರಿಣಮಿಸಲಿಲ್ಲ.

ಈ ಎಲ್ಲ ಮಾರ್ಗಗಳು ಸ್ವರ್ಗದ ಭೌಮತ್ವದ ಪರಿಪೋಷಕವಾಗಿದ್ದರೂ ಸಹ, ವಿಸ್ಮೃತಿ ದೋಷದಿಂದ ಎಲ್ಲವೂ ನಷ್ಟವಾಗಿ ಹೋಗಿದೆ. ಈಗ ಪಿತೃಯಾನವೆಂದರೆ ಸಾಮಾನ್ಯ ಜನರು ಪ್ರೇತಯಾನವೆಂದು ತಿಳಿದಿರುವರು. ಈ ಎಲ್ಲ ದೇವಯಾನ-ಪಿತೃಯಾನಗಳಿಂದ ಪ್ರೇತಗಳು ಸ್ವರ್ಗಕ್ಕೆ ಹೋಗಿ ಬರುವದನ್ನು ಮಾತ್ರವೆಂದು ಹಲವರು ತಿಳಿದಿರುವರು. ಒಂದುವೇಳೆ ಈ ಎಲ್ಲ ಮಾರ್ಗಗಳು ಕ್ಷೇತ್ರಗಳಿಗೋಸುಗ ನಿರ್ಮಿತವಾಗಿದ್ದರೆ ಇವುಗಳಿಗೆ ಕ್ಷೇತ್ರಯಾನಗಳೆಂದೇ ಹೆಸರು ಇರುತ್ತಿತ್ತು. ದೇವಯಾನ, ಪಿತೃಯಾನ, ಧೂಮಯಾನ, ರಾತ್ರಿಯಾನಗಳೆಂದು ಕಷ್ಟಪಟ್ಟು ಅನ್ನಬೇಕಾಗುತ್ತಿದ್ದಿಲ್ಲ. ಸಹಜ ಪ್ರೇತಯಾನವೆಂದು ಅಂದುಬಿಟ್ಟರೆ ಎಲ್ಲ ಪ್ರವಾಹವು ತಪ್ಪಿಹೋಗುತ್ತಿತ್ತು, ಹಾಗು ಈ ಮಾರ್ಗಗಳಿಂದ ಬರಲಿಕ್ಕೆ ಮನುವಿಗೆ ಶ್ವೇತವರ್ಣ ಅಶ್ವದ ಅವಶ್ಯಕತೆ ಇದ್ದಿಲ್ಲ; ಅಥವಾ ಯುಧಿಷ್ಠಿರಾದಿಗಳು ಜೀವದೆಸೆಯಲ್ಲಿ ಸ್ವರ್ಗಕ್ಕೆ ಹೋಗುವ ಸಲುವಾಗಿ ಕಾಲುನಡಿಗೆಯಿಂದ ಇಷ್ಟೆಲ್ಲ ಮಾಡಬೇಕಾಗಿದ್ದಿಲ್ಲ. ಇದು ಕೇವಲ ವರ್ತಮಾನ ಸಮಯದ ದೋಷವಲ್ಲ, ವೈದಿಕಯುಗದ ಶೇಷಕಾಲದಿಂದಲೇ ಭಾರತದ ಸಾಮಾನ್ಯಜನರು—ಇಷ್ಟೇ ಅಲ್ಲ ಪಂಡಿತರು ಸಹ ಈ ಎಲ್ಲ ಮಾರ್ಗಗಳ ವಿಷಯವನ್ನು ಮರೆಯಹತ್ತಿದರು. ಇದರ ಹಲವು ಉದಾಹರಣೆಗಳನ್ನು ನಾವು ಉಪನಿಷತ್ತುಗಳಲ್ಲಿ ನೋಡುವೆವು; (ಛಾಂದೋಗ್ಯ ಉಪನಿಷತ್ತಿನ "ಶ್ವೇತಕೇತು ಪ್ರವಹಣ ಸಂವಾದ" ಹಾಗು ಕೌಷೀತಕೀ ಬ್ರಾಹ್ಮಣೋಪನಿಷತ್ತಿನ ೧ನೆಯ ಅಧ್ಯಾಯದ ೧ನೆಯ ೨ನೆಯ ಮಂತ್ರಗಳು.)

ಈಗ ದೇವತಾವಿಷಯಕ ವಿಚಾರವನ್ನು ಆರಂಭಮಾಡುವೆವು. ಈ ದೇವತೆಗಳು ಯಾರು? ಎಂಬೀ ವಿಷಯವನ್ನು ತಿಳಿಯುವದು ಹೆಚ್ಚು ಅಗತ್ಯವಾಗಿರುವದು; ಇರದಿದ್ದರೆ ಅವರ ಸಂಬಂಧದ ಜ್ಞಾನವು ಅಪೂರ್ಣವಾಗಿ ಉಳಿಯುವದು.

ಈ ಭಾರತವು ಆರ್ಯರ ಪಿತೃಭೂಮಿಯಲ್ಲವೆಂದು ವೇದದಿಂದ ಗೊತ್ತಾಗುವದೆಂದು ಮೊದಲೇ ಹೇಳಿದ್ದೇವೆ. ಅವರ ಆದಿಮ ವಾಸ ಸ್ಥಾನವು ಇಲಾವೃತ ವರ್ಷವು. ಅವರಲ್ಲಿ ಕೆಲಕೆಲವರು ಭಾರತ ವರ್ಷ ದಲ್ಲಿ ಬಂದು ಉಪನಿವೇಶಗಳನ್ನು ಸ್ಥಾಪನೆ ಮಾಡಿದ್ದರು. ಅತಏವ ಕಂಡುಬರುವದೇನಂದರೆ-ಇಲಾವೃತ ವರ್ಷದಲ್ಲಿಯ ದೇವತೆಗಳು ಹಾಗು ಭಾರತಕ್ಕೆ ಬಂದ ಆರ್ಯರು ಏಕವಂಶ ಸಂಭೂತರು ಹಾಗು ಏಕಸ್ಥಾನ ವಾಸಿಗಳು. ಆದರೆ ಇಲಾವೃತ ವರ್ಷದಲ್ಲಿದ್ದ ಹಾಗು ತತ್ ಪಾರ್ಶ್ವ ವರ್ತೀ ಉಪನಿವಿಷ್ಟ ಆರ್ಯರು 'ದೇವತೆ' ಎಂಬ ಹೆಸರನ್ನು ಹೇಗೆ ಪಡೆದರು? ವೈದಿಕಯುಗದಲ್ಲಿ ಮನುಷ್ಯನು ವಿದ್ವಾನನಾಗಲು 'ದೇವತೆ' ಎಂಬ ಹೆಸರನ್ನು ಪಡೆಯುತ್ತಿದ್ದನು. ಮತ್ತು ಮೂರ್ಖನೂ, ಅವಿದ್ವಾನನೂ ಆಗಲು 'ಅಸುರ' ನೆಂಬ ಹೆಸರನ್ನು ಪಡೆಯುತ್ತಿದ್ದನು—
"ವಿದ್ವಾಂಸೋ ಹಿ ದೇವಾಃ । ತದ್ ವಿಪರೀತಾ ಅವಿದ್ವಾಂಸೋ ಹಿ ಅಸುರಾಃ"

— ಶತಪಥಬ್ರಾಹ್ಮಣ.

ಮತ್ತೂ ಕಂಡುಬರುವದೇನಂದರೆ – "ಏತೇ ದೇವಾಃ ಪ್ರತ್ಯಕ್ಷಂ ಯತ್ ಬ್ರಾಹ್ಮಣಾಃ" ಅರ್ಥಾತ್ ಈ ದೇವತೆಗಳೇ ಬ್ರಾಹ್ಮಣರು. ವೈದಿಕ ಯುಗದಲ್ಲಿ ವೇದವಿತ್ತರು ಮಾತ್ರ ದೇವತೆ ಎಂಬ ಹೆಸರನ್ನು ಪಡೆಯುತ್ತಿದ್ದರು. ಮತ್ತು ಈ ದೇವತೆಗಳೆಲ್ಲರೂ ಬ್ರಾಹ್ಮಣರು. ಆರ್ಯ ಬ್ರಾಹ್ಮಣರ ಆದಿಮ ವಾಸಸ್ಥಾನವಾದ ಇಲಾವೃತ ವರ್ಷದಲ್ಲಿ ವೇದ ವಿದ್ಯೆಯು ವಿಶೇಷವಾಗಿ ಚರ್ಚಿತವಾಗುತ್ತಿತ್ತು. ಅವರು (ಆರ್ಯ ಬ್ರಾಹ್ಮಣರು) ಜ್ಞಾನ, ವಿದ್ವತ್ತೆ, ಪರಾಕ್ರಮಗಳಲ್ಲಿ ಉಳಿದವರಿಗಿಂತ ಶ್ರೇಷ್ಠರಿದ್ದರೆಂದು 'ದೇವತೆ' ಎಂಬ ಹೆಸರನ್ನು ಪಡೆದಿದ್ದರು. ಭಾರತಾಗತ ಆರ್ಯರು ವೇದವಿದ್ಯೆಯ ಚರ್ಚೆಯನ್ನು ಮಾಡುತ್ತಿದ್ದಿಲ್ಲವೋ? ಅವರು ದೇವತೆ ಎಂಬ ಹೆಸರನ್ನು ಏಕೆ ಪಡೆಯಲಿಲ್ಲ? ಎಂಬ ಪ್ರಶ್ನೆಗಳು ಉದ್ಭವಿಸುವವು. ಇದಕ್ಕೆ ಉತ್ತರವೇನಂದರೆ— ಸಮಾನಜ್ಞಾನೀ ಹಾಗು ಸಮಾನ ಅವಸ್ಥಾಸಂಪನ್ನರಾಗಿದ್ದರು ಸಹ, ಪಿತೃಭೂಮಿಯಲ್ಲಿ ಯಾರು ಸ್ಥಾಯೀ ಭಾವದಿಂದ ವಾಸಮಾಡುವರೋ ಅವರು ಸಾಧಾರಣವಾಗಿ ಪಿತೃಭೂಮಿಯಿಂದ ಹೊರಬಿದ್ದು ಬೇರೆಡೆಯಲ್ಲಿ ಉಪನಿವಿಷ್ಟರಾದ ಸ್ವಜನರಿಂದ ಹೆಚ್ಚು ಸನ್ಮಾನವನ್ನು ಹೊಂದುತ್ತಾರೆ. ಇಂತಹ

ಘಟನೆಗಳನ್ನು ನಾವು ಸಮಾಜದಲ್ಲಿ ಯಾವಾಗಲೂ ನೋಡುತ್ತೇವೆ. ಭಾರತದಲ್ಲಿ ಉಪನಿವಿಷ್ಟರಾದ ಬ್ರಾಹ್ಮಣ ದೇವತೆಗೇ ಸಮಯದಲ್ಲಿಯೂ ಇದರಂತೆಯೇ ವ್ಯವಹಾರವು ಘಟಿಸಿತ್ತು. ಅವರು ಇಲಾವೃತವರ್ಷ ಹಾಗು ತತ್ಪಾರ್ಶ್ವವರ್ತೀ ಸ್ಥಾನಗಳ ಬ್ರಾಹ್ಮಣ ದೇವತೆಗಳಂತೆ ವಿದ್ವತ್ತೆಯಲ್ಲಿ ಸಮಾನ ಪಾರದರ್ಶಿಗಳಿದ್ದರು ಸಹ, ಪಿತೃಭೂಮಿಯಿಂದ ಚ್ಯುತರಾದು ಪಿತೃಭೂಮಿಯಲ್ಲಿಯ ಜ್ಞಾತಿಗಳಂತೆ ಸಮಾಜದಲ್ಲಿ ಸನ್ಮಾನವನ್ನು ಪಡೆಯಲು ಸಮರ್ಥರಾಗಲಿಲ್ಲ. ಇನ್ನೂ ಕೆಲವು ಕಾರಣಗಳ ಮೂಲಕ ಅವರ ಸನ್ಮಾನದ ಲಾಘವವು ಘಟಿಸಿರುವದು ಹೆಚ್ಚು ಸಂಭವವು. ಭಾರತಾಗತ ದೇವತೆಗಳ ಸಂಖ್ಯಾಧಿಕ್ಯವಿರದಕಾರಣ, ಅವರು ಭಾರತದಲ್ಲಿಯ ಆದಿಮ ನಿವಾಸಿಗಳ ಕೆಲಕೆಲವು ಗುಂಪುಗಳೊಡನೆ ಕೂಡಿಕೊಳ್ಳಲು ಸಂಭವವಾಯಿತು. ಹಾಗು ಅದೇಕಾರಣದಿಂದ ಅವರ ಆಚಾರ ವ್ಯವಹಾರಗಳಲ್ಲಿ ಕೆಲವು ಅನಾರ್ಯ ಭಾವಗಳೂ ಪ್ರವೇಶ ಮಾಡಿದವು. ಅದಕ್ಕೋಸುಗವೇ ಅವರು ಲೋಕಸಮಾಜದಲ್ಲಿ ಕೆಲ ಮಟ್ಟಿಗೆ ಕಡಿಮೆ ತರಗತಿಯವರಾದರು.

ಮತ್ತು ಇಲಾವೃತವರ್ಷ ಹಾಗು ತತ್ಪಾರ್ಶ್ವವರ್ತೀ ರಾಜ್ಯಗಳು ಶೀತಪ್ರಧಾನ ದೇಶಗಳಿದ್ದುದರಿಂದ ಅಲ್ಲಿಯ ಜನರು ಸಾಮಾನ್ಯವಾಗಿ ನೋಡಲು ಒಳ್ಳೇ ಸುಂದರರೂ, ಬಲಿಷ್ಠಕಾಯರೂ ಆಗಿದ್ದರು. ಪಕ್ಷಾಂತರದಲ್ಲಿ ಭಾರತಾಗತ ಆರ್ಯ ದೇವತೆಗಳು ಹೆಚ್ಚು ಉಷ್ಣತೆಯುಳ್ಳ ದೇಶದಲ್ಲಿ ಇದ್ದುದರಿಂದ ಕಪ್ಪುಬಣ್ಣದವರೂ, ಕೃಶಕಾಯರೂ ಆದರು. ಅವರ ವಂಶದವರು ಸಹ ಪಿತಾ-ಪಿತಾಮಹರಂತೆಯೇ ಆದರು. ಅವರು ಸಮಾಜದಲ್ಲಿ ಪಿತೃಭೂಮಿಯಲ್ಲಿಯ ಬ್ರಾಹ್ಮಣರಂತೆ ಸಮ್ಮಾನ ಲಾಭವನ್ನು ಹೊಂದಲಿಲ್ಲ. ಸುತರಾಂ ಪಿತೃಭೂಮಿಯಲ್ಲಿಯ ಬ್ರಾಹ್ಮಣರು ದೇವತೆಗಳೇ ಆಗಿಹೋದರು, ಹಾಗು ಭಾರತಾಗತ ದೇವತೆಗಳು ತಮ್ಮ ದೇವತ್ವದಿಂದ ವಂಚಿತರಾದರು.

ಮತ್ತೊಂದು ಮಾತು ಮಹಾಭಾರತ-ರಾಮಾಯಣ-ಪುರಾಣಾದಿಗಳನ್ನು ಓದಲು ಕಂಡುಬರುವದು:— ದೇವತೆಗಳೆಲ್ಲರೂ ವಿಮಾನ ಸಂಚಾರಿಗಳು; ವಿಮಾನಗಳಿಂದಲೇ ಈ ದೇಶಕ್ಕೆ ಬಂದು ಸಂಚರಿಸಿ ಹೋಗುತ್ತಿದ್ದರು. ಆದರೆ ಭಾರತಕ್ಕೆ ಬಂದ ಬ್ರಾಹ್ಮಣ ದೇವತೆಗಳ

ವಿಮಾನ ವಿದ್ಯೆಯಲ್ಲಿ ಪಾರದರ್ಶಿಗಳಿದ್ದಿಲ್ಲ. ಅಂತೇ ಅವರು ತಮಗಿಂತ ಹಿಮಾಲಯದ ಆಚೆಯಲ್ಲಿದ್ದ ಬ್ರಾಹ್ಮಣರಿಗೆ ಬಹಳ ಶ್ರೇಷ್ಠರೆಂದು ತಿಳಿಯುತ್ತಿದ್ದರು, ಹಾಗು "ದೇವತಾ" ಎಂಬ ಹೆಸರನ್ನು ಕೊಟ್ಟಿದ್ದರು. ರಾವಣನ "ಪುಷ್ಪಕರಥ" ಎಂಬ ಹೆಸರಿನ ವಿಮಾನವಿತ್ತು. ಇದು ಇವನ ಸ್ವಂತವಲ್ಲ. ಕುಬೇರನಿಂದ ಬಲುಮೆಯಿಂದ ತೆಗೆದುಕೊಂಡಿದ್ದನು. ಮುಂದೆ ಇದು ರಾವಣನ ಮರಣಕ್ಕೆ ಕಾರಣನಾದ ರಾಮನ ಕೈಸೇರಿತು.

ಇಲಾವೃತವರ್ಷ ಹಾಗು ತತ್ಪಾರ್ಶ್ವವರ್ತಿಯಾದ ಎಲ್ಲ ರಾಜ್ಯಗಳೂ ಬ್ರಾಹ್ಮಣ ಪ್ರಧಾನವಿದ್ದವು. (ಮಂಗಾಃ ಬ್ರಾಹ್ಮಣ ಭೂಯಿಷ್ಠಾಃ ।— ಮಹಾಭಾರತ; ಸೋಮೋ ಬ್ರಾಹ್ಮಣಾನಾಂ ರಾಜಾ ಆಸೀತ್ ।– ಯಜುರ್ವೇದ; ಬ್ರಹ್ಮಾ ವಸತಿ ದೇವೇಶೋ ಬ್ರಹ್ಮರ್ಷಿ ಪರಿವಾರಿತಃ ।— ರಾಮಾಯಣ;) ಸುತರಾಂ ಆ ಎಲ್ಲ ಸ್ಥಾನಗಳಲ್ಲಿ ಭಾರತವರ್ಷಕ್ಕಿಂತ ವೇದವಿದ್ಯೆಯ ಚರ್ಚೆಯೂ, ಬ್ರಹ್ಮ ಚರ್ಚೆಯೂ ಬಹಳ ಹೆಚ್ಚು ನಡೆಯುತ್ತಿತ್ತು ಪಿತೃಭೂಮಿಯ ಬ್ರಹ್ಮಣರು ಬಹಳ ಮುಂದುವರಿದವರಿದ್ದರು. ಅವರು ಸಂಘಬದ್ಧರಿದ್ದುದರಿಂದ ಅವರ ಬಲವೂ ಅಸೀಮವಾಗಿತ್ತು. ಅವರು ಭಾರತದ ಜನರು ಅರಿಯದ ಎಷ್ಟೋ ಅಸ್ತ್ರಗಳ ಪ್ರಯೋಗಗಳನ್ನು ಬಲ್ಲವರಾಗಿದ್ದರು. ದಿವ್ಯಾಸ್ತ್ರಗಳನ್ನು ಕಲಿಯಬೇಕಾದರೆ ಸ್ವರ್ಗಕ್ಕೆ ಹೋಗಿಯೇ ಕಲಿಯಬೇಕಾಗುತ್ತಿತ್ತು.

ಕಾಲಕ್ರಮದಿಂದ ಭಾರತದಲ್ಲಿ ಉಪನಿವಿಷ್ಟರಾದ ಆರ್ಯರು ಹಾಗು ಅವರ ವಂಶದವರು ದೇವಲೋಕವು ತಮ್ಮ ಪಿತೃಭೂಮಿಯೆಂಬದನ್ನು ಯಾವಾಗ ಮರೆಯ ಹತ್ತಿದರೋ, ಆಗ ಅವರು ದೇವತೆಗಳು ತಮ್ಮಿಂದ ಭಿನ್ನರೂ ಬಹಳ ಶ್ರೇಷ್ಠರೂ ಎಂದು ತಿಳಿಯಹತ್ತಿದರು. ಅನಂತರ ವಿಸ್ಮೃತಿಯೂ, ಅಜ್ಞಾನವೂ ಹೆಚ್ಚಿದಂತೆ ಹಲವು ಬಗೆಯ ಅವಾಂತರ ಕಲ್ಪನೆಗಳ ಸೃಷ್ಟಿಯಾಯಿತು. ವೇದವಿದ್ಯಾವಿಹೀನರಾದ ಜನರು ಈ ಎಲ್ಲ ಸ್ವರ್ಗಗಳು ಆಕಾಶಸ್ಥವೆಂದೂ, ಭೂಮಿಯವು ಅಲ್ಲವೆಂದೂ ತಿಳಿಯ ಹತ್ತಿದರು. ಇಲ್ಲಿಯ ವರೆಗೆ ಈ ದೇಶದ ಸಾಮಾನ್ಯ ಜನರ– ಇಷ್ಟೇ ಅಲ್ಲ ಹಲವು ಪಂಡಿತರ ವಿಚಾರದಲ್ಲಿಯೂ ಇದೇ ಬದ್ಧಮೂಲವಾಗಿದೆ. ಆದರೆ ದೇಶದ ಜನರಿಗೆ ಹೆಚ್ಚಾಗಿ ದೋಷ

ಕೊಡುವದಿಲ್ಲ. ಇದು ಕಾಲದ ನಿಯಮವು. ನಮ್ಮ ದೇಶದ ಹಲವು ಪಂಡಿತರು ಈ ವಿಷಯದ ನಿಜವಾದ ಶೋಧವನ್ನು ಮಾಡಿಲ್ಲ; ಮಾಡ ಲಿಕ್ಕೆ ಪ್ರಯತ್ನವನ್ನೂ ಮಾಡುವದಿಲ್ಲ. ಅವರಲ್ಲಿ ಕೆಲವರು 'ಸ್ವರ್ಗ ಗಳು ಶೂನ್ಯವೆಂದು, ಅಜ್ಞಜನರಂತೆ ನಂಬಿಗೆಯನ್ನು ಇಡುವರು. ಮತ್ತು ಕೆಲಕೆಲವರು, ಯುರೋಪೀಯ ಪಂಡಿತರು ಹಾಗು ಅವರ ಶಿಷ್ಯತ್ವವನ್ನು ವಹಿಸಿದ ನಮ್ಮ ದೇಶದ ಆಂಗ್ಲಭಾಷಾ ಶಿಕ್ಷಿತರು ಅನ್ನು ವಂತೆ "ಇದೆಲ್ಲ ಸುಳ್ಳು, ಇದು ಕವಿಯ ಕಲ್ಪನಾಮಾತ್ರ" ಎಂದು ಗಂಭೀರತೆಯಿಂದ ತಲೆಯಲ್ಲಾಡಿಸಿ ಮಾತಾಡುವರು.

ಆದರೆ ಸ್ವರ್ಗವು ಶೂನ್ಯದಲ್ಲಿ ಅಥವಾ ಮೇಲ್ಗಡೆಯಲ್ಲಿ ಇರುವ ದೆಂಬ ತಿಳುವಳಿಕೆಯು ಜನರಲ್ಲಿ ಬದ್ಧಮೂಲವಾಗಲಿಕ್ಕೆ ಕಾರಣವುಂಟು. ಇಲಾವೃತವರ್ಷ, ಕಿಂಪುರುಷವರ್ಷ ಮೊದಲಾದವುಗಳೆಲ್ಲವೂ ಗುಡ್ಡ ಗಾಡ ಪ್ರದೇಶಗಳು. ಆದುದರಿಂದಲೇ ಭಾರತದ ಸಮತಲ ಭೂಮಿ ಗಿಂತ ಹೆಚ್ಚು ಎತ್ತರದಲ್ಲಿರುತ್ತವೆ. ಮತ್ತು ದೇವತೆಗಳು ಭಾರತ ವರ್ಷದಲ್ಲಿ ಬರುವಾಗ ವಿಮಾನದಲ್ಲಿ ಕುಳಿತು ಬರುತ್ತಿದ್ದರು. ಇದನ್ನೇ ಜನರು ಶೂನ್ಯಸ್ವರ್ಗದಿಂದ ಬರುತ್ತಿದ್ದರೆಂದು ತಿಳಿಯಹತ್ತಿದರು. ಕೆಲ ವರು ಸ್ವರ್ಗವು ಉತ್ತರಕ್ಕೆ ಇರುವದೆಂದು ಹೇಳಿದರೂ ನಿಶ್ಚಿತ ಸ್ಥಾನ ನನ್ನು ಹೇಳಲಿಕ್ಕೆ ಸಮರ್ಥರಾಗಿಲ್ಲ. ಇದಕ್ಕೆ ಕಾರಣವೇನಂದರೆ, ಸ್ವರ್ಗಲೋಕಗಳು ಭಾರತದ ಉತ್ತರದಲ್ಲಿ ಹಿಮಾಲಯದ ಆಚೆಗೆ ಇದ್ದುದೇ ಸರಿ.

ಸಾಮಾನ್ಯ ಜನರು ಅಜ್ಞರು, ವೇದವಿದ್ಯಾವಿಹೀನರು. ಒಂದು ವೇಳೆ ಇವರು ಸ್ವರ್ಗಭೂಮಿಯು 'ಶೂನ್ಯ'ದಲ್ಲಿ ಅವಸ್ಥಿತವೆಂದು ಅನ್ನಲಿ, ಪಂಡಿತರು ಸ್ವರ್ಗದ ಸಂಗತಿಯನ್ನು ಮರೆತುಬಿಟ್ಟದು ಹೇಗೆ? ಎಂಬ ಪ್ರಶ್ನವುಂಟಾಗುವದು. ಇದಕ್ಕೆ ಉತ್ತರವೇನಂದರೆ—ದೇವತೆಗಳ ಕ್ಷಾಮ ತ್ವದ ನಾಶದೊಡನೆ ಸ್ವರ್ಗಕ್ಕೆ ಹೋಗುವ ಮಾರ್ಗಗಳು ಕ್ರಮೇಣ ವಿಪತ್ಸಂಕುಲವಾಗಹತ್ತಿದವು. ಪಿತೃಯಾನ, ದೇವಯಾನ, ಧೂಮ ಯಾನ ಮೊದಲಾದ ಮಾರ್ಗಗಳ ಎರಡೂ ಪಾರ್ಶ್ವಗಳಲ್ಲಿ ಅಸಭ್ಯ ರಾದ ಶಕ, ಹೂಣ, ಕಿರಾತ ಮೊದಲಾದ ದುರ್ಧರ್ಷ ಜಾತಿಗಳು ವಾಸಮಾಡಹತ್ತಿದವು. ದೇವತೆಗಳು ದುರ್ಬಲರಾಗುತ್ತ ನಡೆಯಲು,

ಆ ಎಲ್ಲ ಜಾತಿಗಳೂ ತಲೆಯೆತ್ತಹತ್ತಿದವು. ಹಾಗು ಮಾರ್ಗಗಳಲ್ಲಿಯು ಜನರನ್ನು ಆಕ್ರಮಿಸಿ ಅವರ ಸರ್ವಸ್ವವನ್ನು ಸುಲಿಗೆಮಾಡಹತ್ತಿದರು; ಅಲ್ಲದೆ ಕೆಲಕೆಲವರ ಪ್ರಾಣವನ್ನು ಸಹ ತೆಗೆದುಕೊಳ್ಳಹತ್ತಿದರು. ಪ್ರಾಣ ಭಯದಿಂದ ಜನರು ಸ್ವರ್ಗಲೋಕಕ್ಕೆ ಹೋಗುವದನ್ನು ಕಡಿಮೆ ಮಾಡಿದರು, ಬರಬರುತ್ತ ಇದು ನಿಂತೇಹೋಯಿತು. ಪಂಡಿತರೇನು ಮೂರ್ಖರೇನು ಎಲ್ಲರೂ ದೇವಲೋಕದ ಸಂಗತಿಯನ್ನು ಮರೆತುಬಿಟ್ಟರು. ದೇವತೆಗಳ ಕ್ಷಮತೆಯು ಮಹಾಭಾರತೀಯ ಯುದ್ಧದ ಕಾಲದಿಂದಲೇ ಆರಂಭವಾಗಿ, ಮುಂದೆ ಕೆಲವು ಶತಮಾನಗಳಲ್ಲಿಯೇ ಅದು ನಷ್ಟವಾಗಿ ಹೋಯಿತು.

(ಮುಂದುವರಿದಿದು.)

---

# ಚಿಚ್ಛಕ್ತಿಯ ಹಂಬಲ.

(ಲೇ.—ವಿದ್ಯಾವಾಚಸ್ಪತಿ ಶ್ರೀ ಶಂಭುಲಿಂಗ ಶಿವಾಚಾರ್ಯರು ಬೃಹನ್ಮಠ
ವಿಜಾಪುರ, ಯೋಗಾಶ್ರಮ ಹುಲ್ಯಾಳ, ಸಂಸ್ಥಾನ ಜಮಖಂಡಿ.)

---

ಕಾಪಾಡು ಕಾಪಾಡು ನನ್ನ ತಾಯೇ! ದೇವಿ!!
ಪಾಪಾದ್ರಿದಂಭೋಲಿ! ಕರುಣಾಮಯಿ ॥ ೧ ॥

ನಿನ್ನಾಟವೆಲ್ಲ ದೇವಿ! ಮಹಾಮಾಯೇ ।
ಚೆನ್ನಾಗಿ ಮೈದೋರೆನ್ನ ಹೃದಯಾಲಯೇ ॥ ೨ ॥

ಯೋಗ ಯೋಗೀಶ್ವರಿ! ನೀನೆ ವಿಶ್ವಯೋನಿ ॥
ಹೀಗೆ ತಿಳಿದವನೇ ಪರಮ ಶಾಂಭವಜ್ಞಾನಿ ॥ ೩ ॥

ಹೆಣ್ಣು ಗಂಡು ಜೀವರಾಶಿ ನಿನ್ನ ಸ್ವರೂಪ ।
ಭಿನ್ನವೆನಿಸಿ ತೋರುತ್ತಿಹುದು, ಮಿಥ್ಯಾರೋಪ ॥ ೪ ॥

ಬ್ರಹ್ಮ ವಿಷ್ಣು ರುದ್ರ ಪ್ರಮುಖ ದೇವಕದಂಬ ।
ನಮ್ಮಂತೆ ನಿನ್ನ ಸಂತಾನ, ಜಗದಂಬ ॥ ೫ ॥

ವರ ವೇದಶಾಸ್ತ್ರಾದಿ ಶಬ್ದಜಾಲ ।
ಗುರುಬೋಧೆಯಿಲ್ಲದೊಡೆ, ಭ್ರಾಂತಿಮೂಲ ॥ ೬ ॥

ಬೇರೆ ಬೇರೆ ತರ್ಕೋಕ್ತಿಗಳು ಸುಸ್ಥಿರವಲ್ಲ ।
ಸಾರಶ್ರದ್ಧೆಯಿಲ್ಲದೆ ಮನಕೆ ಶಾಂತಿಯಿಲ್ಲ ॥ ೭ ॥

ಮುಕ್ತಿಯೆಂಬುವದನ್ಯಮುಂಟೆ? ನಿನ್ನನ್ನೇ ಬಿಟ್ಟು ।
ಯುಕ್ತಿಯಿಂದೆ ಗಳಹುವರಧಮರು ಸಂಶಯಪಟ್ಟು ॥ ೮ ॥

ಗುರುಮೂರ್ತಿಯೋ ನಿನ್ನನರಿವ ಮೆಟ್ಟು ।
ಪೆರತಿಲ್ಲ ಸಾಧನವದರ ಮೇಲ್ಪಟ್ಟು ॥ ೯ ॥

ನುಡಿದು ಹೇಳಲಸದಳ ಸದ್ಗುರು ಬೋಧೆಗುಟ್ಟು ।
ದುಡಿದನುಭವಿಸಬೇಕು, ನಿನ್ನೋಳ್ಚಿತ್ತವಿಟ್ಟು ॥ ೧೦ ॥

ಬೇರೆ ಹಂಬಲವೆಳ್ಳನಿತಿರದು ನಿನ್ನ ಕೂಸಿಗೆ ।
ತೋರದದರ ಸೌಖ್ಯವಿತರ ವಿಷಯಾಸಕ್ತರಿಗೆ ॥ ೧೧ ॥

ಪಶುಭೋಗವೃತ್ತಿಯೆಂಬುದು ಬಂಧಮೂಲ ।
ರಸವರ್ಜ್ಯ ದಿವ್ಯ ಭೋಗಿ, ನಿನ್ನ ಬಾಲ ॥ ೧೨ ॥

ಗೇಣು ಹೊಟ್ಟೆಗಾಗಿ ಜೀವರನೊಲಿಸುತ್ತಿಹರು ।
ಜ್ಞಾನ ಸಂಪಾದಿಸಲು ಸದ್ಗುರು ಸೇವೆ ಮಾಡರು ॥ ೧೩ ॥

ಪಿಂಡಪಿಂಡದಲ್ಲಿ ನಿತ್ಯಾನಂದ ನೆಲೆಸಿಹುದು ।
ಕಂಡಕಂಡ ಜನರಿಗದರ ಗುಟ್ಟು ತಿಳಿಯದು ॥ ೧೪ ॥

ಮಣ್ಣುಬಿಟ್ಟು ಮಡಕೆಯಿಲ್ಲವೆಂದು ಹೇಳುವರು ।
ತನ್ನ ಬಿಟ್ಟು ದೇವರಿಲ್ಲವೆಂಬುದನರಿಯರು ॥ ೧೫ ॥

ತಿರುಳನರಿಯದೆ ತಾವೇ ಜಾಣರೆಂಬ ಹಿರಿಯರು ।
ಇರುಳ ಕಂಡ ಬಾವಿಯಲ್ಲಿ ಹಗಲೇ ಬೀಳುವರು ॥ ೧೬ ॥

ತನ್ನ ಗುರುವರನಪ್ಪಣೆಯಂತೆ ನಡೆಯದಧಮರು ।
ಬನ್ನಬಟ್ಟು ಪಿಶಾಚಜನ್ಮವನೆತ್ತಿ ಬಳಲುವರು ॥ ೧೭ ॥

ಕಲಿಕಾಲದೊಳ್ ಜೀವನ ಕಲಹದತಿರೇಕ! ।
ನಲಿದು ನಿನ್ನಡಿಗೆರಗದೆ ಶಾಂತಿಯು ಪಡೆಯದೀ ಲೋಕ ॥ ೧೮ ॥

ತನ್ನ ಯೋಗ ಕ್ಷೇಮ ಚಿಂತೆ ಕಂದನಿಗೆಲ್ಲಿಹುದು? ।
ಕಣ್ಣು ತೆರೆಯದ ಬೆಕ್ಕಿನ ಮರಿಯ ಪಾಂಗು ಸಾನಿಹುದು ॥ ೧೯ ॥

ಜಸವೆತ್ತ ಯೋಗಾಶ್ರಮದ ಶಂಭುಲಿಂಗ ।
ಒಸೆದು ಹಂಬಲಿಸುವನು ನಿನ್ನಡಿದಾವರೆಭೃಂಗ ॥ ೨೦ ॥

# ವಿಷಯಾನುಕ್ರಮಣಿಕೆ.


| ವಿಷಯಗಳು | ಪುಟ |
|---|---|
| ೧ ಮುದನೂರು ಗ್ರಾಮ | ೧ |
| ೨ ದೇವರ ದಾಸಿಮಯ್ಯನ ಜನನ. | ೨ |
| ೩ ದೇವಾಂಗ ಗಣೇಶ್ವರ. | ೨ |
| ೪ ದೇವಾಂಗರು. | ೬ |
| ೫ ಶ್ರೀಶೈಲಕ್ಕೆ ಆಗಮನ. | ೯ |
| ೬ ಕಾಡುಜನರಿಗೆ ಬೋಧೆ. | ೧೧ |
| ೭ ನಂದಿಗ್ರಾಮದಲ್ಲಿ ಬ್ರಾಹ್ಮಣರಿಗೆ ಬೋಧೆ. | ೧೩ |
| ೮ ಗೌಡಗೆರೆಯ ಒಕ್ಕಲಿಗರಿಗೆ ಬೋಧೆ. | ೧೫ |
| ೯ ಪೊಟ್ಟಲಕೆರೆಯಲ್ಲಿ ಮಠ ಸ್ಥಾಪನೆ. | ೧೮ |
| ೧೦ ಮುದನೂರಿಗೆ ಆಗಮನ ಮತ್ತು ಜೈನರಿಗೆ ಬೋಧೆ. | ೨೦ |
| ೧೧ ದುಗ್ಗಳೆಯೊಡನೆ ಲಗ್ನ. | ೨೦ |
| ೧೨ ದೇವರ ದಾಸಿಮಯ್ಯನ ಕಾಯಕದ ರೀತಿ. | ೨೩ |
| ೧೩ ಸ್ತ್ರೀಯರ ವಿಷಯವಾಗಿ ದೇವರ ದಾಸಿಮಯ್ಯನ ಆದರ. | ೨೪ |
| ೧೪ ಪ್ರಪಂಚ ಸುಖವು ಕೈಲಾಸಸುಖಕ್ಕಿಂತಲೂ ಮಿಗಿಲಾದದ್ದು. | ೨೫ |
| ೧೫ ಗೊಗ್ಗೇಶ್ವರ. | ೨೭ |
| ೧೬ ದೇವರ ದಾಸಿಮಯ್ಯನನ್ನು ಕುರಿತು ಬಸವೇಶ್ವರನ ಸ್ತುತಿಪರ ವಚನಗಳು. | ೨೮ |
| ೧೭ ದೇವರ ದಾಸಿಮಯ್ಯನ ಶಿವಾನುಭವವು. | ೩೧ |
| ೧೮ ದೇವರ ದಾಸಿಮಯ್ಯನು ಶವನಿಧಿಯನ್ನು ಪಡೆದುದು | ೩೨ |
| ೧೯ ಗೌತಮೀ ನದಿಯ ಪವಾಡ. | ೩೬ |
| ೨೦ ಸುಗ್ಗಲಾ ದೇವಿಗೆ ಲಿಂಗ ದೀಕ್ಷೆ. | ೩೭ |
| ೨೧ ಪೊಟ್ಟಲಕೆರೆಯಲ್ಲಿಯ ಪವಾಡಗಳು. | ೩೮ |
| ೨೨ ಜಯಸಿಂಹರಾಜನ ಆಸ್ಥಾನದಲ್ಲಿ ಪರವಾದಿಗಳೊಡನೆ ವಾದಗಳು. | ೪೧ |
| ೨೩ ಜೈನರೊಡನೆ ವಾದ. | ೪೭ |
| ೨೪ ಮುದನೂರಿಗೆ ಆಗಮನ ಮತ್ತು ಅಲ್ಲಿ ದಾಸದುಗ್ಗಳೆಯರು ಲಿಂಗೈಕ್ಯವಾದುದು. | ೫೨ |
| ೨೫ ಕರ್ನಾಟಕದ ಧಾರ್ಮಿಕ ಸ್ಥಿತಿ. | ೫೩ |

೨೬ ದೇವರ ದಾಸಿಮಯ್ಯನ ಧರ್ಮಪ್ರಚಾರ ಕಾರ್ಯಗಳು. ೫೪
೨೭ ದೇವರ ದಾಸಿಮಯ್ಯನ ವಚನಗಳ ಸಾಮಾನ್ಯ ಸ್ವರೂಪು. ೫೯
೨೮ ರಾಮೇಶ್ವರ ಅಥವಾ ರಾಮನಾಥ ದೇವಾಲಯಗಳು ಸ್ಥಾಪಿತವಾದದ್ದು. ೬೦
೨೯ ದೇವರ ದಾಸಿಮಯ್ಯನಿಗೆ ಸುಗ್ಗಲಾ ವೇವಿಯ ಸಹಾಯ ೬೧
೩೦ ಸುಗ್ಗಳೆಯ ಹಳೇ ಬೀಡು ಶಿಲಾಶಾಸನ. ೬೧
೩೧ ದೇವರ ದಾಸಿಮಯ್ಯನ ಕಾಯಕದ ರೀತಿ. ೬೩
೩೨ ದೇವರ ದಾಸಿಮಯ್ಯನ ವರ್ಚಸ್ಸು. ೬೭
೩೩ ಹಿರಿಯೂರು ಶಿಲಾಶಾಸನ ೭೧
೩೪ ದೇವರ ದಾಸಿಮಯ್ಯನನ್ನು ಹರಿಹರನು ಸ್ತುತಿಸಿದ್ದು ೭೩
೩೫ ದೇವರ ದಾಸಿಮಯ್ಯನ ಕಾಲ. ೭೪
೩೬ ಗೊಬ್ಬೂರು ಶಿಲಾಶಾಸನ. ೭೬
೩೭ ಮುದನೂರು ಶಿಲಾಶಾಸನ ೭೭
೩೮ ವೀರಶೈವರ ಒಂಬತ್ತು ಧಾರ್ಮಿಕ ಕೇಂದ್ರಗಳು. ೭೮
೩೯ ಮುದನೂರು ಕೇಂದ್ರದ ಮಹತ್ವ. ೮೨
೪೦ ವಚನವಾಙ್ಮಯದ ಪುರಾತನತ್ವ. ೮೩
೪೧ ದೇವರದಾಸಿಮಯ್ಯ ಎಂಬ ಹೆಸರಿನವರು ಒಬ್ಬರೇ ಇದ್ದಾರೆ. ೮೪
೪೨ ದೇವರ ದಾಸಿಮಯ್ಯನ ಮಗನು. ೮೪
೪೩ ದೇವರ ದಾಸಿಮಯ್ಯ ಮತ್ತು ಶಂಕರದಾಸಿಮಯ್ಯ. ೮೪

ಗೊಂಟಿ ಕೆಡೆಯಾಗಬೇಡ ಅರಿ ನಿಜಾತ್ಮ ರಾಮರಾಮನಾ, ದಾಸಂಪ್ರಿಯ ರಾಮನಾಥ ಪ್ರಭುವೇ, ನಂದ ಗೋಪೀಯ ಕಂದ ಪ್ರಿಯ ನಿಸ್ಸಂಗಲಿಂಗ ರಾಮನಾಥಾ, ಇವು ಇದಕ್ಕೆ ಉದಾಹರಣೆಗಳಾಗಿವೆ.

ಈ ಮುದ್ರಿಕೆಗಳನ್ನಿಟ್ಟುಕೊಂಡ ವಚನಕಾರರಲ್ಲಿ ಏಲೇಶಕೇತಯ್ಯನು ಯಾದಗಿರಿಗೆ ಸಮೀಪವರ್ತಿಯಾದ ಏಲೇರಿ ಗ್ರಾಮದವನು. ಏಕಾಂತದ ರಾಮಯ್ಯನು ಕಲಬುರ್ಗಿಗೆ ಸಮೀಪವಿರುವ ಆಳಂದೆ ಗ್ರಾಮದವನು. ವೈದುನ ರಾಮಯ್ಯನು ಶ್ರೀಶೈಲಕ್ಕೆ ಸಮೀಪವಿರುವ ಭೀಮಾವಶೀ ಪ್ರದೇಶದವನು. ಚಂದಿಮರಸನು ಮುದುನೂರಿಗೆ ಸಮೀಪವಿರುವ ಕೆಂಭಾವಿ ಗ್ರಾಮದವನು. ಇವರೆಲ್ಲರೂ 'ರಾಮೇಶ್ವರ' ಎಂಬುದನ್ನು ತಮ್ಮ ಮುದ್ರಿಕೆಯಲ್ಲಿ ಇಟ್ಟುಕೊಂಡಿದ್ದಾರೆ. ದಾಸಂಪ್ರಿಯ ರಾಮನಾಥ ಪ್ರಭುವೇ ಎಂಬ ಮುದ್ರಿಕೆಯನ್ನಿಟ್ಟುಕೊಂಡವನು ದೇವರದಾಸಿಮಯ್ಯನ ಹೆಸರನ್ನು ತನ್ನ ಮುದ್ರಿಕೆಯಲ್ಲಿ ಸ್ಪಷ್ಟವಾಗಿ ಸೇರಿಸಿಕೊಂಡಿದ್ದಾನೆ. ಈ ಸ್ಥಾನಗಳನ್ನು ನೋಡಿದಲ್ಲಿ ಇವರೆಲ್ಲರೂ ದೇವರದಾಸಿಮಯ್ಯನು ಸಂಚರಿಸಿದ್ದ ಸ್ಥಳಗಳಲ್ಲಿ ಪ್ರಸಿದ್ಧಿಗೆ ಬಂದವರು ಇದ್ದಾರೆ. ಇವರೆಲ್ಲರೂ ಅವನ ಕಾರ್ಯಗಳಿಂದ ಪ್ರೇರಣೆ ಹೊಂದಿದವರಿರಬೇಕು. ಉಳಿದವರಲ್ಲಿ ಕೆಲವರು ಉದಾಹರಣಾರ್ಥವಾಗಿ ತಳವಾರ ಕಾಮಿದೇವ, ಶಿವನಾಗಮಯ್ಯ, ಗುಪ್ತಮಂಚಣ್ಣ ಇವರು ಕಲ್ಯಾಣಪಟ್ಟಣಕ್ಕೆ ಸಂಬಂಧಿಸಿದವರಾದ್ದರಿಂದ, ಈ ಪಟ್ಟಣಕ್ಕೆ ಅನತಿ ದೂರದಲ್ಲಿರುವ ಮುದುನೂರು ಗ್ರಾಮಕ್ಕೆ ಸಮೀಪವಿರುವ ಗ್ರಾಮಗಳಲ್ಲಿಯವರಿರಬೇಕು. ಇದರಿಂದ ಅವರು ರಾಮೇಶ್ವರ ದೇವಾಲಯದ ಮಹತ್ವವನ್ನು ಅರಿತವರಾಗಿ ಅವರು ತಮ್ಮ ಮುದ್ರಿಕೆಗಳಲ್ಲಿ ಅದನ್ನು ಸೇರಿಸಿಕೊಂಡಿರಬೇಕು. ಆದರೆ ಉಳಿದ ವಚನಕಾರರ ಗ್ರಾಮಗಳಾವವು ಎಂಬುದು ನಮಗೆ ಗೊತ್ತಾಗಿಲ್ಲ. ಇವರು ನಗಿಮಾರಿತಂದೆ, ಮೆರೆಮಿಂಡದೇವ, ಭರಿತಾರ್ಪಣದ ಚನ್ನಬಸವಣ್ಣ, ಅನಾಮಿಕ ನಾಚಯ್ಯ, ವೈದ್ಯಸಂಗಣ್ಣ, ಬಾಲಬೊಮ್ಮಣ್ಣ, ಮಾದರಚನ್ನಯ್ಯ ಇವರು ಇದ್ದಾರೆ. ನಾವು ಹೆಚ್ಚಿಗೆ ಸಂಶೋಧನೆ ಮಾಡಿದಲ್ಲಿ ಇವರೆಲ್ಲರೂ ಕಲಬುರ್ಗಿಗೆ ಸಮೀಪವಿರುವ ಆವವೋ ಗ್ರಾಮಗಳಲ್ಲಿಯವರೆಂದೂ ದೇವರದಾಸಿಮಯ್ಯನ ವಿಷಯವಾಗಿ ಭಕ್ತಿಯನ್ನು ವಹಿಸಿದವರಾಗಿದ್ದರೆಂದೂ ಬಹುಶಃ ಪ್ರಕಟವಾಗಬಹುದು. ಇವರಲ್ಲಿ ಮೆರೆಮಿಂಡದೇವ ಮತ್ತು ಮಾದರಚನ್ನಯ್ಯ ಇವರು ಕರ್ನಾಟಕವನ್ನು ಬಿಟ್ಟು ತಮಿಳುದೇಶಕ್ಕೆ

ಹೋಗಿ ಅಲ್ಲಿ ಪ್ರಸಿದ್ಧರಾದವರು. ಇವರಿಬ್ಬರೂ ಬಸವೇಶ್ವರನಕಿಂತಲೂ ಮೊದಲಿನವರು (ಶಿವಶರಣರ ಚರಿತ್ರೆಗಳು ಭಾಗ ೨ ನೋಡಿರಿ). ಇವರು ಮೊದಲು ಕಲ್ಯಾಣ ಮತ್ತು ಮುದುನೂರು ಈ ಗ್ರಾಮಗಳಿದ್ದ ಪ್ರದೇಶದಲ್ಲಿ ಜನಿಸಿ ಇಲ್ಲಿ ಪ್ರಸಾರವಾದ ಶಿವಾನುಭವದ ತತ್ವಗಳನ್ನು ತಿಳಿದುಕೊಂಡು ಮುಂದೆ ಚೋಳದೇಶಕ್ಕೆ ಹೋಗಿ ಅಲ್ಲಿ ಪ್ರಸಿದ್ಧರಾದರೆಂದು ತೋರುತ್ತದೆ. ದೇವರದಾಸಿಮಯ್ಯನು ರಾಮೇಶ್ವರ ಅಥವಾ ರಾಮನಾಥ ಎಂಬುದನ್ನು ತನ್ನ ವಚನಗಳಿಗೆ ಮುದ್ರಿಕೆಯನ್ನಾಗಿ ಇಟ್ಟುಕೊಂತು ವೀರಶೈವ ಮತತತ್ವಗಳನ್ನು ಬೋಧಿಸಿ ಪ್ರಸಿದ್ಧನಾದದ್ದರಿಂದ ಅವನಿದ್ದ ಪ್ರಾಂತದಲ್ಲಿ ಜನಿಸಿದ ಈ ವಚನಕಾರರು ಅವನ ಅನುಕರಣವನ್ನೇ ಮಾಡಿ ಅವನ ಮುದ್ರಿಕೆಯನ್ನೇ ಇಟ್ಟುಕೊಂಡು ಅಥವಾ ಅದರಲ್ಲಿ ಕೆಲವು ವಿಧವಾದ ಮಾರ್ಪಾಡುಗಳನ್ನು ಮಾಡಿಕೊಂಡು ಅದನ್ನು ಉಪಯೋಗಿಸುತ್ತ ಈ ಮುದುನೂರು ಪ್ರದೇಶದಲ್ಲಿ ಧಾರ್ಮಿಕ ಕ್ರಾಂತಿಯನ್ನು ಮಾಡಿದರೆಂದು ನಾವು ಊಹಿಸುತ್ತೇವೆ.

ರಾಮ, ರಾಮನಾಥ, ರಾಮೇಶ್ವರ, ಈ ಶಬ್ದಗಳು ವಿಷ್ಣು ವಾಚಕವಾಗಿರುತ್ತವೆ. ವೀರಶೈವ ಎಂಬ ಶಬ್ದವನ್ನು ವಿಶೇಷವಾಗಿ ಉಪಯೋಗಿಸುವವರು ರಾಮಶಬ್ದಕ್ಕೆ ಹೀಗೆ ಮಹತ್ವವನ್ನು ಕೊಡುವ ಸಂಭವವಿಲ್ಲ. ಆದರೆ 'ವೀರಶೈವ' ಈ ಶಬ್ದವು ಬಸವೇಶ್ವರನ ಮತ್ತು ದೇವರದಾಸಿಮಯ್ಯನ ವಚನಗಳಲ್ಲಿ ಎಲ್ಲಿಯೂ ಉಪಯೋಗಿಸಲ್ಪಟ್ಟಿಲ್ಲ. ಅವರ ಕಾಲದಲ್ಲಿ ಜನರಲ್ಲಿ ಈ ಹೆಸರು ಸಾಮಾನ್ಯವಾಗಿ ಪ್ರಚಾರದಲ್ಲಿದ್ದಂತೆ ನಮಗೆ ಕಂಡುಬರುವದಿಲ್ಲ. ಆದ್ದರಿಂದ ದಾಸಿಮಯ್ಯನ ಕಾಲದಲ್ಲಿ ರಾಮ ಈ ಶಬ್ದಕ್ಕೆ ವಿರೋಧಭಾವವಿಲ್ಲದ್ದರಿಂದ ಈ ಶಬ್ದವನ್ನು ಅವನಿದ್ದ ಕಾಲದ ವಚನಕಾರರು ಹೇರಳವಾಗಿ ತಮ್ಮ ಮುದ್ರಿಕೆಗಳಲ್ಲಿ ಸೇರಿಸಿ ಉಪಯೋಗಿಸಿದ್ದಾರೆ. ಆದ್ದರಿಂದ ಇವರು ಬಹುಶಃ ಬಸವೇಶ್ವರನ ಕಾಲದಲ್ಲಿ ಇದ್ದವರು ಇಲ್ಲವೆ ಅವನಕಿಂತಲೂ ಸ್ವಲ್ಪಕಾಲ ಮೊದಲು ಇದ್ದವರು ಇರಬಹುದೆಂದು ನಮಗೆ ತೋರುತ್ತದೆ. ಆದರೆ ಬಸವೇಶ್ವರನ ತರುವಾಯ ವೀರಶೈವ ಶಬ್ದವು ಗ್ರಂಥಗಳಲ್ಲಿ ಬಹಳ ಪ್ರಚಾರದಲ್ಲಿ ಬರಹತ್ತಿತು. ಆಗ ರಾಮೇಶ್ವರ, ರಾಮನಾಥ, ರಾಮ ಈ ಶಬ್ದಗಳನ್ನು ಮುದ್ರಿಕೆಗಳಲ್ಲಿಟ್ಟುಕೊಂಡು ಉಪಯೋಗಿಸುವದು ತೀರ ನಿಂತು ಹೋಗಿರಬೇಕು. ಒಟ್ಟಿಗೆ, ರಾಮ ಈ ಶಬ್ದವುಳ್ಳಂಥ ಮುದ್ರಿಕೆಗಳು

ಬೇರೆ ಮುದ್ರಿಕೆಗಳಿಗಿಂತಲೂ ಮೊದಲಿನವುಗಳು ಮತ್ತು ಅವುಗಳನ್ನು ಉಪಯೋಗಿಸಿದ ವಚನಕಾರರು ದೇವರದಾಸಿಮಯ್ಯನಿಗೋಸ್ಕರ ಆದರ ಭಾವವುಳ್ಳವರಿರಬೇಕು ಎಂದು ಹೇಳುವದೇ ನಮ್ಮ ಮುಖ್ಯ ಅಭಿಪ್ರಾಯವು.

ನಾವು ಮೇಲೆ ವಿವರಿಸಿದ ಸಂಗತಿಗಳಿಗೆ ಕೆಲವು ಶಿಲಾಶಾಸನಗಳ ಆಧಾರಗಳೂ ದೊರೆಯುತ್ತವೆ. ಅವುಗಳಲ್ಲಿ ನಾವು ಕೆಳಗೆ ಉಲ್ಲೇಖಿಸಿದ ಶಿಲಾಶಾಸನವು ಈ ವಿಷಯದಲ್ಲಿ ಮಹತ್ವದ್ದಿರುತ್ತದೆ. ಈ ಶಾಸನವು ಹಾಸನ ಜಿಲ್ಹಾ ಅರಸಿಕೆರೆ ತಾಲೂಕಿನಲ್ಲಿರುವ ಹಿರಿಯೂರು ಗ್ರಾಮದಲ್ಲಿದ್ದು ಇದರ ಮಿತಿಯು "ಶಕೆ ನೃ ವರ್ಷ ೧೧೭೭ ಆನಂದ ಸಂವತ್ಸರದ ಪುಷ್ಯ ಶುದ್ಧ ೧೧ ಸೋಮವಾರ" ಅಂದರೆ ಕ್ರಿ. ಶ. ೧೨೫೫-೬೬ನೇ ವರ್ಷದ್ದು ಇರುತ್ತದೆ. ಈ ಶಾಸನದಲ್ಲಿ ಹೇಳಿರುವದೇನಂದರೆ:—

ಸಿರಿಯಾಳ್ವ ಬಸವಯ್ಯನೊಳ್ಪಿಸೆವ......ಮಂ ಬಾಣನು । ದ್ದರಭೋಗಂ ಸಲೆ ಚೋಳನುದ್ಭಟನನತರ್ಕ್ಯಂ ಸಿಂದ ಬಲ್ಲಾಳನಿ॥ ಧರೆಕೊಂಡಾಡುವ ದಾಸಿಮಯ್ಯನೆಸೆದಿರ್ದೀ ಭಕ್ತ ಸಂದೋಹವಾ। ದರದಿಂ ಕಾಕರ ಕಂಡ ನಂಬಿ ನಿನಗೀಗುದ್ಬೋಧ ಸಂಪತ್ತಿಯಂ॥

ಇದರಲ್ಲಿ ಶಿವಶರಣರಲ್ಲಿ ಅತ್ಯಂತ ಪ್ರಸಿದ್ಧರಾದ ಬಸವೇಶ್ವರ, ಬಾಣ, ಚೋಳ, ಉದ್ಭಟ, ಸಿಂಧು ಬಲ್ಲಾಳ, ದೇವರದಾಸ, ನಂಬಿಯಕ್ಕ ಇವರ ಉಲ್ಲೇಖಗಳಿವೆ. ಇವರಲ್ಲಿ ದೇವರದಾಸಿಮಯ್ಯನನ್ನು ಧರೆಯೆಲ್ಲವೂ ಕೊಂಡಾಡುತ್ತಿದೆ ಎಂದು ಹೇಳಿವೆ. ಹೀಗೆ ಬೇರೆ ಶರಣರು ಇದರಲ್ಲಿ ಹೇಳಲ್ಪಡದೆ ಇರುವದು ಲಕ್ಷಿಸತಕ್ಕ ಸಂಗತಿಯಾಗಿದೆ. ಈ ರೀತಿಯಾಗಿ ಬಸವೇಶ್ವರನು ವರ್ಣಿಸಲ್ಪಡುವದು ಯೋಗ್ಯವಾದದ್ದಿತ್ತು. ಆದರೆ ಅವನಿಗೆ ಬೇರೊಂದು ವಿಶೇಷಣವು ಕೊಡಲ್ಪಟ್ಟಿದೆ. ಈ ಶಾಸನವನ್ನು ಬರೆದವನು ಈ ಶ್ಲೋಕದಲ್ಲಿ 'ಬಸವಯ್ಯ' ಈ ಹೆಸರು ಇದ್ದಲ್ಲಿ 'ದಾಸಿಮಯ್ಯ'ನೆಂತಲೂ 'ದಾಸಿಮಯ್ಯ' ಇದ್ದಲ್ಲಿ 'ಬಸವಯ್ಯ' ಎಂತಲೂ ಇಡಬಹುದಾಗಿತ್ತು. ಹೀಗೆ ಮಾಡಿದ್ದರೆ 'ಸಿರಿಯಾಳ್ವ ದಾಸಿಮಯ್ಯ'ನೆಂತಲೂ 'ಧರೆ ಕೊಂಡಾಡುವ ಬಸವಯ್ಯ' ಎಂತಲೂ ಆಗುತ್ತಿತ್ತು. ಇದು ಪ್ರಾಸಕ್ಕೂ ಅಲ್ಲದೆ ಉಭಯ ಮಹನೀಯರ ಚರಿತ್ರೆಗಳಿಗೂ ಸರಿಯಾಗಿ ಅನ್ವಯಿಸುತ್ತಿತ್ತು. ಯಾಕಂದರೆ ಶವನಿಧಿಯನ್ನು ಪಡೆದ ದಾಸಿಮ

ಯ್ಯನು ಸಿರಿಯಾಳ್ವ ಅಂದರೆ ಶ್ರೀಮಂತಿಕೆಯ ಒಡೆಯನೆಂತಲೂ ಅತ್ಯಂತ ಪ್ರಸಿದ್ಧನಾದ ಬಸವೇಶ್ವರನು ಧರೆ ಕೊಂಡಾಡುವಂಥವನಾಗಿದ್ದನೆಂತಲೂ ಅರ್ಥವು ಆಗುತ್ತಿತ್ತು. ಆದರೆ ಶಾಸನದ ಲೇಖಕನು ಹೀಗೆ ಮಾಡದೆ 'ಧರೆ ಕೊಂಡಾಡುವ' ಈ ಶಬ್ದಗಳನ್ನು ದೇವರದಾಸಿಮಯ್ಯನಿಗೆ ಹಚ್ಚಿರುವದರಿಂದ ಅವನು ಬಸವೇಶ್ವರನಕಿಂತಲೂ ಈ ಕಾಲದಲ್ಲಿ ಹೆಚ್ಚಿಗೆ ಪ್ರಸಿದ್ಧಿಯನ್ನು ಹೊಂದಿರಬಹುದೆಂಬ ಅನುಮಾನವು ಉಂಟಾಗುತ್ತದೆ.

ಬಿಜ್ಜಳನ ಶಿಲಾಶಾಸನಗಳು ಅನೇಕ ಸಿಕ್ಕಿದ್ದರೂ, ಅವುಗಳಲ್ಲಿ ಬಸವೇಶ್ವರನ ಉಲ್ಲೇಖವಿಲ್ಲ. ಇಂಥ ಕೆಲವು ಮಾತ್ರ ಇವೆ. ಬಸವೇಶ್ವರನು ಕಡೆಗೆ ರಾಜಧಾನಿಯನ್ನು ಬಿಟ್ಟು ಕೂಡಲಸಂಗಮಕ್ಕೆ ಹೋಗಬೇಕಾಯಿತು. ಇದರಿಂದ ಬಸವೇಶ್ವರನಿದ್ದ ಕಾಲದಲ್ಲಿ ಜನರು ಆದರಲ್ಲಿ ವಿಶೇಷವಾಗಿ ರಾಜಕೀಯ ಜನರು ಅವನನ್ನು ಮನ್ನಿಸದೆ ಇರುವದು ಸಂಭವವದೆ. ಅಲ್ಲದೆ ಧಾರ್ಮಿಕ ಮತ್ತು ಸಾಮಾಜಿಕ ಪುರುಷರು ಪ್ರಸಿದ್ಧಿಗೆ ಬರಲು ಕೆಲಕಾಲ ಹತ್ತುತ್ತದೆ. ಆರಂಭದಲ್ಲಿ ಅವರು ಹಿಂಸಿಸಲ್ಪಡುತ್ತಾರೆ. ಹೀಗೆಯೇ ಬಸವೇಶ್ವರನ ಸ್ಥಿತಿಯು ಆದದ್ದರಿಂದ ಅವನ ಉಲ್ಲೇಖಗಳು ಆರಂಭದ ಶಿಲಾಶಾಸನಗಳಲ್ಲಿ ಮಾಡಲ್ಪಟ್ಟಿರಲಿಕ್ಕಿಲ್ಲೆಂದು ತೋರುತ್ತದೆ.

ಶಿವಶರಣರು ತಮ್ಮ ವಚನಗಳಲ್ಲಿ ತಮ್ಮ ಸ್ವಂತದ ವಿಷಯವಾಗಿ ಯಾವಾಗಲೂ ಹೇಳಿಕೊಳ್ಳುವದಿಲ್ಲ. ಆದರೆ ಅಕಸ್ಮಾತ್ತಾಗಿ ಅವರ ಬಾಯಿಂದ ಅವು ಹೊರಡುವದುಂಟು. ಅಂಥ ಸಮಯದಲ್ಲಿ ಅವರು ಒಂದೆರಡು ಶಬ್ದಗಳನ್ನು ಮಾತ್ರ ತಮ್ಮ ವಚನಗಳಲ್ಲಿ ಹಾಕುವದುಂಟು. ಹೀಗೆ ಮಾಡಿದ ಉಲ್ಲೇಖಗಳಲ್ಲಿ ಸತ್ಯತೆಯು ಇರುತ್ತದೆಂದು ತಿಳಿಯಲು ಏನೂ ಅಡ್ಡಿ ಇರುವದಿಲ್ಲ. ದೇವರದಾಸಿಮಯ್ಯನು ತನ್ನನ್ನು ಕುರಿತು ಉಲ್ಲೇಖಿಸಿದ ಒಂದು ವಚನವು ಕೆಳಗಿನಂತೆ ಇದೆ.

"ದಾಸನ ಕುಲವಾದಾತ ಈಶಂಗಲ್ಲದೆ ಶರಣೆನ್ನ. ಆಸೆ ಮಾಡ ನೋಡಾ. ಅನ್ಯದೈವಂಗಳಿಗೆ ದೇಶದ ಪಿಶಾಚಿಗಳಿಗೆ ಆಸೆ ಮಾಡ ನೋಡಾ. ಆಸೆ ಮಾಡಿದನಾದಡೆ ಅವ ದಾಸನ ಕುಲವಲ್ಲ. ಅವನನ್ಯ ಕುಲ ಕಾಣಾ ರಾಮನಾಥಾ"

ಈ ವಚನದಲ್ಲಿ 'ದಾಸನ ಕುಲ' ಎಂಬದು ಎರಡು ಸಲ ಬಂದಿರುತ್ತದೆ. 'ದಾಸನ ಕುಲ' ಎಂಬ ಶಬ್ದದಿಂದ ದೇವರದಾಸಿಮಯ್ಯನು ತನ್ನ ನೇಕಾರರ ಜಾತಿಯನ್ನು ಅನುಲಕ್ಷಿಸಿ ನುಡಿದಿಲ್ಲೆಂಬದು ಸ್ಪಷ್ಟವಿರುತ್ತದೆ. ಇಲ್ಲಿ 'ಕುಲ' ಎಂದರೆ ಜನ ಸಮೂಹ, ಅಥವಾ ಅನುಯಾಯಿಗಳು ಅಥವಾ ಶಿಷ್ಯರು ಎಂಬ ಅರ್ಥವನ್ನು ಇಟ್ಟುಕೊಂಡು ಅವನು ಈ ಶಬ್ದ ಪ್ರಯೋಗವನ್ನು ಮಾಡಿದ್ದಾನೆ. ಯಾವ ಶಿವಶರಣನು ಶಿವಾನುಭವದಲ್ಲಿದ್ದುಕೊಂಡು ತನ್ನ ಪೂರ್ತಿ ಆಚರಿಸುತ್ತ ಬಂದಿರುವನೋ ಅವನು ತನ್ನನ್ನು ಕುರಿತು ತಾನು ಅನೇಕ ಅನುಯಾಯಿಗಳುಳ್ಳವನು ಅಥವಾ ತನಗೆ ಅನೇಕ ಶಿಷ್ಯರಿದ್ದಾರೆ ಎಂದು ಸತ್ಯವಲ್ಲದುದನ್ನು ಡಾಂಭಿಕತನದಿಂದ ಹೇಳುವ ಸಂಭವವಿಲ್ಲ. ದೇವರದಾಸಿಮಯ್ಯನು ನಡೆಸಿದ ಕ್ರಾಂತಿಕಾರಕ ಚಳವಳಿಯ ಮೂಲಕ ಬಹುಜನರು ಅವನ ಶಿಷ್ಯತ್ವವನ್ನು ಸ್ವೀಕರಿಸಿದ್ದರಿಂದಲೇ ಅವನು ಅವರನ್ನುದ್ದೇಶಿಸಿ ಹೀಗೆ ನುಡಿದಿರಬಹುದೆಂದು ತೋರುತ್ತದೆ. ಅಂಥವರದೊಂದು ವರ್ಗವೇ ಈ ಕಾಲಕ್ಕೆ ಆಗಿರಬಹುದು.

ಆದ್ದರಿಂದ ನಾವು ಮೇಲೆ ವಿವರಿಸಿದ ಸಂಗತಿಗಳು ಅಂದರೆ ದಾಸಿಮಯ್ಯನ ಮೂಲಕ ನಾಡಿನಲ್ಲಿ ಅನೇಕ ಶಿವಶರಣರು ಬಸವೇಶ್ವರನ ಕಾಲದ ವರೆಗೂ ಕಾಲಕಾಲಕ್ಕೆ ಆಗುತ್ತಬಂದರು, ಅವರಲ್ಲಿ ಬಹುಜನರು ದೇವರದಾಸಿಮಯ್ಯನ ಶಿಷ್ಯರಾಗಿದ್ದರು, ಆದ್ದರಿಂದ ಅವರು ಅವನ ಮುದ್ರಿಕೆಯನ್ನೇ ತಮ್ಮ ಮುದ್ರಿಕೆಗಳಲ್ಲಿ ಸೇರಿಸಿಕೊಂಡು ಅವನಂತೆ ವಚನಗಳನ್ನು ರಚಿಸುತ್ತಬಂದರು, ಇದರಿಂದ ದಾಸಿಮಯ್ಯನು ಜನರಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದನು, ಅವನ ಪ್ರಸಿದ್ಧಿಯು ಈಗಿನ ಮೈಸೂರ ಪ್ರಾಂತದ ಮಧ್ಯದ ವರೆಗೂ ಪಸರಿಸಿತ್ತು, ಇಷ್ಟೇ ಅಲ್ಲ, ಅವನು ಒಂದು ಕಾಲದಲ್ಲಿ ಬಸವೇಶ್ವರನಕಿಂತಲೂ ಹೆಚ್ಚಿಗೆ ಮನ್ನಣೆಯನ್ನು ಜನರಲ್ಲಿ ಪಡೆದಿದ್ದನು, ಎಂಬಿವೆಲ್ಲವು ಮೇಲೆ ನಾವು ಕೊಟ್ಟ ಅನೇಕ ಆಧಾರಗಳ ಮೇಲಿಂದ ಸಿದ್ಧವಾಗುತ್ತವೆ.

ಬಸವೇಶ್ವರನ ತರುವಾಯ ಈ ವರೆಗೆ ಆಗಿ ಹೋದ ಗ್ರಂಥಕಾರರೆಲ್ಲರೂ ಶರಣರ ಚರಿತ್ರೆಗಳನ್ನು ವಿವರಿಸುವ ಸಂದರ್ಭದಲ್ಲಿ ದೇವರ ದಾಸಿಮಯ್ಯನನ್ನು ಉಲ್ಲೇಖಿಸದೆ ಅವರು ಬಿಟ್ಟಿರುವದಿಲ್ಲ. ಸ್ಥಳಸಂಕೋ

ಚದ ಮೂಲಕ ಆ ಉಲ್ಲೇಖಗಳನ್ನೆಲ್ಲ ನಾವು ಇಲ್ಲಿ ಕೊಟ್ಟಿರುವದಿಲ್ಲ. ಆದರೆ ಎಲ್ಲಕ್ಕೂ ಹಿಂದಿನ ಕವಿಯಾದ ಹರಿಹರನು ಅವನ ವಿಷಯವಾಗಿ ಹೇಗೆ ಉಲ್ಲೇಖ ಮಾಡಿದ್ದಾನೆಂಬುದನ್ನು ವಾಚಕರು ಅರಿಯುವದು ಅವಶ್ಯವಿರುವದರಿಂದ ಅವನ ಉಲ್ಲೇಖಗಳನ್ನು ಮಾತ್ರ ನಾವು ಎತ್ತಿ ಕೆಳಗೆ ಕಾಣಿಸಿದ್ದೇವೆ.

ಹರಿಹರನು ಪಂಪಾಶತಕವೆಂಬ ಕಾವ್ಯವನ್ನು ಬರೆದದ್ದು ಅದರ ೭೭ನೇ ಶ್ಲೋಕದಲ್ಲಿ ಅವನು ಉಲ್ಲೇಖಿಸಿದ್ದು ಹೇಗೆಂದರೆ—

"ಬಿಡು ಮಾಣ್ಮಾಣೆಲೆ ಬೊಮ್ಮವಾದಿ ಸಟೆಯಂ ನೀಂ ನಂಬಿಗೋ ಎನ್ನನೆ। ವೃಡನಂದಾಡನೆ ನಮ್ಮ ಗೂಡಯ್ಯನ ಮುಂದಾ ದಾಸಿಮಯ್ಯಂ ಉಡ॥ ಲ್ಕುಡನೆ ಸೀರೆಯ ನುಣ್ಣನೆ ಸಿರಿಯನಾಳ್ವಂ ಪೇಳೆ ಕೈಲಾಸಮಂ। ಕುಡನೆ ಸೀರೆಯನೆಮ್ಮ ನಂಬಿಗೆ ವಿರೂಪಾಕ್ಷಂ ಲಲಾಟೇಕ್ಷಣಂ ॥

ಇದೇ ಕವಿಯು ತನ್ನ ಇನ್ನೊಂದು ಕಾವ್ಯವಾದ ಲಿಂಗಾರ್ಚನೆಯ ರಗಳೆ ಇದರಲ್ಲಿ ದಾಸಿಮಯ್ಯ ಮತ್ತು ಅವನ ಹೆಂಡತಿ ದುಗ್ಗಳವ್ವೆ ಈ ಉಭಯತರನ್ನೂ ಅವನು ಸ್ತುತಿಸಿದ್ದಾನೆ. ಅದು ಹೇಗೆಂದರೆ—

ಕೇಶಿರಾಜನ ದುಗ್ಗಳವ್ವೆ ದಾಸಿಮಯ್ಯನಂ ।
ಭಾಷೆಗೀಶನ ತಂದ ಮಿಸುಪಾದಿಮಯ್ಯನಂ ।

ಎಂದು ಇರುತ್ತದೆ. ಹರಿಹರ ಕವಿಯು ೧೨ನೇ ಶತಮಾನದ ಅಂತ್ಯ ಭಾಗದಲ್ಲಿದ್ದ ಮಹಾಕವಿಯಾಗಿದ್ದಾನೆ.

ಇನ್ನು ಮುಂದೆ ದೇವರದಾಸಿಮಯ್ಯನ ಕಾಲವನ್ನು ಕುರಿತು ವಿವೇಚಿಸುತ್ತೇವೆ. ಅವನು ಬಸವೇಶ್ವರನಕಿಂತಲೂ ಮೊದಲಿನವನಿರುತ್ತಾನೆಂಬದು ಸ್ಪಷ್ಟವಿರುತ್ತದೆ. ಚಾಲುಕ್ಯ ಜಯಸಿಂಹ ರಾಜನು ೧೦೦೮ರಿಂದ ೧೦೪೦ರ ವರೆಗೆ ಆಳಿದ್ದು, ಇವನ ಕಾಲದಲ್ಲಿಯೇ ದಾಸಿಮಯ್ಯನು ಪ್ರಸಿದ್ಧಿಗೆ ಬಂದನೆಂದು ಊಹಿಸಲು ಯಾವ ಪ್ರತ್ಯವಾಯವೂ ಇರುವದಿಲ್ಲ. ಈ ರಾಜನು ೧೦೩೩ರಿಂದ–೪೦ರ ವರೆಗೆ ಹೊಟ್ಟಲಕೆರೆಯಲ್ಲಿ ರಾಜ್ಯವಾಳಿದನೆಂಬುದು ಅನೇಕ ಶಿಲಾಶಾಸನಗಳಿಂದ ತಿಳಿದು ಬರುತ್ತದೆ. ಹೊಟ್ಟಲಕೆರೆ ಎಂಬ ಹೆಸರಿನ ರಾಜಧಾನಿಯು ಇವನ ಹೊರ್ತು ಬೇರೆ ಯಾವ ರಾಜನದೂ ಇದ್ದದ್ದು ಕರ್ನಾಟಕ

ಇತಿಹಾಸದಲ್ಲಿ ಎಲ್ಲಿಯೂ ದೊರೆಯುವದಿಲ್ಲ. ಆದುದರಿಂದ ದೇವರದಾಸಿಮಯ್ಯನು ಈ ರಾಜನ ಆಸ್ಥಾನದಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದು ಇವನ ಕಾಲಕ್ಕೆ ಅಂದರೆ ಬಸವೇಶ್ವರನಕಿಂತಲೂ ೧೫೦ ವರ್ಷಗಳ ಮೊದಲು ಎಂದು ಸಿದ್ಧವಾಗುತ್ತವೆ.

ವೀರಶೈವ ಪುರಾಣಗಳಲ್ಲಿ ಸುಗ್ಗಲೆಯ ಗಂಡನಾದ ಜಯಸಿಂಹ ರಾಜನು ದೇಸಿಂಗ ಬಲ್ಲಾಳನೆಂದು ಕರೆಯಲ್ಪಟ್ಟಿದ್ದಾನೆ. ತಪ್ಪು ಗ್ರಹಿಕೆಯ ಮೂಲಕ ಮತ್ತು ಇತಿಹಾಸ ಸಂಶೋಧನದ ಅಭಾವದ ಮೂಲಕ ಈ ಗ್ರಂಥಕಾರರಲ್ಲಿ ಈ ತಪ್ಪು ಆಗಿರುತ್ತದೆ. ದೇಸಿಂಗ ಎಂಬ ಹೆಸರುಳ್ಳ ರಾಜನು ಕರ್ನಾಟಕದಲ್ಲಿ ಆಗಿಹೋಗಿರುವ ಯಾವ ವಂಶದಲ್ಲಿಯೂ ಕಾಣುವದಿಲ್ಲ. ದೇಸಿಂಗ ಇದು ಜಯಸಿಂಹ ಇದರ ವಿಕೃತ ರೂಪವಾಗಿದೆ. ಶಿಲಾಶಾಸನಗಳಲ್ಲೆಲ್ಲ ಜಯಸಿಂಹ ಮತ್ತು ಅವನ ಹೆಂಡತಿ ಸುಗ್ಗಲೆ ಎಂಬ ಹೆಸರುಗಳು ಲಿಖಿಸಲ್ಪಟ್ಟಿವೆ. ದೇವರದಾಸಿಮಯ್ಯನ ಪುರಾಣ ಕರ್ತನಾದ ವಿರೂಪಾಕ್ಷ ಕವಿಯು ಕೆಲವು ಕಡೆಗೆ ದೇಸಿಂಗ ಬಲ್ಲಾಳನೆನ್ನದೆ ಜಯಸಿಂಹನೆಂತಲೇ ಅವನನ್ನು ಕರೆದಿದ್ದಾನೆ. ಈ ಕಾವ್ಯವು ಒಂದು ಸಂಸ್ಕೃತ ಗ್ರಂಥದ ಭಾಷಾಂತರವಾಗಿರುವದರಿಂದ ಮೂಲದಲ್ಲಿ ಜಯಸಿಂಹನೆಂತಲೇ ಈ ಹೆಸರು ಇರಬಹುದು. ಮೂಲ ಸಂಸ್ಕೃತ ಗ್ರಂಥ ಇನ್ನೂ ಉಪಲಬ್ಧವಾಗಿರುವದಿಲ್ಲ.

ಬಸವೇಶ್ವರನು ತನ್ನ ವಚನಗಳಲ್ಲಿ ದಾಸಿಮಯ್ಯನನ್ನು ಅನೇಕ ಬಾರಿ ಕೊಂಡಾಡಿದ್ದಾನೆ. ಇಂಥ ವಚನಗಳನ್ನು ನಾವು ಹಿಂದೆ ಉದಹರಿಸಿದ್ದೇವೆ. ಬಸವೇಶ್ವರನಕಿಂತಲೂ ಮೊದಲು ದಾಸಿಮಯ್ಯನಿದ್ದನೆಂಬುದು ಸ್ಪಷ್ಟವು. ಆದರೆ ದಾಸಿಮಯ್ಯನು ತನ್ನ ವಚನಗಳಲ್ಲಿ ಬಸವೇಶ್ವರನನ್ನು ಎಲ್ಲಿಯೂ ಉಲ್ಲೇಖಿಸಿರುವದಿಲ್ಲೆಂಬುದನ್ನು ನಾವು ಲಕ್ಷಿಸತಕ್ಕದ್ದು.

ತಮಿಳು ದೇಶದಲ್ಲಿ ಪುರಾತನರೆಂಬ ಹೆಸರಿನ ಶಿವಭಕ್ತರಾಗಿ ಹೋಗಿದ್ದಾರೆ. ಇವರ ವಿಷಯವಾಗಿ ಚೋಳ ರಾಜನು 'ಪಿರಿಯ ಪುರಾಣವೆಂಬ ಗ್ರಂಥವನ್ನು ಬರೆಯಿಸಿದ ಬಳಿಕ ಅವರ ಹೆಸರುಗಳು ನಾಡಿನಲ್ಲೆಲ್ಲ ಪ್ರಸಿದ್ಧವಾದವು. ಈ ಪುರಾತನರನ್ನು ಬಸವೇಶ್ವರನು ತನ್ನ ವಚನಗಳಲ್ಲಿ ಆಗಿಂದಾಗ್ಗೆ ಸ್ಮರಿಸುತ್ತಾನೆ. ಆದರೆ ದೇವರ ದಾಸಿಮಯ್ಯನು ಇವರನ್ನು ತನ್ನ ವಚನಗಳಲ್ಲಿ ಎಷ್ಟು ಮಾತ್ರವೂ

ಉಲ್ಲೇಖಿಸುವದಿಲ್ಲ. ಇದರಿಂದ ಅವನು ಈ ಕಾಲಕ್ಕಿಂತಲೂ ಮೊದಲು ಆಗಿಹೋಗಿರಬಹುದೆಂದು ತೋರುತ್ತದೆ. ದಾಸಿಮಯ್ಯನು ಬಸವೇಶ್ವರನಕಿಂತಲೂ ಹಿಂದಿನವನೆಂಬುದಕ್ಕೆ ಕೆಲವು ಶಿಲಾಶಾಸನಗಳ ಆಧಾರಗಳೂ ನಮಗೆ ಉಪಲಬ್ಧವಾಗಿರುತ್ತವೆ. ಅವು ಕೆಳಗೆ ವಿವರಿಸಲ್ಪಟ್ಟಿರುತ್ತವೆ.

ಬಸವೇಶ್ವರನು ಕ್ರಿ. ಶ. ೧೧೩೨ರಲ್ಲಿ ಜನಿಸಿ ೧೧೬೮ರ ವರೆಗೆ ಇದ್ದನೆಂದು ಸದ್ಯಕ್ಕೆ ತಿಳಿಯಲ್ಪಟ್ಟಿದೆ. ಇದು ನಂಬಲರ್ಹವಾದುದೆಂದು ನಮಗೆ ತೋರುತ್ತದೆ. ಮುದನೂರಿಂದ ೩೦ ಮೈಲು ದೂರವಿರುವ ಗೊಬ್ಬೂರು ಗ್ರಾಮದಲ್ಲಿರುವ ಕೊರವರ ಬಾವಿಯ ಥರಕ್ಕೆ ಹಾಕಿದ ಕಲ್ಲುಗಳಲ್ಲಿ ಒಂದು ಶಿಲಾಶಾಸನವಿದ್ದು ಅದರ ಅಚ್ಚಿನ ಪ್ರತಿಯು ಲಂಡನ್ನ ಏಶಿಯಾಟಿಕ ಸೊಸಾಯುಟಿಯಲ್ಲಿದೆ. ಅದನ್ನು ಡಾ॥ ಎಸ್. ಸಿ. ನಂದೀಮಠ, ಎಮ್. ಏ. ಪಿ. ಎಚ್. ಡಿ. ಇವರು ಕಂಡುಹಿಡಿದು ಅದರಲ್ಲಿದ್ದ ವಿಷಯಗಳನ್ನು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಿಸಿದ್ದಾರೆ. ಅದು ಹೇಗೆಂದರೆ—

"ಪಿರಿಯ ಗೊಬ್ಬೂರಶೇಷ - ಮಹಾಜನಂಗಳ ದಿವ್ಯ ಶ್ರೀಪಾದ ಪದ್ಮಾರಾಧಕರು ಶ್ರೀರಾಮೇಶ್ವರ ದೇವರ ಗಂಧವಾರಣಜಾಡ ಕುಲತಿಲಕ ಜಾಡರ ದಾಸಿಮಯ್ಯ ಪ್ರಿಯ ಪುತ್ರರುಮಪ್ಪ ಸಕಲ ಜಾಡ ಗೊತ್ತಳಿಗಳ ಕುಲದೇವ ದೇವನಪ್ಪ ಗೊಜ್ಜೇಶ್ವರ ದೇವರ ಪೂಜೆ......" ಎಂದು ಮೊದಲಾಗಿ ಇದರಲ್ಲಿ ಇದೆ.

ಇದರ ವರ್ಷವು ಶಿಲಾಶಾಸನದಲ್ಲಿ ಹೇಳಿರುವುದು ಹೇಗೆಂದರೆ— "ಜಗದೇಕಮಲ್ಲ ದೇವ ವರುಷದ ೧೧ನೆಯ ವಿಭವ ಸಂವತ್ಸರ ಶ್ರಾವಣ ಶುದ್ಧ ಏಳು ಮಂದವಾರ" ಎಂದು ಇರುತ್ತದೆ. ಇದು ಕ್ರಿ. ಶ. ೧೧೪೮ ಜುಲೈ ತಾರೀಖು ೨೪ ಶನಿವಾರವಾಗುತ್ತದೆ. ಈ ವರ್ಷ ಬಸವೇಶ್ವರನ ವಯಸ್ಸು ೧೬ ಮಾತ್ರ ಇದ್ದಿತು. ಆದ್ದರಿಂದ ದೇವರದಾಸಿಮಯ್ಯನು ಈ ಕಾಲದಲ್ಲಿ ಇಷ್ಟು ಪ್ರಸಿದ್ಧಿಗೆ ಬರಬೇಕಾದರೆ ಇದಕ್ಕೂ ಬಹಳ ದಿವಸಗಳ ಮುಂಚೆಯೇ ಜೀವಿಸಿರಬೇಕು. ಇದರಿಂದ ಅವನು ಜಯಸಿಂಹನ ಕಾಲಕ್ಕೆ ೧೧ನೇ ಶತಮಾನದ ಮಧ್ಯಭಾಗದಲ್ಲಿ ಇರಬಹುದೆಂಬ ಊಹೆಯು ದೃಢಪಡುತ್ತದೆ.

ಇನ್ನೊಂದು ಶಾಸನವು ಕ್ರಿ. ಶ. ೧೧೬೭ ಜುಲೈ ೧೦ನೇ ತಾರೀಖು ಸೋಮವಾರ ಈ ಕಾಲದ್ದಿರುತ್ತದೆ. ಅದು ಈಗ ಚಿಕ್ಕ ಮುದೇನೂರ

ಲ್ಲಿಯ ಗೋಪಾಲಸ್ವಾಮಿ ದೇವಾಲಯದ ಮಧ್ಯರಂಗದ ೩ನೇ ಕಂಭದ ಮೇಲೆ ಇದೆ. ಅದರಲ್ಲಿ "ಶ್ರೀಮತು ಕಳಚುರಿಯ ಭುಜಬಲ ಚಕ್ರವರ್ತಿ ತ್ರಿಭುವನಮಲ್ಲ ವರುಷದ ೧೨ನೇ ಸರ್ವಜಿತು ಸಂವತ್ಸರದ ಆಷಾಢ ಬಹುಳ ೭ ಸೋಮವಾರ ಪುಷ್ಯ ನಕ್ಷತ್ರ ವ್ಯತಿಪಾತ" ಎಂದಿದ್ದು ಈ ಅರಸನ ಬಗ್ಗೆ ಹೇಳಿದ ಈ ಬಿರುದು ಬಿಜ್ಜಳರಾಯನದಿರುತ್ತದೆ. ಈ ಶಾಸನದಲ್ಲಿ ವಿವರಿಸಿರುವದೇನೆಂದರೆ, "ಪವಿತ್ರ ಗುಣಾನುರಾಗರಪ್ಪ ಶ್ರೀಮತ್ ಸರ್ವ ನಮಸ್ಯದಗ್ರಹಾರಂ ದಕ್ಷಿಣವಾರಣಾಸಿ ಮುದೆನೂರ ದಾಸಯ್ಯಗಳ.. ...ಪ್ರಮುಖ ಅನೇಕ ಮಹಾಜನಂಗಳು" ಎಂದಿದೆ. ಈ ಶಾಸನದ ತರುವಾಯ ಒಂದು ವರ್ಷದಲ್ಲಿಯೇ ಬಸವೇಶ್ವರನು ಕಲ್ಯಾಣಪಟ್ಟಣವನ್ನು ಬಿಟ್ಟುಕೊಟ್ಟು ಕೂಡಲಸಂಗಮಕ್ಕೆ ಬಂದು ಅಲ್ಲಿಯೇ ಐಕ್ಯವಾದನು. ಈ ಕಾಲದಲ್ಲಿದ್ದ ಈ ಶಿಲಾಶಾಸನದಲ್ಲಿ ಮುದನೂರು ಇದು 'ದಕ್ಷಿಣ ವಾರಣಾಸಿ' ಎಂದು ಹೇಳಲ್ಪಟ್ಟಿದೆ. ಇದು ದಾಸಿಮಯ್ಯನ ಧರ್ಮೋದ್ಧಾರ ಕಾರ್ಯಗಳ ಪರಿಣಾಮವಾಗಿರಬಹುದು. ಇಂಥ ಹೆಸರು ಇದಕ್ಕೆ ಪ್ರಾಪ್ತವಾಗಬೇಕಾದರೆ ದಾಸಿಮಯ್ಯನು ಇದಕ್ಕೂ ಮೊದಲು ಬಹಳ ವರ್ಷಗಳ ಹಿಂದೆಯೇ ಪ್ರಸಿದ್ಧಿಗೆ ಬಂದಿರಬೇಕು.

ಒಟ್ಟಿಗೆ ಈ ಎರಡು ಶಿಲಾಶಾಸನಗಳಿಂದ ದೇವರ ದಾಸಿಮಯ್ಯನು ಬಸವೇಶ್ವರನಕಿಂತಲೂ ಮೊದಲಿಗೆಯೇ ಪ್ರಸಿದ್ಧಿಗೆ ಬಂದಿರಬಹುದೆಂಬ ಅನುಮಾನವು ದೃಢಪಡುತ್ತದೆ.

ಕರ್ನಾಟಕದಲ್ಲಿ ವೀರಶೈವ ಧರ್ಮಪ್ರಸಾರವು ಕಾಲಕಾಲಕ್ಕೆ ಅನೇಕ ಮಹನೀಯರಿಂದ ಜರಗುತ್ತ ಬಂದಿರುತ್ತದೆ. ಒಂದೊಂದು ಕಾಲದಲ್ಲಿ ಕೆಲವೊಂದು ಪ್ರದೇಶದಲ್ಲಿ ಬಹುಜನ ಪ್ರವರ್ತಕರು ಉಗಮ ಹೊಂದಿ ಧರ್ಮಪ್ರಸಾರದ ಕಾರ್ಯಗಳನ್ನು ಮಾಡಿದ್ದಾರೆ. ಇಂಥ ಪ್ರದೇಶವನ್ನು ನಾವು ಕೇಂದ್ರವೆಂದು ಕರೆಯಬಹುದು. ಇಂಥ ಕೇಂದ್ರಗಳ ಸ್ಥಾನಗಳನ್ನು ಸಂಶೋಧಿಸಲು ಅವುಗಳ ಸಂಖ್ಯೆಯು ಹೋದ ಒಂದು ಸಾವಿರ ವರುಷಗಳಲ್ಲಿ ಕರ್ನಾಟಕದಲ್ಲಿ ಒಂಬತ್ತು ಆಗಿದ್ದು ಅವುಗಳನ್ನು ನಾವು ಇಲ್ಲಿ ಸಂಕ್ಷಿಪ್ತವಾಗಿ ವಿವರಿಸುತ್ತೇವೆ. ಅವುಗಳಲ್ಲಿ ಮೊದಲನೆಯದು ಶ್ರೀಶೈಲ ಕೇಂದ್ರವಾಗಿತ್ತೆಂದು ನಮಗೆ ತೋರುತ್ತದೆ.

# ಶ್ರೀಶೈಲ ಕೇಂದ್ರ.

ಕೆಲವರು ವೀರಶೈವ ಧರ್ಮದ ಮೂಲ ಸ್ಥಾಪಕನು ಬಸವೇಶ್ವರನೇ ಇದ್ದಾನೆಂದು ಭಾವಿಸಿರುತ್ತಾರೆ. ಆದರೆ ದೇವರ ದಾಸಿಮಯ್ಯನ ಚರಿತ್ರೆಯಿಂದ ಇದು ನಿಜವಾದುದಲ್ಲವೆಂದು ತಿಳಿದುಬರುತ್ತದೆ. ದಾಸಿಮಯ್ಯನು ತನ್ನ ವೀರಶೈವ ದೀಕ್ಷೆಯನ್ನು ಶ್ರೀಶೈಲ ಮಲ್ಲಿಕಾರ್ಜುನನ ಸನ್ನಿಧಿಯಲ್ಲಿ ಹೊಂದಿದನೆಂದು ಅವನ ಎಲ್ಲ ಚರಿತ್ರೆಗಳಲ್ಲಿ ಹೇಳಲ್ಪಟ್ಟಿರುವದರಿಂದ ಈ ಸ್ಥಾನವೇ ವೀರಶೈವ ಧರ್ಮದ ಮೊದಲನೆಯ ಕೇಂದವಾಗಿತ್ತೆಂಬ ಅನುಮಾನವು ಉಂಟಾಗುತ್ತದೆ. ಇಲ್ಲಿ ಪುರಾತನ ಕಾಲದಲ್ಲಿ ಒಂದು ದೊಡ್ಡ ಪಟ್ಟಣವಿತ್ತೆಂದು ಅಲ್ಲಿಯ ಶಿಲಾಶಾಸನಗಳಿಂದ ತಿಳಿಯುತ್ತಿದೆ. ಈ ಸ್ಥಾನವು ಅತ್ಯಂತ ಪ್ರಾಚೀನ ಕಾಲದಿಂದಲೂ ಪ್ರಸಿದ್ಧಿಯನ್ನು ಹೊಂದಿರುತ್ತದೆ. ಬಸವೇಶ್ವರನ ಕಾಲದಲ್ಲಿ ಆಗಿಹೋದ ಸಿದ್ಧರಾಮೇಶ್ವರ, ಮಹದೇವಿಯಕ್ಕ, ಸಕಳೇಶ ಮಾದರಸ, ಅಲ್ಲಮಪ್ರಭು, ಶಿವಯೋಗಿ ಮಲ್ಲರಸ, ಗೋರಕ್ಷ, ಈ ಮೊದಲಾದವರ ಚರಿತ್ರೆಗಳನ್ನು ಪರಿಶೀಲಿಸಿದಲ್ಲಿ ಇವರೆಲ್ಲರೂ ಕೆಲವುಟ್ಟಿಗಾದರೂ ಶ್ರೀಶೈಲ ಮಲ್ಲಿಕಾರ್ಜುನನಿಗೆ ಸಂಬಂಧ ಪಟ್ಟವರೆಂಬ ಅಂಶವು ಹೊರಪಡುತ್ತದೆ. ಆದ್ದರಿಂದ ಇಲ್ಲಿಯೇ ವೀರಶೈವ ಧರ್ಮಪ್ರವಾಹವು ಮೊದಲು ಉಗಮ ಹೊಂದಿ ಅಲ್ಲಿಂದ ಅದು ಎಲ್ಲ ಕಡೆಗೂ ಪಸರಿಸಿದ ಹಾಗೆ ತೋರುತ್ತದೆ.

ಈ ಪ್ರವಾಹವು ಪಶ್ಚಿಮಕ್ಕೆ ಕನ್ನಡನಾಡಿನ ಕಡೆಗೆ ಹರಿಯಲಾಗಿ ಅಲ್ಲಿ ಅನೇಕ ಶಿವಶರಣರು ಉದ್ಭವಿಸಿದರು. ಹಾಗೆಯೇ ಇನ್ನೊಂದು ಪ್ರವಾಹವು ಪೂರ್ವದಿಶೆಗೆ ಅಂದರೆ ಆಂಧ್ರ ದೇಶದ ಕಡೆಗೆ ಹೊರಳಲು ಅದು 'ವಿಜಯವಾಟಿಕಾ' ಎಂದರೆ ಬಿಜವಾಡ ಮತ್ತು ಅದರ ಸುತ್ತಲಿನ ಪ್ರದೇಶದಲ್ಲಿ ನೆಲೆಯೂರಿತು. ಈ ಕಡೆಗೆ ಮಲ್ಲಿಕಾರ್ಜುನ ಪಂಡಿತಾರಾಧ್ಯ, ಶ್ರೀಪತಿ ಪಂಡಿತಾರಾಧ್ಯ ಮೊದಲಾದ ಮಹಾನುಭಾವರು ಉದ್ಭವಿಸಿದರು.

ಈ ಯಾವತ್ತರೂ ಬಸವೇಶ್ವರನಕಿಂತಲೂ ಮೊದಲಿನವರು, ಪುರಾತನ ಕಾಲದವರು. ಆದ್ದರಿಂದ ಶ್ರೀಶೈಲವೇ ವೀರಶೈವ ಧರ್ಮಕ್ಕೆ ಪ್ರಥಮ ಕೇಂದ್ರವಾಗಿರಬೇಕು.

## ಕೊಲ್ಲಿಪಾಕಿ-ಪೊಟ್ಟಲಕೆರೆ ಕೇಂದ್ರ.

ಶ್ರೀಶೈಲದ ತರುವಾಯ ಕೊಲ್ಲಿಪಾಕಿ ಮತ್ತು ಪೊಟ್ಟಲಕೆರೆ ಈ ಪಟ್ಟಣಗಳಿದ್ದ ಪ್ರದೇಶವು ವೀರಶೈವ ಧರ್ಮಕ್ಕೆ ಎರಡನೆಯ ಕೇಂದ್ರ ಸ್ಥಾನವಾಗಿ ಪರಿಣಮಿಸಿರಬೇಕೆಂದು ತೋರುತ್ತದೆ. ಇಲ್ಲಿ ಬಹುಜನ ವೀರಶೈವ ಶಿವಶರಣರು ಆಗಿಹೋಗಿರುತ್ತಾರೆ. ಆದರೆ ಈ ಭಾಗವು ಇನ್ನೂ ಪೂರ್ಣವಾಗಿ ಸಂಶೋಧಿಸಲ್ಪಟ್ಟಿಲ್ಲ. ಒಂದುವೇಳೆ ಸಂಶೋಧಿಸಿದಲ್ಲಿ ವೀರಶೈವ ಧರ್ಮ, ವಚನವಾಙ್ಮಯ ಇವುಗಳ ಮೂಲ ಸ್ವರೂಪವನ್ನು ಇಲ್ಲಿ ಕಂಡುಹಿಡಿಯುವದು ಶಕ್ಯವೆಂದು ತೋರುತ್ತದೆ. ಪಾಲ್ಕುರಿಕೆಯು ಇದೇ ಭಾಗದಲ್ಲಿ ಇದ್ದು, ಇಲ್ಲಿ ಮಲ್ಲಿನಾಥರಾಧ್ಯ, ಸೋಮಾರಾಧ್ಯ ಮೊದಲಾದ ಪೂರ್ವಕಾಲದ ಶಿವಶರಣರು ತಮ್ಮ ಉದ್ಗ್ರಂಥಗಳನ್ನೂ ಪುರಾಣಗಳನ್ನೂ ಬರೆದಿರುವರು. ಪೊಟ್ಟಲಕೆರೆಯಲ್ಲಿ ಮಹಾ ಕವಿಯಾದ ಬ್ರಹ್ಮಶಿವನು ೧೧೫೦ರಲ್ಲಿ ಇದ್ದನು. ಇವನು ಮೊದಲು ಜೈನನು. ಮುಂದೆ ವೀರಶೈವನಾದನು. ಆ ಮೇಲೆ ಅವನಿಗೆ ಅದು ಬೇಸರಾಗಿ ಪುನಃ ಜೈನನಾದನು. ಪೊಟ್ಟಲಕೆರೆಯಲ್ಲಿ ದೇವರದಾಸಿಮಯ್ಯನು ಸ್ಥಾಪಿಸಿದ್ದ ಉತ್ತರನಾಥ ದೇವಾಲಯವು ಈಗಲೂ ಅಲ್ಲಿ ಉಂಟು. ಅದರ ಈಗಿನ ಹೆಸರು 'ನಾಗಲಿಂಗೇಶ್ವರ' ಎಂದಿದೆ. ಈ ಎಲ್ಲ ಸಂಗತಿಗಳಿಂದ ಶ್ರೀಶೈಲ ಕೇಂದ್ರದ ತರುವಾಯ ಕೊಲ್ಲಿಪಾಕಿ-ಪೊಟ್ಟಲಕೆರೆ ಕೇಂದ್ರವೇ ಪ್ರಸಿದ್ಧಿಗೆ ಬಂದಿರಬಹುದೆಂದು ಊಹಿಸಲು ಬಲವಾದ ಕಾರಣಗಳಿವೆ.

## ಮುದನೂರು ಕೇಂದ್ರ.

ದೇವರದಾಸಿಮಯ್ಯನು ಪೊಟ್ಟಲಕೆರೆಯಲ್ಲಿ ಪ್ರಸಿದ್ಧನಾಗಿ ಅಲ್ಲಿಂದ ಪಶ್ಚಿಮ ಉತ್ತರಕರ್ನಾಟಕಕ್ಕೆ ಬಂದು ಇಲ್ಲಿ ವೀರಶೈವ ಮತವನ್ನು ಬಹಳವಾಗಿ ಪ್ರಸಾರಗೊಳಿಸಿದನೆಂದು ಅವನ ಚರಿತ್ರೆಯಿಂದ ತಿಳಿದು ಬರುತ್ತದೆ. ಅವನು ಪ್ರಾರಂಭಿಸಿದ ಚಳವಳಿಯ ಮೂಲಕ ಈ ಭಾಗದಲ್ಲಿ ಕಾಲಕಾಲಕ್ಕೆ ಬಹುಜನ ಶಿವಶರಣರು ಆಗಿ ಹೋಗಿದ್ದಾರೆ. ಈ ಸ್ಥಳವು ವೀರಶೈವ ಧರ್ಮಕ್ಕೆ ಮೂರನೆಯ ಕೇಂದ್ರಸ್ಥಾನವಾಗಿ ಪರಿಣಮಿಸಿರುತ್ತದೆ.

## ಮಂಗಳವಾಡ ಕೇಂದ್ರ.

ತರುವಾಯ ರೇವಣಸಿದ್ಧೇಶ್ವರನು ಕೊಲ್ಲಿಪಾಕಿಯಲ್ಲಿ ಉಗಮಿಸಿ ಅಲ್ಲಿಂದ ಉತ್ತರ ಕರ್ನಾಟಕದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ

ಮಂಗಳವಾಡದಲ್ಲಿ ಬಂದು ನಿಂತು ಅಲ್ಲಿ ಬಿಜ್ಜಳನಲ್ಲಿ ಅನೇಕ ಪೊವಾಡಗಳನ್ನು ಮಾಡಿ ವೀರಶೈವ ಧರ್ಮವನ್ನು ಈ ಭಾಗದಲ್ಲಿ ಉನ್ನತಸ್ಥಿತಿಗೆ ತಂದಿದ್ದಾನೆ. ಹೀಗೆ ಮುದನೂರು ಮತ್ತು ಮಂಗಳವಾಡ ಈ ಪಟ್ಟಣಗಳಿದ್ದ ಪ್ರದೇಶದಲ್ಲಿ ಅಸಂಖ್ಯ ಶಿವಶರಣರು ಉದ್ಭವಿಸಿದ್ದಾರೆ. ಆದ್ದರಿಂದ ಮಂಗಳವಾಡವು ವೀರಶೈವ ಧರ್ಮಕ್ಕೆ ನಾಲ್ಕನೆಯ ಕೇಂದ್ರಸ್ಥಾನವಾಗಿದೆ. ಈ ಎಲ್ಲ ಕಾಲಗಳಲ್ಲಿ ಬಸವೇಶ್ವರನು ಇನ್ನೂ ಪ್ರಸಿದ್ಧಿಗೆ ಬಂದಿರಲಿಲ್ಲ.

## ಕಲ್ಯಾಣ ಕೇಂದ್ರ.

ಈ ಕೇಂದ್ರವು ಬಸವೇಶ್ವರನು ಬಿಜ್ಜಳರಾಜನಲ್ಲಿ ಪ್ರಸಿದ್ಧನಾದ ಬಳಿಕ ಉಂಟಾಗಿರುತ್ತದೆ. ಇಷ್ಟರಲ್ಲಿ ಅನೇಕ ಕಡೆಗೆ ಉದ್ಭವಿಸಿದ್ದ ಶಿವಶರಣರು ಅವನಲ್ಲಿ ನೆರೆದು ಅವನ ನೇತೃತ್ವದಲ್ಲಿ ವೀರಶೈವ ಧರ್ಮಪ್ರಸಾರ ಕಾರ್ಯವನ್ನು ಬಹುಭರದಿಂದ ಕೈಕೊಂಡರು. ಈ ಕಾರ್ಯವು ಬಸವೇಶ್ವರನ ಕಾಲದಲ್ಲಿ ಕನಿಷ್ಠ ೧೨ ವರ್ಷಗಳ ವರೆಗೂ ನಡೆದ ಹಾಗೆ ತೋರುತ್ತದೆ. ಈ ಪ್ರಕಾರ ಕಲ್ಯಾಣ ಪಟ್ಟಣವು ವೀರಶೈವ ಧರ್ಮಕ್ಕೆ ಐದನೆಯ ಕೇಂದ್ರಸ್ಥಾನವಾಗಿದೆ.

## ಬನವಾಸಿ-ಬಳ್ಳಿಗಾವಿ ಕೇಂದ್ರ.

ಬಳ್ಳಿಗಾವಿಯು ಈಗ ಶಿವಮೊಗ್ಗೆ ಜಿಲ್ಹೆಯಲ್ಲಿ ಇದ್ದು ಇಲ್ಲಿ ಬಹುಜನ ಶಿವಶರಣರೂ ಜ್ಞಾನಿಗಳೂ ಆಗಿಹೋಗಿದ್ದಾರೆ. ಮೊದಲು ಪಟ್ಟದ ಕಲ್ಲಿನಲ್ಲಿದ್ದ ಅಜಗಣ್ಣನು ಈ ಸ್ಥಾನಕ್ಕೆ ಬಂದು ನಿಂತಿರಲಾಗಿ ಅಲ್ಲಿ ಅವನಿಂದ ಅಲ್ಲಮಪ್ರಭುವು ಲಿಂಗಧಾರಣೆಯನ್ನು ಹೊಂದಿದನು. ಈ ಭಾಗದಲ್ಲಿ ಈ ಕಾಲಕ್ಕೆ ವೀರಶೈವತ್ವದ ಚಟುವಟಿಕೆಗಳು ಬಹು ಹೆಚ್ಚಾಗಿ ಆಗಿರುತ್ತವೆ. ಈ ಕೇಂದ್ರದ ವಿಸ್ತಾರವು ಉತ್ತರಕ್ಕೆ ಹಾನಗಲ್ಲು ತಾಲೂಕಿನಿಂದ ದಕ್ಷಿಣಕ್ಕೆ ಕಡೂರ ಜಿಲ್ಹೆಯ ವರೆಗೂ ಪಸರಿಸಿದೆ. ಇದು ವೀರಶೈವ ಧರ್ಮದ ಆರನೆಯ ಕೇಂದ್ರವು.

## ಹರದನ ಹಳ್ಳಿಯ ಕೇಂದ್ರ.

ಮೇಲೆ ಹೇಳಿದ ಕಾಲದ ತರುವಾಯ ಮುಸಲ್ಮಾನರು ಕರ್ನಾಟಕವನ್ನು ಅಭಿಯೋಗಿಸಿದರು. ಆಗ ಇಲ್ಲಿದ್ದ ಧಾರ್ಮಿಕ ಪುರುಷರು

ಈ ಭಾಗವನ್ನು ಬಿಟ್ಟು ಕಾವೇರೀ ನದಿಯ ದಕ್ಷಿಣಕ್ಕೆ ಇರುವ ಹರದನ ಹಳ್ಳಿ ಎಂಬ ಗ್ರಾಮದಲ್ಲಿ ತಮ್ಮ ಧಾರ್ಮಿಕ ಕೇಂದ್ರವನ್ನು ಸ್ಥಾಪಿಸಿದರು. ಆಗಿನ ಶೂನ್ಯಸಿಂಹಾಸನಾಧಿಪತಿಗಳು ಈ ಕಾರ್ಯಕ್ಕೆ ಪ್ರೋತ್ಸಾಹನವನ್ನು ಕೊಟ್ಟರು. ಅವರು ಇಲ್ಲಿಂದ ವೀರಶೈವ ಧರ್ಮವನ್ನು ಸುತ್ತಲೂ ವಿಸ್ತರಿಸುತ್ತ ಬಂದರು. ಇದು ವೀರಶೈವ ಧರ್ಮಕ್ಕೆ ೭ನೆಯ ಕೇಂದ್ರವು.

## ವಿಜಯನಗರ ಕೇಂದ್ರವು.

೧೫ನೆಯ ಶತಮಾನದಲ್ಲಿ ವಿಜಯನಗರದಲ್ಲಿ ೧ನೇ ದೇವರಾಯನು ರಾಜ್ಯವಾಳುತ್ತಿರುವಾಗ್ಗೆ ಬಹುಜನ ಶಿವಶರಣರು ಮತ್ತು ವಿರಕ್ತರು ಅವನಲ್ಲಿಗೆ ಬಂದು ಅವನಿಂದ ಉತ್ತೇಜನವನ್ನು ಹೊಂದಿ ಅನೇಕ ಕಾವ್ಯಗಳನ್ನೂ ವಚನಗ್ರಂಥಗಳನ್ನೂ ರಚಿಸಿದ್ದಾರೆ. ಇದು ವೀರಶೈವ ಧರ್ಮದ ೮ನೆಯ ಕೇಂದ್ರವು.

## ಕೆಳದಿ–ಬಿದನೂರು ಕೇಂದ್ರ.

ತಾಳೀಕೋಟೆಯ ಯುದ್ಧದ ತರುವಾಯ ವಿಜಯನಗರವು ಲಯವಾಗಲು ಉತ್ತರ ಕರ್ನಾಟಕವೆಲ್ಲ ಮುಸಲ್ಮಾನರ ಕೈವಶವಾಯಿತು. ಆದರೆ ದಕ್ಷಿಣ ಕರ್ನಾಟಕದಲ್ಲಿ ಅಸಂಖ್ಯ ಪಾಳ್ಯಗಾರರು ಉದ್ಭವಿಸಿದರು. ಅವರಲ್ಲಿ ಬಹುಜನರು ವೀರಶೈವ ಮತಾವಲಂಬಿಗಳಾಗಿ ವಿದ್ವಾಂಸರಿಗೆ ಉತ್ತೇಜನವನ್ನು ಕೊಡುತ್ತಬಂದರು. ಅವರಲ್ಲಿ ಕೆಳದಿಯ ವಂಶದ ರಾಜರು ಬಹು ಪ್ರಬಲರಾಗಿ ವೀರಶೈವ ವಿದ್ವಾಂಸರಿಗೆ ವಿಶೇಷ ಪ್ರೋತ್ಸಾಹವನ್ನು ಕೊಡುತ್ತಬಂದರು. ಈ ರಾಜರ ರಾಜಧಾನಿ ಸ್ಥಳಗಳಾದ ಕೆಳದಿ ಮತ್ತು ಬಿದನೂರು ಇವು ವೀರಶೈವ ಧರ್ಮಕ್ಕೆ ಕೇಂದ್ರಸ್ಥಾನಗಳಾದವು. ಇವುಗಳಿದ್ದ ಪ್ರದೇಶವು ವೀರಶೈವ ಧರ್ಮಕ್ಕೆ ಒಂಬತ್ತನೆಯ ಕೇಂದ್ರಸ್ಥಾನವು.

ಈ ಕೇಂದ್ರದ ತರುವಾಯ ನಾಡಿನಲ್ಲಿ ಎಲ್ಲ ಕಡೆಗೂ ರಾಜಕೀಯ ಅವ್ಯವಸ್ಥೆಗಳು ಉಂಟಾದವು. ಈ ದುಃಸ್ಥಿತಿಯು ಉತ್ತರಕರ್ನಾಟಕದಲ್ಲಿ ೧೬೮೬ ರಲ್ಲಿ ವಿಜಾಪುರವು ಹಾಳಾದಂದಿನಿಂದ ಬ್ರಿಟಿಶರು ಈ ನಾಡನ್ನು ಕೈವಶಮಾಡಿಕೊಳ್ಳುವ ವರೆಗೂ ಹಾಗೆಯೇ ಉಳಿಯಿತು. ಆದರೆ ದಕ್ಷಿಣ ಕರ್ನಾಟಕ ದೇಶದಲ್ಲಿ ಹೆಚ್ಚಿಗೆ ಶಾಂತಸ್ಥಿತಿಯು ಇದ್ದರೂ ಕೂಡ ಆದ

ಳತೆಯು ಅವ್ಯವಸ್ಥೆಗಳು ಇಲ್ಲಿಯೂ ಹೆಚ್ಚುಕಡಿಮೆ ಪ್ರಮಾಣದಿಂದ ನಡೆಯುತ್ತಲೇ ಇದ್ದವು. ಇದರಿಂದ ನಾಡಿನಲ್ಲಿ ಯಾವ ಸುಧಾರಣೆಯ ಕಾರ್ಯಗಳು ಈ ಅವಧಿಯಲ್ಲಿ ನಡಿದಿರುವದಿಲ್ಲಷ್ಟೇ ಅಲ್ಲ, ವೀರಶೈವ ಧರ್ಮದ ನಿಜಸ್ವರೂಪೂ ಅದರ ಇತಿಹಾಸವೂ ಕೂಡ ಮರೆತು ಹೋಗಿ ಬಿಟ್ಟವು!

ಈಪ್ರಕಾರ ವೀರಶೈವ ಧಾರ್ಮಿಕ ಇತಿಹಾಸದಲ್ಲಿ ಒಂಬತ್ತು ಕೇಂದ್ರಸ್ಥಾನಗಳನ್ನು ನಾವು ಕಂಡುಹಿಡಿಯಬಹುದು. ಇವುಗಳಲ್ಲಿಲ್ಲ ದೇವರ ದಾಸಿಮಯ್ಯನಿದ್ದ ಮುದನೂರು ಕೇಂದ್ರವು ಕರ್ನಾಟಕದಲ್ಲಿ ಎಲ್ಲಕ್ಕೂ ಮೊದಲನೆಯದಾಗಿರುತ್ತದೆ. ಇದಕ್ಕೂ ಪುರಾತನವಾಗಿರುವ ಉಳಿದ ಎರಡು ಕೇಂದ್ರಗಳು ಅಂದರೆ ಶ್ರೀಶೈಲ ಮತ್ತು ಪೊಟ್ಟಲಕೆರೆಗಳು ಈಚೆಗೆ ಲಯವಾಗಿ ಹೋಗಿವೆ. ಶ್ರೀಶೈಲದಲ್ಲಿದ್ದ ಮೊದಲಿನ ಪಟ್ಟಣ ದಲ್ಲಿ ಅರಣ್ಯವು ಬೆಳೆದು ಅದು ನೆಲಸಮನಾಗಿರುತ್ತದೆ. ಇದರ ತರು ವಾಯದ ಕೇಂದ್ರವಾದ ಕೊಲ್ಲಿಪಾಕಿ-ಪಾಲ್ಕುರಿಕೆ-ಪೊಟ್ಟಲಕೆರೆ ಇದು ಈಗ ಆಂಧ್ರನಾಡಾಗಿರುತ್ತದೆ. ಮೊದಲು ಇಲ್ಲಿದ್ದ ಕನ್ನಡ ಭಾಷೆಯು ಹೋಗಿಬಿಟ್ಟಿರುತ್ತದೆ. ಭಾಷೆಯುಗೂಡ ಪುರಾತನ ವೀರಶೈವ ವಾಙ್ಮ ಯವೂ ಕೂಡ ಲಯವಾಗಿ ಹೋಗಿರುತ್ತದೆ. ಆದರೆ ಈ ವಾಙ್ಮಯದ ಮುಂದಿನ ಬೆಳವಣಿಗೆಗಳು ಮುದುನೂರು ಪ್ರದೇಶದಲ್ಲಿ ತಲೆದೋರಿ ದವು. ಆಗ ಈ ನಾಡಿನಲ್ಲಿ ಅನೇಕ ವೀರಶೈವ ಪ್ರವರ್ತಕರು ಬಸ ವೇಶ್ವರನ ಕಾಲದ ವರೆಗೂ ಕಾಲಕಾಲಕ್ಕೆ ಆಗುತ್ತ ಬಂದಿದ್ದಾರೆ.

ಆದ್ದರಿಂದ ಮುದುನೂರು ಕೇಂದ್ರವು ವೀರಶೈವ ಧಾರ್ಮಿಕ ಇತಿ ಹಾಸದಲ್ಲಿ ಬಹು ಮಹತ್ವವಾದದ್ದು. ಇದು ಉತ್ತರ ಕರ್ನಾಟಕದ ಮಧ್ಯಪ್ರದೇಶದಲ್ಲಿರುತ್ತದೆ. ಅದು ನೆಲಿಸಿದ ಸ್ಥಳವು ವಾಸಿಸಲು ಬಹು ರಮಣೀಯವಾದದ್ದು. ಅದು ಬುಗ್ಗೆಗಳಿಂದಲೂ ಕೊಳಗಳಿಂದಲೂ ತುಂಬಿಕೊಂಡು ಬಹು ಶೋಭಾಯಮಾನವಾದ ಗ್ರಾಮವಾಗಿದೆ. ಅದು 'ದಕ್ಷಿಣವಾರಣಾಸಿ' ಎಂದು ಈ ಕಾಲದ ಶಿಲಾಶಾಸನಗಳಲ್ಲಿ ಪ್ರಸಿದ್ಧ ವಾಗಿದೆ. ಇಂಥ ಸ್ಥಳದಲ್ಲಿ ದೇವರದಾಸಿಮಯ್ಯನು ಅನೇಕ ವರ್ಷ ವಾಸಮಾಡಿ ವೀರಶೈವ ಧರ್ಮವನ್ನು ವಿಸ್ತಾರಗೊಳಿಸಿದನು.

ಅವನು ಈ ಕಾರ್ಯವನ್ನು ಕೈಕೊಂಡ ಬಳಿಕ ಕೆಲವು ವರ್ಷಗಳ ಮೇಲೆ ರೇವಣಸಿದ್ಧೇಶ್ವರನು ಕೊಲ್ಲಿಪಾಕಿಯಿಂದ ಕರ್ನಾಟಕಕ್ಕೆ ಬಂದು ಮುದುನೂರು ಭಾಗದ ಪಶ್ಚಿಮಕ್ಕೆಯೇ ಧಾರ್ಮಿಕ ಜಾಗ್ರತೆಯನ್ನುಂಟು ಮಾಡಿದನು.

ಇವರಿಬ್ಬರ ತರುವಾಯ ಬಸವೇಶ್ವರನು ಕಲ್ಯಾಣದಲ್ಲಿ ಪ್ರಸಿದ್ಧಿಗೆ ಬಂದು ನಾಡಿನಲ್ಲಿ ಒಂದು ಅದ್ಭುತವಾದ ಕ್ರಾಂತಿಯನ್ನು ಮಾಡಿದನು.

ಆದರೆ ಈಗ ನಮಗೆ ದೊರೆತ ವಚನಗಳಲ್ಲಿ ದೇವರದಾಸಿಮಯ್ಯನ ವಚನವು ಎಲ್ಲಕ್ಕೂ ಮೊದಲನೆಯದಾಗಿದೆ. ಆದರೆ ಇಷ್ಟರಿಂದಲೇ ಅವನು ವಚನ ವಾಙ್ಮಯದ ಆದ್ಯ ಕರ್ತನೆಂದು ಹೇಳಲಿಕ್ಕೆ ಬರಲಾರದು. ಅವನಕಿಂತಲೂ ಮೊದಲು ಈ ವಾಙ್ಮಯವಿತ್ತೆಂಬುದು ನಮ್ಮ ಹಿಂದಿನ ವಿವರಣೆಯಿಂದ ತಿಳಿದುಬರುತ್ತದೆ. ಅಲ್ಲದೆ ಕೆಳಗೆ ಕಾಣಿಸಿದ ಅವನ ವಚನಗಳಿಂದಲೂ ಅದು ಸ್ಪಷ್ಟವಾಗುತ್ತಿದೆ. ಅವು ಯಾವವೆಂದರೆ: —

(೧) ಕರಿಯನಿತ್ತಡೆ ಒಲ್ಲೆ. ಸಿರಿಯನಿತ್ತಡೆ ಒಲ್ಲೆ. ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ. ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ ನಿಮ್ಮನಿತ್ತೆ ಕಾಣಾ ರಾಮನಾಥಾ.

(೨) ಕಡೆಗೀಲಿಲ್ಲದ ಬಂಡಿ ಹೊಡೆಗೆಡುವುದು ಮಾಬುದೇ? ಕಡೆಗೀಲು ಬಂಡಿಗಾಧಾರ. ಕಡು ದರ್ಪವೇರಿದ ಒಡಲೆಂಬ ಬಂಡಿಗೆ ವೃಡಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥಾ.

ಈ ವಚನಗಳಿಂದ ದೇವರದಾಸಿಮಯ್ಯನ ಮೊದಲು ವಚನವಾಙ್ಮಯವಿತ್ತೆಂಬುದು ಸ್ಪಷ್ಟವಾಗುತ್ತದೆ. ಪೊಟ್ಟಲಕೆರೆ, ಕೊಲ್ಲಿಪಾಕಿ, ಶ್ರೀಶೈಲ, ಈ ಪಟ್ಟಣಗಳಿದ್ದ ಭಾಗಗಳನ್ನು ಸಂಶೋಧಿಸಿದಲ್ಲಿ ಈ ವಾಙ್ಮಯದ ಪೂರ್ವಸ್ವರೂಪವನ್ನು ನಾವು ಕಂಡುಹಿಡಿಯಬಹುದು. ಆದರೆ ಇವು ಈಗ ಆಂಧ್ರನಾಡಿನಲ್ಲಿ ಸೇರಿಕೊಂಡಿವೆ. ಆದ್ದರಿಂದ ಇಲ್ಲಿಯ ಪುರಾತನ ಕನ್ನಡ ವಾಙ್ಮಯವು ನಷ್ಟವಾಗಿರಬೇಕು. ಈ ಸ್ಥಿತಿಯಲ್ಲಿ ಮಂಗಳವಾಡ ಮತ್ತು ಮುದುನೂರು ಈ ಗ್ರಾಮಗಳಿದ್ದ ಪ್ರಾಂತಗಳಲ್ಲಿ ಈಗಲೂ ನಮಗೆ ದೊರೆಯುವ ವಾಙ್ಮಯದ ಮೇಲೆ ನಾವು ಅವಲಂಬಿಸುವ ಸ್ಥಿತಿಯು ಉಂಟಾಗಿರುತ್ತದೆ.

ಇನ್ನು ಮೇಲೆ ಕೆಲವು ಸಂಶಯಯುಕ್ತವಾದ ವಿಷಯಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ವಿವೇಚಿಸಲೆಣಿಸಿದ್ದೇವೆ.

ಕೆಲವರು ದೇವರದಾಸಿಮಯ್ಯ ಮತ್ತು ಜೇಡರ ದಾಸಿಮಯ್ಯ ಎಂಬವರು ಭಿನ್ನ ಭಿನ್ನ ಶರಣರೆಂದು ತಿಳಿದದ್ದು ಕಂಡುಬರುತ್ತಿದೆ. ಆದರೆ ಶಿವ ಶರಣರ ಚರಿತ್ರೆಗಳನ್ನು ಸಂಶೋಧಿಸಿದಲ್ಲಿ ಈ ಹೆಸರಿನ ಇಬ್ಬರು ಜನರು ಇದ್ದದ್ದು ಎಲ್ಲಿಯೂ ದೊರೆಯುವದಿಲ್ಲ. ಎಲ್ಲ ವಿವರಣೆಗಳಲ್ಲಿ ಯಾವಾಗಲೂ ಒಬ್ಬನೇ ದಾಸಿಮಯ್ಯನು ಉಲ್ಲೇಖಿಸಲ್ಪಟ್ಟಿದ್ದಾನೆ. ಕೆಲವು ವಾದವಚನಗಳಲ್ಲಿ ಗ್ರಂಥಕಾರರು ದೇವರ ದಾಸಿಮಯ್ಯನು ಬಸವಕಾಲೀನನೆಂದು ಭಾವಿಸಿ ಪ್ರಶ್ನೋತ್ತರ ರೂಪವಾಗಿ ವಿಷಯ ವಿವೇಚನೆಗಳನ್ನು ಮಾಡಿದ್ದುಂಟು. ಅವುಗಳಲ್ಲಿ ದಾಸಿಮಯ್ಯನ ಹೆಸರಿನ ಕೂಡ ಬಸವನ ಮತ್ತು ಅವನ ಕಾಲದ ಶಿವಶರಣರ ಹೆಸರುಗಳು ಜೋಡಿಸಲ್ಪಟ್ಟಿವೆ. ಆದರೆ ಐತಿಹಾಸಿಕ ದೃಷ್ಟಿಯಿಂದ ವಿಚಾರ ಮಾಡಿದಲ್ಲಿ ಇಂಥ ವಚನಗಳಿಗೆ ಮಹತ್ವವು ಬರಲಾರದು. ಆದ್ದರಿಂದ ದೇವರದಾಸಿಮಯ್ಯನು ಒಬ್ಬನೇ ಇದ್ದು ಅವನು ೧೧ನೇ ಶತಮಾನದ ಮಧ್ಯದಲ್ಲಿದ್ದನೆಂದು ನಂಬಬೇಕಾಗುತ್ತದೆ.

ಬಸವೇಶ್ವರನು ತನ್ನ ವಚನಗಳಲ್ಲಿ ' ದಾಸಿಮಯ್ಯ ' ನೆಂದು ಇವನನ್ನು ಯಾವಾಗಲೂ ಸಂಬೋಧಿಸಿದ್ದಾನೆ. ದಾಸಿಮಯ್ಯ, ಜೇಡರ ದಾಸಿಮಯ್ಯ, ದೇವರದಾಸಿಮಯ್ಯ, ಈ ಎಲ್ಲ ಹೆಸರುಗಳು ಒಬ್ಬನಿಗೆಯೇ ಸಂಬಂಧಿಸುತ್ತವೆ.

ಪಂಚಾಚಾರ್ಯರಲ್ಲಿ ಒಬ್ಬನಾದ ಏಕೋರಾಮಾರಾಧ್ಯನು ದೇವರ ದಾಸಿಮಯ್ಯನ ಮಗನೆಂದು ಕೆಲವರು ತಿಳಿದಿದ್ದು ಕಂಡುಬರುತ್ತದೆ. ದೇವರ ದಾಸಿಯ್ಯನಿಗೆ ಒಬ್ಬ ಮಗನಿದ್ದು ಅವನ ಹೆಸರು 'ರಾಮೇಶ್ವರ' ಅಥವಾ 'ರಾಮಲಿಂಗ' ಎಂದು ಇದ್ದುದು ಗ್ರಂಥಗಳಿಂದ ತಿಳಿದು ಬರುತ್ತದೆ. ಒಂದು ಗ್ರಂಥದಲ್ಲಿ ಅವನ ಹೆಸರು 'ಓತುರಾಮ ಎಂದಿದೆ.' ಆದರೆ ಇದು ಬರಹದ ತಪ್ಪೋ ಹೇಗೆಂಬುದು ನಮಗೆ ತಿಳಿಯದು. ಆದರೆ ಏಕೋರಾಮಾರಾಧ್ಯನು ದೇವರ ದಾಸಿಮಯ್ಯನ ಮಗನೆಂದು ನಮಗೆ ಎಲ್ಲಿಯೂ ದೊರೆತಿಲ್ಲ.

ಹರಿಹರ ಮಹಾಕವಿಯು ಶಂಕರ ದಾಸಿಮಯ್ಯನ ಚರಿತ್ರೆಯನ್ನು ರಗಳೆಯ ರೂಪದಲ್ಲಿ ಬರೆದಿದ್ದಾನೆ. ಅದರಲ್ಲಿ ದೇವರ ದಾಸಿಮಯ್ಯನ ಸಂದರ್ಭವು ಬರುತ್ತದೆ. ಅವನು ಹೇಳುವದೇನೆಂದರೆ, ಶಂಕರ ದಾಸಿ

ಮಯ್ಯನು ಮದನೂರಿಗೆ ಹೋದಾಗ್ಗೆ ದೇವರ ದಾಸಿಮಯ್ಯನು ಅವನಲ್ಲಿ ಏನೂ ಇಲ್ಲದ್ದನ್ನು ಕಂಡು, ಅವನಿಗೆ ಆಹಾರ ದ್ರವ್ಯಗಳನ್ನು ಕಳಿಸಿಕೊಟ್ಟನು. ಅದಕ್ಕೆ ಶಂಕರ ದಾಸಿಮಯ್ಯನು ತಾನು ಬಡವನೆಂದು ತಿಳಿದು ಹೀಗೆ ದೇವರದಾಸಿಮಯ್ಯನು ತನ್ನ ಕೂಡ ಗರ್ವದಿಂದ ವರ್ತಿಸಿದನೆಂದು ತಿಳಿದು ಉದ್ರೇಕಗೊಳ್ಳಲು ದೇವರ ದಾಸಿಮಯ್ಯನಲ್ಲಿದ್ದ ಶವನಿಧಿಯು ಮಾಯವಾಯಿತು. ಇದಕ್ಕೋಸ್ಕರ ದೇವರ ದಾಸಿಮಯ್ಯನು ಶಂಕರ ದಾಸಿಮಯ್ಯನ ಕ್ಷಮೆಯನ್ನು ಬೇಡಲು ಅವನ ಶವನಿಧಿಯು ಅವನಿಗೆ ಪ್ರಾಪ್ತವಾಯಿತು. ಆದರೆ ಈ ಕಥೆಯು ದೇವರದಾಸಿಮಯ್ಯನ ಯಾವ ಚರಿತ್ರೆಯಲ್ಲಿಯೂ ಬಂದಿಲ್ಲಾದ್ದರಿಂದ ಅದನ್ನು ನಾವು ಈ ಚರಿತ್ರೆಯಲ್ಲಿ ಕೊಟ್ಟಿಲ್ಲ. ಐತಿಹಾಸಿಕ ದೃಷ್ಟಿಯಿಂದ ವಿವೇಚಿಸಿದಲ್ಲಿ ದೇವರ ದಾಸಿಮಯ್ಯನ ತರುವಾಯ ಸ್ವಲ್ಪ ವರುಷಗಳಲ್ಲಿಯೇ ಶಂಕರ ದಾಸಿಮಯ್ಯನು ಪ್ರಸಿದ್ಧಿಗೆ ಬಂದಂತೆ ನಮಗೆ ತೋರುತ್ತದೆ. ಈ ವಿಷಯವನ್ನು ನಾವು ಶಂಕರದಾಸಿಮಯ್ಯನ ಚರಿತ್ರೆಯಲ್ಲಿ ವಿವೇಚಿಸುವೆವು.

---

## ಆಧಾರ ಗ್ರಂಥಗಳು.

ಈ ಚರಿತ್ರೆಯನ್ನು ನಾವು ಕೆಳಗೆ ಕಾಣಿಸಿದ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ರಚಿಸಿದ್ದೇವೆ. ಅವು ಯಾವವೆಂದರೆ:—

(೧) ಶಿವಶರಣ ವಿಲಾಸದೊಳಗಿನ ೧೭ನೇ ಸಂಧಿ-ದೇವರ ದಾಸಿಮಯ್ಯನ ಕಥೆ (೨) ಬಸವೇಶ್ವರ ಪುರಾಣದ ಕಥಾಸಾಗರ (೩) ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ (೩) ಶಿವಕಥಾಸಾಗರ (೪) ಬಸವ ಪುರಾಣ (೫) ಬಸವೇಶ್ವರ ವಚನ ಕಥಾಸರಿತ್ಸಾಗರ (೬) ದೇವಾಂಗ ಪುರಾಣ-ರಾಘವಾಂಕ (೭) ದೇವರದಾಸಿಮಯ್ಯ ಪುರಾಣ-ವಿರೂಪಾಕ್ಷಕವಿ (೮) ಮನುಪುರಾಣ (೯) ದೇವರ ದಾಸಿಮಯ್ಯನ ಲಾವಣಿ (೧೦) ದೇವರ ದಾಸಿಮಯ್ಯನ ವಚನಗಳು (೧೧) ದೇವರ ದಾಸಿಮಯ್ಯನ ವಿಷಯವಾಗಿ ಶಿವಾನುಭವ ಪತ್ರಿಕೆಯಲ್ಲಿ ಬಂದ ಲೇಖಗಳು (೧೨) ಪಂಪಾಶತಕ (೧೩) ಹಂಪೆಯ ರಗಳೆ (೧೪) ಲಿಂಗಾರ್ಚನೆಯ ರಗಳೆ (೧೫) ದೇವರ ದಾಸಿಮಯ್ಯ, ಸುಗ್ಗಲೆ ಮತ್ತು ಜಯಸಿಂಹರಾಜ ಇವರ ಉಲ್ಲೇಖಗಳಿದ್ದ ಶಿಲಾಶಾಸನಗಳು.

---




ವರ್ಷ ೨೧ ] ನವ್ಹೆಂಬರ ೧೯೪೬ [ ಸಂಚಿಕೆ ೨

## ವಿಷಯಾನುಕ್ರಮಣಿಕೆ.


೧. ಶಿವಾನುಭವ (ಕವಿತೆ) ... ೯

—ಶ್ರೀಯುತ ಎಸ್. ಕರಿಯಪ್ಪ ಮಹದೇವರಹಳ್ಳಿ

ಶಿವಾನುಭವಸಂಘ ಕಾನಕಾನಹಳ್ಳಿ ಜಿ. ಬೆಂಗಳೂರು-

೨. ಪ್ರಾಣಲಿಂಗಾರ್ಚನೆ ೧೦

—ಮಧುರಚೆನ್ನ ಹಲಸಂಗಿ ಜಿ॥ ವಿಜಾಪುರ.

೩. ನೂತನ ವೀರಶೈವ ಸಮಾಜ ... ೧೭

—ಶ್ರೀಯುತ ಮಳ್ಳಪ್ಪ ಸಿದ್ದಪ್ಪ ಎಳಮೇಲಿ–ಚಡಚಣ.

೪. ಮಹಾಕವಿ ಯಾರು? ೨೨

—ಶ್ರೀಯುತ ಶಂ. ಮ. ಹೊಂಬಳ, ನರೇಗಲ್ಲ.

೫. ಚಿಲ್ಲಿಂಗದಲ್ಲಿ ಬೇಡಿಕೆ (ಕವಿತೆ) ... ೨೪

—ಶ್ರೀಸದಾಶಿವಶಿವಾಚಾರ್ಯ ಸ್ವಾಮಿಗಳು ಸಖರಾಯ ಪಟ್ಟಣ

೬. ಶಿವಶರಣರ ಚರಿತ್ರೆಗಳು—ಭಾಗ–೨ ಪ್ರಸ್ತಾವನೆ. ೩೩—೫೬

—ರಾ॥ ಬ॥ [illegible]ಗು. ಹಳಕಟ್ಟಿ ವಿಜಾಪುರ.

# ಶಿವಾನುಭವ

| ವರ್ಷ ೨೧ | ಅಕ್ಟೋಬರ ೧೯೪೬ | ಸಂಚಿಕೆ ೧ |
| --- | --- | --- |

## ಶಿವಾನುಭವ ಪತ್ರಿಕೆಯು ೨೧ನೇ ವರ್ಷ.



ಈ ಸಂಚಿಕೆಯಿಂದ ಶಿವಾನುಭವ ಪತ್ರಿಕೆಯು ೨೧ ನೇ ವರ್ಷವು ಪ್ರಾರಂಭವಾಗುತ್ತದೆ. ಹೋದ ೨೦ ವರ್ಷಗಳಲ್ಲಿ ಶಿವಾನುಭವ ಪತ್ರಿಕೆಯು ಮಾಡುತ್ತ ಬಂದ ವಾಙ್ಮಯ ಸೇವೆಯ ಪರಿಚಯವು ಅದರ ವಾಚಕರಿಗೆ ಇದ್ದೇ ಇದೆ. ಈ ದೀರ್ಘ ಅವಧಿಯಲ್ಲಿ ಅದರ ಮೂಲಕ ಅನೇಕ ಹೊಸ ಗ್ರಂಥಗಳ ಪ್ರಕಟನೆಯೂ ಅನೇಕ ವಾಙ್ಮಯ, ಐತಿಹಾಸಿಕ ಸಂಶೋಧನ ಕಾರ್ಯಗಳೂ ನಡೆಯುತ್ತಾ ಬಂದಿರುತ್ತವೆ. ವೀರಶೈವ ಸಮಾಜದಲ್ಲಿ ಕಾಲಕಾಲಕ್ಕೆ ಅನೇಕ ಶಿವಶರಣರೂ ಸಾಧು ಸತ್ಪುರುಷರೂ ಆಗಿ ಹೋಗಿ ಅವರು ಅತ್ಯಂತ ಮಹತ್ವದ ಕಾರ್ಯಗಳನ್ನು ಮಾಡಿದ್ದರೂ ಅವರ ಪರಿಚಯವು ಬಹುಜನ ಸಮಾಜದಲ್ಲಿ ಇರದೆ ಇರುವದು ಅತ್ಯಂತ ಶೋಚನಿಯ ಸಂಗತಿಯಾಗಿದೆ. ಅವರು ಎಲ್ಲಿಯವರು, ಅವರು ಯಾವ ಕಾರ್ಯ ಮಾಡಿದರು, ಅವರ ಶಿವಾನುಭವದ ವರ್ತನೆ ಅವುದು, ಈ ಮೊದಲಾದ ವಿಷಯಗಳನ್ನು ವೀರಶೈವರು ಅರಿಯುವದು ಬಹು ಅವಶ್ಯವಿದೆ. ಈ ವಿಷಯವನ್ನು ನಾವು ಸಂಶೋಧನೆಗೋಸ್ಕರ ಈಚೆಗೆ ತೆಗೆದುಕೊಂಡು 'ಶಿವಶರಣರ ಚರಿತ್ರೆಗಳು ಭಾಗ ೧.' ಈ ಗ್ರಂಥವನ್ನು ಮೊದಲು ಮುಗಿಸಿದೆವು. ಇದೇ ಕಾರ್ಯವನ್ನು ನಾವು ಮುಂದುವರಿಸಿ ಈ ಗ್ರಂಥದ ೨ ನೇ ಭಾಗವನ್ನು ಹೋದ ಸಂಚಿಕೆಗೆ ಪೂರ್ತಿಮಾಡಿದೆವು. ಇದರಲ್ಲಿ ೬೩ ಜನ ಶಿವಶರಣರ ಚರಿತ್ರೆಗಳು ಬಂದಿವೆ. ಈ ಚರಿತ್ರೆಗಳು ಅತ್ಯಂತ ಮಹತ್ವವಾದವುಗಳೆಂ

